# ಬಿಂಬಗಳು ಸರಿದಾಗ

(ಸಾಮಾಜಿಕ ಕಾದಂಬರಿ)

ಶ್ರೀಮತಿ ಪದ್ಮಾ ಶ್ರೀಧರ್

ಕೀರ್ತಿ ಪ್ರಕಾಶನ
೨೩೦, ೧೬೭ ಕಟ್ಟಡ, ಕೆ. ಹೆಚ್. ಬಿ. ಶಿರ್ಕೆ ಅಪಾರ್ಟಮೆಂಟ್ಸ್,
ಕೆಂಗೇರಿ ಉಪನಗರ, ಬೆಂಗಳೂರು- ೫೬೦೦೬೦.

**Bimbagalu Saridaga**- A social novel in Kannada by Smt. Padma Shreedhar, 'CHIGURU', No. 1248, 7th B Cross, Yalahanka Upanagara, (080-28565466) Bangalore 560064 and published by Keerthi Prakashana, 230, Bld.167, KHB Sirke Apartments, Kengeri Upanagara, Bangalore 560060

Printed on Maplitho 70 GSM paper.
No.of Pages: 320, Demi 1/8.

First Edition: 2011
Copy Rights : Smt. Padma Shreedhar

Price: Rs. 200/-

DTP: Smt. Asha

Impression: Harshini Offset Printers, Bangalore.

# ಕಾದಂಬರಿಯ ಕುರಿತು

**'ಬಿಂಬಗಳು ಸರಿದಾಗ'** ಎಂಬ ಹೆಸರಿನ ಈ ಕಾದಂಬರಿಯು, **'ಮಂಗಳಾ'** ವಾರ ಪತ್ರಿಕೆಯಲ್ಲಿ, ಮೂವತ್ತೇಳು ಕಂತುಗಳಲ್ಲಿ ಧಾರಾವಾಹಿ ಯಾಗಿ ಪ್ರಕಟಗೊಂಡು, ಅಪಾರ ಓದುಗರ ಮೆಚ್ಚುಗೆಯನ್ನು ಗಳಿಸಿತು. ಈಗ ಈ ಕಾದಂಬರಿಯೂ ಪುಸ್ತಕ ರೂಪದಲ್ಲಿ ಪ್ರಕಟಗೋಳ್ಳುತ್ತಿದೆ.

ಪ್ರತ್ಯೇಕವಾದ ಪಾತ್ರಗಳು, ಸನ್ನಿವೇಶಗಳು ಕಲ್ಪನೆಯಲ್ಲಿ ರೂಪು ಗೊಂಡು, ೩೨೦ ಪುಟಗಳಲ್ಲಿ ವಿಸ್ತಾರಗೊಂಡಿವೆ. ನಾಯಕಿಯ ಮನದ ತೊಳಲಾಟ, ಅದನ್ನು ಬಗೆಹರಿಸಲು ಸಹಾಯಕನಾಗುವ ನಾಯಕ ಈ ಕಾದಂಬರಿಯ ಮುಖ್ಯ ಪಾತ್ರಧಾರಿಗಳು. ಇವರೊಂದಿಗೆ ಪೋಷಕಪಾತ್ರಗಳ ಸೇರ್ಪಡೆಯಾಗಿದೆ.

ಒಟ್ಟಿನಲ್ಲಿ ಓದುಗರನ್ನು ವಾರದಿಂದ ವಾರಕ್ಕೆ ಕುತೂಹಲದಿಂದ ಕಾಯ್ದಿರಿಸುತ್ತಿದ್ದ ಕಾದಂಬರಿ ಎಂದು ಓದುಗರೇ ಮೆಚ್ಚುಗೆಯ ನುಡಿಗಳನ್ನು ಹೇಳಿರುವುದು ಕಾದಂಬರಿಗೆ ಸಲ್ಲಿದ ಸನ್ಮಾನ.

ಕೌಟುಂಬಿಕ ವಿಷಯಗಳನ್ನು ಒಳಗೊಂಡ ಈ ಸಾಮಾಜಿಕ ಕಾದಂಬರಿಯು ಹೊಸರೀತಿಯಲ್ಲಿ ಓದುಗರನ್ನು ಮನರಂಜಿಸಲಿ ಎನ್ನುವುದು ನನ್ನ ಆಶಯ.

ಈ ಕಾದಂಬರಿಯ ಪ್ರಕಾಶನದ ಹೊಣೆ ಹೊತ್ತಿರುವ ನನ್ನ ಆಪ್ತ, ಶ್ರೀ ಶಿವಾನಂದರವರಿಗೆ ನನ್ನ ಧನ್ಯವಾದಗಳು. ಹಾಗೂ ನನ್ನ ಬರವಣಿಗೆ ಯನ್ನು ಓದುವ ಓದುಗರಿಗೆ ನನ್ನ ವಂದನೆಗಳು.

ಇತಿ

ಬೆಂಗಳೂರು — ತಮ್ಮ ವಿಶ್ವಾಸಿ

೧೮-೭-೨೦೧೧ — *ಪದ್ಮಾ ಶ್ರೀಧರ್*

# ಓದುಗರ ಅಭಿಪ್ರಾಯಗಳು

**'ಮಂಗಳ'** ದಲ್ಲಿ ಹರಿದು ಬಂದ ಪದ್ಮಾ ಶ್ರೀಧರ್ ಅವರ **'ಬಿಂಬಗಳು ಸರಿದಾಗ'** ಧಾರಾವಾಹಿ ಬಗ್ಗೆ....

* **'ಬಿಂಬಗಳು ಸರಿದಾಗ'** ಒಂದು ಅತ್ಯುತ್ತಮ ಧಾರಾವಾಹಿಯಾಗಿತ್ತು. ಪ್ರಾರಂಭದಲ್ಲೇ ಆಸಕ್ತಿಯನ್ನು ಕೆರಳಿಸುತ್ತಾ ವಾರದಿಂದ ವಾರಕ್ಕೆ ಕುತೂಹಲ ಹೆಚ್ಚಿಸುತ್ತಾ ಓದುಗರನ್ನು ಆರ್ಕಸಿತು. ಕಥೆ ಇನ್ನಷ್ಟು ವಿಸ್ತರಿಸಿದ್ದರೆ ಚೆನ್ನಾಗಿತ್ತು. ಒಟ್ಟಾರೆ ಪದ್ಮ ಶ್ರೀಧರ್ ಅವರ ಧಾರಾವಾಹಿ ಉತ್ತಮವಾಗಿತ್ತು. – **ಶ್ರೀಮತಿ ಉಷಾ, ಕು. ಶ್ವೇತಾ, ಸತ್ಯನಾರಾಯಣ, ಶ್ಯಾಮಲಾದೇವಿ,** ಬೆಂಗಳೂರು

* ಪದ್ಮ ಶ್ರೀಧರ್ ಅವರ **'ಬಿಂಬಗಳು ಸರಿದಾಗ'** ಧಾರಾವಾಹಿ ೩೭ ಕಂತುಗಳಲ್ಲಿ ಪ್ರಕಟವಾಗಿ ಓದುಗರನ್ನು ತುಂಬಾ ಆಕರ್ಶಿಸಿತು. ಮಹೇಶ ಸುಜಿಯನ್ನು ಮದುವೆ ಯಾಗಿದ್ದು ಓದಿ ಸಂತೋಷವಾಯಿತು. – **ಜೆ.ಎಂ. ಫರ್ನಾಂಡಿಸ್,** ಅಥಣಿ

* **'ಮಂಗಳ'** ದಲ್ಲಿ ಹರಿದು ಬಂದ ಪದ್ಮ ಶ್ರೀಧರ್ ಅವರ **'ಬಿಂಬಗಳು ಸರಿದಾಗ'** ಧಾರಾವಾಹಿ ಅತ್ಯುತ್ತಮವಾಗಿತ್ತು. ಮಂಗಳ ಕೈಗೆ ಸಿಕ್ಕಿದೊಡನೆ ಮೊದಲು ಈ ಧಾರಾವಾಹಿ ಓದುತ್ತಿದ್ದೆ. ಕೊನೆಗೂ ಸುಜಯ ಮಹೇಶನ ಮದುವೆ ನೆರವೇರಿದ್ದು ತುಂಬಾ ಖುಶಿಯಾಯಿತು. ಇದು ವಾಸ್ತವಕ್ಕೆ ಹತ್ತಿರವಾದ ಕಥೆ. ಮುಗಿಯಿತು ಎಂದು ತಿಳಿದಾಗ ಬೇಸರವಾಯಿತು. ಇಂತಹ ಉತ್ತಮ ಧಾರಾವಾಹಿಗಳು 'ಮಂಗಳ' ದಲ್ಲಿ ಹೆಚ್ಚಾಗಿ ಪ್ರಕಟವಾಗಲಿ. – **ಸುಹದಾ,** ಪಾಣೆ, ಮಂಗಳೂರು

* ಪದ್ಮ ಶ್ರೀಧರ್ ಅವರ ಧಾರಾವಾಹಿ **'ಬಿಂಬಗಳು ಸರಿದಾಗ'** ತುಂಬಾ ಚೆನ್ನಾಗಿ ಮೂಡಿ ಬಂದಿದೆ. ಸುಜಯ ಮತ್ತು ಮಹೇಶ್ ಮದುವೆಯಾಗಿ ಮಹೇಶನ ಸಂಬಂಧಗಳು ಉಳಿದದ್ದು ಓದಿ ಖುಶಿ ಆಯಿತು. – **ಲೋಕೇಶ್ ಆಚಾರ್ಯ,** ಇಂದ್ರಾಜೆ.

# ಬಿಂಬಗಳು ಸರಿದಾಗ

**ಮುಂಬಾಗಿಲ** ಹೊಸ್ತಿಲನ್ನು ದಾಟಿ, ಮನೆಯೊಳಗೆ ಕಾಲಿಡುತ್ತಿದ್ದಂತೆಯೇ ಸುಜಯಳ ದೃಷ್ಟಿ ಒಳಗಿನ ಗೋಡೆಯ ಮೇಲಿದ್ದ ಭಾವ ಚಿತ್ರಗಳ ಕಡೆಗೆ ಹರಿಯಿತು. ಕಾಲುಗಳು ಚಲಿಸದಾದವು, ಮೈ ಸಣ್ಣಗೆ ಕಂಪಿಸಿತು. ಮನದೊಳಗೆ ವಿಚಿತ್ರ ಭಾವನೆಗಳು ತುಂಬಿಕೊಂಡವು. ಗೊಂದಲ ಕಸಿವಿಸಿಗಳಿಂದ ಕದಲಲಾಗದೇ ನಿಂತಿದ್ದವಳನ್ನು ಅವಳ ತಾಯಿ ಪ್ರಭಾವತಿ ಎಚ್ಚರಿಸಿದಳು.

"ಸುಜೀ... ಏನಾಯ್ತೇ...?" ಪಿಸುದನಿಯಲ್ಲಿ ಕೇಳಿ ಮೊಣಕೈನಿಂದ ತಿವಿದು ಅವಳತ್ತ ನೋಡಿದಳು. ಅವಳ ದೃಷ್ಟಿ ಗೋಡೆಯ ಮೇಲಿದ್ದ ಭಾವಚಿತ್ರಗಳ ಕಡೆ ಇರುವುದನ್ನು ಗಮನಿಸಿ, ತಾನೂ ಅತ್ತ ದೃಷ್ಟಿಯನ್ನು ಹರಿಸಿದಳು. ಮತ್ತೆ ಮಗಳ ಕಡೆ ನೋಡದೇ, ಎದುರಿಗೆ ನಿಂತಿದ್ದ ವನಜಮ್ಮಳತ್ತ ತಿರುಗಿದಳು.

"ಬನ್ನಿ... ಬನ್ನಿ... " ವನಜಮ್ಮನ ಸಂಭ್ರಮದ ಕರೆಗೆ ಮುಗುಳ್ನಕ್ಕು ಮಗಳನ್ನು ಕರೆದುಕೊಂಡು ಒಳಕ್ಕೆ ಬಂದಳು. ತಾಯಿಯ ಪಕ್ಕದಲ್ಲಿ ಸೋಫಾದ ಮೇಲೆ ಕುಳಿತವಳಿಗೆ ಇತ್ತ ಗಮನವಿರಲಿಲ್ಲ. ಏನೋ ವಿಚಿತ್ರ ಅನಿಸಿಕೆಗಳು, ಏನೋ ತೊಳಲಾಟ... ತಾನು ಈ ಮನೆಗೆ ಹೊಸಬಳಲ್ಲ.... ಆದರೆ ಈ ಹಿಂದೆಂದೂ ತಾನು ಈ ಮನೆಗೆ ಬಂದ ನೆನಪಿಲ್ಲ.... ಅರ್ಥವಾಗದ ಅಳಲು.... ತನಗ್ಯಾಕೆ ಹೀಗೆ ಅನ್ನಿಸುತ್ತಿದೆ...?

"ಸುಜೀ...." ತಾಯಿ ಮತ್ತೆ ಕರೆದಾಗ ಬೆಚ್ಚಿ ಇತ್ತ ನೋಡಿದಳು.

"ಏನಾಗ್ತಿದೇ ನಿಂಗೆ? ಯಾಕೆ ಹೀಗೆ ಮಂಕಾಗಿದ್ದೀಯ?" ತಾಯಿ ಪಿಸುದನಿಯಲ್ಲಿ ಕೇಳಿದಾಗ ಮೊದಲಿಗೆ ಪಿಳಿಪಿಳಿ ಕಣ್ಣು ಬಿಟ್ಟಳು. ಸುತ್ತಲೂ ಒಮ್ಮೆ ನೋಡಿದಳು. ಅಲ್ಲಿ ತಮ್ಮಿಬ್ಬರ ಹೊರತು ಬೇರೆ ಯಾರಿರಲಿಲ್ಲ.

"ಏನೋ ಗೊತ್ತಲ್ಲಮ್ಮ.... ಯಾಕೋ ಕಸಿವಿಸಿಯಾಗ್ತಿದೆ.... " ಎಂದು ನುಡಿದಳು.

ಮತ್ತೆ ಅವಳ ಗಮನ ಫೋಟೋಗಳ ಕಡೆ ಹರಿಯಿತು. ಅಷ್ಟರಲ್ಲಿ ವನಜಮ್ಮ ಎರಡು ದೊಡ್ಡ ದೊಡ್ಡ ಲೋಟಗಳಲ್ಲಿ ಶರಬತ್ತನ್ನು ತಂದಿಟ್ಟಳು.

"ಎಷ್ಟು ಸೆಕೆ ಅಲ್ವಾ....? ತಡೀರಿ ಫ್ಯಾನ್ ಹಾಕ್ತೀನಿ." ವನಜಮ್ಮ ಅತ್ತ ತಿರುಗಿದಳು. ಸುಜಯಳ ದೃಷ್ಟಿ ಫೋಟೋಗಳ ಮೇಲೆ ನೆಟ್ಟಿತ್ತು. ಈ ಭಾವಚಿತ್ರದಲ್ಲಿರುವ ವ್ಯಕ್ತಿಗಳು ತನಗೆ ಪರಿಚಿತರು.... ಆದರೆ ಯಾರೆಂಬ ನೆನಪು ಬರುತ್ತಿಲ್ಲ.... ಈ ಹಿಂದೆ ತಾನು ಅವರನ್ನೆಲ್ಲಿ ನೋಡಿದ್ದೀನಿ... ತನಗೆ ಹೇಗೆ ಪರಿಚಿತರು? ಒಂದೂ ತಿಳಿಯುತ್ತಿಲ್ಲ. ಆದರೆ ಈಕೆಯನ್ನು ನೋಡಿದರೆ ತನಗೆ ಈ ಹಿಂದೆ ನೋಡಿರುವೆನೆಂದು ಅನ್ನಿಸುತ್ತಿಲ್ಲ. ತನಗೆ ಏನೋ ಅನ್ನಿಸುತ್ತಿರುವಂತೆ, ತನ್ನ ಅಮ್ಮನಿಗೂ ಅನ್ನಿಸುತ್ತಿರಬಹುದೇ! ಸುಜಯ ತಾಯಿಯ ಕಡೆ ನೋಡಿದಳು. ಆದರೆ ಅವಳು ಮಾತಿನಲ್ಲಿ ನಿರತಳಾಗಿದ್ದಳು. ತನ್ನ ಈ ಗೊಂದಲ ತಾಯಿಗಿಲ್ಲ; ಅಥವಾ ತನ್ನ ಗೊಂದಲ ಆಕೆಗೆ ಅರ್ಥವಾಗುತ್ತಿಲ್ಲ. ಯಾಕೆ ಹೀಗೆ? ಯಾರಿಗೆ ಹೇಳಲಿ? ಯಾರನ್ನು ಕೇಳಲಿ? ಎದ್ದು ಹೋದರೆ ಸಾಕೆನ್ನಿಸುತ್ತಿದೆ... ಈಗೇನು ಮಾಡಲಿ?"

"ಓ... ದಿನೇಶ ಬಂದ ಅಂತ ಕಾಣುತ್ತೆ" ವನಜಮ್ಮ ಮುಂಬಾಗಿಲ ಕಡೆ ತಿರುಗಿ ನುಡಿದಾಗ ಸುಜಯ ತಲೆ ತಗ್ಗಿಸಿದಳು. ಏಕೋ ಏನೋ ಅವನನ್ನು ನೋಡಬೇಕೆಂಬ ಹಂಬಲ, ಉತ್ಸಾಹ, ಕುತೂಹಲ ಯಾವುದೂ ಉಳಿದಿರಲಿಲ್ಲ. ಮನದ ಕಳವಳ, ತಳಮಳ ಹೆಚ್ಚಾಗಿತ್ತು.

ಒಳ ಬಂದ ದಿನೇಶ ತನ್ನ ರೂಮಿಗೆ ಹೋಗಿ, ಕೈ ಕಾಲು ಮುಖ ತೊಳೆದು, ಓರಣವಾಗಿ ತಲೆಯನ್ನು ಬಾಚಿಕೊಂಡು, ಕನ್ನಡಿಯಲ್ಲಿ ಮತ್ತೊಮ್ಮೆ ತನ್ನನ್ನು ತಾನು ನೋಡಿಕೊಂಡು ಉತ್ಸಾಹದಿಂದ ಹೊರ ಬಂದ. ಅವನನ್ನು ಮೆಚ್ಚುಗೆಯಿಂದ ನೋಡಿದ ವನಜಮ್ಮ ಅವನನ್ನು ಕಣ್ಣು ಸಂಜ್ಞೆಯಿಂದ ಕರೆದಳು. ಅವರಿಬ್ಬರನ್ನು ಅವನಿಗೆ ಪರಿಚಯಿಸಿದಳು.

"ಇವರು ಪ್ರಭಾವತಿ... ಇವಳು ಅವರ ಮಗಳು ಸುಜಯಾ..." ದಿನೇಶ ವಿನಯದಿಂದ ಕೈ ಮುಗಿದು "ನಮಸ್ಕಾರ" ಎಂದ. ಪ್ರಭಾವತಿ ಪ್ರತಿ ನಮಸ್ಕಾರ ಮಾಡಿದಳು. ಸುಜಯ ಕತ್ತೆತ್ತಿ ಅವನನ್ನು ನೋಡಿದಳು ಆದರೆ ತಕ್ಷಣವೇ ತಲೆ ತಗ್ಗಿಸಿ ಬಿಟ್ಟಳು. ದಿನೇಶ ಎದುರಿಗಿದ್ದ ಸೋಫಾದ ಮೇಲೆ ಕುಳಿತ. ಅನೇಕ ಬಾರಿ ಅವಳ ಕಡೆ ನೋಡಿದ. ಆದರೆ ಅವಳು ಮತ್ತೆ ತಲೆ ಎತ್ತಿರಲಿಲ್ಲ. ಅವನ ಉತ್ಸಾಹಕ್ಕೆ ತಣ್ಣೀರೆರಚಿದಂತಾಗಿತ್ತು. ಆಶ್ಚರ್ಯವೂ ಆಗಿತ್ತು. ಯಾಕೆ ಹೀಗೆ? ಇವಳಿಗೆ ತಾನು ಒಪ್ಪಿಗೆಯಾಗಲಿಲ್ಲವೇ? ಆ ಕ್ಷಣದಲ್ಲಿ ಎಲ್ಲಾ ಮುಗಿಯಿತು ಎನ್ನುವಂತೆ ಆಗಿತ್ತು. ಬೇಸರವಾಗಿತ್ತು.

ತಾಯಿ ತೋರಿಸಿದ್ದ ಫೋಟೋಗಳಲ್ಲಿ ಇವಳ ಫೋಟೋ ಸಹ ಇತ್ತು. ಫೋಟೋ ನೋಡಿಯೇ ತನ್ನ ಒಪ್ಪಿಗೆಯನ್ನು ಕೊಟ್ಟಿದ್ದ. ಆ ಮುಗುಳ್ನಗೆ, ಆ

ಲವಲವಿಕೆ ಇಲ್ಲದೇ ಮಂಕಾಗಿ ಕುಳಿತುರುವವಳನ್ನು ನೋಡಿ ಅನುಮಾನವೂ ಉಂಟಾಗಿತ್ತು. ಬಹುಶಃ ಬಲವಂತದಿಂದ ಬಂದಿರಬಹುದು ಅಂತಂದುಕೊಂಡಾಗ, ಈ ವಧು ಪರೀಕ್ಷೆಗೆ ಯಾವ ಅರ್ಥವೂ ಇಲ್ಲ ಅಂತೆನ್ನಿಸಿತು. "ಏನಾದರೂ ಮಾತನಾಡಬೇಕು..." ಅಂತ ಅಂದುಕೊಂಡಿದ್ದ. ಆದರೆ ಆ ವಿಷಯವನ್ನು ಎತ್ತುವುದೂ ಅಸಾಧ್ಯ ಎಂದು ಅರಿವಾಗಿ, ಅಲ್ಲಿ ಕೂತಿರುವದೇ ಕಷ್ಟವೆನಿಸತೊಡಗಿತ್ತು. ಆದರೆ ಸೌಜನ್ಯಕ್ಕಾಗಿ ಅಲ್ಲಿ ಕುಳಿತಿರಲೇ ಬೇಕಾಗಿತ್ತು.

ತಿಂಡಿ ಕಾಫಿಯನ್ನು ತರಲೆಂದು ವನಜಮ್ಮ ಒಳಗೆ ಹೋಗಿದ್ದಳು. ಕೈಗಳ ಬೆರಳುಗಳನ್ನು ಹೊಸೆಯುತ್ತಾ ತನ್ನ ಆಲೋಚನೆಗಳಲ್ಲಿ ಮುಳುಗಿದ್ದವನನ್ನು ತಾಯಿಯ ಧ್ವನಿ ಎಚ್ಚರಿಸಿತು. ತಾಯಿ ತಿಂಡಿಯ ತಟ್ಟೆಯನ್ನು ಅವನ ಮುಂದೆ ಹಿಡಿದು ನಿಂತಿದ್ದಳು. ತಾಯಿಯನ್ನೇ ಸುಮ್ಮನೇ ನೋಡಿ, ತಟ್ಟೆಯನ್ನು ಕೈಗೆತ್ತಿಕೊಂಡ.

ತಿಂಡಿಯನ್ನು ತಿನ್ನುತ್ತಾ ಮತ್ತೆರಡು ಬಾರಿ ಸುಜಯಳ ಕಡೆ ನೋಡಿದ. ವನಜಮ್ಮ ಹಾಗೂ ಪ್ರಭಾವತಿ ತಮ್ಮ ಮಾತುಗಳಲ್ಲಿ ಮುಳುಗಿದ್ದರು. ಅಷ್ಟರಲ್ಲಿ ಮಹೇಶ ಬಂದುದು ಅವನಿಗೆ ಹಾಯೆನಿಸಿತು. ಮಹೇಶ ಕುಳಿತವರೆಲ್ಲರನ್ನು ಒಮ್ಮೆ ನೋಡಿದ. ವನಜಮ್ಮ ಮಗನನ್ನು ಅವರಿಬ್ಬರಿಗೆ ಪರಿಚಯಿಸಿದಳು.

"ಇವನು ಮಹೇಶ... ನನ್ನ ಎರಡನೇ ಮಗ." ಮಹೇಶ ಮುಗುಳ್ನಗುತ್ತಾ ಇಬ್ಬರಿಗೂ ವಂದಿಸಿದ. ಸುಜಯ ಕತ್ತೆತ್ತಿ ಅವನ ಮುಖವನ್ನು ನೋಡಿದಂತೆ ಮಾಡಿ ಮತ್ತೆ ತಲೆ ತಗ್ಗಿಸಿದಳು. ಮಹೇಶ ಅವಳನ್ನೇ ನೋಡುತ್ತಾ ದಿನೇಶನ ಪಕ್ಕದಲ್ಲಿ ಕುಳಿತ. ನಾಚಿಕೆಯೋ, ಉದಾಸೀನವೋ, ಮಂಕುತನವೋ, ಅಂತೂ ಹುಡುಗಿ ಗೆಲುವಾಗಿಲ್ಲ ಎಂದೆನಿಸಿತು ಅವನಿಗೆ. ದಿನೇಶನ ಕಡೆ ತಿರುಗಿದ. ಅವನ ಮುಖದ ಮೇಲಿನ ಅಸಹನೆಯನ್ನು ಗುರುತಿಸಿದ. ಅಷ್ಟರಲ್ಲಿ ತಾಯಿ ಅವನ ಕೈಗೆ ತಿಂಡಿಯ ತಟ್ಟೆಯನ್ನು ಕೊಟ್ಟು ಉಳಿದವರಿಗೆ ಕಾಫಿಯನ್ನು ತಂದಿತ್ತಳು.

ಹೆಂಗಸರಿಬ್ಬರೇ ಬಂದಿದ್ದಾರೆ. ಯಾಕೋ ಯಾವ ಗಂಡಸೂ ಜತೆಗೆ ಬಂದಿಲ್ಲ ವಲ್ಲ ಇವರಿಬ್ಬರೊಡನೆ ಏನು ಮಾತನಾಡುವುದು ಎಂದುಕೊಳ್ಳುತ್ತಾ ನಿಧಾನವಾಗಿ ತಿಂಡಿಯನ್ನೂ ತಿನ್ನಲಾರಂಭಿಸಿದ. ಆಗಾಗ್ಗೆ ಅವನ ದೃಷ್ಟಿ ಸುಜಯಳ ಮೇಲೆ ಹರಿಯುತ್ತಿತ್ತು. ಈ ಮುಂಚೆ ತಾಯಿ ಕೆಲವು ಹುಡುಗಿಯರ ಫೋಟೋಗಳನ್ನು ತೋರಿಸಿದ್ದು ನೆನಪಿಗೆ ಬಂತು. ಒಂದು ಫೋಟೋವನ್ನು ಪ್ರತ್ಯೇಕವಾಗಿ ತೋರಿಸಿ,

"ಈ ಹುಡುಗಿ ಹೇಗಿದ್ದಾಳೆ ನೋಡೋ... ದಿನೇಶ ಇವಳನ್ನು ಇಷ್ಟ ಪಟ್ಟಿದ್ದಾನೆ" ಅಂತ ಹೇಳಿದ್ದಳು. ಮುಗುಳ್ನಗುವಿನಿಂದ ಕೂಡಿದ ಮುಖದಲ್ಲಿ ಗೆಲುವಿತ್ತು, ಚೆಲುವಿತ್ತು.

"ಚೆನ್ನಾಗಿದ್ದಾಳೆ. ದಿನೇಶನಿಗೆ ಒಪ್ಪಿಗೆ ಅಂದ್ಮೇಲೆ ಇನ್ನೇನು?" ಎಂದಿದ್ದೆ. ಆದರೆ ಆ ಮುಗುಳ್ನಗು, ಆ ಸೊಗಸು ಇಲ್ಲಿ ಕಾಣುತ್ತಿಲ್ಲ ಎಂದೆನಿಸಿತ್ತು.... ದಿನೇಶ ಇವಳನ್ನು ಮೆಚ್ಚಿದ್ದನೇ ಎಂದು ಅಚ್ಚರಿ ಪಡುವಂತಾಗಿತ್ತು. ಯಾಕೋ ಏನೋ ಈ ಹುಡುಗಿ

ನೀರಸವಾಗಿದಾಳಲ್ಲ, ಯಾಕೆ? ಕಾರಣ ಏನಿರಬಹುದು? ಹಾಗೆಂದುಕೊಳ್ಳುತ್ತಾ ತಿಂಡಿಯ ತಟ್ಟೆಯನ್ನು ಖಾಲಿ ಮಾಡಿ ಕಾಫಿಯನ್ನು ಕುಡಿದ. ಈ ಮಧ್ಯೆ ದಿನೇಶ ಎದ್ದು ಒಳಕ್ಕೆ ಹೋಗಿದ್ದ.

"ನಿಮ್ಮ ಮಗಳಿಗೆ ತುಂಬಾ ಸಂಕೋಚ. ತಿಂಡೀನ ತಿಂದೇ ಇಲ್ಲ" ವನಜಮ್ಮ ನುಡಿದಾಗ ಪ್ರಭಾವತಿ ನಸುನಕ್ಕಳು. ಸುಜಯ ಕತ್ತೆತ್ತಿದಳು. ಮಹೇಶನ ದೃಷ್ಟಿ ಅವಳ ಮೇಲೆ ಇರುವುದನ್ನು ಗಮನಿಸಿ, ಅವಳ ಮುಖ ಕೆಂಪಾಗಿತ್ತು. ನಿಧಾನವಾಗಿ ತಿಂಡಿಯನ್ನು ತಿನ್ನಲಾರಂಭಿಸಿದಳು. ಮಹೇಶ ಮತ್ತೆ ಮತ್ತೆ ಸುಜಯಳನ್ನು ನೋಡಿದ.

ವಧು ಪರೀಕ್ಷೆಯ ಕಾರ್ಯಕ್ರಮ ಮುಗಿದಿತ್ತು. ದಿನೇಶ ಮತ್ತೆ ಹೊರಕ್ಕೆ ಬಂದಿರಲಿಲ್ಲ. ವನಜಮ್ಮ ತಂದಿಟ್ಟ ಎಲೆ ಅಡಿಕೆ ಹಣ್ಣುಗಳನ್ನು ತೆಗೆದುಕೊಂಡು ಅವರಿಬ್ಬರೂ ಹೊರಡಲನುವಾದರು.

"ನಾವಿನ್ನು ಬರ್ತೀವಿ" ಪ್ರಭಾವತಿ ಎದ್ದು ನಿಂತಾಗ, ಸುಜಯಳೂ ಎದ್ದಳು. ಅವಳ ದೃಷ್ಟಿ ಭಾವ ಚಿತ್ರಗಳ ಕಡೆ ಹರಿದುದನ್ನು ಮಹೇಶ ಗಮನಿಸಿದ. ಸರ್‍ರನೆ ಅವಳು ದೃಷ್ಟಿಯನ್ನು ತಗ್ಗಿಸಿ, ಹೊರಬಾಗಿಲ ಕಡೆ ಬೇಗ ಬೇಗ ನಡೆದಾಗ, ವಿಸ್ಮಯ ದಿಂದ ಅವಳ ಬೆನ್ನನ್ನೇ ನೋಡಿ, ತಾನೂ ಫೋಟೋಗಳನ್ನು ಈ ಮುಂಚೆ ಎಂದೂ ನೋಡಿಯೇ ಇಲ್ಲವೆಂಬಂತೆ ಫೋಟೋಗಳ ಕಡೆ ನೋಡಿದ. ಆದರೆ ಅದರಲ್ಲಿ ಏನೂ ವಿಶೇಷ ಕಂಡು ಬರಲಿಲ್ಲ. ತನ್ನೊಳಗೇ ನಕ್ಕೊಂಡು ಮುಂಬಾಗಿಲಿಗೆ ಬಂದ. ಗೇಟಿನ ತನಕ ಅವರಿಬ್ಬರನ್ನು ಕಳಿಸಿಕೊಟ್ಟು ವನಜಮ್ಮ ಹಿಂದಕ್ಕೆ ಬಂದಳು. ಒಳಬಂದ ಮಹೇಶ ದಿನೇಶನ ರೂಮಿನೊಳಕ್ಕೆ ಇಣುಕಿದ. ಕಿಟಕಿಯ ಬಳಿ ನಿಂತು ನೋಡುತ್ತಿದ್ದ ದಿನೇಶ ಹಿಂದಕ್ಕೆ ತಿರುಗಿ, ಪೆಚ್ಚು ನಗೆ ನಕ್ಕ.....

"ಏನೋ ದಿನೂ, ಹುಡ್ಗಿ ಒಪ್ಗೆ ಆದ್ಲೇನೋ?" ಅವನ ಹಿಂದೆ ಬಂದು ನಿಂತ ವನಜಮ್ಮ ಕೇಳಿದಳು. ದಿನೇಶ ಉತ್ತರಿಸದೇ ಮಹೇಶನ ಕಡೆ ನೋಡಿದ.

"ಯಾಕಪ್ಪಾ, ಹುಡ್ಗೀನ ಸರ್‍ಯಾಗಿ ನೋಡೋಕೇ ಆಗ್ಲಿಲ್ವಾ?" ಕೆಣಕಿದ.

"ನಾನಲ್ಲಿ ಕೂತಿದಷ್ಟೂ ಹೊತ್ತೂ ಅವಳು ಕತ್ತನ್ನೆತ್ತಲಿಲ್ಲ... ಹೇಗಿದಾಳೆ ಅಂತ ಹೇಗೆ ಗೊತ್ತಾಗುತ್ತೆ?"

"ಮಾತ್ನಾಡಿಸಬೇಕಾಗಿತ್ತು..."

"ಏನ್ ಮಾತಾಡ್ಸೋದು? ಇತ್ಲಾಗೆ ನೋಡಿದ್ರೆ ತಾನೆ?"

"ಏನೋ ನಾಚ್ಕೆ ಇರ್ಬಹುದು... ಮಾತಾಡ್ಸಬೇಕಾಗಿತ್ತು... ನಂಗೆ ಹೇಳಿದ್ರೆ ನಾನು ಆಕೆಗೆ ಹೇಳಿರ್ತಿದ್ದೆ."

"ಹೋಗ್ಲಿ ಬಿಡಮ್ಮ... ನಿರಾಸಕ್ತಿಯಿಂದ ಕುಳಿತಿದ್ದೋಳನ್ನು ಏನು ಕೇಳೋದು ಅಂತ ಅಂದ್ಕೊಂಡು ಸುಮ್ಮನಾದೆ. ಯಾರಾದ್ರೂ ಗಂಡಸ್ರೂ ಬಂದಿದ್ರೆ ಚೆನ್ನಾಗಿತ್ತು... ಇಬ್ರೇ ಹೆಂಗಸ್ರು... ತುಂಬಾ ಮುಜುಗರ ಆಗ್ತಿತ್ತು."

"ಆಕೆಯ ಯಜಮಾನ್ರಿಗೆ ಹುಶಾರಿರಲಿಲ್ವಂತೆ. ಮನೇಲಿ ಬೇರೆ ಗಂಡಸ್ರು ಇಲ್ಲ. ನಿಂಗೆ ಸುಜಯ ಒಪ್ಗೆ ಆಗಿದ್ರೆ ಹೇಳು, ನಾವೇ ಅವರ ಮನೆಗೆ ಹೋಗಿ ಬರೋಣ..."

"ಏನೂ ಬೇಡ.... ನಾನು ಅವತ್ತೇ ಒಪ್ಗೇನ ಕೊಟ್ಟಿದ್ದೆ. ಅವಳ್ಗೆ ನಾನು ಒಪ್ಗೆ ಆಗಿದ್ರೆ, ಅವರುಗಳು ತಿಳಿಸಲಿ. ಆಮೇಲೆ ನೋಡ್ಡೋಣ... "

"ಏನೋ ಹೀಗಂತೀಯ? ಅರ್ಜೆಂಟು ಇರೋದು ನಮಗೆ... ನಿನ್ನ ಒಪ್ಪಿಗೆ ಮುಖ್ಯ... ಅವಳ್ಗೆ ಒಪ್ಗೆ ಇಲ್ದಿದ್ರೆ ಇಲ್ಲಿಗೆ ಬರ್ತಿದ್ರಾ?"

"ಅದು ಹಾಗಲ್ಲಮ್ಮ... ಅವಳ್ಗೆ ಒಪ್ಗೆ ಇದ್ರೆ ಅವರು ತಿಳಿಸ್ಲಿ... ನಾನು ಮೊದ್ಲು ಅವಳ ಹತ್ರ ಮಾತಾಡ್ಬೇಕು... ನೀನು ಅವಸರ ಪಡಬೇಡ" ಅವನು ಸ್ವಲ್ಪ ಗಡುಸಾಗಿ ನುಡಿದಾಗ ವನಜಮ್ಮ ಸುಮ್ಮನಾದಳು.

* * *

ಎರಡು ಮೂರು ದಿನಗಳು ಕಳೆದರೂ ಹೆಣ್ಣಿನವರ ಕಡೆಯಿಂದ ಯಾವ ಉತ್ತರವೂ ಬಾರದೇ ಇದ್ದಾಗ ವನಜಮ್ಮ ಅಸಹನೆಯಿಂದ ಚಡಪಡಿಸಿದಳು. ಒಂದು ತರಹ ನಿರಾಸೆಯೂ ಉಂಟಾಗಿತ್ತು. ದಿನೇಶನ ಮೌನ ಅಸಹನೀಯವೆನಿಸಿತು. ಸಮಯ ನೋಡಿ, ಅವನ ಮುಂದೆ ಇನ್ನೂ ನಾಲ್ಕಾರು ಹುಡುಗಿಯರ ಫೋಟೋ ಗಳನ್ನಿಟ್ಟಳು. ದಿನೇಶ ಫೋಟೋಗಳ ಕಡೆ ನೋಡಿದಂತೆ ಮಾಡಿ ಸುಮ್ಮನಾಗಿದ್ದ. ಅಲ್ಲಿಯೇ ಕುಳಿತಿದ್ದ ಮಹೇಶ ಅದನ್ನು ಗಮನಿಸಿದ.

"ಅಮ್ಮಾ... ಆ ಹುಡ್ಗಿಯವರ ಮನೆಯವ್ರು, ಏನಂದ್ರು?" ಅಂತ ಕೇಳಿದ.

"ಯಾವ ಹುಡ್ಗಿಯೋ?" ವನಜಮ್ಮ ಸುಮ್ನಿರು ಎನ್ನುವಂತೆ ಸಂಜ್ಞೆ ಮಾಡಿದಳು.

"ಅದೇ ಕಣಮ್ಮಾ... ಸುಜಯ ಅಂತ... ನಾಲ್ಕೈದು ದಿನಗಳ ಕೆಳ್ಗೆ ನಮ್ಮನೆಗೆ ತಾಯಿ ಮಗಳು ಇಬ್ಬರೇ ಬಂದಿರಲಿಲ್ವಾ...?" ಅವ್ರಿಂದ ಫೋನು ಬಂತಾ?"

"ಈ ಕಾಲ್ದಲ್ಲಿ ಹೆಣ್ಣಿನೋರ್ಗೆ ಅತೀ ಜಂಭ... ಹುಡ್ಗಿ ಚೆನ್ನಾಗಿದಾಳೆ ಅಂತ ಅಂದ ಮಾತ್ರಕ್ಕೆ ಧಿಮಾಕು ಇರ್ಬಾರ್ದು... ಒಂದ್ಮಾತು ಒಪ್ಗೆ ಅಂತ ತಿಳಿಸೋಕೆ ಇಷ್ಟು ದಿನಾಬೇಕಾ?"

"ಬಹುಶಃ ಒಪ್ಗೆ ಇಲ್ದೆ ಇರಬಹುದು"

"ನೀನು ಸುಮ್ನಿರು. ಒಪ್ಗೇ ಇಲ್ಲದಿರುವುದಕ್ಕೆ ಕಾರಣ ಏನಿದೆ? ನಮ್ಮ ದಿನೇಶ ನಂಥ ಹುಡ್ಗ ಸಿಗಬೇಕಾದ್ರೆ ಪುಣ್ಯ ಮಾಡಿರ್ಬೇಕು... ಆ ಹುಡ್ಗಿಗೆ ಲಭ್ಯ ಇಲ್ಲ ಅಷ್ಟೇ" ಮಹೇಶ್ ದಿನೇಶನ ಕಡೆ ನೋಡಿದ. ಅವನು ಎತ್ತಲೋ ನೋಡುತ್ತಿದ್ದ.

"ನಾವೇ ಫೋನು ಮಾಡಿ ಕೇಳಿದ್ರಾಯ್ತು... "

"ಏನೂ ಬೇಡ. ಅವರ್ಗೆ ಏನೋ ಕೊಬ್ಬು. ಇನ್ನು ಏನೋ ಯೋಚಿಸ್ತಾ ಕೂತಿರ್ತಾರೆ. ನಮ್ಮ ಅರ್ಜೆಂಟು ಅವರಿಗೆಲ್ಲ ಅರ್ಥವಾಗುತ್ತೆ?"

"ಹೌದಮ್ಮ... ನಮ್ಮ ಅರ್ಜೆಂಟು ಅವರಿಗೆಲ್ಲಿ ತಿಳಿಯುತ್ತೆ? ಹಾಗೇ ಅವರುಗಳಿಗೆ ಏನಾದ್ರೂ ಸಮಸ್ಯೆ ಇದ್ರೆ ನಮ್ಗೆ ಹೇಗೆ ಗೊತ್ತಾಗುತ್ತೆ?"

"ಅವರ್ಗೇನಾದ್ರೂ ಸಮಸ್ಯೆ ಇದ್ರೆ ಅದು ಅವರ ಸ್ವಂತದ್ದು. ಅದಕ್ಕೂ ನಮಗೂ ಏನು ಸಂಬಂಧ? ಅಲ್ದೇ, ನಮ್ಮ ಮನೆತನ ಗೋತ್ರ, ಹುಡುಗನ ವಿದ್ಯಾಭ್ಯಾಸ, ಉದ್ಯೋಗ ಎಲ್ಲವನ್ನೂ ವಿಚಾರಿಸ್ಕೊಂಡೇ ಮುಂದುವರೆದಿರ್ತಾರೆ. ಒಪ್ಗೆ ಇಲ್ದೇ ಇದ್ದಿದ್ರೇ ಬರ್ಲೇ ಬಾರ್ದಾಗಿತ್ತು... ಎಷ್ಟಾದ್ರು ಅವರು ಹೆಣ್ಣಿನೋರು ಅದನ್ನಾದ್ರೂ ಯೋಚಿಸ್ಬೇಡ್ವೇ?"

ಮಹೇಶ ನಕ್ಕ. "ಈ ಕಾಲ್ದಲ್ಲಿ ಹೆಣ್ಣೋರು, ಗಂಡ್ನೋರು ಎಲ್ಲಾ ಒಂದೇ. ನಮ್ಗೆ ಹುಡ್ಗಿ ಬೇಕಾಗಿದ್ರೆ ನಾವೇ ಹುಡುಕ್ಕೊಂಡು ಹೋಗ್ಬೇಕು ಅದೇ ಸರಿ."

"ನೀನು ಸುಮ್ನಿರು. ಏನೇನೋ ಮಾತು ಆಡ್ಬೇಡ"

"ಯಾಕಮ್ಮಾ ಆಡ್ಬಾರ್ದು? ಹೆಣ್ಣೋರಾದ್ರೆ ಏನು ಕಡ್ಮೆ? ಗಂಡ್ನೋರಾದ್ರೆ ಏನು ಹೆಚ್ಚು...?" ಮದ್ವೆ ಅಂದ್ರೆ ಒಂದು ಗಂಡು, ಒಂದು ಹೆಣ್ಣು ಬೇಕೇ ಬೇಕು ಹೌದು ತಾನೇ?" ಮತ್ತೆ ನಕ್ಕ.

"ಸಾಕು ಸಾಕು ನಿನ್ನ ಮಾತು" ಅವರಿಬ್ಬರ ಮಾತುಗಳನ್ನು ಕೇಳಿಸಿಕೊಳ್ಳಲು ಇಷ್ಟವಿಲ್ಲದವನಂತೆ ದಿನೇಶ ಎದ್ದು ಹೋದ.

"ನೋಡಿದ್ಯಾ ದಿನೇಶಂಗೆ ಬೇಜಾರಾಯ್ತು. ಎದ್ದೇ ಹೋದ"

"ನಿನ್ಮಾತ್ನಿಂದ ಅವನ್ಗೆ ಬೇಜಾರಾದದ್ದು... ತಡಿ ನಾನು ಹೋಗಿ ಕೇಳ್ತೀನಿ." ಎನ್ನುತ್ತಾ ದಿನೇಶನ ಹಿಂದೆಯೇ ಬಂದ. ರೂಮಿನ ಕಿಟಕಿಯ ಬಳಿ ನಿಂತು ಆಚೆಯ ಕಡೆ ನೋಡುತ್ತಿದ್ದ ದಿನೇಶ ಇತ್ತ ತಿರುಗಲಿಲ್ಲ.

"ಆ ಹುಡ್ಗಿ ಮತ್ತೆ ಕಾಣ್ತಾಳೆ ಅಂತ ನೋಡ್ತಾ ಇದೀಯ?" ತಮಾಷೆ ಮಾಡಿದ.

"ಏನೋ ಯೋಚಿಸ್ತಿದ್ದೆ" ಉದಾಸೀನತೆಯಿಂದ ಉತ್ತರಿಸಿ ಇತ್ತ ತಿರುಗಿದ.

"ದಿನೇಶ, ನನ್ಮಾತ್ನಿಂದ ನಿಂಗೆ ಬೇಸರವಾಗಿದ್ದರೆ ಸಾರಿ, ಆ ಹುಡ್ಗಿ ಒಪ್ಗೆಯಾಗಿದ್ರೆ ಹೇಳು, ನಾನೇ ಹೋಗಿ ಕೇಳ್ಕೊಂಡು ಬರ್ತೀನಿ."

"ಪೂರ್ತಿ ಒಪ್ಗೆ ಅಂತ ಹೇಗೆ ಹೇಳ್ಲಿ? ಸರಿಯಾಗಿ ನೋಡ್ಲಿಲ್ಲ. ಮಾತಾಡಿಸ್ಲಿಲ್ಲ. ಆ ಹುಡ್ಗಿಗೆ ಯಾಕೋ ಆಸಕ್ತಿನೇ ಇರ್ಲಿಲ್ಲ ಅಂತ ಅನ್ನಿಸ್ತು. ಬಲವಂತಕ್ಕೆ ಬಂದಂತಿತ್ತು."

"ಹಾಗಾದ್ರೆ, ನೀನೂ ಅದನ್ನು ನೋಟೀಸ್ ಮಾಡ್ದೇ ಅನ್ನು.....ನಂಗೂ ಅದೇ ಆಶ್ಚರ್ಯ ಆದದ್ದು. ಈ ಕಾಲ್ದಲ್ಲಿ ಯಾವ ಹುಡ್ಗೀರೂ ಹೀಗಿರೊಲ್ಲ ಅಲ್ವಾ?"

"ಬಹುಶಃ ಅವಳ್ಗೆ ಈ ಸಂಬಂಧ ಇಷ್ಟವಿಲ್ಲಾಂತ ಅನ್ಸುತ್ತೆ."

"ಅವಳು ಬೇರೆ ಯಾರನ್ನಾದ್ರೂ ಇಷ್ಟ ಪಟ್ಟಿರಬಹುದೋ ಏನೋ."

"ಹಾಗಿದ್ದಿದ್ರೆ ನಮ್ಮನೇಗೇ ಬರ್ಲೇ ಬಾರ್ದಾಗಿತ್ತು."

"ನೀನ್ಯಾಕೆ ಅಪ್ಸೆಟ್ ಆಗ್ತಿದೀಯ?"

"ಹಾಗೇನಿಲ್ಲ. ಅಮ್ಮ ತೋರ್‍ಸಿದ ಫೋಟೋಗಳ ಪೈಕಿ, ನನಗೆ ಹಿಡಿಸ್ದವಳು ಇವಳೊಬ್ಬಳೇ.... ಇಂಟರ್ವ್ಯೂ ಇಲ್ದಿದ್ರೂ ನಾನು ಒಪ್ಗೆ ಕೊಡ್ತಿದ್ದೆ....ಆದ್ರೆ ಸ್ವಲ್ಪ ಮಾತ್ನಾಡಿಸ್ಬೇಕೂಂತ ಅಂದ್ಕೊಂಡಿದ್ದೆ ಅಷ್ಟೇ...."

"ಓ ಹಾಗಾದ್ರೆ ಹೆವಿ ಡಿಸಪಾಯಿಂಟ್ಮೆಂಟ್ ಅನ್ನು. ಅಮ್ಮ ಹೇಳೋ ಹಾಗೆ ಹುಡ್ಗಿಗ್ರೇನೂ ಕಡ್ಮೆ ಇಲ್ಲ. ಇವ್ಳೇ ಆಗ್ಬೇಕೂಂತ ಏನಿಲ್ವಲ್ಲ? ಅಲ್ದೇ ಅವ್ರಿಗೂ ಸ್ವಾತಂತ್ರ್ಯ ಇರುತ್ತೆ ಅಲ್ವಾ?"

"ಅವಳ್ಗೆ ನಾನು ಒಪ್ಗೆ ಆಗ್ದೇ ಇದ್ರೆ ನಂಗೇನೂ ಬೇಸರವಿಲ್ಲ. ಆದರೆ, ಅದನ್ನೇ ತಿಳಿಸ್ಬಹುದಾಗಿತ್ತಲ್ವಾ? ಅಮ್ಮ ಹೇಳೋ ಹಾಗೆ ನಮ್ಮ ಅರ್ಜೆಂಟು ಅವರಿಗೆ ಹೇಗೆ ತಿಳಿಯುತ್ತೆ?"

"ಅರ್ಜೆಂಟ್ಯಾಕೆ? ಮದ್ವೆ ವಿಷಯದಲ್ಲಿ ಆತುರ ಪಡಬಾರದು ಅಂತ ನನ್ನ ಅನಿಸಿಕೆ. ನಿಧಾನವಾಗಿ ಹುಡುಕಿದ್ರೆ ಇವಳ್ಗಿಂತ ಮೇಲಾದವಳು ಖಂಡಿತಾ ಸಿಗ್ತಾಳೆ."

"ಹಾಗಲ್ಲ ಮಹೀ.... ಇನ್ನೊಂದು ತಿಂಗಳ ನಂತರ ನಾನು ಡೆಲ್ಲಿಗೆ ಹೋಗ್ಬೇಕಾಗಿದೆ. ಅಲ್ಲಿ ಏಳೆಂಟು ತಿಂಗಳು ಇರ್ಬೇಕಾಗುತ್ತೆ. ಅಷ್ಟರಲ್ಲಿ ಮದ್ವೆಯಾಗ್ಬೇಕು ಅಂತ ಅಂದ್ಕೊಂಡಿದೀನಿ... ಅಮ್ಮನ ಅಭಿಪ್ರಾಯ ಕೂಡಾ ಇದೇ....."

"ಓ... ಹೌದಾ? ನಂಗೆ ಯಾರೂ ಹೇಳ್ಲೇ ಇಲ್ಲ" ನವಿರಾಗಿ ಆಕ್ಷೇಪಣೆ ಮಾಡಿದ.

"ನಂಗೂ ಡೆಲ್ಲಿಗೆ ಹೋಗೋಕೆ ಅಷ್ಟೇನೂ ಇಷ್ಟವಿಲ್ಲ. ನೀನೂ ಆಗಾಗ್ಗೆ ಟೂರ್ ಅಂತ ಹೊರಗೆ ಹೋಗ್ತಿರ್ತೀಯ..... ಆದ್ರೂ ನಾನೀಗ ಹೋಗ್ಲೇ ಬೇಕಾಗಿದೆ. ಅಮ್ಮ ಒಬ್ಳೇ ಆಗ್ತಾಳಲ್ಲ ಅಂತ ನಂಗೆ ಚಿಂತೆ"

"ಓ... ಮದ್ವೆ ಮಾಡ್ಕೊಂಡು ಅತ್ತಿಗೇನ ಇಲ್ಲಿ ಅಮ್ಮನ ಜೊತೆಗೆ ಬಿಟ್ಟು ಹೋಗುವ ಐಡಿಯಾ ಏನಿಲ್ಲ ತಾನೇ....?"

"ಎಸ್.... ಆ ಐಡಿಯಾ ಖಂಡಿತಾ ಇದೆ. ಅಮ್ಮಂಗೆ ಒಬ್ರು ಜೊತೆ ಬೇಡ್ವಾ?"

"ಹಾಗ್ಮಾತ್ರ ಮಾಡ್ಬೇಡ ದಿನೇಶ. ಅದು ಸರಿಯಲ್ಲ. ಅಮ್ಮಂಗೋಸ್ಕರ ಆತುರವಾಗಿ ಮದ್ವೆ ಆಗ್ಬೇಡ.... ನೀನು ಬರೋವರೆಗೂ ನಾನು ಟೂರ್ ಕ್ಯಾನ್ಸಲ್ ಮಾಡಿಸ್ಕೊಳ್ತೀನಿ, ಅಥವಾ ಸರಿ ಹೋಗ್ದಿದ್ರೆ ಈ ಕೆಲ್ಸಕ್ಕೆ ರಿಸೈನ್ ಮಾಡ್ತೀನಿ."

"ಹಾಗಲ್ಲ ಮಹೀ.... ನನಗೆ ಈ ಇಂಟರ್ವ್ಯೂ ಅದೆಲ್ಲಾ ಇಷ್ಟವಿಲ್ಲ. ಇದೆಲ್ಲಾ ಒಂಥರಾ ಮುಜುಗರ."

"ನಿಂಗೇ ಹೀಗನ್ನಿಸಿದ್ರೆ, ಆ ಹುಡ್ಗೀಗೂ ಹಾಗೇ ಅನ್ನಿಸ್ರಬೇಕು. ಅದೂ ಅವಳ ಒಪಿನಿಯನ್ ಏನೂಂತ ತಿಳಿಸ್ಬಹುದಾಗಿತ್ತು.... ಯಾಕೆ ತಿಳಿಸಲ್ವೋ....?" ದಿನೇಶ ಸುಮ್ಮನೇ ನೋಡಿದ. ಮಹೇಶ ತನ್ನಲ್ಲೇ ಏನನ್ನೋ ನಿರ್ಧರಿಸಿದ.

* * *

"ಮಹೀ, ಈ ಕವರುಗಳನ್ನೆಲ್ಲ ಪೋಸ್ಟ್ ಮಾಡಿಬಿಡು" ತಾಯಿ ಹತ್ತಾರು ಕವರುಗಳನ್ನು ಮಹೇಶನಿಗೆ ಕೊಡುತ್ತಾ ನುಡಿದಳು.

"ಯಾರ್ಗೆ ಬರ್ದಿದೀಯಮ್ಮ.... ಇಷ್ಟೊಂದು ಕಾಗ್ದಗಳನ್ನು?" ಆಶ್ಚರ್ಯದಿಂದ ಕವರುಗಳನ್ನು ತಿರುಗಿಸಿ ನೋಡಿದ.

"ಇವೆಲ್ಲ ಯಾರ್‍ಯಾರೋ ಹೆಣ್ಣಿನವರು ಕಳಿಸಿದ್ದ ಫೋಟೋಗಳು, ಜಾತಕದ ಪ್ರತಿಗಳು ಯಾವ್ದೂ ಸರಿ ಹೋಗ್ಲಿಲ್ಲ. ಇದನ್ನೆಲ್ಲ ಇಟ್ಕೊಂಡು ಏನ್ಮಾಡೋದು? ವಾಪಸ್ಸು ಕಳಿಸ್ತಿದೀನಿ"

"ಈಗ ನಾಲ್ಕೈದು ದಿನಗಳ ಹಿಂದೆ ಬಂದಿದ್ದಲ್ಲ. ಸುಜಯ ಅಂತ......ಅದಕ್ಕೇನು ಮಾಡ್ದೇ?"

"ಅದನ್ನೂ ವಾಪಸ್ಸು ಕಳಿಸ್ತಿದ್ದೀನಿ..... ದಿನೂ ಒಪ್ಪಿದ್ರೂ, ಅವರಿಂದ ಉತ್ತರವಿಲ್ಲ. ಅದಕ್ಕೇ ನಾನೇ ಬೇಡಾಂತ ನಿರ್ಧರಿಸಿ, ಆ ಫೋಟೋ, ಜಾತಕಾನೂ ವಾಪಸ್ಸು ಕಳಿಸ್ತಿದೀನಿ.....ಇಲ್ಲಿದೆ ನೋಡು....." ಆ ಕವರುಗಳಲ್ಲಿ ಒಂದನ್ನು ತೆಗೆದು ತೋರಿಸಿದಳು. ಮಹೇಶ ಮತ್ತೆ ಪ್ರಶ್ನಿಸಲಿಲ್ಲ. ತನ್ನ ರೂಮಿಗೆ ಬಂದು ಆ ಕವರನ್ನು ಪ್ರತ್ಯೇಕವಾಗಿ ತೆಗೆದಿಟ್ಟುಕೊಂಡು, ಉಳಿದವನ್ನು ಪೋಸ್ಟ್ ಮಾಡಲೆಂದು ತನ್ನ ಬ್ರೀಫ್ ಕೇಸಿನೊಳಗೆ ಇಟ್ಟುಕೊಂಡ. ತಾನಿಟ್ಟುಕೊಂಡ ಕವರನ್ನು ಒಡೆದು, ಅದರಲ್ಲಿದ್ದ ಸುಜಯಳ ಫೋಟೋ ವನ್ನು ಹೊರ ತೆಗೆದು ನೋಡಿದ. ಪೋಸ್ಟ್ ಕಾರ್ಡ ಸೈಜಿನ ಫೋಟೋ..... ಮತ್ತೆ ಮತ್ತೆ ನೋಡಬೇಕೆಂದೆನಿಸುವಂತಿರುವ ಮುದ್ದಾದ ಮುಖ.... ಮುಗುಳ್ನಗೆಯನ್ನು ಚೆಲ್ಲುತ್ತಿರುವ ಈ ಚೆಲುವೆ ಮುಖಕ್ಕೂ ಆ ದಿನ ಎದುರಿನಲ್ಲಿ ಕಂಡವಳ ಮುಖಕ್ಕೂ ಎಷ್ಟೊಂದು ವ್ಯತ್ಯಾಸ! ಈ ಫೋಟೋದಲ್ಲಿರುವ ಹುಡುಗಿ ಅವಳೇನಾ ಅಂತನ್ನಿಸುವಷ್ಟು .... ಈ ಸೊಗಸು ಅಂದು ಕಾಣಲಿಲ್ಲ. ನಿಜವಾಗಿಯೂ ಫೋಟೋಜೆನಿಕ್ ಫೇಸು.... ಈ ಸೌಂದರ್ಯವನ್ನೇ ದಿನೂ ಮೆಚ್ಚಿದ್ದು.... ಆದರೆ ಈ ಮುಗುಳ್ನಗು, ಈ ಮಾಧುರ್ಯ ಅಂದೇಕೆ ಇರಲಿಲ್ಲ? ಎಲ್ಲಿ ಮಾಯವಾಯಿತು! ಯಾಕೆ? ಏನೋ ಬಲವಾದ ಕಾರಣವಿರಲೇಬೇಕು.....ಇಲ್ಲದಿದ್ದರೆ ದಿನೇಶನನ್ನು ಒಪ್ಪದೇ ಇರಲು ಹೇಗೆ ತಾನೆ ಸಾಧ್ಯ.....? ತಾನೊಮ್ಮೆ ಸುಜಯಳನ್ನು ಕಂಡು ಆ ಕಾರಣವನ್ನು ಅರಿಯಬೇಕು ಎಂದೆನಿಸಿತು. ತಾನು ಕೇಳಿದರೆ, ಕಾರಣವನ್ನು ತಿಳಿಸಿ ಬಿಡುವಳೇ ಎಂಬ ಅನುಮಾನ ಇಣುಕಿದರೂ, ಒಂದು ಬಾರಿ ಪ್ರಯತ್ನ ಪಟ್ಟರೆ ಅದರಲ್ಲಿ ನಷ್ಟವೇನು ಎಂದು ತನಗೆ ತಾನೇ ಹೇಳಿಕೊಂಡು, ಮತ್ತೆ ಸುಜಯಳ ಫೋಟೋ ನೋಡಿದ. ಹೃದಯ ಹೂವಾಯಿತು. ಮಧುರ ಕಂಪನು ಸೂಸಿತು. ಅವಳ ಫೋಟೋವನ್ನು ತನ್ನ ಟೇಬಲ್ ಡ್ರಾಯರ್ ಒಳಗೆ ಫೈಲುಗಳ ಸಂದಿಯಲ್ಲಿ ತೆಗೆದಿಟ್ಟ.

ಅದೇ ದಿನ ಸಾಯಂಕಾಲ, ತನ್ನ ಆಫೀಸಿನಿಂದ ಹೊರಟಾಗ, ಮರೆಯದೇ ಸ್ಕೂಟರನ್ನು ಸುಜಯಳ ಮನೆಯ ದಿಕ್ಕಿಗೆ ಓಡಿಸಿದ. ಕೈಯಲ್ಲಿ ವಿಳಾಸವಿದ್ದುದರಿಂದ

ಮನೆಯನ್ನು ಹುಡುಕಲು ಹೆಚ್ಚು ಕಷ್ಟ ಪಡಬೇಕಾಗಿರಲಿಲ್ಲ. ಆತಂಕ ಅನುಮಾನಗಳಿಂದ ಕಾಲಿಂಗ್ ಬೆಲ್ ಒತ್ತಿದ. ಬಾಗಿಲನ್ನು ತೆರೆದವಳು ಸುಜಯಳೇ. ಅವನನ್ನು ನಿರೀಕ್ಷಿಸಿರಲಿಲ್ಲವಾದ್ದರಿಂದ, ಬೆಪ್ಪಳಂತೆ ಅವನನ್ನೇ ನೋಡಿದಳು.

"ಹಲೋ.... ಗುರುತು ಸಿಕ್ತಾ?" ಆತನೇ ಪರಿಚಯದ ನಗೆಯನ್ನು ನಕ್ಕು ಕೇಳಿದಾಗ ಅವಳು ಮಂದಹಾಸ ಬೀರಿದಳು. ಬೆಳದಿಂಗಳು ಹರಡಿದಂತಾಯಿತು.

"ನಿಮ್ಮ ತಂದೆ ಮನೇಲಿದಾರಾ....?" ಅವಳನ್ನೇ ನೋಡುತ್ತಾ ಪ್ರಶ್ನಿಸಿದ.

"ಇಲ್ಲ, ಅವರಿನ್ನು ಮನೆಗೆ ಬಂದಿಲ್ಲಾ." ಅವಳ ಧ್ವನಿ ಮಧುರವಾಗಿತ್ತು. ಅವನ ಮನದಂಗಳದೊಂದಿಗೆ ತಂಗಾಳಿ ಬೀಸಿದಂತಾಯಿತು. ಮುದಗೊಂಡ. ಅಷ್ಟರಲ್ಲಿ ಅವಳ ತಂದೆ ಪ್ರಭಾವತಿ ಬಂದು ನಿಂತಿದ್ದಳು. ಮಹೇಶನ ಗುರುತು ಸಿಕ್ಕಿತ್ತು. ಮುಖದ ಬಣ್ಣ ಬದಲಾಗಿತ್ತು. ಆದರೂ ಆತ್ಮೀಯತೆಯಿಂದ ಅವನನ್ನು ಒಳಕ್ಕೆ ಕರೆದಳು.

"ಬನ್ನಿ... ಬನ್ನಿ... ಮನೇಲಿ ಎಲ್ಲಾ ಚೆನ್ನಾಗಿದಾರಾ... ? ನಾವೇ ಫೋನ್ ಮಾಡ್ಬೇಕಾಗಿತ್ತು. ನಿಮ್ಮ ತಾಯಿ ಏನಂದುಕೊಂಡ್ರೋ ಏನೋ.... ಆದರೆ...." ಅವಳು ಸುಜಯಳ ಕಡೆ ನೋಡಿ ಅಷ್ಟಕ್ಕೇ ಮಾತನ್ನು ನಿಲ್ಲಿಸಿದಳು. ಸುಜಯ ಒಳಗೆ ಹೊರಟು ಹೋದಳು.

"ಕೂತ್ಕೊಳ್ಳಿ, ಇನ್ನೇನು ನಮ್ಮನೆಯೋರು ಬರೋ ಹೊತ್ತಾಯ್ತು. ಸುಮ್ಮನೆ ನಿಮಗೆ ತೊಂದ್ರೆ ಆಯ್ತೇನೋ....? ಕಾಫಿ ತರ್ತೀನಿ." ಆಕೆ ಸಂಕೋಚದಿಂದ ನುಡಿದಾಗ ಇವನಿಗೂ ತಬ್ಬಿಬ್ಬಾಗಿತ್ತು. ಅಲ್ಲಿದ್ದ ಕುರ್ಚಿಯೊಂದರ ಮೇಲೆ ಕುಳಿತು, ಸುತ್ತಲೂ ನೋಡಿದ. ಸುಜಯ ಮತ್ತೆ ಕಂಡಾಳು ಎಂಬ ಆಸೆ ಅವನಿಗೆ. ಆಕೆ ಕಾಫಿಯನ್ನು ತರಲೆಂದು ಒಳಗೆ ಹೋಗಿದ್ದಳು ಅಷ್ಟರಲ್ಲಿ ಮನೆಯ ಯಜಮಾನ ರಂಗನಾಥ ರಾಯರು ಬಂದರು.

ಮಹೇಶ ಎದ್ದು ನಿಂತು, ತಾನೇ ತನ್ನ ಪರಿಚಯವನ್ನು ಹೇಳಿಕೊಂಡು ಆತನ ಕೈ ಕುಲುಕಿದ. ಆತನ ಮುಖವೂ ಕಪ್ಪಿಟ್ಟಿತ್ತು. "ಈಗ ಬಂದೆ" ಎಂದು ಹೇಳಿ ಒಳಗೆಲ್ಲೋ ಹೊರಟು ಹೋದರು. ಒಳಗೆ ಪತಿ–ಪತ್ನಿಯರು ಗುಸುಗುಸು ಮಾತನಾಡುತ್ತಿದುದು ತುಸು ಜೋರಾಗಿಯೇ ಕೇಳಿಸಿತ್ತು. ತಾನು ಬಂದುದು ಸರಿ ಹೋಗಲಿಲ್ಲವೇನೋ, ಮೂರ್ಖನಾದೆನಲ್ಲ ಅಂತ ಅಂದುಕೊಂಡ. ಅಷ್ಟರಲ್ಲಿ ಅವರೇ ಕಾಫಿಯ ಟ್ರೇ ಹಿಡಿದು ಹೊರಬಂದರು. ಅವನ ಕೈಗೊಂದು ಕಾಫಿಯ ಕಪ್ ಅನ್ನು ಕೊಟ್ಟು ತಾನೊಂದನ್ನು ಹಿಡಿದು ಕುಳಿತರು. "ಥ್ಯಾಂಕ್ಸ್" ಎಂದು ನುಡಿದು, ಮಹೇಶ ನಿಧಾನವಾಗಿ ಕಾಫಿಯನ್ನು ಹೀರಿದ. 'ಸೊರ್' ಎಂದು ಕಾಫಿ ಹೀರುವ ಸದ್ದಿನ ಹೊರತು ಬೇರೆ ಶಬ್ದವೇ ಇರಲಿಲ್ಲ. ಸುಮ್ಮನೇ ಇಬ್ಬರೂ ಒಬ್ಬರನ್ನೊಬ್ಬರು ಆಗಾಗ್ಗೆ ನೋಡಿದರು. ಮಾತನಾಡಲು ಏನೂ ಇಲ್ಲ ಅಂತೆನ್ನಿಸುತ್ತಾ ಏನು ತೋಚದೇ ಎದ್ದು ನಿಂತ.

"ನಾನಿನ್ನು ಬರ್ತೀನಿ ಸಾರ್...." ಅವನ ಮಾತಿಗೆ ಮಾರ್ದನಿ ಕೊಡುವವರಂತೆ ಆತ ನುಡಿದರು.

"ತಡೀರಿ.... ನಾನು ನಿಮ್ಮ ಜೊತೆ ಅಲ್ಲಿಯವರೆಗೆ ಬರ್ತೀನಿ" ಎಂದು ಹೊರಟು ನಿಂತಾಗ ಅವನಿಗೆ ಆಶ್ಚರ್ಯವಾಯಿತು. ಇಲ್ಲಿ ಮಾತನಾಡಲಾರದೇ ಹೊರಗೆ ತನಗೆ ಏನನ್ನೋ ಹೇಳಲಿದ್ದಾರೆ ಎಂದುಕೊಂಡು ಅತ್ತಿತ್ತ ನೋಡಿ,

"ನಾನು ನಿಮ್ಮ ಮಗಳ ಹತ್ರ ಸ್ವಲ್ಪ ಮಾತ್ನಾಡಬಹುದಾ ಸಾರ್." ಎಂದು ವಿನಮ್ರವಾಗಿ ಕೇಳಿದಾಗ ಆತನಿಗೆ ಕಸಿವಿಸಿಯಾಗಿತ್ತು. ಏನೂ ಪ್ರಯೋಜನವಿಲ್ಲ ಎಂಬಂತೆ ಅಡ್ಡಡ್ಡ ತಲೆ ಆಡಿಸಿದಾಗ, ಅವಮಾನವಾದಂತಾಗಿತ್ತು.

"ನಿಮ್ಗೆ ಇಷ್ಟವಿಲ್ಲದಿದ್ರೆ ಬೇಡ ಬಿಡಿ.... ಪರವಾಗಿಲ್ಲ." ಎಂದ

"ಹಾಗೇನಿಲ್ಲ. ಆದ್ರೆ ಏನೂ ಪ್ರಯೋಜನವಿಲ್ಲ ಅಂತ, ಅಲ್ಲದೇ...."

"ಹೌದು. ನಾನು ಮದುವೆಯಾಗುವವನಲ್ಲ. ನಮ್ಮ ಅಣ್ಣ ನಿಮ್ಮ ಮಗಳನ್ನು ಒಪ್ಪಿದ್ದ. ಮಾತನಾಡುವ ಮನಸ್ಸೂ ಇತ್ತು. ಆದ್ರೆ, ಯಾಕೋ ಏನೋ...."

"ಐ ಯಾಮ್ ಸಾರಿ ಮಿ. ನನ್ನ ಮಗಳಿಗೆ ಈ ಮದುವೆ ಇಷ್ಟವಿಲ್ಲ ಅಂತ ತಿಳಿಸಲು ಬೇಸರವಾಗ್ತಿದೆ.....ನಂಗೆ ಹೇಳೋಕೇ ಕಷ್ಟವಾಗ್ತಿದೆ.... ಆದ್ರೇನು ಮಾಡೋದು ಬಲವಂತ ಮಾಡುವಂತಿಲ್ಲವಲ್ಲ...."

"ಹೌದು ಬಲವಂತ ಮಾಡ್ಲೇ ಬಾರ್ದು. ಬಹುಶಃ ಒಪ್ಪಿಗೆ ಇಲ್ಲ ಅಂತ ನಮಗೆಲ್ಲ ಅನ್ನಿಸಿತ್ತು. ಆದ್ರೆ ಬೇರೆ ಏನೋ ವಿಷಯಾನ ಕೇಳ್ಬೇಕಾಗಿತ್ತು."

"ಒಪ್ಗೇನೇ ಇಲ್ದಿದ್ಮೇಲೆ ಇನ್ನೇನಿದೆ ಕೇಳೋಕೆ! ನಾವೂ ತುಂಬಾ ಆಸೇನ ಇಟ್ಕೊಂಡಿದ್ವು. ಜಾತಕವೂ ಕೂಡಿ ಬಂದಿತ್ತು. ನೆಂಟಸ್ಥಿಕೆ ಚೆನ್ನಾಗಿತ್ತು. ಆದ್ರೇನು, ಅವಳ ಹಣೇಲಿ ನಿಮ್ಮ ಮನೆಗೆ ಸೊಸೆಯಾಗಿ ಬರುವ ಯೋಗ ಇಲ್ಲ ಅಷ್ಟೇ.... ಹಾಗಂತ ನಿಮ್ಮ ತಾಯಿಗೆ ಹೇಳ್ಬಿಡಿ...." ಆತ ಅಗತ್ಯಕ್ಕಿಂತ ಹೆಚ್ಚಿನ ಸ್ವರದಲ್ಲಿ ನುಡಿದಾಗ, ಇವನು ಪೆಚ್ಚಾದ.... ಆದರೂ ಸಾವರಿಸಿಕೊಂಡು,

"ಪರವಾಗಿಲ್ಲ ಬಿಡಿ...." ಎಂದು ಹೇಳಿ ಹೊರಟಿದ್ದ.

"ಅವಳ್ಗೆ ಒಪ್ಗೆ ಇಲ್ಲ ಅಂತ ಅವಳ ಬಾಯಿಂದ ಕೇಳ್ದಾಗ, ನಿಮ್ಗೆ ಹೇಗಪ್ಪಾ ಈ ವಿಷಯಾನ ತಿಳಿಸೋದು ಅಂತ ಅನ್ನಿಸಿ ಸುಮ್ಮನಾದೆವು ನಿಜ....ಆದ್ರೇ, ನಾಲ್ಕು ದಿನ ಕಳೆದ್ರೆ ಮನಸ್ಸು ಬದಲಾಯಿಸಿಯಾಳು ಅನ್ನೋ ಆಸೆ ಬೇರೆ......ಎಷ್ಟೇ ಆಗಲೀ ನಾನು ಹೆಣ್ಣು ಮಕ್ಕಳ ತಂದೆ...." ಆತನ ಧ್ವನಿ ನಡುಗಿತ್ತು.

"ಹೆಣ್ಣು ಮಕ್ಕಳ ತಂದೆ ಆದ್ರೇನಂತೆ? ನೀವೂ ನಮ್ಮ ಹಾಗೇ.... ಮನುಷ್ಯರು ತಾನೇ?" ಮಹೇಶ ನಕ್ಕರೂ ಆತ ನಗಲಿಲ್ಲ.

"ಹಾಗಲ್ಲ, ನಿಮ್ಮ ಅಣ್ಣನಿಗೆ ಏನನ್ನಿಸಿರಬೇಡ? ಅವರು ಸಂಭಾವಿತರು, ಸುಸಂಸ್ಕೃತರು, ವಿದ್ಯಾವಂತರು, ವಿನಯ ಶೀಲರು, ಫೋಟೋ ನೋಡಿಯೇ

ಒಪ್ಪಿಗೆ ಕೊಟ್ಟಿದ್ರಂತೆ.... ಆದ್ರೆ ಇವಳು ಹೆಣ್ಣು ಮಕ್ಕಳಿಗೆ ಇಷ್ಟೊಂದು ದುರಹಂಕಾರ ಇರಬಾರದು ನೋಡಿ....."

"ಛೆ, ಛೆ, ಹಾಗೆಲ್ಲಾ ಯಾಕಂದು ಕೊಳ್ತೀರಿ? ಬೇರೆ ಏನಾದ್ರೂ ಕಾರಣ ಇರಬಹುದೋ ಏನೋ?"

"ಬೇರೆ ಏನಾದ್ರೂ ಕಾರಣ ಇದ್ರೆ, ಈ ಮುಂಚೇನೇ ಹೇಳ್ಬೇಕಾಗಿತ್ತು. ಇಲ್ಲೀವರ್ಗೂ ಯಾಕೆ ಸುಮ್ನಿದ್ಲು? ಇವಳಿಂದ ನನ್ನ ಮರ್ಯಾದೆ ಏನು ಉಳೀತು!" ಆತನ ಧ್ವನಿ ಏರಿತು. ಮಹೇಶ ತಾನು ಬಂದುದು ಅವಿವೇಕವಾಯ್ತು ಅಂತ ಅಂದುಕೊಳ್ಳುವಷ್ಟರಲ್ಲಿ, ಆತನ ಕಣ್ಣು ಗುಡ್ಡೆಗಳು ಮೇಲಕ್ಕೆ ಹೋದವು. ಇವನು ನೋಡುತ್ತಿದ್ದಂತೆಯೇ ಆತ ಕೆಳಕ್ಕೆ ಕುಸಿದು ಉರುಳಿ ಬಿದ್ದರು.

"ಏನಾಯ್ತು! ಏನಾಯ್ತು ಸಾರ್....?" ಅವನು ಅವರ ಕೈ ಮುಟ್ಟಿ ಎಚ್ಚರಿಸುವ ಪ್ರಯತ್ನದಲ್ಲಿರುವಾಗ, ಪ್ರಭಾವತಿ ಒಳಗ್ನಿಂದ ಧಾವಿಸಿ ಬಂದಳು. ಜ್ಞಾನವಿಲ್ಲದೇ ಕೆಳಕ್ಕೆ ಬಿದ್ದಿದ್ದ ಗಂಡನನ್ನು ಕಂಡು ಗಾಬರಿಯಿಂದ,

"ಏನಾಯ್ತು? ಏನಾಯ್ತು?" ಎಂದು ಅಲುಗಾಡಿಸಿದಳು. "ಸುಜೀ..... ಬೇಗ್ಬಾರೇ. .... ನೀರು ತಗೊಂಡ್ಬಾ....." ಮಗಳನ್ನು ಕರೆದಳು. ಓಡಿಬಂದ ಸುಜಯ ಒಂದು ಪಾತ್ರೆಯಲ್ಲಿ ನೀರನ್ನು ತಂದು ಆತನ ಮುಖದ ಮೇಲೆ ಸಿಂಪಡಿಸಿದಳು. ಆದರೂ ಆತನಿಗೆ ಎಚ್ಚರವಾಗಲಿಲ್ಲ.

"ಸುಜೀ, ಹೋಗೇ ಬೇಗ.... ಯಾರಾದ್ರೂ ಡಾಕ್ಟರನ್ನು ಕರ್ಕೊಂಡ್ಬಾ..... ನೀವಾದ್ರೂ ಹೋಗೀಪ್ಪಾ....." ಆಕೆ ಅಳುವ ಧ್ವನಿಯಲ್ಲಿ ಕೇಳಿಕೊಂಡಾಗ, ಅವನು ತಬ್ಬಿಬ್ಬುಗೊಂಡು ಸುಜಯಳ ಕಡೆ ನೋಡಿದ. ತಪ್ಪೆಲ್ಲಾ ನಿನ್ನದೇ ಎನ್ನುವಂತೆ ಅವಳು ಅವನನ್ನೇ ನೋಡಿದಳು.

"ನಾನು ಈಗ್ಲೇ ಹೋಗಿ ಡಾಕ್ಟರನ್ನು ಕರ್ಕೊಂಡ್ಬರ್ತೀನಿ ಭಯ ಪಡ್ಬೇಡಿ." ಎಂದು ಹೇಳಿ ಹೊರ ಬಂದು ಸ್ಕೂಟರನ್ನೇರಿದ. ಅದು ಅವನಿಗೆ ಹೆಚ್ಚು ಪರಿಚಯವಿಲ್ಲದ ಏರಿಯಾ. ಆದರೂ ಅವರಿವರನ್ನು ವಿಚಾರಿಸಿ, ಒಂದು ಕ್ಲಿನಿಕ್ ಪತ್ತೆ ಹಚ್ಚಿದ.

ಕೆಲವೇ ನಿಮಿಷಗಳಲ್ಲಿ ಡಾಕ್ಟರೊಂದಿಗೆ ಹಿಂತಿರುಗಿದ. ರಂಗನಾಥರಾಯರನ್ನು ಪರೀಕ್ಷಿಸಿದ ಡಾಕ್ಟರು, ಬಿ.ಪಿ. ಹೆಚ್ಚಾಗಿದೆ. ಭಯ ಪಡಬೇಕಾದ್ದೇನಿಲ್ಲ. ಆದರೂ, ಯಾವುದಾದರೂ ನರ್ಸಿಂಗ್ ಹೋಂಗೆ ಸೇರಿಸುವುದು ಒಳ್ಳೆಯದು." ಎಂದು ಹೇಳಿದಾಗ ಪ್ರಭಾವತಿ ಮಂಕಾದಳು. ಇಷ್ಟಕ್ಕೆಲ್ಲಾ ನೀನೇ ಕಾರಣ ಎನ್ನುವಂತೆ ಸುಜಯಳ ಕಡೆ ನೋಡಿದಳು. ಸುಜಯ ಮಹೇಶನನ್ನೇ ದೂಷಿಸುವಂತೆ ನೋಡಿದಳು.

ಡಾಕ್ಟರು ತಕ್ಷಣಕ್ಕೆ ಒಂದು ಇಂಜೆಕ್ಷನ್ ಕೊಟ್ಟು, ಕೆಲವು ಸಲಹೆಗಳನ್ನು ನೀಡಿ, ತಮ್ಮ ಫೀಸನ್ನು ಪಡೆದು ಅಲ್ಲಿಂದ ಹೊರಟು ಹೋದರು.

"ಈಗೇನು ಮಾಡೋದು? ಹೈ ಬಿ.ಪಿ. ಇದೆ. ಹೆಚ್ಚು ಉದ್ವೇಗ ಒಳ್ಳೇದಲ್ಲ. ಕೋಪ ಮಾಡ್ಕೋಬೇಡಿ ಅಂತ ಎಷ್ಟು ಹೇಳಿದರೂ ಕೇಳೋದಿಲ್ಲ." ಪ್ರಭಾವತಿ ವ್ಯಥೆಯಿಂದ ನುಡಿದಾಗ, ಮಹೇಶನಿಗೆ ಅಯ್ಯೋ ಅಂತೆನ್ನಿಸಿತ್ತು.

"ಇಲ್ಲಿ ಹತ್ರದಲ್ಲಿ ಯಾವ್ದಾದ್ರೂ ನರ್ಸಿಂಗ್ ಹೋಂ ಇದೆಯಾ?" ಕೇಳಿದ.

"ಹೂಂ. ಮುಂದಿನ ಕ್ರಾಸ್‌ನಲ್ಲಿ ಶ್ರೀ ಜಯ ನರ್ಸಿಂಗ್ ಹೋಂ ಅಂತ ಇದೆ..."

"ಈಗ್ಲೇ ಕರ್ಕೊಂಡು ಹೋಗಿ ಸೇರಿಸಿದ್ರಾಯ್ತು. ಗಾಬರಿಯಾಗ್ಬೇಡಿ." ಎಂದು ಹೇಳಿ ತಕ್ಷಣವೇ ನರ್ಸಿಂಗ್ ಹೋಂಗೆ ಹೋಗಿ, ಆಂಬ್ಯುಲೆನ್ಸ್‌ಗೆ ವ್ಯವಸ್ಥೆ ಮಾಡಿ, ಕೆಲವೇ ಸಮಯದಲ್ಲಿ ರಂಗನಾಥರಾಯರನ್ನು ನರ್ಸಿಂಗ್ ಹೋಂಗೆ ಸೇರಿಸಿದ. ಮನೆಯವನಂತೆ ದಕ್ಷತೆಯಿಂದ ಓಡಾಡಿದುದನ್ನು ಕಂಡು ಪ್ರಭಾವತಿಯ ಕಣ್ಣುಗಳು ತುಂಬಿ ಬಂದವು. ಅವನನ್ನು ಮೆಚ್ಚುಗೆಯಿಂದ ನೋಡಿದಳು.

"ನಿಮಗೆ ಎಷ್ಟು ಥ್ಯಾಂಕ್ಸ್ ಹೇಳಿದ್ರೂ ಸಾಲದು. ಸಮಯಕ್ಕೆ ಬೇಕಾದ ಸಹಾಯ ಮಾಡಿದ್ರಿ....." ಕೈ ಮುಗಿದು ಹೊಗಳಿದಳು.

"ಛೆ... ಥ್ಯಾಂಕ್ಸೆಲ್ಲಾ ಯಾಕೆ...? ಹೀಗಾಗ್ಬಾರದ್ದಾಗಿತ್ತು. ಬಹುಶಃ ನನ್ನಿಂದ್ಲೆ ಹೀಗಾಯ್ತೋ ಏನೋ... ?"

"ಇಲ್ಲಪ್ಪಾ. ನಾಲ್ಕು ದಿನಗಳಿಂದ ಈ ವಿಷಯಾನೇ ಮನಸ್ಸಿಗೆ ತುಂಬಾ ಹಚ್ಕೊಂಡು ಬಿಟ್ಟಿದ್ರು. ಒಳೊಳಗೇ ಕೊರಗ್ತಾ ಇದ್ರು... ನಾನೂ ಸಮಾಧಾನ ಹೇಳ್ತಾನೇ ಇದ್ದೆ. ಆದ್ರೆ ಹೀಗಾಗಿ ಹೋಯ್ತು ನೋಡಿ..." ಗಂಟಲು ಕಟ್ಟಿತು.

"ಏನೂ ವರಿ ಮಾಡ್ಕೋ ಬೇಡಿ. ಬೇಗ ಹುಶಾರಾಗಿ ಮನೆಗೆ ಬರ್ತಾರೆ. ನನ್ನಿಂದ ಏನಾದ್ರೂ ಸಹಾಯ ಬೇಕಾಗಿದ್ರೆ ಈ ನಂಬರ್ರಿಗೆ ಫೋನು ಮಾಡಿ." ಎಂದು ಹೇಳಿ ತನ್ನ ವಿಸಿಟಿಂಗ್ ಕಾರ್ಡ್‌ನ್ನೂ ಆಕೆಯ ಕೈಗೆ ಕೊಟ್ಟು ನರ್ಸಿಂಗ್ ಹೋಂನಿಂದ ಹೊರ ಬಂದು ಮತ್ತೆ ರಂಗನಾಥರಾಯರ ಮನೆಗೆ ಬಂದ.

ಮಹೇಶನನ್ನು ಕಂಡು ಸುಜಯಳ ಎದೆ ನಡುಗಿತು. ಆತಂಕ ಹೆಚ್ಚಾಗಿ ಮುಖದ ಕಳೆಗುಂದಿತು. ಮಾತನಾಡಲಾಗದೇ ಗೋಡೆಗೆ ಒರಗಿದಳು.

"ಏನೂ ವರಿ ಮಾಡ್ಕೋಬೇಡಿ ಸುಜಯಾ.... ನಿಮ್ಮ ತಂದೆ ಬೇಗ ಹುಷಾರಾಗಿ ಬರ್ತಾರೆ....."

"ಜ್ಞಾನ ಬಂದಿತ್ತಾ! ಹೇಗಿದ್ದಾರೆ?" ನಿಧಾನವಾಗಿ ಕೇಳಿದಳು.

"ನಿದ್ದೆ ಮಾಡ್ತಿದ್ರು... ಡಾಕ್ಟರ್ ಟ್ರೀಟ್‌ಮೆಂಟ್ ಶುರು ಮಾಡಿದ್ದಾರೆ. ನಿಮ್ಮನೇಲಿ ಇನ್ಯಾರು ಇಲ್ವಾ?" ಅವಳು ಅವನನ್ನೇ ಭಯದಿಂದ ನೋಡಿದಳು.

"ಭಯ ಯಾಕ್ರೀ? ಒಬ್ರೇ ಇದೀರಾ?" ಅವಳು ಉತ್ತರಿಸಲಿಲ್ಲ. ಓ.ಕೆ. ನಿಮ್ಮ ತಾಯಿ ಅಲ್ಲಿ ನರ್ಸಿಂಗ್ ಹೋಂನಲ್ಲಿರ್ತಾರಲ್ಲ ಅದಕ್ಕೇ ಕೇಳ್ದೆ. ಇಲ್ಲಿ ಒಬ್ರಿಗೇ

ಇರೋಕೆ ಹೆದರಿಕೆ ಆದ್ರೆ ನಮ್ಮ ಮನೆಗೆ ಬರಬಹುದಲ್ಲ... ಅದಕ್ಕೇ ಕೇಳ್ದೆ."

"ಇಲ್ಲ... ನಾನೆಲ್ಲಿಗೂ ಬರೋಲ್ಲ. ನಂಗೇನೂ ಭಯ ಇಲ್ಲ... ನೀವು ಹೋಗಿ."

"ಏನೋ ನಂಗೆ ಅನ್ನಿಸಿದ್ದನ್ನು ಹೇಳ್ದೆ. ಇಲ್ಲಿ ಒಬ್ರೇ ಆತಂಕ ಪಡ್ತಾ ಕೂತಿರುವ ಬದಲು ನಮ್ಮ ಮನೇಲಿರಬಹುದು. ರಾತ್ರಿಯ ಹೊತ್ತು ಒಬ್ರೇ ಇರೋದು ಒಳ್ಳೇದಲ್ಲ."

"ಇಲ್ಲ. ನಾನು ನಿಮ್ಮ ಮನೆಗೆ ಬರೋಲ್ಲ....." ಅವಳು ತಕ್ಷಣವೇ ನುಡಿದಾಗ, ಆ ಗಳಿಗೆಯಲ್ಲೂ ಅವನಿಗೆ ನಗು ಬಂತು.

"ಓ.ಕೇ. ನಿಮ್ಮಿಷ್ಟ..." ಎನ್ನುತ್ತಾ ಅವಳಿಗೆ ತನ್ನ ವಿಸಿಟಿಂಗ್ ಕಾರ್ಡೊಂದನ್ನು ಕೊಟ್ಟ." ಇದು ನನ್ನ ಮೊಬೈಲ್ ನಂಬರ್ರು... ಏನೇ ಸಹಾಯ ಬೇಕಿದ್ರೂ ದಯವಿಟ್ಟು ಫೋನುಮಾಡಿ ಕೇಳಿ. ಸಂಕೋಚ ಪಟ್ಕೋಬೇಡಿ... ನಾನು ಬರ್ಲಾ...."

ಅವಳು ಸಮಾಧಾನದ ಉಸಿರನ್ನು ಬಿಟ್ಟಿದ್ದು ಅವನ ಗಮನಕ್ಕೆ ಬಂತು.

"ನಿಮ್ಮ ರಿಲೇಟಿವ್ಸ್ ಯಾರ್ಗಾದ್ರೂ ಫೋನ್ ಮಾಡ್ಬೇಕಾ? ಫ್ರೆಂಡ್ಸ್ ಯಾರಾದ್ರೂ ಇದ್ರೆ ಹೇಳಿ.... ರಾತ್ರಿ ಒಬ್ರೇ ಮಾತ್ರ ಇರ್ಬೇಡಿ..."

"ನನ್ನ ಬಗ್ಗೆ ನಿಮಗ್ಯಾಕೆ ಆತಂಕ? ನನ್ನನ್ನು ನಾನು ನೋಡಿಕೊಳ್ತೀನಿ. ಥ್ಯಾಂಕ್ಸ್..... ನೀವು ಇನ್ನು ಹೋಗಬಹುದು...ಆದ್ರ ಒಂದ್ಮಾತು ಇಷ್ಟೆಲ್ಲಾ ಆದದ್ದು ನಿಮ್ಮಿಂದ್ಲೇ ನೀವು ಬರ್ದೇ ಇದ್ದಿದ್ರೆ ನಮ್ಮ ತಂದೆ ಹುಶಾರಾಗಿ ಇರುತ್ತಿದ್ರು."

"ಅಂದ್ರೇ ಏನರ್ಥ...? ನಾನು ಯಾಕೆ ಬಂದಿದ್ದೆ ಅಂತ ನಿಮ್ಗೂ ಗೊತ್ತಿಲ್ವಾ! ಬಹುಶಃ ತಪ್ಪು ನಿಮ್ಮದು... ಆದ್ರೆ ಅದರ ಬಗ್ಗೆ ಚರ್ಚೆ ಮಾಡ್ತಾ ನಿಲ್ಲೋಕೆ ಇದು ಸಮಯ ಅಲ್ಲ. ಅಲ್ದೇ ಈಗಾಗ್ಲೇ ಹೊತ್ತಾಗಿದೆ. ನಾನು ಬರ್ತೀನಿ... ಧೈರ್ಯವಾಗಿರಿ. .... ನಾನು ಮತ್ತೆ ಬಂದು ನಿಮ್ಹತ್ರ ಮಾತ್ನಾಡ್ಲೇಬೇಕು" ಎಂದು ಹೇಳಿ ಅವಳ ಉತ್ತರಕ್ಕೆ ಕಾಯದೇ ಬೀದಿಗಿಳಿದ. ಅವನ ಹಿಂದೆಯೇ ಅವಳು ಬಾಗಿಲನ್ನು ಭದ್ರ ಪಡಿಸಿದ ಸದ್ದು ಕೇಳಿಸಿತ್ತು. ತಿರುಗಿ ನೋಡಲಿಲ್ಲ. ತನ್ನಲ್ಲೇ ನಕ್ಕೊಂಡು ಸ್ಕೂಟರ್ ನ್ನೇರಿದ.

*   *   *

ಅವನಿಗಾಗಿ ಮುಂಬಾಗಿಲಿನಲ್ಲಿ ಕಾಯುತ್ತಾ ನಿಂತಿದ್ದ ವನಜಮ್ಮ ಸ್ಕೂಟರನ್ನು ಕಂಡು ನಿರಾಳವಾಗಿ ಉಸಿರನ್ನು ಬಿಟ್ಟಳು. "ಯಾಕೋ ಮಹೀ ಇಷ್ಟು ಲೇಟು?" ಪ್ರಶ್ನಿಸಿದಳು.

"ಒಂದು ಮೀಟಿಂಗ್ ಇತ್ತು. ಸ್ವಲ್ಪ ಲೇಟಾಯ್ತು...." ಹೆಲ್ಮೆಟ್‌ನ್ನು ಹಿಡಿದು ಒಳ ಬಂದ. ಅಲ್ಲಿಯೇ ಕುಳಿತು ಟಿ.ವಿ. ನೋಡುತ್ತಿದ್ದ ದಿನೇಶ ಮಹೇಶನನ್ನೇ ಸಂಶಯ ದಿಂದ ನೋಡಿದ. ಎಲ್ಲರಿಗೂ ಹೇಳಿ ಬಿಡುವ ಮನಸ್ಸಾದರೂ ಈಗಲೇ ಬೇಡ ಎಂದುಕೊಂಡು ಸುಮ್ಮನಾದ.

ಊಟವನ್ನು ಮುಗಿಸಿ, ತನ್ನ ರೂಮಿಗೆ ಬಂದು, ಹಾಸಿಗೆಯ ಮೇಲೆ ಉರುಳಿ,

ದಿಂಬಿಗೆ ಒರಗಿ ಕಣ್ಣುಗಳನ್ನು ಮುಚ್ಚಿಕೊಂಡ. ಆದಿನ ಸಾಯಂಕಾಲ ನಡೆದ ಘಟನೆಯ ವಿಷಯಗಳು ಕಣ್ಣ ಮುಂದೆ ಹಾದು ಬಂದವು. ಸುಜಯಳ ಮುಖ ಮತ್ತೆ ಮತ್ತೆ ತೇಲಿ ಬಂದಾಗ, ಒಬ್ಬಳೇ ಏನು ಮಾಡ್ತಿದಾಳೋ, ನಿದ್ದೆಯಂತೂ ಬಂದಿರಲ್ಲ ಎಂದು ಕೊಂಡು ತನ್ನ ಮೊಬೈಲ್‌ನ್ನೆತ್ತಿಕೊಂಡು, ಅವಳ ಮನೆಯ ನಂಬರನ್ನು ಒತ್ತಿದ.

ಅತ್ತಲಿಂದ ಸುಜಯಳ ಧ್ವನಿ ಕೇಳಿದಾಗ ಒಂದು ಘಳಿಗೆ ತಡೆದ.... ಮತ್ತೆ ಹಲೋ... ಹಲೋ... ಎನ್ನುವುದು ಕೇಳಿದಾಗ, "ಮಲಗಿದ್ರಾ? ತೊಂದ್ರೆ ಆಯ್ತಾ?" ಪಿಸು ದನಿಯಲ್ಲಿ ಕೇಳಿದಾಗ ಅವಳು ಜೋರಾಗಿ ಕೇಳಿದ್ದಳು.

"ಯಾರು! ಯಾರದು! ಇಷ್ಟು ಹೊತ್ನಲ್ಲಿ ಏನು ಮಾತು?"

"ಸಾರಿ... ನಾನ್ರೀ ಮಹೇಶ... ಇಷ್ಟು ಬೇಗ ಮರೆತು ಬಿಟ್ರಾ?"

"ಮಹೇಶ... ಯಾವ ಮಹೇಶ? ನಂಗೆ ಯಾವ ಮಹೇಶನೂ ಗೊತ್ತಿಲ್ಲ..." ಅವಳು ಸ್ವಲ್ಪ ಗಡುಸಾಗಿ ನುಡಿದಾಗ ಪೆಚ್ಚಾಗಿತ್ತು.

"ಸುಜಯಾನಾ ಮಾತಾಡ್ತಿರೋದು....?"

"ಹೌದ್ರೀ.... ನೀವ್ಯಾರು....?"

"ಈಗ ನಿಮ್ಮ ತಂದೆ ಹೇಗಿದಾರೆ ಅಂತ ವಿಚಾರಿಸೋಕೆ ಫೋನು ಮಾಡ್ದೆ. ನರ್ಸಿಂಗ್ ಹೋಂನಿಂದ ಫೋನು ಬಂದಿತ್ತಾ!" ತಕ್ಷಣಕ್ಕೆ ಸುಜಯ ಉತ್ತರ ಕೊಡದಿದ್ದಾಗ ಅವನ ಆಲೋಚನೆ ಎತ್ತೆತ್ತಲೋ ಹರಿಯಿತು.

"ಹಲೋ.... ಹಲೋ.... ಸುಜಯಾ! ಏನಾಯ್ತು? ನಿಮ್ಮ ತಂದೆ ಹುಶಾರಾಗಿ ದಾರೇ ತಾನೇ.... ಪ್ಲೀಸ್ ಮಾತಾಡಿ...."

"ಹುಂ. ಹುಶಾರಾಗಿದಾರೆ. ಪ್ಲೀಸ್, ನೀವು ಮತ್ತೆ ಮತ್ತೆ ಫೋನು ಮಾಡ್ಬೇಡಿ. ನಂಗೆ ಇಷ್ಟ ಆಗಲ್ಲ."

"ಒಬ್ರೇ ಇದ್ರಲ್ಲ. ನಿಮ್ಮ ತಂದೆ ಹೆಲ್ತ್ ಹೇಗಿದೆ ಅಂತ ವಿಚಾರಿಸುಕ್ಕೆ ಮಾಡ್ದೆ.... ಸಾರಿ ನನ್ನಿಂದ ತೊಂದ್ರೆ ಆಗಿದ್ರೆ.... ಹೋಗ್ಲಿ ಊಟ ಮಾಡಿದ್ರಾ?"

"ಇಲ್ಲ. ಊಟ ಸೇರ್ಲಿಲ್ಲ....."

"ಅದಕ್ಕೇ ಹೇಳಿದ್ದು.....ಒಬ್ರೇ ಇರ್ಬೇಡಿ ಅಂತ. ಊಟ ಸೇರುಲ್ಲ. ನಿದ್ದೆ ಬರುಲ್ಲ. ಹೆದ್ರಿಕೆ ಆಗೋದು ಎಲ್ಲಾ ಸಹಜ.... ಈಗ್ಲೂ ಯೋಚ್ನೆ ಮಾಡಿ.... ನಾನು ಬಂದ್ರೆ ನನ್ನ ಜೊತೆ ಬರ್ತೀರಾ....?"

"ಪ್ಲೀಸ್ ಹೀಗೆಲ್ಲಾ ಮಾತಾಡ್ಬೇಡಿ.... ನಾನು ನಿಮ್ಮ ಮನೆಗೆ ಮಾತ್ರ ಬರುಲ್ಲ. ಪದೇ ಪದೇ ತೊಂದ್ರೆ ಕೊಡ್ಬೇಡಿ. ನಮ್ಮ ಪಕ್ಕದ್ಮನೆ ಹುಡ್ಗಿ ಇಲ್ಲಿ ನನ್ನ ಜೊತೆಗಿದ್ದಾಳೆ. ನಿಮಗೆ ಚಿಂತೆ ಬೇಡ." ಇನ್ನು ಮಾತು ಸಾಕು ಎನ್ನುವಂತೆ ಅವಳು ನುಡಿದಾಗ, ಅವನು ಮೊಬೈಲ್ ಸ್ವಿಚ್ ಒತ್ತಿ ಆಫ್ ಮಾಡಿದ. ಆದರೂ ಅವಳ ಚಿತ್ರ ಕಣ್ಣ ಮುಂದಿನಿಂದ ಮರೆಯಾಗಿರಲಿಲ್ಲ. ಇದ್ದಕ್ಕಿದ್ದಂತೆ ಏನೋ ನೆನಪಾದವನಂತೆ ತಾನು

ತೆಗೆದಿರಿಸಿದ್ದ ಅವಳ ಫೋಟೋವನ್ನು ಹೊರ ತೆಗೆದು ಅವಳ ಮುಖವನ್ನೇ ನೋಡಿದ. ಅವಳ ಮುಗುಳ್ನಗುವಿಗೆ ತನ್ನ ಮಂದಹಾಸವನ್ನು ಸೇರಿಸಿದ. ಅವನಿಗರಿ ವಿಲ್ಲದೇ ಅವನ ಬಾಯಿ ನುಡಿಯಿತು. "ಐ ಲವ್ ಯೂ ಸುಜಯಾ...." ಕಣ್ಣು ಗಳನ್ನು ಮುಚ್ಚಿಕೊಂಡು, ಅವಳ ಬಗ್ಗೆಯೇ ಯೋಚಿಸುತ್ತಾ ಮಲಗಿದ.

* * *

ಬೆಳಿಗ್ಗೆ ಎಚ್ಚರವಾಗಿ ಎದ್ದು ಕುಳಿತಾಗ ತಾನು ಟೇಬಲ್ ಮೇಲಿಟ್ಟಿದ್ದ ಸುಜಯಳ ಫೋಟೋವನ್ನು ಕಂಡು, ಮನಸ್ಸು ಅರಳಿತು. ಕೈಗೆತ್ತಿಕೊಂಡು, "ಗುಡ್ ಮಾರ್ನಿಂಗ್ ಮೇಡಮ್" ಎಂದ. ಹಾಗೇ ಹಿಂದಿನ ರಾತ್ರಿಯ ಘಟನೆಗಳು ನೆನಪಿಗೆ ಬಂದವು. ಫೋನು ಮಾಡಿ ವಿಚಾರಿಸಲೇ.... ಎಂದುಕೊಂಡವನು, ತಕ್ಷಣವೇ ಬೇಡ, ಎಂದು ಕೊಂಡು ಎದ್ದು ಹೊರಬಂದ. ಎಂದಿಗಿಂತ ಬೇಗ ಹೊರಡಲು ಸಿದ್ಧನಾದ. ಸೀದಾ ನರ್ಸಿಂಗ್ ಹೋಂಗೆ ಬಂದ. ರಿಸೆಪ್ಶನ್ ಬಳಿ ವಿಚಾರಿಸಿಕೊಂಡು, ರಂಗನಾಥರಾಯ ರಿದ್ದ ವಾರ್ಡ್‌ಗೆ ಬಂದ. ಅಲ್ಲಿ ಸುಜಯ ಕುಳಿತಿದ್ದಳು. ಇವನು ಮುಗುಳ್ನಕ್ಕು ಈಗ ನಿಮ್ಮ ತಂದೆ ಹೇಗಿದ್ದಾರೆ?" ಎಂದು ಕೆಳದನಿಯಲ್ಲಿ ಪ್ರಶ್ನಿಸಿದ.

"ನೆನ್ನೆಯಿಂದ ನಿದ್ದೆಯ ಮಂಪರಿನಲ್ಲೇ ಇದ್ದಾರೆ. ಸರಿಯಾಗಿ ಎಚ್ಚರವಾಗಿಲ್ಲ. ಡಾಕ್ಟ್ರು ಬಂದು ನೋಡೋವರೆಗೆ ಏನೂಂತ ಗೊತ್ತಿಲ್ಲ....."

"ನಿಮ್ಮ ತಾಯಿ ಹೇಗಿದ್ದಾರೆ! ಪಾಪ ಅವರಿಗೆ ರಾತ್ರಿಯೆಲ್ಲಾ ನಿದ್ದೆ ಇಲ್ಲಾಂತ ಕಾಣುತ್ತೆ.... ನಿಮಗೆ ಆಮೇಲೆ ನಿದ್ದೆ ಬಂತಾ?"

"ಎಲ್ಲಿ ನಿದ್ದೆ ಬರುತ್ತೆ? ಆತಂಕದಿಂದ ಎದೆ ಢವಢವ ಅಂತಿತ್ತು."

"ಸಾರಿ ಸುಜಯಾ.... ಹೀಗಾಗ್ಬಾರ್ದಾಗಿತ್ತು. ತಪ್ಪು ನನ್ನದು."

"ನಂದೂ ತಪ್ಪಿದೆ. ನಾನೇ ಇಷ್ಟಕ್ಕೆಲ್ಲಾ ಕಾರಣ...."

"ಇರ್ಬಹುದು. ಒಂದ್ಮಾತು ಕೇಳ್ತೀನಿ ದಿನೇಶನ್ನ ನೀವು ಒಪ್ಪದೇ ಇರೋಕೆ ಏನು ಕಾರಣ ಅಂತ ಕೇಳ್ಬಹುದಾ?"

"ನಂಗೊತ್ತಿಲ್ಲ.... ನಂಗೊತ್ತಿಲ್ಲ....."

"ಎಕ್ಸೈಟ್ ಯಾಕೆ ಆಗ್ತೀರಿ? ಕಾರಣ ಏನೂಂತ ತಿಳಿಸಿದ್ರೆ ಎಲ್ರಿಗೂ ಒಳ್ಳೇದು ಅಲ್ವಾ?"

"ಅದು ನನ್ನ ಪರ್ಸನಲ್ ವಿಷಯ....."

"ಓ..ಕೇ.... ನಿಮ್ಗೆ ಅವನ ಒಪ್ಗೆ ಇಲ್ದಿದ್ರೆ ತಪ್ಪೇನಿಲ್ಲ. ಆದ್ರೂ ಸಸ್ಪೆನ್ಸ್ ಇರಬಾರ್ದು.... ನಿಮ್ಮ ತಂದೆ-ತಾಯಿಗೆ ತಿಳಿಸ್ಬಾರ್ದು ಅಂತೇನಿಲ್ಲವಲ್ಲ....

"ಅವ್ರಿಗೆ ತಿಳಿಸ್ಲೇಬೇಕು ಅನ್ನೋ ಅಷ್ಟು ಸೀರಿಯಸ್ ವಿಷಯ ಅಲ್ಲ ಬಿಡಿ.... ಆದ್ರೆ ನಿಮಗ್ಯಾಕೆ ಇಷ್ಟು ಕುತೂಹಲವೋ ನಂಗೆ ತಿಳೀಲಿಲ್ಲ."

"ನನ್ನ ಮನಸ್ಸಲ್ಲೇನಿದೆ ಅಂತ ನಿಂಗೆ ತಿಳಿದ್ರೆ ನಿಂಗೆ ಏನನ್ನಿಸ್ಬಹುದೋ....

ಆದರೆ ಈಗ್ಲೆ ಆ ಮಾತು ಬೇಡ." ಎಂದುಕೊಂಡು ಮುಗುಳ್ನಕ್ಕ.

"ನಗೋದ್ಯಾಕೆ? ಅಂಥಾದ್ದೇನಂದೆ?

"ಸಾರಿ.... ಏನೋ ವಿಷಯ ನೆನಪಿಗೆ ಬಂತು. ನಕ್ಕೆ ಅಷ್ಟೇ.... ನಂಗೀಗ ಆಫೀಸ್ಗೆ ಹೊತ್ತಾಯ್ತು. ಬರ್ತೀನಿ. ಏನಾದ್ರೂ ಬೇಕಾಗಿದ್ರೆ ಸಂಕೋಚವಿಲ್ಲದೇ ನಂಗೆ ಫೋನ್ ಮಾಡಿ. ನನ್ನನ್ನು ನಿಮ್ಮ ಸ್ನೇಹಿತ ಅಂತ ತಿಳ್ಕೊಳ್ಳಿ."

"ಓ..ಕೆ... ಥ್ಯಾಂಕ್ಸ್.... ನೆನ್ನೆ ನೀವು ಡಾಕ್ಟರಿಗೆ ಫೀಸು ಕೊಟ್ಟಿದೀರ. ಈಗ ತಕ್ಷಣಕ್ಕೆ ನನ್ಹತ್ರ ದುಡ್ಡಿಲ್ಲ. ಆಮೇಲೆ ಕೊಡ್ತೀನಿ."

"ಅದಕ್ಯಾಕೆ ಚಿಂತೆ? ನಾನೀಗ ಕೇಳಿದ್ನಾ? ಆಮೇಲೆ ನಿಧಾನವಾಗಿ ಕೊಡಿ ಪರವಾಗಿಲ್ಲ."

"ಸರಿ. ಥ್ಯಾಂಕ್ಸ್. ನಿಮ್ಮಿಂದ ತುಂಬಾ ಸಹಾಯವಾಗಿದೆ.... ಆದರೆ....."

"ನಾನು ಪದೇ ಪದೇ ಫೋನು ಮಾಡ್ಬಾರ್ದು.... ಯಾಕೆ ನನ್ನ ಮಾತುಗಳು ನಿಮಗೆ ಇಷ್ಟ ಆಗುಲ್ವಾ? ಅಥವಾ ನನ್ನ ಬಗ್ಗೆ ಏನಾದ್ರೂ ಸಂಶಯಾನಾ?"

"ಹಾಗೇನಿಲ್ಲ.... ನೀವು ಮಾತಾಡಿದ್ರೆ ನಂಗೆ ಏನೇನೋ ನೆನಪಿಗೆ ಬರುತ್ತೆ...." ಕತ್ತು ತಗ್ಗಿಸಿ ನುಡಿದಳು. ಮುಖದ ಕಳೆ ಇಳಿದಿತ್ತು.

"ಏನೇನೋ ಅಂದ್ರೆ? ನಾನೇನ್ರೀ ಮಾಡಿದೀನಿ....? ನಾನು ಏನನ್ನೂ ಕೇಳಿಲ್ಲ.... ಏನನ್ನೂ ಹೇಳಿಲ್ಲ.... ಎನಿ ಪ್ರಾಬ್ಲಮ್ ವಿತ್ ಮಿ?" ಕುಹಕದ ಧ್ವನಿಯಿತ್ತು.

"ಏನೋ ನಂಗೊತ್ತಿಲ್ಲ ಮಹೇಶ್.... ಪ್ಲೀಸ್, ಈಗ ಈ ಮಾತು ಸಾಕು...." ಅವಳು ಗಂಭೀರವಾಗಿ ನುಡಿದಾಗ ಅವನು ಮೆತ್ತಗಾದ. ಮತ್ತೆ ಕೆಣಕಿ ಮಾತನಾಡುವ ಮನಸ್ಸಾಗಲಿಲ್ಲ. "ಓ.ಕೇ. ಬರ್ತೀನಿ. ಬೈಬೈ...." ಎಂದು ಹೇಳಿ ಕಾರಿಡಾರಿನಲ್ಲಿ ನಡೆದು ಮರೆಯಾದ.... ಅಲ್ಲೇ ನಿಂತು ಮಹೇಶನ ಬಗ್ಗೆಯೇ ಯೋಚಿಸುತ್ತಿದ್ದವಳನ್ನು ನರ್ಸು ಎಚ್ಚರಿಸಿದಳು. ವಾರ್ಡಿನೊಳಕ್ಕೆ ಹೋದಳು.

* * *

ಮೊಬೈಲ್ ಫೋನು ರಾಗ ಹಾಡಿದಾಗ ಎತ್ತಿಕೊಂಡು 'ಹಲೋ' ಎಂದ. ಅತ್ತಲಿಂದ ಸುಜಯ ಮಾತಾಡಿದ್ದಳು. ಹೃದಯ ಗರಿಗೆದರಿ ಕುಣಿಯಿತು.

"ನೀವಾ? ನಂಗೆ ನಂಬೋಕೇ ಆಗ್ತಿಲ್ಲ.... ಏನು ವಿಷಯ?" ಖುಷಿಯಿಂದ ಕೇಳಿದ.

"ನಂಬರ್ರು ಕೊಟ್ಟು ಮಾಡು ಅಂತ ಹೇಳ್ದೋರು ನೀವೇ ತಾನೇ...." ಅವಳು ವ್ಯಂಗ್ಯವಾಗಿ ನುಡಿದಾಗ ನಕ್ಕ.

"ಎಸ್. ಹೋಗ್ಲಿ ಬಿಡಿ.... ಏನು ವಿಷಯ. ನಿಮ್ಮ ತಂದೆ ಈಗ ಹೇಗಿದಾರೆ! ಎಲ್ಲಿಂದ ಮಾತಾಡ್ತಿದೀರಿ?

"ನರ್ಸಿಂಗ್ ಹೋಂನಿಂದ.... ನಾಳೆ ಬೆಳಿಗ್ಗೆ ನಮ್ಮ ತಂದೇನ ಡಿಸ್ಚಾರ್ಜ್

ಮಾಡ್ತಿದಾರೆ. ಅದನ್ನು ತಿಳಿಸೋಣಾಂತ ಮಾಡ್ದೆ."

"ವೆರಿ ಗುಡ್.... ಡಾಕ್ಟರ್ ಏನು ಹೇಳ್ತಾರೋ, ಅಡ್ವೈಸ್‌ನ್ನೆಲ್ಲಾ ನೋಟ್ ಮಾಡಿಟ್ಟು ಕೊಳ್ಳಿ.... ನನ್ನಿಂದ ಏನಾದ್ರೂ ಹೆಲ್ಪ್ ಬೇಕಿತ್ತಾ....?"

"ಥ್ಯಾಂಕ್ ಯೂ ವೆರಿ ಮಚ್ ಮಹೇಶ್.... ನಮ್ಮ ತಂದೆ ನಿಮ್ಮನ್ನು ತುಂಬಾ ಹೊಗಳಿದರು.... ಇಬ್ರೂ ನಿಮಗೆ ಥ್ಯಾಂಕ್ಸ್ ಹೇಳಿದಾರೆ."

"ಅಂಥಾದ್ದೇನೂ ಮಾಡಿಲ್ಲ ನಾನು....ಅಂಥಾ ಸಮಯದಲ್ಲಿ ಯಾರೇ ಆಗಿದ್ರೂ ಇಷ್ಟೇ ಮಾಡ್ತಿದ್ರು ಅಲ್ವಾ... ಎನಿವೇ, ಸದ್ಯ ಅವರು ಬೇಗ ರಿಕವರ್ ಆದ್ರಲ್ಲ ಅದು ಮುಖ್ಯ."

"ಹೌದು. ಅವರಿಗೇನಾದ್ರು ಆಗಿದ್ದಿದ್ರೆ... ಅಂತ ನೆನೆಸಿಕೊಳ್ಳೋಕೇ ಭಯ ಆಗುತ್ತೆ. ಹೀಗೆಲ್ಲಾ ಆಗಬಹುದು ಅಂತ ನಾನಂದುಕೊಂಡಿರಲಿಲ್ಲ."

"ನಿಮ್ಮ ತಂದೆಗೆ ತುಂಬಾ ನಿರಾಸೆ ಆಗಿರಬಹುದು ಅಂತನ್ನಿಸುತ್ತೆ. ನಿರಾಸೆ, ಕೋಪ ಉದ್ವೇಗ ಎಲ್ಲಾ ಸೇರಿರಬಹುದು.... ಅಪ್ಸೆಟ್ ಆಗೋಕೆ."

"ತಪ್ಪು ನನ್ನದೇ...."

"ಹೋಗ್ಲಿ ಬಿಡಿ. ಎಲ್ರದ್ದೂ ತಪ್ಪಿರಬಹುದು. ಆದರೆ ನಿಮ್ಮ ನಿರಾಕರಣದಿಂದ ನಮ್ಮ ದಿನೇಶನಿಗೆ ನಿರಾಶೆ ಆದದ್ದಂತೂ ನಿಜ....."

"ನಿಮ್ಮ ಬ್ರದರ್‌ಗೆ ಹೆಣ್ಣು ಸಿಗೋದು ಕಷ್ಟವೇನಲ್ಲ..." ತಡವರಿಸಿದಳು.

"ಹೌದು. ಅವನಿಗೆ ಯಾವುದಾದ್ರೂ ಬೇರೆ ಹೆಣ್ಣು ಖಂಡಿತಾ ಸಿಗ್ತಾಳೆ. ಆದರೆ ಅವನಿಗೆ ಮತ್ತೆ ಮತ್ತೆ ಇಂಟರ್‌ವ್ಯೂ, ಸೆಲೆಕ್ಷನ್ ಎಲ್ಲಾ ಬೇಕಿಲ್ಲ. ಅವನೊಂದು ಥರ, ಸ್ವಲ್ಪ ಅಪ್ಸೆಟ್ ಆಗಿಬಿಟ್ಟಿದಾನೆ."

"ಇದನ್ನೆಲ್ಲ ನನಗ್ಯಾಕೆ ಹೇಳ್ತಿದೀರಿ?"

"ಏನೋ ವಿಚಿತ್ರ ಅಂತನ್ನಿಸ್ತು. ಅವನು ಫೋಟೋ ನೋಡಿಯೇ ನಿಮ್ಮನ್ನು ಒಪ್ಪಿದ್ದ. ನೀವು ಒಪ್ಪಿರಬಹುದು ಅಂತ ಅಂದುಕೊಂಡಿದ್ದೆವು. ಒಂಥರಾ ವಿಚಿತ್ರ ಅಂತ ಅನ್ನಿಸ್ತು. ಹೋಗ್ಲಿ ಬಿಡಿ. ನೀವು ನಿರಾಕರಿಸಿದ್ದು ಒಳ್ಳೇದೇ ಆಯ್ತು."

"ಆ ಸ್ವಾತಂತ್ರ್ಯ ಹೆಣ್ಣು ಮಕ್ಕಳಿಗೂ ಇದೇ ತಾನೇ?"

"ಧಾರಾಳವಾಗಿ ಸ್ವಾತಂತ್ರ್ಯವಿದೆ. ಆದ್ರೆ ಕಾರಣವೂ ಇರಬೇಕು ಅಂತ ಅಂದುಕೊಂಡಿದೀನಿ.... ಅದೇನು ಅಂತ ಕೇಳುವ ಹಕ್ಕು ನನಗಿಲ್ಲ..... ಆದ್ರೆ ಹೇಳಬಹುದಾದ್ರೆ ನೀವು ಹೇಳಿ. ತಿಳಿದುಕೊಳ್ಳುವ ಕುತೂಹಲ ನನಗೆ ಇದೆ......"

"ಸಾರಿ.... ನಾನು ಮದುವೇನೇ ಆಗ್ಬಾರ್ದು ಅಂತ ನಿರ್ಧರಿಸಿದೀನಿ." ಅವಳ ಆ ಮಾತು, ಅವನನ್ನು ಬೆಚ್ಚುವಂತೆ ಮಾಡಿತು.

"ಯಾಕೆ ಮೇಡಮ್, ಇದ್ದಕ್ಕಿದ್ದಂತೆ ಈ ನಿರ್ಧಾರ....?"

"ಅದು ನನ್ನ ಸ್ವಂತ ವಿಷಯ.... ಸಧ್ಯಕ್ಕೆ ಈ ಚರ್ಚೆ ಬೇಡ.... ನೀವು ಡಾಕ್ಟರಿಗೆ

ಎಷ್ಟು ಫೀಸು ಕೊಟ್ರೆ ಅಂತ ಹೇಳಿದ್ರೆ, ಎಂ.ಓ. ಮಾಡ್ತೀನಿ....

"ಎಂ.ಓ. ಮಾಡ್ತೀರಾ? ನಕ್ಕ. "ಏನೂ ಬೇಡ. ನಾನೇ ಎಂದಾದ್ರೂ ಬಂದು ಕೇಳಿ ಇಸ್ಕೊಳ್ತೀನಿ. ನಿಮಗೆ ಏನೂ ಬೇಸರ, ತೊಂದ್ರೆ ಇಲ್ಲದಿದ್ರೆ....

"ನನಗೇನೂ ತೊಂದ್ರೆ ಇಲ್ಲ. ಬನ್ನಿ ಪರವಾಗಿಲ್ಲ. ಹಾಗೇ ನಮ್ಮ ತಂದೇನ ನೋಡಿ ಮಾತನಾಡಿಸೋರಂತೆ...." ಎಂದು ಹೇಳಿ ಲೈನ್ ಕಟ್ ಮಾಡಿದಳು. ಮಾತನ್ನು ಮುಗಿಸಿದ್ದು ಬೇಸರವೆನಿಸಿದರೂ, ಅವಳಾಗಿಯೇ ಇಷ್ಟಾದರೂ ಆಡಿದಳಲ್ಲ ಎಂದುಕೊಂಡ. ಅಂತರಂಗದ ಅಲೆಗಳು ಅತ್ತಿತ್ತ ಆಡಿದವು.

* * *

"ಅಮ್ಮಾ ರಂಗನಾಥರಾಯರಿಗೆ ಹುಶಾರಿಲ್ವಂತೆ. ನರ್ಸಿಂಗ್ ಹೋಂಗೆ ಸೇರಿಸಿದ್ದಾರಂತೆ." ತಾಯಿಗೆ ವಿಷಯವನ್ನು ತಿಳಿಸಿದ.

"ಹೌದೇನೋ.... ನಿಂಗೆ ಯಾರು ತಿಳ್ಸಿದ್ದು? ಪಾಪ, ಅದಕ್ಕೆ ನಮಗೆ ಏನೂ ತಿಳಿಸ್ಲಿಲ್ಲ ಅಂತ ಕಾಣುತ್ತೆ.... ಯಾವ ನರ್ಸಿಂಗ್ ಹೋಂನಲ್ಲಿದಾರೋ.... ಹೋಗಿ ನೋಡ್ಕೊಂಡು ಬರ್ಬೇಕಾಗಿತ್ತು. ಅಂದ್ಹಾಗೇ ಅವತ್ತು ಪೋಸ್ಟ್ ಮಾಡುಕ್ಕೆ ಅಂತ ಕವರುಗಳನ್ನು ಕೊಟ್ಟಿದ್ನಲ್ಲ ಪೋಸ್ಟ್ ಮಾಡಿದ್ಯಾ?"

"ಹೂಂನಮ್ಮ ಯಾಕೆ?"

"ಅದ್ರಲ್ಲಿ ಆ ಹುಡುಗಿ ಫೋಟೋ, ಜಾತಕ ಸಹ ಇತ್ತು.... ಕಳಿಸೇ ಬಿಟ್ಯಾ?"

"ಹೋಗ್ಲಿ ಬಿಡಮ್ಮ ಅವರ ಟೆನ್ಷನ್‌ನಲ್ಲಿ ಅವರು ಇರ್ತಾರೆ. ಮದುವೆ ವಿಷಯ ಮಾತನಾಡುಕ್ಕೆ ಪುರುಸೊತ್ತು ಎಲ್ಲಿರುತ್ತೆ? ಬೇರೆ ಯಾರನ್ನಾದ್ರೂ ನೋಡಿದ್ರಾಯ್ತು...."

"ನಮ್ಮ ಅರ್ಜೆಂಟಿಗೆ ಕೂಡಲೇ ಬೇರೆ ಹುಡ್ಗಿ ಎಲ್ಲಿ ಸಿಗ್ತಾಳೆ? ನೀನು ಅವರ ಮನೆಗೆ ಫೋನು ಮಾಡು. ನಾಳೇನೇ ನಾವು ಅವರ ಮನೆಗೆ ಹೋಗಿ, ಮಾತ್ನಾಡಿದ್ರಾಯ್ತು...." ಅವರಿಗೂ ಸಮಾಧಾನವಾಗುತ್ತೆ.

"ದಿನೇಶ ಏನಂತಾನೋ....?"

"ಏನಂತಾನೆ? ಅವನು ಒಪ್ಪಿದ್ನಲ್ಲ. ಅಲ್ದೇ ಅರ್ಜೆಂಟು ಇರೋದು ನಮಗೇನೇ. ಅವನಿಗೆ ಅಲ್ಲಿಂದ ಬಂದ್ಮೇಲೆ ತಿಳಿಸಿದ್ರಾಯ್ತು."

"ನಿನ್ನ ಮಾತೇ ನಂಗೆ ಅರ್ಥವಾಗಲ್ಲ."

"ಈಗ ಯಾವ ಅರ್ಥವನ್ನೂ ಹುಡುಕ್ಬೇಡ, ನಾಳೆ ನನ್ನನ್ನು ಅವರ ಮನೆಗೆ ಕರ್ಕೊಂಡು ಹೋಗು. ಅಷ್ಟು ಮಾಡು." ಮಹೇಶ ತಲೆಯಾಡಿಸಿದ. ಅವರ ಮನೆಗೆ ಹೋಗುವ ಅವಕಾಶ ಬೇಗನೇ ಸಿಕ್ಕಿದ್ದು ಅವನಿಗೆ ಸಂತೋಷವಾಗಿತ್ತು.

* * *

ಕರೆಗಂಟೆ ಸದ್ದು ಕೇಳಿ ಪ್ರಭಾವತಿ ಬಾಗಿಲನ್ನು ತೆರೆದಳು. ಎದುರಿಗೆ ನಿಂತಿದ್ದ ವನಜಮ್ಮನನ್ನು ಕಂಡು ಆಕೆಯ ಮುಖ ಪೆಚ್ಚಾಯಿತು. ಒಳಕ್ಕೆ ಕರೆಯಬೇಕೆಂದು

ತೋಚದೇ, ಹಾಗೇ ನಿಂತಳು. ವನಜಮ್ಮನೇ ಕೇಳಿದಳು,

"ಈಗ ಹೇಗಿದಾರೆ ನಿಮ್ಮಜಮಾನ್ರು? ಹುಶಾರಿರಲಿಲ್ವಂತೆ. ಏನಾಯ್ತು....?"

"ಹುಂ. ಪರವಾಗಿಲ್ಲ. ಈಗ ಹುಶಾರಾಗಿದಾರೆ.... ಬನ್ನಿ... ಒಳಕ್ಕೆ ಬನ್ನೀಂತ ಕೂಡಾ ಕರೀಲಿಲ್ಲ. ನನ್ನ ಬುದ್ಧಿ ಮಂಕಾಗಿ ಹೋಗಿದೆ...."

"ಪರವಾಗಿಲ್ಲ ಬಿಡಿ.... ಹಾಗಾಗಿ ಬಿಡುತ್ತೆ ಏನ್ಮಾಡೋದು? ಸುಜಯ ಎಲ್ಲಿ?"

"ಇಲ್ಲೇ ಹೊರಗೆಲ್ಲೋ ಹೋಗಿದ್ದಾಳೆ. ಕೂತ್ಕೊಳ್ಳಿ."

ಎಲ್ಲರೂ ಕುಳಿತರು. "ಹೀಗಾಗ್ಬಾರ್ದಾಗಿತ್ತು. ದೇವರು ಸಮಯದಲ್ಲೇ ಇಂತಹ ಪರೀಕ್ಷೆಯನ್ನು ತಂದು ಬಿಡ್ತಾನೆ. ನೀವು ಚಿಂತಿಸ್ಲೇಬೇಡಿ. ನಮಗೆ ಯಾವ ಆಡಂಬರವೂ ಬೇಡ. ಸರಳವಾಗಿ ದೇವಸ್ಥಾನದಲ್ಲಿ ಮದುವೆ ಮಾಡಿಕೊಟ್ರೂ ಸಾಕು. ಆದಷ್ಟು ಬೇಗ ಈ ಮಂಗಳ ಕಾರ್ಯ ನೆರವೇರಿದರೆ ಸರಿ. ನಾವು ಆತುರದಲ್ಲಿದ್ದೀವಿ."

ಈಕೆಯ ಮಾತಿನಿಂದ ಪ್ರಭಾವತಿ ಕಕ್ಕಾಬಿಕ್ಕಿಯಾದಳು. ಏನು ಹೇಳಬೇಕೆಂದು ತಿಳಿಯದೇ ಮಹೇಶನ ಕಡೆ ನೋಡಿದಳು. ಮಹೇಶ ತಾಯಿಗೆ ನಿಜವನ್ನು ತಿಳಿಸಿಲ್ಲವೆನ್ನುವುದು ಅರ್ಥವಾಯಿತು. ಆಕೆಯ ಕಸಿವಿಸಿಯನ್ನು ಕಂಡು ಮಹೇಶ ನೆರವಿಗೆ ಬಂದ.

"ಅಮ್ಮಾ.... ಈಗ ಆ ಮಾತುಗಳೆಲ್ಲ ಯಾಕೆ? ಮೊದಲು ಅವರು ಹುಷಾರಾಗಲಿ."

"ನಮ್ಮ ದಿನೇಶ ಇನ್ನೊಂದು ತಿಂಗಳಿನೊಳಗೆ ಡೆಲ್ಲಿಗೆ ಹೋಗಬೇಕಾಗಿದೆ. ಅದಕ್ಕೇ ನಮಗೆ ಸ್ವಲ್ಪ ಅರ್ಜೆಂಟು. ನಿಮಗೆ ಬೇಸರ ಏನೂ ಇಲ್ಲ ತಾನೇ...."

"ಒಂಥರಾ ಬೇಸರಾನೇ.... ಸಧ್ಯಕ್ಕೆ ಮದುವೆಯ ಮಾತೇ ಬೇಡ ಅಂತ ಹಠ ಹಿಡಿದು ಬಿಟ್ಟಿದ್ದಾಳೆ ನಮ್ಮ ಸುಜೀ.... ನಿಮಗೆ ಹೇಗೆ ಈ ವಿಷಯ ತಿಳಿಸೋದು ಅಂತ ಪೇಚಾಡಿಕೊಂಡು ಸುಮ್ಮನಾಗಿದ್ವು....." ಅದು ಸುಳ್ಳು ಎಂದುಕೊಂಡ ಮಹೇಶ.

"ನಿಮ್ಮ ಆತಂಕ ಆ ಹುಡುಗಿಗೆ ಹೇಗೆ ತಿಳಿಯುತ್ತೆ? ಈ ವಿಷಯದಲ್ಲಿ ಅವಳ ಮಾತಿಗೆ ಬೆಲೆ ಕೊಡೋದು ಸರಿಯಲ್ಲ. ನಾನು ನಿಮ್ಮ ಮಗಳಿಗೆ ತಿಳುವಳಿಕೆ ಹೇಳ್ತೀನಿ. ನೀವು ಸುಮ್ನಿರಿ."

"ಅಮ್ಮಾ ನೀನು ಸುಮ್ನಿರಮ್ಮ.... ಅವೆಲ್ಲಾ ಅವರ ಸ್ವಂತ ವಿಷಯ."

"ದಿನೇಶ ಒಪ್ಗೆ ಕೊಟ್ಟಿದಾನಲ್ಲ ಅಂತ ಧೈರ್ಯದಿಂದ ನಾನು ಇಷ್ಟು ಹೇಳ್ದೆ. ನಿಮಗ್ಯಾರಿಗೂ ಸಮ್ಮತವಿಲ್ಲದಿದ್ರೆ ಪರವಾಗಿಲ್ಲ ಬಿಡಿ." ವನಜಮ್ಮ ಸ್ವಲ್ಪ ಬಿಗುವಾಗಿ ನುಡಿದಾಗ ಪ್ರಭಾವತಿಗೆ ಮುಜುಗರವಾಯಿತು.

"ತಂದೆಗೆ ಹುಶಾರಿಲ್ಲದ್ದನ್ನು ಕಂಡು ಸುಜಿ ಹೆದ್ರಿ ಬಿಟ್ಟಿದ್ದಾಳೆ. ಅವರಿಗೆ ಡಾಕ್ಟರ್ ರೆಸ್ಟ್ ತಗೋಬೇಕು ಅಂತ ಸಲಹೆ ನೀಡಿದಾರೆ. ಮದುವೆ ಮಾತನ್ನು ಎತ್ತಲು ನನಗೆ ಧೈರ್ಯವಿಲ್ಲ. ನಾನೊಂದ್ಮಾತು ಹೇಳ್ತೀನಿ, ದಯವಿಟ್ಟು ತಪ್ಪು ತಿಳ್ಕೋ ಬೇಡಿ....., ನಮ್ಮ ಅತ್ತಿಗೆ ಮಗಳೂ ಒಬ್ಬಳು ಮದುವೆಗಿದ್ದಾಳೆ. ನಿಮ್ಮ ಮಗನಿಗೆ ತಕ್ಕವಳು

ಅಂತ ಅನ್ನಿಸುತ್ತೆ. ನನ್ಹತ್ರ ಫೋಟೋ ಇದೆ ತೋರಿಸ್ತೀನಿ."

"ಹುಂ ತೋರ್ಸಿ ಆಂಟೀ...." ಮಹೇಶ ತಕ್ಷಣ ನುಡಿದಿದ್ದ. ಪ್ರಭಾವತಿ ಆ ಕಡೆಗೆ ಒಳಗೆ ಹೋಗಿದ್ದಾಗ ವನಜಮ್ಮ ಈ ಕಡೆ ಮಗನ ಮೇಲೆ ಸಿಡುಕಿದಳು.

"ನೀನು ಸುಮ್ನಿರ್ಬಾರ್ದಾ ಮಹೇಶ....ಅಧಿಕ ಪ್ರಸಂಗಿ. ನಾವ್ಯಾಕೆ ಅವಳನ್ಯಾಕೆ ನೋಡ್ಬೇಕು?" ಅಷ್ಟರಲ್ಲಿ ಆಕೆ ಒಂದು ಫೋಟೋವನ್ನು ತೋರಿಸಿದಳು.

"ಇವಳು ದೀಪಾ. ನಮ್ಮವರ ಅಕ್ಕನ ಮಗಳು. ಇಂಗ್ಲಿಷ್ ಎಂ.ಎ. ಮಾಡಿದಾಳೆ. ಕಾಲೇಜ್ನಲ್ಲಿ ಲೆಕ್ಚರರ್ ಆಗಿದ್ದಾಳೆ. ಸಂಗೀತವನ್ನೂ ಕಲಿತಿದ್ದಾಳೆ. ಅಡಿಗೆ ಕೆಲಸ ಕೂಡ ಸ್ವಲ್ಪ ಸ್ವಲ್ಪ ಮಾಡ್ತಾಳೆ. ತೆಳ್ಳಗೆ ಬೆಳ್ಳಗೆ ಉದ್ದವಾಗಿದ್ದಾಳೆ. ಸುಜಯಗಿಂತ ಒಂದು ವರ್ಷ ಚಿಕ್ಕವಳು. ನಿಮಗೆ ಇಷ್ಟವಾದ್ರೆ, ನಾನು ಈಗ್ಲೇ ನಮ್ಮ ಅತ್ಗೆಗೆ ಫೋನು ಮಾಡ್ತೀನಿ. ಈಗ್ಲೇ ಬರೋಕೆ ಹೇಳ್ತೀನಿ....."

"ಹೂಂ ಹಾಗೇ ಮಾಡಿ. ಅವರ ನಂಬರ್ರಿದ್ರೆ ಕೊಡಿ. ನಾವೇ ಫೋನು ಮಾಡಿ ಮಾತಾಡ್ತೀವಿ." ಮಹೇಶನು ತಾಯಿಗೆ ಯೋಚಿಸಲೂ ಅವಕಾಶ ಕೊಡದೇ ಹೇಳಿದಾಗ, ವನಜಮ್ಮ ಮುಖ ಸಿಂಡರಿಸಿದಳು. ಅಸಹನೆ ಮುಖದಲ್ಲಿ ಎದ್ದು ತೋರುತ್ತುತ್ತು.

"ನಾನೇ ಮಾಡ್ತೀನಿ. ಇಲ್ಲೇ ಜೆ.ಪಿ. ನಗರದಲ್ಲಿದ್ದಾರೆ. ಅವರದ್ದೇ ಸ್ವಂತ ಕಾರಿದೆ. ಹದಿನೈದು–ಇಪ್ಪತ್ತು ನಿಮಿಷಗಳಲ್ಲಿ ಬಂದು ಬಿಡ್ತಾರೆ." ಎನ್ನುತ್ತಾ ಪ್ರಭಾವತಿ ಫೋನಿನ ಬಳಿಗೆ ಹೋದಳು.

"ನಿಂದೇನು ಎಲ್ಲಾದಕ್ಕೂ ಅವ್ಸರ? ಅವ್ರಿಗೆ ಬೇಕಾಗಿದ್ರೆ ಅವ್ರೇ ನಮ್ಮನೇಗೆ ಬರಲಿ. ಇಲ್ಲಿ ಇವರ ಮನೇಲಿ ಎಲ್ಲಾ ಯಾಕೆ? ನಿಂಗ್ಯಾಕೋ ಏನೂ ತಿಳಿಯಲ್ಲ. ನೀನು ಸುಮ್ನಿರಬಾರದಾ?"

"ಬಿಡಮ್ಮ. ದಿನೇಶ ಅರ್ಜೆಂಟಿನಲ್ಲಿದಾನೇಂತ ನೀನೇ ಹೇಳ್ತೀಯ. ನಿಂಗೆ ದೀಪಾ ಒಪ್ಗೆಯಾದ್ರೆ ಅವನ್ಗೂ ಒಪ್ಗೇ ತಾನೇ?"

"ಅದೆಲ್ಲಾ ಇಲ್ಲೇ ಇವರ್ಮನೇಲೇ ಆಗ್ಬೇಕಾ?"

"ಸರಿ. ಅವರುಗಳನ್ನು ನಮ್ಮನೇಗೇ ಕಳ್ಸಿ ಅಂತ ಹೇಳಿದ್ರಾಯ್ತು. ಏಳು ಹೊರಡೋಣ." ಆಕೆ ಫೋನಿನಲ್ಲಿ ಮಾತನಾಡುವುದು ಮುಗಿಯುವುದನ್ನೇ ಕಾದಿದ್ದು ವನಜಮ್ಮ ಎದ್ದಳು.

"ನಾವಿನ್ನೂ ಹೊರಡ್ತೀವಿ."

"ಹೊರಟು ಬಿಟ್ರಾ? ನಮ್ಮ ಅತ್ತಿಗೆ ಮನೆಗೆ ಫೋನು ಮಾಡಿದೀನಲ್ಲ.....ಅವರ ಯಜಮಾನ್ರೇ ಮಾತಾಡಿದ್ರು. ಇನ್ನು ಇಪ್ಪತ್ತು ನಿಮಿಷಕ್ಕೆ ಇಲ್ಲಿಗೆ ಬಂದು ಬಿಡ್ತಾರೆ. ನಾನು ಸ್ವಲ್ಪ ಕಾಫಿಗೆ ಡಿಕಾಕ್ಷನ್‌ಗೆ ಹಾಕಿ ಬಿಡ್ತೀನಿ." ವಿಧಿ ಇಲ್ಲದೇ ವನಜಮ್ಮ ಕುಳಿತಳು. ಅವರಿಬ್ಬರೂ ಅದೂ ಇದೂ ಮಾತನಾಡುತ್ತಾ ಕುಳಿತರು. ಮಹೇಶ

ಬೇಸರದಿಂದ ಆಕಳಿಸಿದ. ಸುಜಯಳಾದ್ರೂ ಇದ್ದಿದ್ರೆ ಚೆನ್ನಾಗಿತ್ತೆನಿಸಿತ್ತು. ರಂಗನಾಥ ರಾಯರು ಒಳಗಿನ ರೂಮಿನಲ್ಲಿ ಮಲಗಿದ್ದರು. ಹೊರಗೆದ್ದು ಬರುವಂತಿರಲಿಲ್ಲ. ಕಾಯುವುದು ಬಹಳ ಕಷ್ಟವಾಗಿ ಕಂಡಿತ್ತು.

ಆಕೆ ಹೇಳಿದಂತೆ, ಇಪ್ಪತ್ತು ನಿಮಿಷಗಳಲ್ಲಿ ಶಿವರಾಮಯ್ಯ ತಮ್ಮ ಮಗಳು ದೀಪಾಳೊಡನೆ ಬಂದರು. ಪ್ರಭಾವತಿ ಪರಸ್ಪರ ಪರಿಚಯ ಮಾಡಿಕೊಟ್ಟಳು.

"ಅತ್ತಿಗೇನೂ ಬಂದಿದ್ರೆ ಚೆನ್ನಾಗಿತ್ತು"

"ನಿಮ್ಮ ಫೋನು ಬಂದಾಗ ಅವಳು ಮನೇಲಿರ್ಲಿಲ್ಲ. ಯಾವುದೋ ಸಂಘದ ಮೀಟಿಂಗ್ ಅಂತ ಹೊರಗೆ ಹೋಗಿದ್ದಳು. ಈಗ್ಲೇ ಬಂದ್ಬಿಡಿ ಅಂತ ನೀವು ಹೇಳಿದ್ರಲ್ಲ ಅಂತ ನಾವಿಬ್ರು ಬಂದುಬಿಟ್ಟೆವು."

"ಪರವಾಗಿಲ್ಲ ಬಿಡಿ." ಅವರಿಬ್ಬರೂ ಕುಳಿತರು.

"ನಮಗೆ ಇವಳೊಬ್ಬಳೇ ಮಗಳು. ಇವಳಿಗಿಂತ ದೊಡ್ಡವನು ದಿಲೀಪ, ಕಲ್ಕತ್ತಾದಲ್ಲಿದ್ದಾನೆ. ನಾನು ಬ್ಯಾಂಕ್ ಮ್ಯಾನೇಜರ್ ಆಗಿದ್ದೆ. ಈಗ ರಿಟೈರ್ ಆಗಿದೀನಿ. ನಮ್ಮದೇ ಸ್ವಂತ ಮನೆ ಇದೆ. ತಕ್ಕ ಮಟ್ಟಿಗೆ ಅನುಕೂಲವಾಗಿದೀವಿ.... ಇವಳು ಇಂಗ್ಲೀಷ್ ಎಂ.ಎ. ಮಾಡಿ ಕಾಲೇಜ್ನಲ್ಲಿ ಲೆಕ್ಚರರ್ ಆಗಿದಾಳೆ.... ಮನೇಲಿ ಬೇಜಾರು ಅಂತ ಕೆಲಸಕ್ಕೆ ಹೋಗ್ತಾಳೆ ಅಷ್ಟೇ...." ಆತ ತಮ್ಮ ಬಗ್ಗೆ ಹೇಳಿಕೊಳ್ಳುತ್ತಿದ್ದರು.

ತೆಳ್ಳಗೆ ಬೆಳ್ಳಗೆ ಎತ್ತರಕ್ಕೆ ಲಕ್ಷಣವಾಗಿದ್ದ ದೀಪಾ ವನಜಮ್ಮನಿಗೆ ಮೊದಲ ನೋಟಕ್ಕೆ ಹಿಡಿಸಿದಳು. ಮಹೇಶ ಸ್ವಲ್ಪ ಗಮನವಿಟ್ಟೇ ಅವಳನ್ನು ನೋಡುತ್ತಿದ್ದ. ಅವನೇ ವರನಿರಬಹುದೆಂದುಕೊಂಡು, ದೀಪಾ ತುಸು ನಾಚಿಕೆಯಿಂದ ಕುಳಿತಿದ್ದಳು. ಶಿವರಾಮಯ್ಯ ಗಂಡಿನ ಓದು, ವಿದ್ಯೆ, ಕೆಲಸ ಕಾರ್ಯಗಳ ಬಗ್ಗೆ ವಿಚಾರಿಸಿಕೊಂಡರು.

ಹೊರಗಿನಿಂದ ಬಂದ ಸುಜಯ 'ದೀಪೂ' ಎಂದು ಕರೆಯುತ್ತಾ ಒಳಗೆ ಅಡಿ ಇಟ್ಟಳು. ಮಹೇಶನನ್ನು ಕಂಡು ಹಾಗೇ ನಿಂತಳು. ನಾಚಿಕೆಯಿಂದ ಮುಖ ಕೆಂಪಾಗಿತ್ತು. ಮಹೇಶ ಮುಗುಳ್ನಕ್ಕು ಕಣ್ಣಿನಲ್ಲೇ, "ಹಲೋ" ಎಂದ. ಸುಜಯಳಿಗೆ, ಅವನ ಪಕ್ಕ ಕುಳಿತಿದ್ದ ವನಜಮ್ಮನ ಕಡೆ ತಿರುಗಿನೋಡುವ ಧೈರ್ಯ ಬರಲಿಲ್ಲ. ಅಲ್ಲಿ ನಿಲ್ಲದೇ ಒಳಗಿನ ರೂಮಿಗೆ ಹೊರಟು ಹೋದಳು.

ಪ್ರಭಾವತಿ ಎಲ್ಲರಿಗೂ ಕಾಫಿಯನ್ನು, ಬಿಸ್ಕತ್ತನ್ನೂ ತಂದಿತ್ತಳು. ವನಜಮ್ಮನ ಮೆಚ್ಚುಗೆಯ ನೋಟ ದೀಪಳ ಮೇಲಿರುವುದನ್ನು ಗಮನಿಸಿ ನೆಮ್ಮದಿಗೊಂಡಳು.

"ನಮ್ಮ ದೀಪಾ ತುಂಬಾ ಚೆನ್ನಾಗಿ ದೇವರನಾಮಗಳನ್ನು ಹಾಡ್ತಾಳೆ. ಒಂದು ಹಾಡನ್ನು ಹಾಡ್ತೀಯಾ ದೀಪಾ!" ದೀಪಾ ಸಂಕೋಚದಿಂದ ಇಲ್ಲ ಎನ್ನುವಂತೆ ತಲೆಯಾಡಿಸಿದಳು.

"ಪರವಾಗಿಲ್ಲ ಬಿಡಿ.... ಈಗ ಹೊತ್ತಾಯ್ತು" ವನಜಮ್ಮ ನುಡಿದಾಗ ಅವಳಿಗೆ ಪಿಚ್ಚೆನ್ನಿಸಿತು. ಮಹೇಶನ ಕಣ್ಣುಗಳು ಸುಜಯಳನ್ನು ಕಾಣಲು ತವಕಿಸುತ್ತಿದ್ದವು.

ತಾಯಿ ಎದ್ದು ನಿಂತಾಗ, ಮಹೇಶನೂ ಏಳಬೇಕಾಯ್ತು. ಪ್ರಭಾವತಿ ಅವರಿಬ್ಬರನ್ನೂ ಬೀಳ್ಕೊಡಲು ಗೇಟಿನ ತನಕ ಬಂದಳು.

"ನಿಮಗೆ ದೀಪಾ ಹಿಡಿಸಿದ್ರೆ, ತಕ್ಷಣ ತಿಳಿಸಿ. ನಾಳೇನೇ ನಿಮ್ಮ ಮನೆಗೆ ಅವರು ಕರ್ಕೊಂಡು ಬರ್ತಾರೆ. ಅವರೂ ಆತುರದಲ್ಲಿದ್ದಾರೆ."

"ಆತುರದಲ್ಲಿದಾರೆ ಅಂತ ಅವಸರಪಟ್ಟರೆ ಆಗುತ್ತಾ! ನಾನು ಮೊದಲು ನನ್ನ ಮಗನ ಹತ್ರ ಮಾತಾಡ್ಬೇಕು.... ಈಗಿನ ಕಾಲದ ಹುಡುಗೀರ್ಗೆ ಸ್ವಲ್ಪ ಅಹಂಕಾರ ಜಾಸ್ತಿ...." ಪ್ರಭಾವತಿ ಆ ಮಾತುಗಳಿಂದ ನೊಂದಳು.

"ನಮ್ಮ ದೀಪಾ ಅಂಥವಳಲ್ಲ. ತುಂಬಾ ಒಳ್ಳೆಯ ಹುಡುಗಿ. ನಮಗೂ ನಿಮ್ಮಂಥ ಒಳ್ಳೆಯ ನೆಂಟಸ್ತಿಕೆ ಬೇಕು. ಏನೋ ನಮ್ಮ ಸುಜಯಗೆ ಋಣಾನುಬಂಧವಿಲ್ಲ. ದೀಪಾ ನಿಮ್ಮ ಮನೆ ಸೇರಿದ್ರೆ ಸುಖವಾಗಿರ್ತಾಳೆ ಅನ್ನೋ ನಂಬಿಕೆ ನಮಗಿದೆ." ದೀಪಾಳ ಫೋಟೋ ಕೊಡ್ತೀವಿ. ನಿಮ್ಮ ಮಗ ನೋಡಲಿ."

"ನಮ್ಮ ಮಗ ದಿನೇಶ ತುಂಬಾ ಒಳ್ಳೆಯ ಸ್ವಭಾವದವನು. ಅವನು ಯಾರನ್ನೇ ಮದುವೆಯಾದ್ರೂ ಅವಳನ್ನು ತುಂಬಾ ಚೆನ್ನಾಗಿ ನೋಡ್ಕೋತಾನೆ. ಹುಡ್ಗಿಯೂ ಅವನಿಗೆ ತಕ್ಕ ಹಾಗಿರಬೇಕು ಅಂತ ನನ್ನಾಸೆ. ನಯ, ವಿನಯ, ಘನತೆ, ಗಾಂಭೀರ್ಯ ಎಲ್ಲಾ ಇರಬೇಕು."

ತಾಯಿಯ ಮಾತು ಸ್ವಲ್ಪ ಅತಿಯಾಗಿ ಕಂಡಿತು. ಬೇಸರಗೊಂಡ. ಆಂಟೀ, ನಾವು ದಿನೇಶನ ಹತ್ರ ಮಾತಾಡ್ತೀವಿ. ನಾಳೇನೇ ಇವರುಗಳು ಬರಲಿ ಎಂದು ಹೇಳಿ ತಾಯಿಯನ್ನು ಹೊರಡಿಸಿದ. ವನಜಮ್ಮ ದೀಪಾಳ ಫೋಟೋವನ್ನು ತೆಗೆದು ಕೊಟ್ಟರು.

* * *

ಅಣ್ಣ ತಮ್ಮಂದಿರಿಬ್ಬರೂ ಊಟಕ್ಕೆ ಕುಳಿತಿದ್ದಾಗ, ಮಹೇಶ ಮಾತನ್ನೆತ್ತಿದ. "ಅಮ್ಮಾ ನಿನಗೆ ಇನ್ನೊಬ್ಬ ಹುಡುಗೀನ ನೋಡಿದಾಳೆ. ಅಮ್ಮಂಗೆ ಒಪ್ಪಿಗೆಯಾಗಿದೆ. ನಾಳೆ ಅವರುಗಳು ನಮ್ಮ ಮನೆಗೆ ಬರ್ತಿದಾರೆ."

ದಿನೇಶ ನಸುನಕ್ಕು, "ನೀನು ಹುಡುಗೀನ ನೋಡಿದ್ಯಾ! ನಿನ್ಗೆ ಓ.ಕೇ. ಅಂತ ಅನ್ನಿಸ್ತಾ!"

"ಹುಂ ಚೆನ್ನಾಗಿದ್ದಾಳೆ. ಎಲ್ಲದಲ್ಲೂ ಸುಜಯಗಿಂತ ಒಂದು ಕೈ ಮೇಲೆ ಅನ್ನುವ ಹಾಗಿದಾಳೆ.... ಇವಳು ಸುಜಯಳ ಕಸಿನ್ ಅಂತೆ...." ಅವರು ಫೋಟೋ ಸಹ ಕೊಟ್ಟಿದಾರೆ.

"ಯಾವ ಸುಜಯ?"

"ಆಗ್ಲೇ ಮರೆತು ಬಿಟ್ಯಾ...? ಒಂದು ವಾರದ ಕೆಳಗೆ ಇಂಟರ್‌ವ್ಯೂ ನಡೀತಲ್ಲ.... ಅವ್ರಿಂದ ಉತ್ತರವೇ ಬರ್ಲಿಲ್ಲ...."

"ಎಲ್ಲೋ ನಾನವಳಿಗೆ ಒಪ್ಗೆ ಆಗಿಲ್ಲ. ಹೇಳೋಕೆ ಮುಜುಗರವಾಗಿರಬಹುದು...." ಅಷ್ಟರಲ್ಲಿ ವನಜಮ್ಮ ಬಡಿಸಲು ಬಂದಳು.

"ಹಾಗಲ್ಲ. ಅವಳ ತಂದೆಗೆ ಹುಶಾರಿರಲಿಲ್ಲ. ಅದೇ ನೆವ ಮಾಡಿಕೊಂಡು ಉತ್ತರವನ್ನೇ ಕೊಡದೇ ಸುಮ್ಮನಿದ್ದು ಬಿಟ್ರು.... ಅವರ ಕಡೇದೇ ಇನ್ನೊಂದು ಹುಡುಗೀನ ತೋರ್ಸಿದಾರೆ. ಒಟ್ನಲ್ಲಿ ಏನೋ ಜಾಣತನ. ಈ ಹುಡುಗೀನೇ ಆಗ್ಬೇಕೂಂತ ಏನಿಲ್ಲ. ನಾನೇನೂ ಒಪ್ಗೇನ ಕೊಟ್ಟಿಲ್ಲ. ಮಹೇಶ ಅವಾಂತರ ಮಾಡಿಬಿಟ್ಟ.... ಆಮೇಲೆ ಫೋಟೋ ನೋಡೂವಂತೆ."

"ಇಲ್ಲ ನಾನೇನೂ ಅವಸರ ಮಾಡಿಲ್ಲ. ನಿನಗೆ ಅರ್ಜೆಂಟು ಅಂತ, ನಾಳೇನೇ ಬನ್ನಿ ಅಂತ ಹೇಳ್ದೆ ಅಷ್ಟೇ. ತಪ್ಪಾ ಅದು!"

"ಇವರ ಮಗಳು ಒಪ್ಪಲಿಲ್ಲ ಅಂತ.... ಅವರ ಕಡೆಯ ಇನ್ನೊಂದು ಹುಡುಗೀನ ತೋರ್ಸಿ ಅಂತ ನಾವೇನಾದ್ರೂ ಕೇಳಿದ್ವಾ!.... ಆಕೆಯ ಮಾತಿಗೆ ಮಹೇಶ ಹೂಂ ಹೂಂ ಅಂತ ತಲೆ ಆಡಿಸಿ ಬಿಟ್ಟ.... ನಂಗೆ ಸರಿ ಅನ್ನಿಸ್ಲಿಲ್ಲ."

"ಹಾಗಾದ್ರೆ ನಾಳೆ ಬರ್ಬೇಡಿ ಅಂತ ಫೋನು ಮಾಡಿ ಹೇಳಿ ಬಿಡ್ತೀನಿ."

"ಹೋಗ್ಲಿ ಬಿಡಮ್ಮ.... ಬನ್ನಿ ಅಂತ ಹೇಳೋದು, ಬರ್ಬೇಡಿ ಅಂತ ಮತ್ತೆ ಹೇಳೋದು ಅದೆಲ್ಲಾ ಸರಿಯಿಲ್ಲ. ಸುಜಯಂಗೆ ನಾನು ಒಪ್ಗೆ ಇಲ್ಲ ಅಂತ ತಿಳೀತಲ್ಲ. ನಮಗೆ ತಾನೇ ಅರ್ಜೆಂಟು ಇರೋದು. ಈ ಹುಡ್ಗಿ ಹೇಗೇ ಇರಲಿ, ನಂಗೆ ಒಪ್ಗೆ. ..... ನಾನು ನೋಡ್ಬೇಕೂಂತ ಏನಿಲ್ಲ. ನಾಳೆ ಬಂದಾಗ ಮುಂದಿನ ಮಾತುಗಳನ್ನಾಡಿ ದ್ರಾಯ್ತು."

"ಏನೋ ಹೀಗಂತೀಯ! ನೀನು ನೋಡಿ ಒಪ್ಗೆ ಕೊಟ್ಟ ಮೇಲೇ ಮುಂದಿನ ಮಾತು. ಆತುರದಲ್ಲಿ ಎಡವಟ್ಟು ಮಾಡ್ಕೋಬಾರ್ದು. ಅವ್ರದ್ದು ಯಾವ ಗೋತ್ರ ಅಂತ ಕೇಳ್ಲಿಲ್ಲ. ಹುಡ್ಗೀದು ಯಾವ ನಕ್ಷತ್ರ ಅಂತ ಗೊತ್ತಿಲ್ಲ. ಒಂದು ವೇಳೆ ಜಾತಕಗಳು ಸರಿ ಹೊಂದದೆ ಇದ್ರೇ.....ಅದನ್ನೆಲ್ಲ ವಿಚಾರಿಸದೇ ಮುಂದುವರೆಯಲ್ಲ ನಾನು....."

"ನನಗೆ ಅದರಲ್ಲೆಲ್ಲಾ ನಂಬಿಕೆ ಇಲ್ಲ. ಅದೆಲ್ಲಾ ಆಗ್ಬೇಕೂಂತ ಇದ್ರೆ ಮೊದ್ಲೇ ವಿಚಾರಿಸಬೇಕಾಗಿತ್ತು. ನಾಳೆ ಈ ಮಾತುಗಳನ್ನೆಲ್ಲಾ ಎತ್ತಲೇಬೇಡ." ದಿನೇಶ ಗಂಭೀರ ವಾಗಿ ನುಡಿದಾಗ ವನಜಮ್ಮ ಮಹೇಶನ ಕಡೆ ನೋಡಿದಳು.... ಅಸಹನೆ ಅವಳ ಮುಖದಲ್ಲಿ ತಾಂಡವಾಡುತ್ತಿತ್ತು. ಮಹೇಶ ಮನದಲ್ಲೇ ನಕ್ಕ.

* * *

ಮನೆಯ ಮುಂದೆ ಕಾರು ಬಂದು ನಿಂತ ಸದ್ದು ಕೇಳಿಸಿತು. ಟಿ.ವಿ. ನೋಡುತ್ತಿದ್ದ ದಿನೇಶ ಎದ್ದು ತನ್ನ ರೂಮಿಗೆ ಹೋದ. ಮಹೇಶ ಮುಂಬಾಗಿಲಿಗೆ ಬಂದು ಬಂದವರನ್ನು ಸ್ವಾಗತಿಸಿದ. ಶಿವರಾಮಯ್ಯ ಅವರ ಪತ್ನಿ ಶಕುಂತಲ ಹಾಗೂ

ದೀಪಾ ಮೂರೇ ಜನರನ್ನು ಕಂಡು ಒಳಬಾಗಿಲಿನಲ್ಲಿದ್ದ ವನಜಮ್ಮ "ಇದೇನು ಮೂರು ಜನ ಬರ್ತಿದಾರೆ. ಅಪಶಕುನ" ಎಂದಿದ್ದು ದಿನೇಶನಿಗೆ ಕೇಳಿಸಿತು. ಅವರುಗಳು ಒಳಗೆ ಬಂದುದಾಗಿತ್ತು.

"ಬನ್ನಿ... ಬನ್ನಿ..." ವನಜಮ್ಮ ವಿನಯವನ್ನು ಪ್ರಕಟಿಸುತ್ತಾ ಅತಿಥಿಗಳನ್ನೂ ಬರಮಾಡಿಕೊಂಡಳು. ಈ ದಿನ ನಿನ್ನೆಗಿಂತ ಸೊಗಸಾಗಿ ಅಲಂಕರಿಸಿಕೊಂಡು ಬಂದಿದ್ದ ದೀಪಾಳನ್ನು ಮಹೇಶ ಮೆಚ್ಚುಗೆಯಿಂದ ನೋಡಿದ. ಎಲ್ಲರೂ ಕುಳಿತರು. ಕುಶಲವನ್ನು ವಿಚಾರಿಸಿದ್ದಾಯಿತು. ವನಜಮ್ಮ ರೂಮಿಗೆ ಹೋಗಿ ದಿನೇಶನನ್ನು ಕರೆದಳು. ಹೊರಬಂದ ದಿನೇಶನನ್ನು ಶಿವರಾಮಯ್ಯ ದಂಪತಿಗಳು ಮೇಲಿನಿಂದ ಕೆಳಕ್ಕೆ ಒಂದೆರಡು ಬಾರಿ ನೋಡಿದರು. ಅವರ ಕಣ್ಣುಗಳಲ್ಲಿ ತೃಪ್ತಿಯ ಬೆಳಕು ಹೊಮ್ಮಿತು. ದಿನೇಶ ಮುಗುಳ್ನಕ್ಕು ಆತನ ಕೈ ಕುಲುಕಿದ.... ತನ್ನ ಪರಿಚಯವನ್ನು ಹೇಳಿಕೊಂಡ.

"ಇವಳು ನನ್ನ ಮಗಳು ದೀಪಾ...." ಆತ ಮಗಳನ್ನು ಪರಿಚಯಿಸಿದ. ದಿನೇಶ "ಹಲೋ" ಎಂದ. ಅವಳು ಮುಗುಳ್ನಕ್ಕು ತಾನೂ ಪ್ರತಿಯಾಗಿ ಹಲೋ ಎಂದಳು. ದಿನೇಶ ಮತ್ತೆ ಮತ್ತೆ ಅವಳನ್ನು ನೋಡಿದ ಕತ್ತೆತ್ತಿ. ಮಂದಹಾಸವನ್ನು ಬೀರುತ್ತಾ ಕುಳಿತಿದ್ದ ದೀಪಾ ಅವನಿಗೆ ಮೆಚ್ಚುಗೆಯಾದಳು. ಆ ಘಳಿಗೆಯಲ್ಲಿ ಅವನಿಗೆ ಸುಜಯಳ ನೆನಪಾಗದೇ ಇರಲಿಲ್ಲ. ಸುಜಯಳಷ್ಟೇ ಅಥವಾ ಅವಳಿಗಿಂತಲೂ ಚೆನ್ನಾಗಿದ್ದಾಳೆ. ಆದರೆ ಆ ಕಳೆಯೇ ಬೇರೆ, ಈ ರೂಪವೇ ಬೇರೆ, ಆ ಚಡಪಡಿಕೆ ಅಥವಾ ಏನೋ ಕಾಂಪ್ಲೆಕ್ಸ್ ಇವಳಲ್ಲಿಲ್ಲ. ಅವಳಂತೆ ಮಂಕು ಬಡಿದವಳಂತೆ ಇಲ್ಲ. ದೀಪಾ ಅವನಿಗೆ ಹೆಚ್ಚು ಮೆಚ್ಚುಗೆಯಾದಳು.

ಕಾಫಿ ತಿಂಡಿಯ ಉಪಚಾರ ನಡೆಯಿತು. ರವೆಯ ಖಾರಾಭಾತ್ ಹಾಗೂ ಕೇಸರಿಭಾತನ್ನು ಹೊಗಳುತ್ತಾ ನಿಧಾನವಾಗಿ ತಿಂದರು. ದೀಪಾ ದಿನೇಶನ ಕಡೆ ಕಳ್ಳ ನೋಟ ಬೀರುತ್ತಾ ತಿಂಡಿಯನ್ನು ತಿನ್ನುತ್ತಿದ್ದಳು. ಆ ಘಳಿಗೆಯಲ್ಲಿ ಮಹೇಶನಿಗೂ ಸುಜಯ ನೆನಪಿಗೆ ಬಂದಳು. ಅವಳಿಗೂ ಇವಳಿಗೂ ಎಷ್ಟು ವ್ಯತ್ಯಾಸ! ದೀಪಳಂತೆ ಅವಳಲ್ಲ. ಅವಳಲ್ಲಿ ಏನೋ ರಹಸ್ಯವಿದೆ. ಅದನ್ನು ಬಹುಶಃ ತಂದೆ ತಾಯಿಗೂ ತಿಳಿಸಿಲ್ಲ.... ಇನ್ನು ನನಗೆ ಹೇಳಿಯಾಳೆ....? ಹೇಗಾದರೂ ಮಾಡಿ ಆ ರಹಸ್ಯವನ್ನು ತಿಳಿದುಕೊಳ್ಳಬೇಕೆಂಬ ಆಸಕ್ತಿ ಹೆಚ್ಚಾಯಿತು.

ದಿನೇಶ ಅಡಿಗೆ ಮನೆಗೆ ಹೋಗಿ, ತಾನು ದೀಪಾಳೊಡನೆ ಮಾತನಾಡಬೇಕೆಂದು ತಿಳಿಸಿದ. ವನಜಮ್ಮ ಆ ವಿಷಯವನ್ನು ಶಕುಂತಲಗೆ ತಿಳಿಸಿದಳು.

"ಓ.... ಅದಕ್ಕೇನಂತೆ ಧಾರಾಳವಾಗಿ ಮಾತನಾಡಲಿ. ಬೇಕಾದ್ರೆ ಹೊರಗೆ ಎಲ್ಲಾದರೂ ಸುತ್ತಾಡಿ ಬರಲಿ. ನಮ್ಮ ಡ್ರೈವರ್ರು ಕರ್ಕೊಂಡು ಹೋಗಿ ಬರ್ತಾನೆ."

ದಿನೇಶನ ಕಣ್ಣು ಸಂಜ್ಞೆಯನ್ನರಿತ ದೀಪಾ ಎದ್ದು ನಿಂತು ಸೀರೆಯ ಸೆರಗು,

ನೆರಿಗೆಗಳನ್ನು ಸರಿಮಾಡಿಕೊಂಡಳು. ದಿನೇಶ ತನ್ನ ಕಾರಿನ ಬಳಿಗೆ ಹೋಗಿ ಅವಳಿಗಾಗಿ ಕಾರಿನ ಬಾಗಿಲನ್ನು ತೆಗೆದು ನಿಂತ. ದೀಪಾ ತಮ್ಮ ಕಾರಿನ ಬಳಿ ನಿಂತು ಯಾರೊಡನೆಯೋ ಮಾತನ್ನಾಡುತ್ತಿರುವುದನ್ನು ಗಮನಿಸಿ, ಅವನ ಹುಬ್ಬುಗಳು ಗಂಟಿಕ್ಕಿದವು. ಯಾರಿರಬಹುದು? ಡ್ರೈವರ್‌ರಂತೂ ಅಲ್ಲ.... ಸಂಶಯದಿಂದ, ಅವಳ ಕಡೆ ನೋಡಿದ. ದೀಪಾ ಒಳಗೆ ಕುಳಿತಿದ್ದವರಿಗೆ ಕೈ ಬೀಸುತ್ತಾ ವೈಯಾರದಿಂದ ನಡೆದು ಬಂದಳು.

"ಯಾರದು ನಿಮ್ಮ ಕಾರ್‌ನಲ್ಲಿ? ಯಾರ ಹತ್ರ ಮಾತ್ನಾಡ್ತಿದ್ರಿ?" ಕುತೂಹಲದಿಂದ ಕೇಳಿದ. ದೀಪಾ ನಸುನಕ್ಕಳು.

"ಸುಜಯಾ.... ಅವಳೂ ನಮ್ಮ ಜೊತೆಯಲ್ಲಿ ಬಂದಿದ್ಲು. ಆದರೆ ಒಳಗೆ ಬರೋದಿಲ್ಲ ಅಂತ ಹೇಳಿ ಕಾರ್‌ನಲ್ಲೇ ಕುಳಿತಿದಾಳೆ...."

"ಛೇ.... ಹೊರಗೆ ಕಾರ್‌ನಲ್ಲಿ ಕೂತಿರೋದಾ? ಮನೆಯೊಳಕ್ಕೆ ಕರ್ಕೊಂಡು ಬರಬೇಕಾಗಿತ್ತು...." ಮುಜುಗರದಿಂದ ಹೇಳಿದ.

"ನಾವು ಬಲವಂತ ಮಾಡ್ಲಿಲ್ಲ...."

"ಮನೆತನಕ ಬಂದ್ಬಿಟ್ಟು, ಒಳಕ್ಕೆ ಬರೋಲ್ಲ ಅಂತಂದ್ರೆ ಅದು ಡೀಸೆನ್ಸಿ ಅಲ್ಲ. ಹೋಗಿ ಅವರನ್ನು ಮನೆಗೆ ಕರ್ಕೊಂಡು ಹೋಗಿ ಬಿಟ್ಟು ಬಿನ್ನಿ" ಅವನು ಆರ್ಡರ್ ಮಾಡಿದಂತೆ ಹೇಳಿದಾಗ ಅವಳು ತಬ್ಬಿಬ್ಬುಗೊಂಡಳು. ಒಳಬಾಗಿಲಲ್ಲಿ ನಿಂತು ಇವರಿಬ್ಬರನ್ನು ಗಮನಿಸಿದ ಮಹೇಶ ಹೊರಬಂದ.... ದಿನೇಶನ ಬಳಿ ಸಾರಿದ.

"ಏನೋ ದಿನೂ ಏನಾಯ್ತು? ಎನಿ ಪ್ರಾಬ್ಲಮ್?"

"ಕಾರ್‌ನಲ್ಲಿ ದೀಪಾಳ ಕಸಿನ್ ಇದಾರೆ. ಒಳಗೆ ಬರದೇ ಕಾರಿನೊಳಗೇ ಕುಳಿತಿದಾರೆ. ಅದಕ್ಕೇ ಅವರನ್ನು ಮನೆಗೆ ಕರ್ಕೊಂಡು ಹೋಗಿ ಬಿಟ್ಟು ಬನ್ನಿ ಅಂತ ಹೇಳ್ದೆ ಅಷ್ಟೇ...."

"ಓ.... ಹೌದಾ! ನಾನು ಅವರ ಹತ್ರ ಮಾತ್ನಾಡಿ ಒಳಗೆ ಕರ್ಕೊಂಡು ಹೋಗ್ತೀನಿ. ನೀವಿಬ್ರೂ ಹೊರಡಿ...." ಮಹೇಶ ನುಡಿದಾಗ ದೀಪಾ ಕಾರನ್ನೇರಿದಳು. ಅವನ ಮುಂದೆಯೇ ಕಾರು ಹೊರಟು ಹೋಯಿತು. ಮಹೇಶ ಇತ್ತ ತಿರುಗಿದ. ಕಾರಿನ ಕಿಟಕಿಯ ಬಳಿ ಕುಳಿತಿದ್ದ ಸುಜಯ ಕಣ್ಣಿಗೆ ಬಿದ್ದಳು. ಒಂದು ಘಳಿಗೆ ನಂಬಲಾಗಲಿಲ್ಲ. ಮತ್ತೆ ನೋಡಿದ. ಒಂದು ರೀತಿಯ ಉತ್ಸಾಹ ಮಾಡಿತು.

"ಅರೇ! ನೀವಾ! ನೀವ್ಯಾಕೆ ಇಲ್ಲೇ ಕೂತಿದೀರಿ! ಒಳಗೆ ಬರಬಾರ್ದಾಗಿತ್ತಾ!"

"ಇಲ್ಲ, ಮಹೇಶ್, ನಾನಿಲ್ಲೇ ಕೂತಿರ್ತೀನಿ."

"ನೋ, ಇದು ಡೀಸೆನ್ಸಿ ಅಲ್ಲ. ಪ್ಲೀಸ್ ಒಳಗೆ ಬನ್ನಿ. ಇಲ್ದಿದ್ರೆ ನಂಗೆ ಬೇಸರವಾಗುತ್ತೆ."

"ಪ್ಲೀಸ್ ನನ್ನನ್ನು ಬಲವಂತ ಮಾಡ್ಬೇಡಿ...."

"ಯಾಕ್ರೀ ಹೀಗಾಡ್ತೀರಿ? ಇವತ್ತು ನಿಮ್ಮ ಇಂಟರ್‌ವ್ಯೂ ಏನೂ ಇಲ್ಲ. ಅದು

ಅವತ್ತೇ ಓವರ್. ನೀವು ಬಂದಿದೀರಿ ಅಂತ ಗೊತ್ತಾಗ್ಲಿಲ್ಲ. ಅವರ್ಯಾರು ಹೇಳ್ಲೇ ಇಲ್ಲ. ಇಲ್ದಿದ್ರೆ ಆಗ್ಲೇ ಬಂದು ಕರ್ಕೊಂಡು ಹೋಗ್ತಿದ್ದೆ. ಬನ್ನಿ, ಬನ್ನಿ. ಇಳೀರಿ. ಕಾರಿನ ಬಾಗಿಲನ್ನೂ ತೆಗೆಯಲು ನೋಡಿದ.

"ಮೂರು ಜನ ಆಗ್ತಾರೆ ಅಂತ ನನ್ನನ್ನು ಹೊರಡಿಸಿದರು. ನಾನು ಇಳಿಯುಲ್ಲ, ಕಾರ್ನಲ್ಲೇ ಕೂತಿರ್ತೀನಿ ಅನ್ನೋ ಕಂಡೀಷನ್ ಹಾಕಿ ಬಂದಿದೀನಿ...."

"ಇದು ಸರೀನಾ ನೀವೇ ಹೇಳಿ."

"ಹೌದು, ಇದು ಖಂಡಿತಾ ಸರಿಯಲ್ಲ. ನಾನು ಬರಲೇ ಬಾರ್ದಾಗಿತ್ತು."

"ಅದಲ್ರೀ.... ಬಂದಿದ್ದು ಸರಿಯಾಗಿದೆ.... ಆದರೆ ಮನೆಯೊಳಗೆ ಬರದೇ ಕಾರ್ನಲ್ಲಿ ಕುಳಿತಿರುವುದು ಮಾತ್ರ ಸರಿಯಲ್ಲ. ಇದು ತಪ್ಪು. ಬನ್ನಿ ಕಾಫಿ, ತಿಂಡಿನಾದ್ರೂ ತಗೋಳೋರಂತೆ."

"ಇಲ್ಲ ಮಹೇಶ್. ನಾನು ಬರಲ್ಲ. ನನಗೆ ಬರುವ ಮನಸ್ಸು ಇಲ್ಲ."

"ಬರಲ್ಲ ಅಂದ್ರೆ ನಾನು ಬಿಡುಲ್ಲ" ಅಂತ ಹೇಳಿ ಅವಳ ಕೈ ಹಿಡಿದು ಎಳೆದ. ಅವಳ ದೇಹದ ರಕ್ತವೆಲ್ಲಾ ಒಮ್ಮೆಲೇ ಮುಖಕ್ಕೆ ಚಿಮ್ಮಿದಂತಾಯ್ತು. ಅವಳ ರಕ್ತ ಸಂಚಾರದ ಬಿಸಿ ಅವನನ್ನು ತಟ್ಟಿತು. ಮೈಯಲ್ಲಿ ಹೊಸ ಅನುಭವ ಸಂಚರಿಸಿತು. ಕತ್ತಲೆಯಲ್ಲಿ ಅವಳ ಕಡೆ ನೋಡಿದ. ಅವಳ ಮುಖದ ಭಾವನೆಗಳು ಅವನಿಗೆ ಗೋಚರಿಸಲಿಲ್ಲ. ಅನುಮಾನದಿಂದ ಅವಳ ಕೈಯನ್ನು ಬಿಟ್ಟ. ಸಾರಿ.... ಎಂದು ಹೇಳಿ, ಪ್ಲೀಸ್ ಬನ್ನಿ." ಎಂದು ಮೃದುವಾಗಿ ಕರೆದ.

ಅವನ ಕೈಯ ಸ್ಪರ್ಶದಿಂದ ಅವಳು ವಿಚಲಿತಗೊಂಡಿದ್ದಳು. ಮತ್ತೆ ಇಲ್ಲ ಎನ್ನಲಾಗದೇ ಕೆಳಗಿಳಿದಳು. ಇಬ್ಬರೂ ಮಾತನಾಡದೇ ಮನೆಯ ಕಡೆ ಹೆಜ್ಜೆ ಹಾಕಿದರು. ಅವನ ಜೊತೆಯಲ್ಲೆ ಒಳ ಬಂದ ಸುಜಯಳನ್ನು ಕಂಡು ವನಜಮ್ಮ ಗಲಿಬಿಲಿ ಗೊಂಡಳು. ಇದೇನಿದು! ಈ ಹುಡುಗಿಯೇಕೆ ಈಗ ಬಂದಳು? ಈಗ ತನ್ನ ಒಪ್ಪಿಗೆ ಯನ್ನು ತಿಳಿಸಲು ಬಂದಿರಬಹುದೇ ಅಂತಂದುಕೊಂಡಾಗ, ಮನಸ್ಸಿನ ಕಸಿವಿಸಿ ಹೆಚ್ಚಾಗಿತ್ತು.

ಒಳಗೆ ಅಡಿ ಇಟ್ಟ ಸುಜಯಳ ದೃಷ್ಟಿ ಗೋಡೆಯ ಮೇಲಿನ ಫೋಟೋಗಳತ್ತ ತಿರುಗಿತು. ಮತ್ತೆ ಅದೇ ಅನುಭವ ಮರುಕಳಿಸಿತು. ತನಗೆ ಯಾಕೋ ಏನೇನೋ ಅನ್ನಿಸುತ್ತಿದೆ ಎಂದುಕೊಂಡು ತಲೆ ತಗ್ಗಿಸಿ, ಎರಡು ಅಡಿ ಹಿಂದೆ ಸರಿದಳು.

"ಯಾಕ್ರೀ ಹಿಂಜರಿತಿದೀರಿ? ಬನ್ರೀ ಪರವಾಗಿಲ್ಲ." ಎನ್ನುತ್ತಾ ಮಹೇಶ ಅವಳ ಕಡೆ ತಿರುಗಿದ. ಅವಳ ಕಳಾಹೀನವಾದ ಗಲಿಬಿಲಿಗೊಂಡಿದ್ದ ಮುಖವನ್ನು ಕಂಡು,

"ಏನಾಗ್ತಿದೆ ಸುಜಯ? ಎನಿ ಪ್ರಾಬ್ಲಮ್?" ಅಂತ ಕೇಳಿದ. ಅವಳು ಉತ್ತರಿಸುವ ಮೊದಲೇ ಅವಳನ್ನು ಕಂಡು ಶಕುಂತಲ ಎದ್ದು ಬಂದಳು.

"ಆಗ್ಲೇ ಬರಬಾರ್ದಾಗಿತ್ತಾ?" ಎನ್ನುತ್ತಾ ಅವಳ ಕೈ ಎಳೆದು ಒಳಗೆ ಕರೆತಂದಳು.

ಮಾತನಾಡುವ ಶಕ್ತಿಯನ್ನು ಕಳಕೊಂಡವಳಂತೆ ಸುಜಯ ಆಕೆಯ ಜೊತೆಯಲ್ಲಿ ಬಂದಳು.

"ನಮ್ಮ ಜೊತೆನೇ ಬಂದ್ಲು. ಒಳಗೆ ಬರೋಕೆ ಸಂಕೋಚಗೊಂಡು ಕಾರ್‌ನಲ್ಲೇ ಕುಳಿತಿದ್ಲು." ಶಕುಂತಲ ಹೇಳಿದಾಗ ವನಜಮ್ಮ ತುಟಿ ಕೊಂಕಿಸಿದಳು.

"ಅಮ್ಮ.... ಇವರ್ಗೆ ತಿಂಡಿ.... ?" ಮಹೇಶ ನೆನಪಿಸುವವನಂತೆ ಹೇಳಿದ. ವನಜಮ್ಮ ಮಗನನ್ನು ವಿಚಿತ್ರವಾಗಿ ನೋಡಿ ಅಡುಗೆ ಮನೆಯ ಕಡೆ ನಡೆದಳು. ಸುಜಯ ಅಂದಿನಂತೆ, ಕತ್ತನ್ನೆತ್ತದೇ ಕುಳಿತಿದ್ದಳು. ಆದರೆ, ಮಹೇಶ ಅದಕ್ಕೆ ಬೇರೆ ಕಾರಣವನ್ನು ಊಹಿಸಿದ.

ತಿಂಡಿಯ ತಟ್ಟೆಯನ್ನು ಕೈಗೆತ್ತಿಕೊಳ್ಳುವಾಗ ಸುಜಯಳ ಕೈ ನಡುಗಿತು. ಆಕೆ ಅವಳನ್ನೇ ವಿಚಿತ್ರವಾಗಿ ನೋಡಿದಳು. ಸುಜಯಳಿಂದ ತಿಂಡಿ ತಿನ್ನಲಾಗಲಿಲ್ಲ. ಹಾಗೇ ತಟ್ಟೆಯನ್ನು ಹಿಡಿದು ಕೂತವಳನ್ನು ಶಕುಂತಲ ಎಚ್ಚರಿಸಿದಳು.

"ಸುಜೀ.... ಯಾಕೇ ತಿನ್ನಲ್ವಾ?"

"ಯಾಕೋ ಸೇರ್ತಿಲ್ಲ ಅತ್ತೇ.... "

"ಇಷ್ಟು ನಾಜೂಕಾದ್ರೆ ಹೇಗೆ? ಒಳಗೆ ಬರಲೇ ಬಾರ್ದಾಗಿತ್ತು ನೀನು...."

ಅದಕ್ಕೆ ಮಹೇಶ ಕಾರಣ ಎನ್ನುವಂತೆ ಅವಳು ಅವನ ಕಡೆ ನೋಡಿದಳು. ಅವನು ಕಿರುನಗೆ ನಕ್ಕ. ತಕ್ಷಣವೇ ತಲೆ ತಗ್ಗಿಸಿದಳು.

"ಯಾಕೋ ನೀವು ಅಪ್ಸೆಟ್ ಆಗಿರುವಂತಿದೆ. ಬನ್ನಿ ಹೊರಗೆ ಹೋಗಿ ಮಾತನಾಡೋಣ." ಮಹೇಶ ಕರೆದಾಗ, ಸುಜಯ ತಟ್ಟೆಯನ್ನು ಅತ್ತ ಇಟ್ಟು ಎದ್ದಳು. ವನಜಮ್ಮ ಮಿಕಿ ಮಿಕಿ ಅವರಿಬ್ಬರನ್ನೇ ನೋಡಿದಳು.

"ತಂದೆಗೆ ಹುಶಾರಿಲ್ಲದ್ದನ್ನು ಮನಸ್ಸಿಗೆ ತುಂಬಾ ಹಚ್ಚಿಕೊಂಡು ಬಿಟ್ಟಿದ್ದಾಳೆ." ಶಕುಂತಲ ಲೊಚಗುಟ್ಟಿದ್ದಾಗ, ವನಜಮ್ಮನಿಗೆ ಇದ್ದಿರಬಹುದು ಎಂದೆನಿಸಿತು. ಹೊರಗಡೆ ಬಂದ ಕೂಡಲೇ ಸುಜಯ ಹಾಯಾಗಿ ಉಸಿರಾಡಿದಳು. ಕರ್ಚೀಫಿನಿಂದ ಮುಖದ ಮೇಲಿನ ಬೆವರನ್ನು ಒರೆಸಿಕೊಂಡಳು.

"ಯಾಕೆ ಒಂಥರಾ ಇದೀರಾ? ಹುಷಾರಾಗಿದೀರಿ ತಾನೇ" ಮಹೇಶ ಕಳಕಳಿಯಿಂದ ವಿಚಾರಿಸಿಕೊಂಡ.

"ಹೊರಗೆ ಹಿತವಾಗಿದೆ ಒಳಗೆ ಉಸಿರು ಕಟ್ಟಿದಂತಾಗಿತ್ತು." ಅವಳೆಂದಳು.

"ಆಂ.... ಏನಂದ್ರೀ....?"

"ಒಳಗೆ ತುಂಬಾ ಮುಜುಗರ ಆಗಿತ್ತು. ನಿಮಗೆ ಥ್ಯಾಂಕ್ಸ್. ಸಧ್ಯ ನನ್ನನ್ನು ಹೊರಕ್ಕೆ ಕರ್ಕೊಂಡು ಬಂದ್ರಲ್ಲ."

"ಹಿಂದಿಂದೆಲ್ಲ ಮರೆತು ಚಿಯರ್ ಫುಲ್ ಆಗಿರ್ಬೇಕು. ಆಗ್ಲೇ ಲೈಫು."

"ಅಂದ್ರೇ...." ವಿಸ್ಮಯದ ದನಿ ಇತ್ತು.

"ನೀವು ದಿನೇಶನ್ನ ಒಪ್ಪಲಿಲ್ಲ.... ನಿಮ್ಮಿಬ್ಬರ ಮದುವೆ ಇಲ್ಲ.... ಅಲ್ಲಿಗೆ ಆ ವಿಷಯ ಮುಗೀತು. ಅದನ್ನೇ ನೆನೆಸ್ಕೊಂಡು ಮುಜುಗರ ಪಟ್ರೇ....?" ನಕ್ಕ.

"ಅದಲ್ಲ...." ಅವಳೂ ಹಗುರವಾಗಿ ನುಡಿದಳು.

"ಹಾಗಾದ್ರೆ.... ನಿಮ್ಮ ತಂದೆಗೆ ಹುಷಾರಿಲ್ಲ. ಅದಕ್ಕೆ ನೀವೇ ಕಾರಣ ಅಂತ ಡಲ್ ಆಗಿ ಎಷ್ಟು ದಿನ ಇರ್ತೀರಿ. ಈಗ ಅವರು ರಿಕವರ್ ಆಗಿದಾರಲ್ಲ."

"ಅದೂ ಅಲ್ಲ...."

"ಹಾಗಾದ್ರೆ ಏನೂಂತ ಹೇಳಿ.... ನನಗೂ ಗೊತ್ತಾಗಲಿ...."

"ಏನೋ ನಂಗೊತ್ತಿಲ್ಲ." ಮಹೇಶ ಗೊಳ್ಳನೆ ನಕ್ಕ.

"ಕಾರಣ ಏನೂಂತ ನಿಮಗೇ ಗೊತ್ತಿಲ್ಲ. ಆದ್ರೂ ನಿಮ್ಮ ಮನಸ್ನಲ್ಲಿ ಏನೋ ಗೊಂದಲ, ಕಳವಳ.... ಅವೆಲ್ಲ ನಿಮ್ಮ ಮುಖದಲ್ಲಿ ಗೋಚರವಾಗ್ತಿದೆ. ನಿಮ್ಮ ಸುಂದರವಾದ ಮುಖ, ಮೋಡ ಮುಸುಕಿದ ಚಂದ್ರನಂತೆ ಮಬ್ಬಾಗಿದೆ...." ಅವಳು ಮಹೇಶನ ಕಡೆ ತಿರುಗಿದಳು.

"ನಾನು ನಿಮ್ಮ ಫೋಟೋ ನೋಡಿದೀನಿ. ಆ ಸುಜಯಾನೇ ಬೇರೆಯೇನೋ ಅಂತ ಅನ್ನಿಸುವಂತೆ ನಿಮ್ಮ ಮುಖ ತೋರ್ತಿದೆ.... ಇದು ಮೋಸ ಅಲ್ವಾ?"

"ಇದರಲ್ಲೇನು ಮೋಸ? ನನ್ನ ಕಷ್ಟ ನಿಮಗೆ ಗೊತ್ತಿಲ್ಲ."

"ಮೋಸ ಅಲ್ದೇ ಮತ್ತೇನು? ಯಾರೇ ನೋಡಿದ್ರೂ ಒಪ್ಪಿಕೊಳ್ಳುವ ಪೋಸ್‌ನಲ್ಲಿ ಫೋಟೋ ತೆಗೆಸಿ ಕೊಳ್ಳೋದು.... ಆದರೆ ಎದುರಿಗೇ ಕೂತಾಗ.... ಹಾಗಿರುಲ್ಲವಲ್ಲ...."

"ಮಹೇಶ್ ಪ್ಲೀಸ್.....ನಿಜ ಏನೂಂತ ತಿಳಿದುಕೊಳ್ಳದೇ ಹೀಗೆಲ್ಲಾ ಮಾತಾಡ್ಬೇಡಿ. ನಾನು ಫೋಟೋದಲ್ಲೂ ಚೆನ್ನಾಗಿಲ್ಲ. ಎದುರಿಗೂ ಚೆನ್ನಾಗಿಲ್ಲ ಸರೀನಾ?"

"ಸಾರಿ.... ಸಾರಿ.... ಕೋಪ ಯಾಕೆ ಮಾಡ್ಕೋತೀರಿ? ಕೋಪ ಮಾಡ್ಕೊಂಡಾಗ ಹೇಗೆ ಕಾಣ್ತೀರಿ ಅಂತ ಈ ಕತ್ಲಲ್ಲಿ ಗೊತ್ತಾಗ್ಲಿಲ್ಲ.... ಏನಿವೇ... ನೀವು ತುಂಬಾ ಚೆನ್ನಾಗಿದೀರಿ. ಐ ಲೈಕ್ ಯೂ ವೆರಿಮಚ್.... ಆದ್ರೆ...." ಅನುಮಾನಿಸಿದ.

"ನೀವು ಅಪ್ರಿಷಿಯೇಟ್ ಮಾಡ್ಲಿ ಅಂತ ನಾನು ಹೀಗೆಲ್ಲಾ ಬಿಹೇವ್ ಮಾಡ್ತಿಲ್ಲ. ಅದಕ್ಕೆ ನನ್ನದೇ ಆದ ಕಾರಣಗಳಿವೆ.... ಆದರೆ ಅದೇನೂಂತ ಕೇಳ್ಬೇಡಿ."

"ಓ.ಕೇ.... ಕೇಳುಲ್ಲ. ನಡೀರಿ ಒಳಗೆ ಹೋಗೋಣ."

"ಪರವಾಗಿಲ್ಲ. ನಾನು ಇಲ್ಲೇ ಇರ್ತೀನಿ." ಅಷ್ಟರಲ್ಲಿ ದಿನೇಶ, ದೀಪಾ ಹಿಂತಿರುಗಿದ್ದರು. ದೀಪಾ ಸಂತಸ ಸಂಭ್ರಮದಿಂದ ಸುಜಯಳ ಕೈ ಹಿಡಿದಳು. ಅವಳು ದಿನೇಶನನ್ನು ಒಪ್ಪಿರುವಳೆಂದು ಅವಳ ಸಂತಸ ತಿಳಿಸಿತ್ತು. ಅವಳ ಹಿಂದೆ ನಿಂತಿದ್ದ ದಿನೇಶ ಸುಜಯಳನ್ನೇ ಕೌತುಕದಿಂದ ಅವಲೋಕಿಸಿದ. ಸುಜಯ ಮುಜುಗರಗೊಂಡು ತಲೆ ತಗ್ಗಿಸಿದಳು.

"ಇದ್ಯಾಕೆ ಹೊರಗೆ ನಿಂತಿದೀರಿ? ಒಳಕ್ಕೆ ಹೋಗೋಣ ಬನ್ನಿ...."

"ಸುಜೀ ಬಾರೇ..... ದೀಪಾ ಅವಳನ್ನು ಎಳೆದಳು. ಅದಳು ಕೈ ಬಿಡಿಸಿಕೊಂಡಳು. ದಿನೇಶ ಮುಂದೆ ಹೆಜ್ಜೆ ಹಾಕಿದ್ದ.

"ನೀನು ಹೋಗು ನಾನು ಇಲ್ಲೇ ಕಾರ್ನಲ್ಲಿ ಕೂತಿರ್ತಿನಿ."

"ನೀವು ಹೋಗಿ, ನಾನು ಇವರನ್ನು ಕರ್ಕೊಂಡ್ಬರ್ತೀನಿ." ಮಹೇಶನೆಂದ. ದೀಪಾ ದಿನೇಶನ ಹಿಂದೆ ಹಿಂದೆ ನಡೆದಳು. ಒಳಗಿದ್ದವರೆಲ್ಲ ಇವರಿಬ್ರನ್ನು ಕುತೂಹಲ, ಆಸಕ್ತಿಯಿಂದ ನೋಡಿದರು. ದಿನೇಶ ಶಿವರಾಮಯ್ಯನ ಕಡೆಗೆ ತಿರುಗಿ ನೇರವಾಗಿ ಹೇಳಿದ.

"ನಾನು ದೀಪಾನ್ನ ಒಪ್ಪಿದೀನಿ. ನಿಮ್ಮೆಲ್ಲರಿಗೂ ನಾನು ಒಪ್ಪಿಗೆ ಆಗಿದ್ದರೆ, ಆದಷ್ಟು ಬೇಗ ಮದುವೆ ನಡೆಯಲಿ. ಇನ್ನೊಂದು ತಿಂಗಳ ನಂತರ ನಾನು ಡೆಲ್ಲಿಗೆ ಹೋಗಬೇಕಾಗಿದೆ"

ವನಜಮ್ಮನ ಉತ್ಸಾಹ ಕುಂದಿತು. ಇದನ್ನೆಲ್ಲಾ ದಿನೇಶನೇ ಆಡುವ ಅಗತ್ಯ ಏನಿತ್ತು! ತಾನು ದೊಡ್ಡವಳು ಇರುವಾಗ, ತನಗೆ ಅವಕಾಶವನ್ನು ಕೊಡಬೇಕು ಎಂದೆನಿಸಿತ್ತು.

"ಒಂದು ತಿಂಗಳೊಳಗೆ ಹೇಗಾಗುತ್ತೆ? ಮೊದಲು ಒಳ್ಳೆಯ ಛತ್ರ ಸಿಗಬೇಡವೇ! ಬೇಕಾದಷ್ಟು ಪೂರ್ವ ತಯಾರಿಯ ಕೆಲಸಗಳಿರುತ್ತವೆ."

"ಅಯ್ಯೋ ಆತಂಕ ಯಾಕೆ? ಮನಸ್ಸಿದ್ದರೆ ಮಾರ್ಗ. ಎಲ್ಲದಕ್ಕೂ ಒಂದು ಸುಲಭದ ದಾರಿ ಇದ್ದೇ ಇರುತ್ತೆ. ಈಗ "ಲಗ್ನ ಪತ್ರಿಕೆ" ಸಮಾರಂಭ ಮಾಡಿಬಿಡಿ. ಆ ಮೇಲೆ ಒಂದೆರಡು ತಿಂಗಳ ನಂತರವೇ ಮದುವೆ ಮಾಡಿಕೊಡಿ, ಪರವಾಗಿಲ್ಲ. ಒಂದು ವಾರ ರಜೆ ಹಾಕಿ ಬರ್ತಾನೆ. ಛತ್ರ ಮಾತ್ರ ಚೆನ್ನಾಗಿರಬೇಕು, ಅನುಕೂಲಗಳಿರ ಬೇಕು." ವನಜಮ್ಮ ಆತುರದಿಂದ ನುಡಿದಳು.

"ಇಲ್ಲಮ್ಮ.... ನಂಗೆ ಮತ್ತೆ ಮತ್ತೆ ರಜೆ ಸಿಗೋಲ್ಲ. ಏನಿದ್ರೂ ಈಗ ಹೊರಡುಕ್ಕೆ ಮುಂಚೆಯೇ ಮದ್ವೆ ಆಗೋದು." ಅವನು ಮಧ್ಯೆ ಬಾಯಿ ಹಾಕಿದ್ದು ಇಷ್ಟವಾಗಲಿಲ್ಲ. ಆದರೂ ಏನನ್ನೂ ಹೇಳಲಾಗಿರಲಿಲ್ಲ.

"ಮೊದಲು ಒಳ್ಳೆಯ ದಿನ, ಒಳ್ಳೆಯ ಮಹೂರ್ತಗಳನ್ನು ನೋಡಬೇಡವೇ? ಮೊದಲು ನಿಮ್ಮಿಬ್ಬರಿಗೆ "ತಾರಾಬಲ" ಕೂಡಿ ಬರಬೇಕು. ಅಂದ್ಹಾಗೇ ನಿಮ್ಮ ಮಗಳ ಜಾತಕವನ್ನು ತಂದುಕೊಡಿ. ನಮ್ಮ ಶಾಸ್ತ್ರಿಗಳಿಗೆ ತೋರಿಸ್ತೀವಿ."

"ನಮ್ಮ ದೀಪಂದು ಸ್ವಾತಿ ನಕ್ಷತ್ರ, ಅದು ಮಹಾ ನಕ್ಷತ್ರಗಳಲ್ಲಿ ಒಂದು. ಅದು ಎಲ್ಲಾ ನಕ್ಷತ್ರಕ್ಕೂ ಕೂಡಿ ಬರುತ್ತೆ. ಜಾತಕವನ್ನು ತೋರಿಸಬೇಕಾಗಿಲ್ಲ ಅಂತ ಶಾಸ್ತ್ರವೇ ಹೇಳುತ್ತೆ." ಶಿವರಾಮಯ್ಯ ನುಡಿದಾಗ ವನಜಮ್ಮ ಪೆಚ್ಚಾದಳು. ದಿನೇಶ ಆ ವಿಷಯ ತನಗೆ ಸಂಬಂಧಿಸಿದುದೇ ಅಲ್ಲವೆನ್ನುವಂತೆ ಕುಳಿತಿದ್ದ.

"ನಾವಿನ್ನು ಬರ್ತೀವಿ. ಲಗ್ನಪತ್ರಿಕೆ ಯಾವಾಗ ಇಟ್ಟುಕೊಳ್ಳುವುದು ಅಂತ

ಶಾಸ್ತ್ರಿಗಳನ್ನು ಕೇಳಿ ನಿಮಗೆ ಫೋನು ಮಾಡ್ತೀವಿ."

"ಹಾಗೇ ಮಾಡಿ."

"ದೀಪಾ, ಇವರಿಗೆ ನಮಸ್ಕಾರ ಮಾಡಮ್ಮ." ದೀಪಾ ವನಜಮ್ಮನ ಕಾಲುಗಳಿಗೆ ನಮಸ್ಕರಿಸಿದಳು.

"ಬೇಗ ಈ ಮನೆಯ ಸೊಸೆಯಾಗಿ ಬಲಗಾಲನ್ನಿಟ್ಟು ಲಕ್ಷ್ಮಿಯಂತೆ ಬಾರಮ್ಮ." ವನಜಮ್ಮ ಬಾಯಿ ತುಂಬಾ ಹರಸಿದಳು. ದಿನೇಶ ಕೈ ಕಟ್ಟಿ ಮುಗುಳ್ನಗುತ್ತಾ ನಿಂತಿದ್ದ.

"ಒಂದು ತಟ್ಟೆಯನ್ನು ಕೊಡಿ. ಹೂವು-ಹಣ್ಣುಗಳನ್ನು ಇಡಬೇಕು."

"ಬನ್ನಿ, ದೇವರ ಮನೆಗೇ ಬನ್ನಿ. ದೇವರ ಮುಂದೆ ತುಪ್ಪದ ದೀಪಗಳನ್ನು ಹಚ್ಚಿಸಿಟ್ಟಿದ್ದೀನಿ. ಬಾಮ್ಮಾ ದೀಪಾ, ನೀನೂ ಬಾ, ದೇವರಿಗೆ ನಮಸ್ಕಾರ ಮಾಡುವಂತೆ." ತಾಯಿ ಮಗಳು ವನಜಮ್ಮನನ್ನು ಹಿಂಬಾಲಿಸಿದರು. ಶಿವರಾಮಯ್ಯ ದಿನೇಶನೊಡನೆ ಮಾತನಾಡಲು ಪದಗಳನ್ನು ಹುಡುಕುತ್ತಿದ್ದರು. ಎಲ್ಲರೂ ಮಹೇಶ ಹಾಗೂ ಸುಜಯನನ್ನು ಮರೆತಂತಿತ್ತು.

ಎಲೆ, ಅಡಿಕೆ, ಹಣ್ಣುಗಳನ್ನು ತೆಗೆದುಕೊಂಡು ದೀಪಾ ಹಾಗೂ ಅವಳ ತಾಯಿ ಹೊರಬಂದರು. ಎಲ್ಲರೂ ಹೊರಟರು. ಕಾರಿನ ತನಕ ಬಿಟ್ಟು ಬರಲು, ದಿನೇಶ ಹಾಗೂ ವನಜಮ್ಮ ಅವರ ಜೊತೆ ಜೊತೆಯಲ್ಲಿ ಮಾತನಾಡುತ್ತಾ ಬಂದರು. ಕಾರಿಗೆ ಒರಗಿ ನಿಂತು ಮಹೇಶನೊಡನೆ ಮಾತನಾಡುತ್ತಾ ನಿಂತಿದ್ದ ಸುಜಯಳನ್ನು ಕಂಡಾಗಲೇ ಅವರುಗಳಿಗೆ ನೆನಪಾದದ್ದು. ದಿನೇಶ ತಾಯಿಗೆ ಹೇಳಿದ,

"ಅಮ್ಮಾ, ಸುಜಯಳನ್ನು ಒಳಕ್ಕೆ ಕರೆದು ಹಣ್ಣುಗಳನ್ನಿಟ್ಟು ಕೊಡು."

"ಒಳಗೇ ಕೂತಿದ್ರೆ, ಅವಳಿಗೂ ಕೊಡ್ತಿದ್ದೆ. ದೀಪಾ, ಸುಜಯನ್ನ ಕರ್ಕೊಂಡು ಬಾಮ್ಮ, ಅವಳಿಗೂ ಎಲೆ ಅಡಿಕೆ ಕೊಡ್ತೀನಿ."

"ಸುಜೀ ಬಾರೇ...." ದೀಪಾ ನಿಂತಲ್ಲಿಂದಲೇ ಕರೆದಳು.

"ಪರವಾಗಿಲ್ಲ ಬಿಡೇ. ನಾನು ಮತ್ತೆ ಮನೆಯೊಳಕ್ಕೆ ಬರುಲ್ಲ."

"ಏಯ್, ಸಾಕು ಬಾರೇ ಜಂಭ ಮಾಡ್ಬೇಡ. ಮಹೇಶ್, ನೀವೇ ಹೇಳಿ."

"ಬನ್ನಿ ಸುಜಯಾ.... ಹಣ್ಣನ್ನು ಬೇಡ ಅನ್ಬಾರ್ದು." ಅವನು ಆತ್ಮೀಯತೆಯಿಂದ ಕರೆಯುತ್ತಿದ್ದಾನೆಂದುಕೊಂಡು ದೀಪಾಳೊಡನೆ ಮತ್ತೆ ಮನೆಯೊಳಕ್ಕೆ ಬಂದಳು. ಅವಳಿಗರಿವಿಲ್ಲದೆಯೇ ಅವಳ ಕಣ್ಣುಗಳು ಗೋಡೆಯ ಮೇಲಿನ ಭಾವಚಿತ್ರಗಳ ಮೇಲೆ ದೃಷ್ಟಿಯನ್ನು ಬೀರಿದವು. ಒಂದು ಘಳಿಗೆ ಅಷ್ಟೇ... ಫೋಟೋದ ಫ್ರೇಂ ನೊಳಗಿಂದ ಆ ವ್ಯಕ್ತಿ ತನ್ನನ್ನೇ ನೋಡುತ್ತಿದ್ದಾರೆಂದೆನಿಸಿ ದೃಷ್ಟಿಯನ್ನು ಕೆಳಕ್ಕೆ ಮಾಡಿ ದಳು. ಈ ಮನೆಯಲ್ಲಿ ಏನೋ ವಿಶೇಷವೋ, ವಿಚಿತ್ರವೋ ಇದೆ. ತನಗೆ ಏನೋ ಗೊಂದಲ, ಕಸಿವಿಸಿ ಉಂಟಾಗುತ್ತೆ. ಅದೇನೆಂದು ಅರ್ಥವಾಗುವುದಿಲ್ಲ. ದೀಪಾ ಆರಾಮವಾಗಿದ್ದಾಳಲ್ಲ. ಅವಳಿಗೆ ಈ ಅನುಭವ ಉಂಟಾಗುವುದಿಲ್ಲ. ನನಗೆ ಮಾತ್ರ

ಯಾಕೆ ಹೀಗಾಗುತ್ತೆ? ಯಾರನ್ನು ಕೇಳುವುದು, ಏನೆಂದು ಹೇಳುವುದು....? ಹೋಗಲಿ, ನಾನೇನೂ ಈ ಮನೆಯ ಸೊಸೆಯಾಗಿ ಬರುತ್ತಿಲ್ಲವಲ್ಲ. ಹಾಗೆಂದುಕೆ ೂಂಡರೂ, ಭಾವಚಿತ್ರಗಳ ಕಡೆ ಮತ್ತೆ ನೋಡಬೇಕೆಂದೆನಿಸುತ್ತಿತ್ತು.... ನೋಡಿದರೆ, ಏನೋ ರಹಸ್ಯ ಅಡಗಿದೆ ಎಂದೆನಿಸುತ್ತಿತ್ತು.... ಮನಸ್ಸು ಕಲಸು ಮೇಲೋಗರವಾಗುತ್ತಿತ್ತು. ಮಹೇಶ ಅವಳನ್ನೇ ಗಮನಿಸುತ್ತಿದ್ದ. ಅವಳ ಮುಖದ ಬಣ್ಣ ಬದಲಾದುದು, ಅವಳು ಏನೋ ಗೊಂದಲದಲ್ಲಿದ್ದಾಳೆಂದು ಅರಿವಾಗಿತ್ತು. ಆದರೆ ಕೇಳುವುದು ಹೇಗೆ?

ತಾಯಿ ಕೊಟ್ಟ ಎಲೆ, ಅಡಿಕೆ, ಹಣ್ಣುಗಳನ್ನು ತೆಗೆದುಕೊಳ್ಳುವಾಗ ಅವಳ ಕೈಗಳು ನಡುಗುತ್ತಿವೆಯೆಂದೆನಿಸಿತ್ತು. ಸರ್ರನೆ ಯಾರಿಗೂ ಹೇಳದೇ ಹೊರಬಾಗಿಲಿಗೆ ಬಂದು ನಿಂತಳು. ಏನಾದರೂ ಭಯವಿರಬಹುದೇ, ಹೊರ ನೋಟಕ್ಕೆ ಗೊತ್ತಾಗದ ಆತಂಕವಿರಬಹುದೇ? ಮನೆಯಿಂದ ಹೊರಗಿರುವಾಗ, ಸರಿಯಾಗಿ ಎಲ್ಲರಂತೆ ಇರುತ್ತಾಳೆ. ಇಲ್ಲಿ ಒಳಗೆ ಮಾತ್ರ ಏನೋ ಗೊಂದಲದಿಂದ ಚಡಪಡಿಸುತ್ತಾಳೆ. ಏನಿರಬಹುದು? ಏನಿರಲು ಸಾಧ್ಯ?" ತಲೆ ಕೆಡಿಸಿಕೊಂಡು ಯೋಚಿಸಿದರೂ ತಿಳಿಯಲಿಲ್ಲ.

ದೀಪಾ, ದಿನೇಶ ಕಣ್ಣುಗಳಲ್ಲೇ ಮಾತನಾಡಿಕೊಂಡರು. ಮಹೇಶ ಸುಜಯಳ ಜೊತೆಜೊತೆಯಲ್ಲೇ ಕಾರಿನ ತನಕ ಬಂದ. ಎಲ್ಲರೂ ಕಾರನ್ನೇರಿದರು, ಕಾರು ಹೊರಟಿತು. ಮುಂಬಾಗಿಲಿಗೆ ಬಂದಾಗ ವನಜಮ್ಮ ಕೇಳಿದಳು.

"ಶಾಸ್ತ್ರಿಗಳ ಮನೆಗೆ ಹೋಗ್ಬೇಕು. ಸ್ವಲ್ಪ ಕರ್ಕೊಂಡು ಹೋಗ್ತೀಯೇನೋ ದಿನೂ?"

"ಇಲ್ಲಮ್ಮ, ನಂಗಾಗುಲ್ಲ. ಮಹೇಶನ ಜೊತೆ ಹೋಗು." ಅವನು ಕಾರಿನ ಕೀಯನ್ನು ಮಹೇಶನ ಕೈಗಿತ್ತ.

* * *

ಎರಡು ದಿನಗಳ ನಂತರ ಲಗ್ನಪತ್ರಿಕೆ ಶಾಸ್ತ್ರ ನೆರವೇರಿತು. ಮುಂದಿನ ಇಪ್ಪತ್ತೈದನೇ ದಿನಕ್ಕೆ ಮದುವೆ ಮುಹೂರ್ತವನ್ನೂ ಗೊತ್ತು ಮಾಡಿದ್ದರು. ಶಿವರಾಮಯ್ಯ ತಮ್ಮ ಅನುಕೂಲ, ಅಂತಸ್ತಿಗೆ ತಕ್ಕಂತೆ ಮದುವೆ ಮಾಡಿಕೊಡುವ ಉತ್ಸಾಹ, ಸಂಭ್ರಮಗಳನ್ನು ತೋರಿದರು. ಒಂದು ಒಳ್ಳೆಯ ಎಲ್ಲಾ ಅನುಕೂಲಗಳಿರುವ ಛತ್ರವನ್ನು ಪತ್ತೆ ಹಚ್ಚಿದರು. ಆಹ್ವಾನ ಪತ್ರಿಕೆಗಳನ್ನು ಪ್ರಿಂಟ್ ಹಾಕಿಸಿ, ಕೊಡುವವರಿಗೆಲ್ಲಾ ಕೊಟ್ಟು ಆಹ್ವಾನಿಸಿದ್ದೂ ಆಗಿತ್ತು.

ರಂಗನಾಥರಾಯರು ಹಾಗೂ ಪ್ರಭಾವತಿ ಮಾತ್ರ ಸ್ವಲ್ಪ ಪೆಚ್ಚಾಗಿದ್ದರು. ಸುಜಯ ಒಪ್ಪಿ ಕೊಂಡಿದ್ದರೆ, ಈ ದಿನ, ಈ ಉತ್ಸಾಹ, ಸಂಭ್ರಮಗಳು ತಮ್ಮದಾಗಿರುತ್ತಿತ್ತು: ದಿನೇಶ ತಮ್ಮ ಅಳಿಯನಾಗಿರುತ್ತಿದ್ದ ಎಂದು ಎನಿಸಿತ್ತು. ಆದರೆ ಸುಜಯ ಯಾವ ಬೇಸರವೂ ಇಲ್ಲದೇ ಓಡಾಡಿಕೊಂಡಿರುವುದನ್ನು ಕಂಡು ತಮ್ಮ ಆಲೋಚನೆಗೆ

ಅರ್ಥವಿಲ್ಲ ಎಂದೆನಿಸುತ್ತಿತ್ತು. ಇವಳು ಅವನ ಪತ್ನಿಯಾಗುವ ಯೋಗವಿಲ್ಲ. ಇದೇ ವಿಧಿ ನಿಯಮವೇನೋ, ದೀಪಾ ಕೂಡಾ ನಮ್ಮ ಮನೆ ಹುಡುಗಿಯೇ. ಅವಳ ವೈವಾಹಿಕ ಜೀವನ ಸುಖವಾಗಿರಲಿ ಎಂದು ಮನಸಾರೆ ತನ್ನಲ್ಲೇ ಹಾರೈಸಿದಳು. ಒಮ್ಮೊಮ್ಮೆ ದೀಪಾ ಬಂದು ಸುಜಯಳನ್ನು ಷಾಪಿಂಗ್‌ಗೆ ಎಳೆದೊಯ್ಯುತ್ತಿದ್ದಳು. ಆಗಾಗ್ಗೆ ದಿನೇಶನೊಡನೆ ಸುತ್ತಾಡಿ ಬರುತ್ತಿದ್ದ ದೀಪಾ, ಸುಜಯಳೊಡನೆ ಕೆಲವು ಹೊಸ ವಿಷಯಗಳನ್ನು ಹೇಳುತ್ತಿದ್ದಳು. ಸುಜಯ ಮುಗುಳ್ನಗುತ್ತಾ ಅವಳ ಮಾತುಗಳನ್ನು ಆಲಿಸುತ್ತಿದ್ದಳು.

"ದಿನೇಶ್, ದಿನಾ ರಾತ್ರಿ ಫೋನು ಮಾಡ್ತಾರೆ. ಎಷ್ಟೆಷ್ಟೋ ಹೊತ್ತು ಮಾತನಾಡ್ತೀವಿ ಗೊತ್ತಾ! ಸಮಯ ಹೋಗೋದೇ ತಿಳಿಯಲ್ಲ."

"ಮದುವೆಗೆ ಮುಂಚೆ ಅಷ್ಟೇನು ಮಾತಿರುತ್ತೆ?" ತಮಾಷೆ ಮಾಡುತ್ತಿದ್ದಳು.

"ನಿಂಗೂ ಮದುವೆ ಗೊತ್ತಾದಾಗ, ಇವೆಲ್ಲಾ ಎಷ್ಟು ಮಜ ಅಂತ ತಿಳಿಯುತ್ತೆ." ಹಾಗೆ ಹೇಳಿ ತಕ್ಷಣವೇ ತನ್ನ ನಾಲಿಗೆಯನ್ನು ಕಚ್ಚಿಕೊಂಡಳು. "ಸಾರಿ ಕಣೇ.... ನನ್ನ ಮಾತ್ನಿಂದ ಕೋಪ ಬಂತಾ?"

"ಕೋಪಾನಾ? ಕೋಪ ಯಾಕೆ?"

"ನನ್ನ ವುಡ್‌ಬೀ ದಿನೇಶನ್ನ ನಿನಗೆ ಪ್ರಪೋಸ್ ಮಾಡಿದ್ರಂತೆ.....ಅದಕ್ಕೇ."

"ಹೂಂ.... ಏನೀಗ? ನಾನೇ ಅವನನ್ನು ಒಪ್ಲಿಲ್ಲ. ಈಗ್ಯಾಕೆ ಆ ಮಾತು?"

"ಎಷ್ಟು ಕೂಲ್ ಆಗಿ ಹೇಳ್ತೀಯಲ್ಲೇ. ನಿಜ ಹೇಳು.... ದಿನೇಶನ್ನ ನಾನು ಮದ್ವೆ ಆಗ್ತಿದೀನಿ. ನಿಂಗೇನೂ ಬೇಸರ ಇಲ್ವಾ?"

"ಬೇಸರ ಯಾಕೆ? ನಾನು ಒಪ್ಪದೇ ಇದ್ದ ಮೇಲೆ, ಬೇಸರ ಕೋಪ ಏನೂ ಇಲ್ಲ. .... ತಿಳೀತಾ?" ಅವಳ ಗಲ್ಲ ಚಿವುಟಿದಳು.

"ಒಂದ್ಮಾತು ಕೇಳ್ಲಾ? ನೀನು ನಿಜ ಹೇಳ್ಬೇಕು"

"ಹುಂ ಕೇಳು."

"ದಿನೇಶನನ್ನ ಯಾಕೇ ಒಪ್ಲಿಲ್ಲ?"

"ನಿಂಗಿರ್ಲಿ ಅಂತ ಅನ್ನಿಸ್ತು. ನಿಂಗೆ ಬಿಟ್ಕೊಟ್ಟೆ." ಕಿಲಕಿಲ ನಕ್ಕಳು.

"ತಮಾಷೆ ಅಲ್ಲ ಸುಜೀ. ಸೀರಿಯಸ್ಸಾಗಿ ಕೇಳ್ತಿದೀನಿ. ದಿನೇಶ ಏನಾದ್ರೂ ಮಿಸ್ ಬಿಹೇವ್ ಮಾಡಿದ್ನಾ....? ಅಥವಾ ಈಸ್ ಎನಿಥಿಂಗ್ ರಾಂಗ್ ವಿತ್ ಹಿಮ್...." ಅಥವಾ ಅವರ ಮನೆಯವರ ಡಿಮ್ಯಾಂಡ್, ಕಂಡೀಷನ್ ಏನಾದ್ರೂ ಸರಿಯಿರಲಿಲ್ವಾ!"

"ಇಲ್ಲ, ಮಹರಾಯ್ತಿ. ಏನೂ ಇಲ್ಲ. ಇನ್ನು ಮುಂದೆ ಇಂಥ ಪ್ರಶ್ನೆಗಳನ್ನೆಲ್ಲ ಕೇಳ್ಬೇಡ. ದಿನೇಶ ಒಳ್ಳೆಯವನೇ ಇರಬಹುದು. ಇನ್ನು ಮುಂದೆ ಅವನು ನಿನ್ನ ಹಸ್ಬಂಡ್, ಅವನ ವಿಷಯಾನ ಇನ್ಮುಂದೆ ನನ್ನ ಹತ್ರ ಚರ್ಚಿಸಬ್ಬೇಡ. ಅದು ನಿಂಗೇ

ಒಳ್ಳೇದಲ್ಲ."

"ಆದ್ರೂ ನೀನು ಒಪ್ಪದೇ ಬಿಟ್ಟೋರನ್ನ ನಾನು ಒಪ್ಕೊಂಡಿದೀನಲ್ಲ ಅಂತ ನಂಗೂ ಅನ್ನಿಸ್ದೇ ಇರುತ್ತಾ?"

"ಇದನ್ನೆಲ್ಲ ಮುಂಚೇನೇ ಯೋಚಿಸ್ಬೇಕಾಗಿತ್ತು ದೀಪು."

"ನಂಗೆ ಗೊತ್ತಾದದ್ದೇ ಆಮೇಲೆ."

"ದಿನೇಶನೇ ಹೇಳಿದ್ನಾ?"

"ಛೇ ಅವರಲ್ಲ.....ಅತ್ತೆ ಅಮ್ಮನ ಕೈಲಿ ಹೇಳಿದ್ರಂತೆ. ಅಮ್ಮ ಹೇಳಿದ್ಲು."

"ಅಮ್ಮ ಹೇಳ್ಬಾರ್ದಾಗಿತ್ತು. ಅತ್ತೆ ನಿಂಗೆ ಹೇಳ್ಬಾರ್ದಾಗಿತ್ತು."

"ನಮ್ಮ ಕೈ ತಪ್ಪಿ ಹೋಯ್ತಲ್ಲಾ ಅಂತ ಅತ್ತೆಗೆ ಬೇಸರ ಇರ್ಬಹುದು ಅಲ್ವಾ?"

"ಬೇಸರವಾದ್ರೆ? ಅದನ್ನು ಹೇಳಿ ಬಿಡೋದಾ? ಈ ಅಮ್ಮಂಗೆ ವಿವೇಕವೇ ಇಲ್ಲ." ಸುಜಯ ಹಲ್ಲು ಕಡಿದು ನುಡಿದಾಗ, ದೀಪಾಳೇ ಸಮಾಧಾನ ಮಾಡಿದಳು.

"ಹೋಗ್ಲಿ ಬಿಡೇ, ಇದಕ್ಯಾಕೆ ಇಷ್ಟು ಅಪ್ಸೆಟ್ ಆಗ್ತೀಯ? ಲಗ್ನಪತ್ರಿಕೆಗೆ ತಪ್ಪಿಸ್ಕೊಂಡೆ ಮದ್ವೆಗೆ ಮಾತ್ರ ತಪ್ಪಿಸ್ಕೋ ಬೇಡಮ್ಮ. ನನಗೆ ಕ್ಲೋಸ್ ಅಂದ್ರೆ ನೀನೊಬ್ಳೇ... ಸುಮತೀಗೆ ಫೋನು ಮಾಡಿದ್ರಾ?"

"ಹುಂ ಅವಳಿಗೆ ಇಂಟರ್ನಲ್ಸ್ ಇಲ್ದೇ ಇದ್ರೆ ಬರಬಹುದು. ನಾನು ಮಾತ್ರ ಖಂಡಿತಾ ಬರ್ತೀನಿ. ಓಡಾಡ್ತೀನಿ."

"ಒಂದ್ವಾರ ರಜ ಹಾಕಿ ನನ್ಜೊತೆ ಇರ್ಬೇಕು ನೀನು. ಆಮೇಲೆ ನಾನು ನೀನು ಯಾವಾಗ ಭೇಟಿಯಾಗ್ತೀವೋ? ಮದ್ವೆ ಆಗ್ತಿದ್ದ ಹಾಗೇ ಡೆಲ್ಲಿಗೆ ಹೊರಟು ಹೋಗ್ತೀವಿ. ನಿಮ್ಮನ್ನೆಲ್ಲಾ ತುಂಬಾ ಮಿಸ್ ಮಾಡ್ಕೊಳ್ತೀನಿ ಕಣೇ...."

"ಡೆಲ್ಲಿ ಸ್ವಲ್ಪ ದೂರ ಅಂತ ಬೇಜಾರು ಮಾಡ್ಕೋಬೇಡ, ಜಾಲಿಯಾಗಿರು"

"ಅಲ್ವೇ ಸುಜೀ.... ನಂಗೆ ಈಗ್ಲೂ ಒಂದು ಅನುಮಾನ ಕಾಡ್ತಿದೆ. ಡೆಲ್ಲಿ ತುಂಬಾ ದೂರ ಅಂತ ನೀನು ಒಪ್ಪಲಿಲ್ವಾ ಹೇಗೆ?"

"ದೀಪೂ.... ಆಗ್ಲೇ ನಾನೇನ್ಹೇಳ್ದೇ? ಇನ್ನು ಮುಂದೆ ನೀನು ಈ ವಿಷಯಾನ ಮರೆತು ಬಿಡು. ನಾನು ಒಂದು ಇಂಟರ್‌ವ್ಯೂ ನಡೀತು ಅನ್ನೋದನ್ನೇ ಮರೆತು ಬಿಟ್ಟಿದೀನಿ. ನನಗೂ ಇದಕ್ಕೂ ಯಾವ ಸಂಬಂಧವಿಲ್ಲ."

"ಹಾಗಾದ್ರೆ ನಮ್ಮನೆಗೆ ಎಂದೂ ಬರುಲ್ವಾ?"

"ನೀನೇ ನಮ್ಮನೆಗೆ ಬಾ...."

"ನಿನ್ನ ಹಾಗೆ ನನಗೆ, ಮುಂದೆ ಸ್ವಾತಂತ್ರ್ಯ ಇರುತ್ತೋ ಇಲ್ವೋ?"

"ನೋಡೋಣ ಆ ಮಾತು ಈಗ್ಲಿಂದ ಯಾಕೆ? ಡೆಲ್ಲಿಗೆ ಹೋದ್ಮೇಲೆ ಕಾಗ್ದ ಬರಿ. ಫೋನು ಮಾಡು. ಅದಕ್ಕೆಲ್ಲಾ ಸ್ವಾತಂತ್ರ್ಯ ಇರುತ್ತೆ ಅಲ್ವಾ?"

ಇಬ್ಬರೂ ಮಾತನಾಡುತ್ತಾ ಷಾಪಿಂಗ್ ಮುಗಿಸಿ ಅವರವರ ಮನೆಯನ್ನು

ಸೇರಿದರು. ದೀಪ ಆಡ್ತಿದ್ದ ಮಾತುಗಳನ್ನೇ ಮೆಲುಕು ಹಾಕುತ್ತಿದ್ದ ಸುಜಯಳಿಗೆ ಮಹೇಶನ ನೆನಪಾಗಿತ್ತು. ಅವನ ಸ್ನೇಹಪರ ನಡವಳಿಕೆ ಇಷ್ಟವಾಗಿತ್ತು. ತನ್ನ ಮೇಲೆ ಅವನಿಗೆ ಆಸಕ್ತಿ ಇದೆ ಎಂದರಿವಾಗಿ ಮೈ ಪುಳಕಗೊಂಡಿತು. ಅವನೊಡನೆ ಮಾತನಾಡ ಬೇಕೆಂದುಕೊಂಡರೂ, ತಂದೆ ತಾಯಿಗೆ ತಿಳಿದರೆ ಏನಂದುಕೊಂಡಾರೆಂದು ಸುಮ್ಮನಾದಳು.

* * *

ಮದುವೆಯ ದಿನಗಳು ಹತ್ತಿರವಾಗುತ್ತಿದ್ದವು. ನೆಂಟರಿಷ್ಟರಿಗೆ, ಸ್ನೇಹಿತರಿಗೆ ಆಮಂತ್ರಣ ನೀಡಿಯಾಗಿತ್ತು. ಒಡವೆ, ಜವುಳಿಗಳನ್ನು ಖರೀದಿಸಿದ್ದಾಗಿತ್ತು. ವನಜಮ್ಮ ದೀಪಾ, ದಿನೇಶರೊಂದಿಗೆ ಜವುಳಿ ಅಂಗಡಿಗೆ ಹೋಗಿ ದೀಪಾಳಿಗೆ ಇಷ್ಟವಾದ ಬಣ್ಣದ ಸೀರೆಗಳನ್ನೇ ಕೊಡಿಸಿದ್ದಳು. ದೀಪಾ, ಉತ್ಸಾಹ, ನಾಚಿಕೆ, ಆತಂಕಗಳಿಂದ ಮದುವೆಯ ದಿನಕ್ಕಾಗಿ ಕಾಯುತ್ತಿದ್ದಳು. ಅವಳ ಸಂಭ್ರಮವನ್ನು ಕಂಡು ಸುಜಯಳಿಗೂ ಮದುವೆಯಾಗುವ ಬಯಕೆ ಹುಟ್ಟುತ್ತಿತ್ತು. ಆಗ ತಕ್ಷಣಕ್ಕೆ ನೆನಪಿಗೆ ಬರುತ್ತಿದ್ದವನು ಮಹೇಶನೇ. ಅವನು ದಿನೇಶನ ತಮ್ಮನಾಗಿಲ್ಲದೇ ಇದ್ದಿದ್ದರೇ.... ಅಂತಂದುಕೊಂಡು, ಅವನನ್ನು ಮನದಿಂದ ತೆಗೆದು ಹಾಕಲು ಪ್ರಯತ್ನಿಸುತ್ತಿದ್ದಳು. ಆದರೆ ಅದು ಸುಲಭವಾಗಿರಲಿಲ್ಲ.

ಶುಭದಿನದಂದು ನೆರೆದ ನೆಂಟರಿಷ್ಟರ ನಡುವೆ ದೀಪಾ, ದಿನೇಶ ಸತಿಪತಿ ಗಳಾದರು. ಹಿರಿಯರ ಆಶೀರ್ವಾದ, ಸ್ನೇಹಿತರ ಶುಭ ಹಾರೈಕೆಗಳಿಂದ ನವದಂಪತಿ ಗಳು ಪುಲಕಿತರಾಗಿದ್ದರು. ವನಜಮ್ಮ ಸಂತುಷ್ಟಳಾಗಿ ಬೀಗಿತ್ತಿಯ ಪಟ್ಟವನ್ನು ಅಲಂಕರಿಸಿದ್ದಳು. ಊಟ, ಉಪಚಾರ, ಉಡುಗೊರೆ, ಉರುಟಣೆ, ಉಯ್ಯಾಲೆ ಇತ್ಯಾದಿ ಕಾರ್ಯಕ್ರಮಗಳಿಂದ ಮದುವೆ ಮಂಟಪಕ್ಕೆ ವಿಶೇಷ ಕಳೆ ಬಂದಿತ್ತು. ಮಹೇಶ ಆಗಾಗ್ಗೆ ಸುಜಯಳನ್ನು ಸ್ವಲ್ಪ ಅತಿಶಯವಾಗಿಯೇ ನೋಡುತ್ತಿದ್ದ. ತಂಗಿ ಸುಮತಿಯೊಡನೆ, ನಗುನಗುತ್ತಾ ಮಾತನಾಡಿಕೊಂಡು, ದೀಪಳ ಸ್ನೇಹಿತೆಯರನ್ನು ಉಪಚರಿಸುತ್ತಿದ್ದ. ಅವಳಿಗೂ, ಮಹೇಶನ ದೃಷ್ಟಿ ತನ್ನ ಮೇಲೆ ಹರಿದಾಡುತ್ತಿದೆಯೆಂಬ ಅರಿವಿತ್ತು.

ಒಡಲು ತುಂಬಾ ಜರಿಯ ಹೂಗಳಿರುವ, ದಟ್ಟ ಹಸಿರು ಬಣ್ಣದ ಭಾರೀ ರೇಶ್ಮೆ ಸೀರೆಯನ್ನುಟ್ಟು, ಅದಕ್ಕೆ ಒಪ್ಪುವಂಥ, ಪಚ್ಚೆಯ ಒಡವೆಗಳನ್ನು ಧರಿಸಿ ಮದುಮಗಳ ಅಲಂಕಾರದಿಂದ ಶೋಭಿಸುತ್ತಾ ತನ್ನ ಮಗ್ಗುಲಲ್ಲಿ ಕುಳಿತಿರುವ ದೀಪಾಳನ್ನು ದಿನೇಶ ಕಣ್ಣುಗಳಲ್ಲಿ ತುಂಬಿಕೊಂಡಿದ್ದ. ಈ ಸಿಂಗಾರದ ಬಂಗಾರಿ, ನನ್ನವಳು ಎಂಬ ಅಭಿಮಾನ ಅವನ ಹೃದಯದಲ್ಲಿ ತುಂಬಿಕೊಂಡಿತ್ತು. ಲಜ್ಜೆ, ನಾಚಿಕೆಗಳಿಂದ ಉದ್ವೇಗಗೊಂಡು ಅವಳೂ ಆಗಾಗ್ಗೆ ದಿನೇಶನನ್ನು ಪ್ರೀತಿ ಮೆಚ್ಚುಗೆ ಯಿಂದ ನೋಡುತ್ತಿದ್ದಳು. ಈ ಜೋಡಿಯನ್ನು ಅನೇಕ ಜೋಡಿ ಕಣ್ಣುಗಳು ನೋಡಿ

ತಮ್ಮ ತಮ್ಮಲ್ಲೇ ಮಾತುಗಳನ್ನಾಡಿಕೊಳ್ಳುತ್ತಿದ್ದರು. ಪ್ರಭಾವತಿ ಅನೇಕ ಬಾರಿ ದೀಪಾಳ ಜಾಗದಲ್ಲಿ ಸುಜಯಳನ್ನು ಮನದಲ್ಲೇ ಕೂರಿಸುತ್ತಿದ್ದಳು. ಈಗ ಚಿಂತಿಸಿ ಫಲವಿಲ್ಲ. ಇವಳೇ ಕೈಯಾರ ಆ ಅವಕಾಶವನ್ನು ಕಳೆದುಕೊಂಡಳು, ಎಂದು ಮಗಳ ಮೇಲೆ ಕುಪಿತಗೊಳ್ಳುತ್ತಿದ್ದಳು. ಅವಳ ಮನದೊಳಗೆ ಏನು ನಡೆಯುತ್ತಿರ ಬಹುದು ಎಂದು ತಿಳಿದುಕೊಳ್ಳುವಂತೆ, ಆಗಾಗ್ಗೆ ಮಗಳ ಕಡೆ ನೋಡುತ್ತಿದ್ದಳು. "ಈ ಹುಡುಗಿಗೆ ಏನೂ ಅನಿಸುತ್ತಿಲ್ಲವೇ? ಇವನನ್ನು ಒಪ್ಪದೇ ಇರುವಂಥ ಕಾರಣಗಳು ಏನಿದ್ದವು? ಇದ್ದಕ್ಕಿದ್ದಂತೆ ಅವರ ಮನೆಗೆ ಹೋಗಿ ಬಂದ ಮೇಲೆ ತನಗೆ ಒಪ್ಪಿಗೆಯಿಲ್ಲ ಅಂತ ತಿಳಿಸಿಬಿಟ್ಟಳು. ಆದರೆ ಆ ವಿಷಾದದ ಛಾಯೆ ಮುಖದ ಮೇಲಾಗಲೆ, ವರ್ತನೆಯಲ್ಲಾಗಲೀ ಇಲ್ಲವೇ ಇಲ್ಲ.... ಕೇಳಿದರೆ ಸರಿಯಾದ ಕಾರಣವನ್ನು ತಿಳಿಸಲಿಲ್ಲ. ಮತ್ತೆ ಮತ್ತೆ ಕೇಳುವಂತಿಲ್ಲ. ಬಲವಂತ ಮಾಡುವಂತಿರಲಿಲ್ಲ. ವ್ಯಥೆಯಿಂದ ನಿಟ್ಟುಸಿರನ್ನು ಬಿಟ್ಟಳು.

ತಂಗಿಯ ಜೊತೆ ಜೊತೆಯಲ್ಲೇ ಓಡಾಡುತ್ತಿದ್ದ ಸುಜಯ, ಒಂಟಿಯಾಗಿ ಮಹೇಶನಿಗೆ ಸಿಗಲಿಲ್ಲ. ಅವನಿಗೆ ಸ್ವಲ್ಪ ಅಸಹನೆ ಉಂಟಾಗಿತ್ತು. ಅಕ್ಕ ತಂಗಿಯರಲ್ಲಿ ಬಹಳ ಅನ್ಯೋನ್ಯತೆ, ಪ್ರೀತಿ ಇರುವಂತಿದೆ. ಒಂದು ಗಳಿಗೆ ಅವಳಿಂದ ದೂರವಿಲ್ಲ ಎಂದುಕೊಂಡಾಗ, ತಂಗಿಯ ಮೇಲೆ ಅಸೂಯೆಯುಂಟಾಗಿತ್ತು. ಆದರೆ ಅವರಿಬ್ಬರ ನಡುವೆ ತಾನಾಗಿಯೇ ಹೋಗಿ ಅಗತ್ಯವಿಲ್ಲದೆ ಮಾತನಾಡಲು ಇಚ್ಛಿಸಲಿಲ್ಲ. ಸುಜಯ ಒಂಟಿಯಾಗಿ ಸಿಗುವಳೇನೋ ಎಂದು ಕಾದ. ಆದರೆ ಆ ಸುಯೋಗ ಸಿಗಲಿಲ್ಲ.

ಬಂದಿದ್ದ ಆಹ್ವಾನಿತರೆಲ್ಲಾ ಊಟ ಮಾಡಿ, ಫಲ ತಾಂಬೂಲವನ್ನು ಸ್ವೀಕರಿಸಿ, ನವ ದಂಪತಿಗಳಿಗೆ ಶುಭ ಕೋರಿ, ಉಡುಗೊರೆಗಳನ್ನಿತ್ತು ಹೊರಡಲಾರಂಭಿಸಿದ್ದರು. ದಿನೇಶ ದೀಪಾ ಅಕ್ಕಪಕ್ಕದಲ್ಲಿ ಊಟಕ್ಕೆ ಕುಳಿತು, ಪಿಸುದನಿಯಲ್ಲಿ, ರಸಮಯ ಮಾತುಗಳನ್ನಾಡಿಕೊಳ್ಳುತ್ತಾ ಇದ್ದರು. ಮಹೇಶ, ಸುಜಯಳನ್ನು ಅರಸುತ್ತಾ ಬಂದು ಅವಳು ಕುಳಿತಿದ್ದ ಟೇಬಲ್ಲಿನಲ್ಲಿ ತಾನೂ ಊಟಕ್ಕೆ ಕುಳಿತ. ಊಟದ ಹೊತ್ತು ಮೀರಿ ಹೋಗಿತ್ತು. ಎಲ್ಲರ ಹೊಟ್ಟೆಯೂ ಹಸಿದಿತ್ತು. ಹೆಚ್ಚು ಮಾತುಕತೆಗಳಿಲ್ಲದೇ ಎಲ್ಲರೂ ಊಟವನ್ನು ಮುಗಿಸಿದರು. ಆ ರಾತ್ರಿಯ ಆರತಕ್ಷತೆಯ ನಂತರ ಛತ್ರವನ್ನು ಖಾಲಿ ಮಾಡಬೇಕಾಗಿತ್ತು. ನವ ದಂಪತಿಗಳನ್ನು "ಹೋಟೆಲ್ ಹನಿಡ್ಯೂ" ಗೆ ಕರೆದೊಯ್ಯಲು ಕಾರು, ಹೂಗಳಿಂದ ಅಲಂಕೃತಗೊಂಡಿತ್ತು. ಮಹೇಶ ದಿನೇಶನ ಕೈ ಕುಲುಕಿ, ಶುಭ ರಾತ್ರಿಯನ್ನು ಕೋರಿದ. ದೀಪಾಳ ಕಡೆ ನೋಡಿ ಮುಗುಳ್ನಕ್ಕ. ಅವಳು ನಾಚಿದಳು. ತನ್ನ ಮದುವೆಯ ದಿನ, ತನ್ನ ನವವಧುವೂ ಹೀಗೇ ನಾಚಿಕೊಂಡು ಸಾಲಂಕೃತಳಾಗಿ, ನನ್ನೊಡನೆ ಮಧುಮಂಚಕ್ಕೆ ಬರುವ ಸಮಯದ ಕಲ್ಪನೆಯನ್ನು ಮಾಡಿಕೊಂಡು ತನ್ನಲ್ಲೇ ಮುಗುಳ್ನಕ್ಕ. ತನ್ನ ಪತ್ನಿಯ ಸ್ಥಾನದಲ್ಲಿ ಸುಜಯಳನ್ನು ನಿಲ್ಲಿಸಿಕೊಂಡ. ಅವನ ಕಣ್ಣುಗಳು ಸುಜಯಳನ್ನು ಅರಸಿದವು.

ಅವಳು ಎಲ್ಲಿಯೂ ಕಾಣಲಿಲ್ಲ. ಅವಳ ತಂಗಿಯೂ ಕಾಣಲಿಲ್ಲ. ನಿರಾಸೆ ಮನವನ್ನು ತುಂಬಿಕೊಂಡಿತು. ಎಲ್ಲಾ ರೀತಿಯಲ್ಲಿಯೂ ಸರಿಯಾಗಿದ್ದ ದಿನೇಶನನ್ನೇ ಸುಜಯ ಒಪ್ಪಲಿಲ್ಲ. ಇನ್ನು ರೂಪಿನಲ್ಲಿ ಸಾಧಾರಣನಾದ, ಅವನಷ್ಟು ಶ್ರೀಮಂತನಲ್ಲದ ತನ್ನನ್ನು ಸುಜಯ ಒಪ್ಪುವ ಛಾನ್ಸ್ ಕಡಿಮೆ ಅಂತಂದುಕೊಂಡಾಗ ಯಾಕೋ ಏನೋ ಆ ಆಲೋಚನೆ ಕಹಿಯಾಗಿ ಕಂಡಿತು. ತಲೆಯನ್ನು ಕೊಡವಿದ.

ನವ ದಂಪತಿಗಳನ್ನು ಕಳಿಸಿಕೊಟ್ಟ ನಂತರ ಛತ್ರದಲ್ಲಿ ಉಳಿದು ಕೊಂಡಿದದವರೆಲ್ಲ ಅವರವರ ಮನೆಗೆ ತೆರಳಿದರು. ವನಜಮ್ಮನನ್ನು, ಮಹೇಶನನ್ನು ಶಿವರಾಮಯ್ಯ ದಂಪತಿಗಳು ಹಾರ್ದಿಕವಾಗಿ ಬೀಳ್ಕೊಟ್ಟರು. ಓಡಾಟದಿಂದ ಆಯಾಸಗೊಂಡಿದ್ದ ವನಜಮ್ಮ ಹಾಯಾಗಿ ಮಲಗಿ ನಿದ್ರಿಸಿದಳು. ತಮ್ಮ ನಿರೀಕ್ಷೆಗಿಂತ ಅದ್ಧೂರಿಯಾಗಿ ಮಗನ ಮದುವೆ ನೆರವೇರಿದ್ದು ಸಂತೃಪ್ತಿಯನ್ನು ಕೊಟ್ಟಿತ್ತು. ಮಹೇಶನಿಗೆ ನಿದ್ದೆ ಬೇಗ ಹತ್ತಲಿಲ್ಲ. ಮದುವೆಯ ಗಡಿಬಿಡಿ, ಸಡಗರ, ಕಾರ್ಯಕಲಾಪಗಳು ನೆನಪಿಗೆ ಬಂದವು. ಅವುಗಳ ನಡುವೆ ಸುಜಯಳ ಚಿತ್ರ.... ತನ್ನ ಹಾಸಿಗೆಯ ತಲೆದಿಂಬಿನಡಿ ಇರಿಸಿಕೊಂಡಿದ್ದ ಸುಜಯಳ ಭಾವ ಚಿತ್ರವನ್ನು ಹೊರತೆಗೆದು ಮನಸಾರೆ ನೋಡಿದ. ಅವಳು ಹೇಗೆ ಅಲಂಕರಿಸಿ ಕೊಂಡಿದ್ದಳು? ಯಾವ ಬಣ್ಣದ ಸೀರೆಯನ್ನುಟ್ಟಿದ್ದಳು? ಹೇಗೆ ಕಾಣುತ್ತಿದ್ದಳು? ಎನ್ನುವುದನ್ನೇ ನೆನೆಸಿಕೊಳ್ಳುತ್ತಾ "ಐ ಲವ್ ಯೂ ಸುಜಯಾ" ಎಂದು ಹೇಳಿಕೊಂಡು ಕಣ್ಣುಗಳನ್ನು ಮುಚ್ಚಿ ಮಲಗಿದ.

"ಮಹೀ ಏಳೋ ಹೊತ್ತಾಯ್ತು. ಆಫೀಸ್ಗೆ ಹೋಗೋಲ್ವೇನೋ" ತಾಯಿ ಬಾಗಿಲ ಬಳಿ ನಿಂತು ಕರೆದಾಗ ಮಗ್ಗುಲು ಬದಲಾಯಿಸಿ ಗೊಣಗಿದ.

"ಇವತ್ತು ರಜ ಹಾಕ್ತೀನಮ್ಮ.... ಯಾಕೋ ತುಂಬಾ ಸುಸ್ತಾಗಿದೆ."

"ಸರಿ ಹಾಗೇ ಮಾಡು. ನಾನು ಹೋಗಿ ಹಾಲನ್ನು ತಂದ್ಬಿಡ್ತೀನಿ. ಅವನ್ಯಾಕೋ ಇನ್ನೂ ಬಂದಿಲ್ಲ.... ಮುಂಬಾಗಿಲ ಕಡೆ ಗಮನ ಇರಲಿ." ತಾಯಿ ಅತ್ತ ಹೊರಟ ಕೂಡಲೇ ಇತ್ತ ಫೋನ್ ಟ್ರಿನ್ ಗುಟ್ಟಿತು. ಬೇಸರಿಸಿಕೊಂಡು ಎದ್ದು ಬರುವಷ್ಟರಲ್ಲಿ ರಿಂಗ್ ಆಗುವುದು ನಿಂತು ಹೋಯ್ತು. ಯಾರೋ ಏನೋ ಅಂತಂದುಕೊಂಡು, ಮುಖ ತೊಳೆದುಕೊಂಡು ತಾಯಿಗಾಗಿ ಕಾಯುತ್ತಾ ಕುಳಿತ. ದಿನ ಪತ್ರಿಕೆಯನ್ನು ಕೈಯಲ್ಲಿ ಹಿಡಿದ. ಮನೆಯಲ್ಲಿ ದಿನೇಶನಿಲ್ಲದ್ದು ಎದ್ದು ಕಾಣುತ್ತಿತ್ತು. ನಮಗೆ ಈಗ ಇಲ್ಲಿ ಬಿಕೋ ಅನ್ನುತ್ತಿದೆ. ಅವನು ಅಲ್ಲಿ ಹೊಸ ಅನುಭವಗಳ ಸಂಗಮದಲ್ಲಿ ಮಧುರ ಕ್ಷಣಗಳನ್ನು ಕಳೆಯುತ್ತಿದ್ದಾನೆ ಅಂತಂದುಕೊಂಡಾಗ, ಇವನಲ್ಲೂ ಹೊಸ ಬಯಕೆಗಳು ಉದಿಸಿದವು. ತಾನು ಆದಷ್ಟು ಬೇಗ ಮದುವೆಯಾದರೆ ಚೆನ್ನ ಅಂತೆನ್ನಿಸಿತು. ಹೇಗೂ ದಿನೇಶ, ಡೆಲ್ಲಿಗೆ ಅತ್ತಿಗೆಯನ್ನು ಕರೆದೊಯ್ಯುತ್ತಾನೆ. ಇಲ್ಲಿ ಅಮ್ಮ ಒಂಟಿಯಾಗಿ ಬಿಡ್ತಾಳೆ. ನನ್ನ ಹೆಂಡತಿ ಈ ಮನೆಗೆ ಸೊಸೆಯಾಗಿ ಬಂದರೆ, ಅಮ್ಮಂಗೆ ಜೊತೆಯಾಗುತ್ತದೆ ಅಂತ ಯೋಚಿಸಿದ. ಅವನ ಹೆಂಡತಿಯಾಗಿ ಬೇರ್ಯಾರೂ

ಕಣ್ಮುಂದೆ ಸುಳಿಯಲಿಲ್ಲ. ಅವನ ಕಣ್ಣುಗಳಲ್ಲಿ ಹೃದಯದಲ್ಲಿ ಸುಜಯಳೇ ತುಂಬಿಕೊಂಡಿದ್ದಳು. ಸುಮಾರು ಒಂದು ತಿಂಗಳ ಹಿಂದೆ ಇವಳ ಪರಿಚಯವೇ ತನಗಿರಲಿಲ್ಲ. ಈಗ ಅವಳೇ ನನ್ನೊಳಗೆ ತುಂಬಿಕೊಂಡಿದ್ದಾಳೆ. ನನ್ನ ಮನದಲ್ಲಿ ಏನು ನಡೆಯುತ್ತಿದೆ ಅನ್ನೋ ಅರಿವು ಅವಳಿಗೆಯೇ ತಿಳಿದರೆ ಅವಳಿಗೇನನ್ನಿಸಬಹುದು? ಸುಜಯ ನನ್ನನ್ನು ಒಪ್ಪುವಳೇ? ನಾನು ಸುಂದರನಲ್ಲ. ಇಂಜನಿಯರಲ್ಲ. ದೊಡ್ಡ ಕಂಪೆನಿಯಲ್ಲಿ ಕೆಲಸದಲ್ಲಿಲ್ಲ. ಶ್ರೀಮಂತನಲ್ಲ.... ಈ ಆಲೋಚನೆ ಅವನಿಗೆ ಹಿಡಿಸಲಿಲ್ಲ. ನಾನು ಈ ಕೆಲಸವನ್ನು ಬಿಟ್ಟು ಬೇರೆ ಕೆಲಸಕ್ಕೆ ಸೇರಲು ಸಾಧ್ಯವಾಗದಿದ್ದರೇ? ನನ್ನ ಬ್ಯಾಂಕ್ ಬ್ಯಾಲೆನ್ಸ್ ಭಾರೀ ಆಗದಿದ್ದರೇ.... ಸುಜಯ ನನ್ನನ್ನು ಒಪ್ಪದಿದ್ದರೇ... ಪೇಪರ್ರನ್ನು ಅತ್ತ ಇಟ್ಟು ಎದ್ದು ಮುಂಬಾಗಿಲಿಗೆ ಬಂದು ನಿಂತ. ತಾಯಿ ಬಂದಳು.

"ಯಾಕೋ ಎದ್ಬಿಟ್ಯಾ?" ಕೇಳಿದಳು.

"ಹೂಂನಮ್ಮ. ಕಾಫಿ ಮಾಡಿದ್ರೆ ಕೊಡ್ತೀಯಾ?"

"ಹೂಂ ಕೊಡ್ತೀನಿ. ಏನು ತಿಂಡಿ ಮಾಡ್ಲಿ ಹೇಳು. ದಿನೂ ಮನೇಲಿ ಇಲ್ಲದ್ದು ಬಿಕೋ ಅಂತಿದೆ ಅಲ್ವಾ!" ಬೇಸರದಿಂದ ಕೇಳಿದಳು.

"ಹೌದಮ್ಮ. ಅವನು ಡೆಲ್ಲಿಗೆ ಹೊರಟು ಹೋದ್ರೆ ನಿಂಗೆ ಇನ್ನೂ ಬೇಸರ ಆಗುತ್ತೆ ಅಲ್ವೇನಮ್ಮಾ?"

"ಬೇಸರವೇನೋ ಆಗುತ್ತೆ ನಿಜ. ಆದರೆ ಡ್ಯೂಟಿ ಅಂತಾದ ಮೇಲೆ ಹೋಗ್ದೇ ಇರೋಕಾಗುತ್ತಾ? ಆರು ತಿಂಗಳು, ಹೇಗೋ ಕಳೆದು ಹೋಗುತ್ತೆ."

"ಒಂದು ವೇಳೆ ಅವನು ಅಲ್ಲೇ ಕೆಲ್ಸಾನ ಹುಡುಕ್ಕೊಂಡ್ರೇ?"

"ಥೂ, ಬಿಡ್ತು ಅನ್ನು. ಅವನಿಗೆ ಈ ಊರನ್ನು ಬಿಟ್ಟು ಬೇರೆ ಯಾವ ಊರೂ ಹಿಡಿಸೋಲ್ಲ. ಏನೋ ವಿಧಿ ಇಲ್ದೆ ಹೊರಟಿದಾನೆ." ವನಜಮ್ಮ ಅತಿಶಯದಿಂದ ಹೇಳಿಕೊಂಡಾಗ ಅವಳನ್ನೇ ಮಿಕಿ ಮಿಕಿ ನೋಡಿದ. ತನ್ನ ಮದುವೆಯ ಬಗ್ಗೆ ತಾನು ಈಗಲೇ ಮಾತನಾಡಲು ಸಂಕೋಚಗೊಂಡು ಸುಮ್ಮನಾದ.

* * *

ಮೂರು ರಾತ್ರಿ, ಎರಡು ದಿನಗಳನ್ನು ಹೋಟೆಲ್ ಹನಿಡ್ಯೂನಲ್ಲಿ ಕಳೆದು ನವದಂಪತಿಗಳು ಮನೆಗೆ ಹಿಂತಿರುಗಿದರು. ಆ ಸಮಯದಲ್ಲಿ ಮನೆಯಲ್ಲಿ ಬೇರೆ ಯಾವ ಹೆಂಗಸರೂ ಇಲ್ಲದುದರಿಂದ, ವನಜಮ್ಮ ಪಕ್ಕದ ಮನೆಯ ಹೆಂಗಸರನ್ನು ಕರೆದು ಮದುಮಕ್ಕಳಿಗೆ ಆರತಿಯನ್ನೆತ್ತಿ ಒಳಕ್ಕೆ ಬರಮಾಡಿಕೊಂಡಳು. ಸಾಂಪ್ರದಾಯಿಕವಾಗಿ, ದೀಪಾ, ಬಲಗಾಲನ್ನು ಮುಂದಿಟ್ಟು ಮನೆ ತುಂಬಿದಳು. ವನಜಮ್ಮ ಮಗ, ಸೊಸೆಯರನ್ನೇ ಮತ್ತೆ ಮತ್ತೆ ನೋಡಿದಳು. ದಿನೇಶ ಗಂಭೀರದಿಂದಿದ್ದ, ದೀಪಾ ಮಂಕಾಗಿದ್ದಳು. ವನಜಮ್ಮನ ಎದೆ ಸಣ್ಣಗೆ ನಡುಗಿತು. ಇದೇನಿದು! ನಗುನಗುತ್ತಾ ಉಲ್ಲಾಸದಿಂದಿರಬೇಕಾದ ಹೊಸ ಜೋಡಿಯಲ್ಲಿ ಇರಬೇಕಾದ ಭಾವನೆಗಳು ಇಲ್ಲ.

ಇವರಿಬ್ಬರ ಮಧ್ಯೆ ಏನಾದರೂ ಒಡಕು ಮೂಡಿರಬಹುದೇ? ಹೊಚ್ಚ ಹೊಸದರಲ್ಲೇ ಏನಾಗಿರಬಹುದು? ತಾನು ಆತುರ ಪಟ್ಟು ಮದುವೆ ಮಾಡಿದ್ದು ಸರಿಯಾಗಲಿಲ್ಲವೇ? ಏನಾಯ್ತು ಅಂತ ಕೇಳುವುದಾದರೂ ಹೇಗೆ? ಗಂಡ ಹೆಂಡಿರ ನಡುವೆ ಎಷ್ಟೋ ಸ್ವಂತ ವಿಷಯಗಳಿರುತ್ತವೆ, ಆದರೂ, ದಿನೇಶನ ಬಿಗುಮಾನ, ದೀಪಾಳ ಮೌನ ಅಸಹನೀಯ, ಏನೋ ಸರಿಯಿಲ್ಲ ಎಂದು ಸಾರಿತ್ತು. "ಇದೇನಪ್ಪಾ ದೇವ್ರೇ ಏನಾಯ್ತು? ಯಾವ ಹೊಸ ಸಮಸ್ಯೆಯೂ ಒದಗದಿರಲಿ." ಎಂದು ಮನೆದೇವರಲ್ಲಿ ಬೇಡಿಕೊಂಡಳು.

ಮಹೇಶನೂ, ದಿನೇಶನ ಮೌನವನ್ನು, ದೀಪಾಳ ಅಸಹನೆಯನ್ನು ಗಮನಿಸಿದ್ದ. .... ಹೊಸದರಲ್ಲೇ ಏನೋ ಮಿಸ್ ಅಂಡರ್ ಸ್ಟ್ಯಾಂಡಿಂಗ್.... ಅವರುಗಳೇ ಸರಿ ಮಾಡಿಕೊಳ್ಳುತ್ತಾರೆ. ನಂಗ್ಯಾಕೆ ಆ ಚಿಂತೆ ಎಂದುಕೊಂಡು ತನ್ನ ಪಾಡಿಗೆ ತಾನು ಆಫೀಸಿಗೆ ಹೊರಡಲು ಸಿದ್ಧನಾದ.

"ದಿನೂ, ಹುಶಾರಾಗಿದೀಯೇನೋ? ಯಾಕೋ ಮಂಕಾಗಿದೀಯಲ್ಲ." ವನಜಮ್ಮ ಕಳಕಳಿಯಿಂದ ಕೇಳಿದಳು.

"ಏನಿಲ್ಲಮ್ಮ. ಸರಿಯಾಗಿಯೇ ಇದ್ದೀನಿ."

"ದೀಪನ್ನ ಕರ್ಕೊಂಡು ನಿನ್ನ ಅತ್ತೆ ಮನೆಗೆ ಹೋಗ್ಬಾ. ಅವಳ್ಗೂ ಅಪ್ಪ ಅಮ್ಮನ್ನ ನೋಡ್ಬೇಕು, ಅವರ್ಹತ್ರ ಮಾತಾಡ್ಬೇಕು ಅಂತ ಅನ್ನಿಸಿರುತ್ತೆ."

"ಆಯ್ತಮ್ಮ." ಅವನು ಹೆಚ್ಚು ಮಾತಾಡದೆ ರೂಮಿಗೆ ಬಂದ. ಮುಖ ಊದಿಸಿಕೊಂಡು ಕುಳಿತಿದ್ದ ಹೆಂಡತಿಯ ಭುಜದ ಮೇಲೆ ಕೈ ಇಟ್ಟ.

"ನಿಮ್ಮ ತಂದೆ ಮನೆಗೆ ಹೋಗ್ಬರೋಣ, ರೆಡಿಯಾಗು. ಅವನು ಅಷ್ಟು ಹೇಳಿದ್ದೇ ಸಾಕು ಎಂಬಂತೆ ಸರಸರನೆ ಸಿದ್ಧಳಾದಳು. ಕೆಲವೇ ನಿಮಿಷಗಳಲ್ಲಿ ಹೊರ ಹೊರಟವರನ್ನು ಮಹೇಶ ಆಶ್ಚರ್ಯದಿಂದ ನೋಡಿ, ತಾಯಿಯ ಕಡೆ ನೋಡಿದ. ಅವಳ ಮುಖದಲ್ಲಿ ವ್ಯಸನ ತುಂಬಿದುದನ್ನು ಗಮನಿಸಿದ. ಈ ಅಮ್ಮಂಗ್ಯಾಕೆ ಏನೋ ಚಿಂತೆ ಎಂದುಕೊಳ್ಳುವಷ್ಟರಲ್ಲಿ ಫೋನು ರಿಂಗಾಯಿತು. ಎತ್ತಿಕೊಂಡ, ಅತ್ತಲಿಂದ ಸುಜಯ ಫೋನಿನಲ್ಲಿ ಮಾತಾಡಿದಳು. ಮಹೇಶ ಅವಳ ಧ್ವನಿಯನ್ನು ಗುರುತಿಸಿ ಉಲ್ಲಾಸಗೊಂಡ.

"ನಾನು, ಸುಜಯಾ.... ದೀಪಾಳ ಹತ್ರ ಮಾತಾಡ್ಬೇಕು."

"ಇಲ್ಲ, ಅವರಿಬ್ರೂ ಈಗ್ತಾನೇ ಅವರ ತಾಯಿಯ ಮನೆಗೆ ಹೊರಟ್ರು."

"ಹೌದಾ? ಹಾಗಾದ್ರೇ ನಾನು ಅಲ್ಲಿಗೇ ಹೋಗಿ ಮಾತಾಡ್ತೀನಿ." ಅವಳು ಲೈನ್ ಡಿಸ್ ಕನೆಕ್ಟ್ ಮಾಡಿದಾಗ ಅವನಿಗೆ ಸ್ವಲ್ಪ ನಿರಾಸೆಯಾಗಿತ್ತು. ಸಮೀಪದಲ್ಲಿ ತಾಯಿಯಿಲ್ಲದೇ ಇದ್ದಿದ್ದರೇ ತಾನೇ ಏನಾದ್ರೂ ಮಾತನಾಡಬಹುದಾಗಿತ್ತೆನಿಸಿ, ತಾಯಿಯ ಕಡೆ ಅಸಹನೆಯಿಂದ ನೋಡಿದ. ತಾಯಿಯ ಕುತೂಹಲವನ್ನು ಕಂಡು ತಾನೇ ನುಡಿದ.

"ಯಾರೋ ಅತ್ತಿಗೆಯ ಕಡೆಯವ್ರು..." ಉದಾಸೀನತೆಯಿಂದ ನುಡಿದ. ಹೊಸ್ದಾಗಿ ಮದುವೆ ಆದವರು, ಸುಜಯಳ ಕೈಗೆ ಸಿಗ್ತಾರಾ? ಏನು ಕುತೂಹಲವೋ. ದಿನೇಶ ಒಳ್ಳೆಯವನೋ, ಕೆಟ್ಟವನೋ... ಅಂತ ವಿಚಾರಿಸುಕ್ಕೆ ಮಾಡಿರಬಹುದು... ಈಗ ದಿನೇಶನ ಬಗ್ಗೆ ಯಾಕೆ ಆಸಕ್ತಿ! ತಾನಾಗಿಯೇ ಅವನನ್ನು ದೀಪಾಳಿಗೆ ಬಿಟ್ಟು ಕೊಟ್ಟಾಗಿದೆಯಲ್ಲ.... ಅಥವಾ ಈ ನೆಪದಲ್ಲಿ ನನ್ನೊಂದಿಗೇ ಮಾತನಾಡಲು ಫೋನು ಮಾಡಿರಬಹುದೇ! ಹಾಗಿದ್ದರೆ ಹೇಳಬಹುದಾಗಿತ್ತು. ನನಗೂ ಖುಷಿಯಾಗುತ್ತಿತ್ತು. ಅದೇನು ಹುಡುಗೀರೋ! ಅದ್ಯಾಕ್ಹಂಗಾಡ್ತಾರೋ.... ಮನಸ್ನಲ್ಲೊಂದು, ಮಾತ್ನ ಲ್ಲೊಂದು..... ಮತ್ತೆ ಮಾತಾಡಿದಾಗ ದಬಾಯಿಸ್ತೀನಿ" ಎಂದುಕೊಂಡು ತನ್ನೊಳಗೇ ನಕ್ಕ.

ಅವನನ್ನೇ ಗಮನಿಸುತ್ತಿದ್ದ ವನಜಮ್ಮ ತಕ್ಷಣವೇ ಕೇಳಿದಳು.

"ಯಾಕೋ, ನಿನಗೆ ನೀನೇ ನಕ್ಕೋತಾ ಇದ್ದೀಯ! ಏನು ವಿಷಯ?"

"ಏನೋ ನೆನಪಿಗೆ ಬಂತು. ನಗು ಬಂತು. ಮಧ್ಯಾಹ್ನ ಊಟಕ್ಕೆ ಬರ್ತೀನಿ. ಅಡಿಗೆ ಏನ್ಮಾಡ್ತೀಯ?"

"ಊಟಕ್ಕೆ ನಾವಿಬ್ರೇ.... ಅವರಿಬ್ರೂ ಅಲ್ಲೇ ಊಟ ಮಾಡ್ಕೊಂಡು ಬರ್ತಾರೆ. ರಾತ್ರಿಯ ಊಟಕ್ಕೆ ದಿನೂಗೆ ಏನು ಇಷ್ಟವೋ ಅದನ್ನು ಮಾಡ್ತೀನಿ. ಮಧ್ಯಾಹ್ನಕ್ಕೆ ಬರೀ ಅನ್ನ ತಿಳಿಸಾರು ಮಾಡ್ತೀನಿ."

"ಹಾಗಾದ್ರೆ, ನಾನು ಅಲ್ಲೇ ಯಾವ್ದಾದ್ರೂ ಹೋಟ್ಲಿಗೆ ಹೋಗ್ತೀನಿ." ಅವನು ತುಸು ಕೋಪದಿಂದ ಹೇಳಿದ.

"ಯಾಕೆ ಹಾಗೆ ಕೋಪಿಸ್ಕೋತೀಯ....? ಇನ್ನೂ ಕೆಲವೇ ದಿನ... ಆಮೇಲೆ ದಿನೂ ಡೆಲ್ಲಿಗೆ ಹೊರಟು ಹೋದ್ರೆ, ಅಲ್ಲಿ ಅವನ ಇಷ್ಟಾನ ಕೇಳೋಕೆ ನಾವು ಎಲ್ಲಿರ್ತೀವಿ?"

"ನಿಂಗೆ, ಯಾವಾಗ್ಲೂ ಅಷ್ಟೇ, ನಂಗಿಂತ ಅವನೇ ಹೆಚ್ಚು.... ನಾನೂ ನಿನ್ನ ಮಗನೇ ನೆನಪಿರಲಿ" ಹಗುರವಾಗಿ ದಬಾಯಿಸಿದ.

"ಹುಚ್ಚು ಹುಚ್ಚಾಗಿ ಮಾತಾಡ್ಬೇಡ. ನಂಗೆ ನೀವಿಬ್ರೂ ಒಂದೇ. ನಿಂಗೇನೂ ಕಡಿಮೆ ಮಾಡಿಲ್ಲ ನಾನು. ನಿಂಗೆ ಇಷ್ಟವಾದದ್ದನ್ನು ಮಾಡಿ ಹಾಕೇ ಇಲ್ವಾ ನಾನು?" ತಾಯಿಯೂ ಜೋರಾಗಿ ನುಡಿದಾಗ ಅವನು ಕರಗಿದ.

"ತಮಾಷೆ ಮಾಡ್ದೆ ಕಣಮ್ಮಾ.... ಏನು ಬೇಕಾದ್ರೂ ಮಾಡು. ಮಾಧ್ಯಾಹ್ನ ಊಟಕ್ಕೆ ಬರ್ತೀನಿ ಅಷ್ಟೇ" ಅವನು ಅತ್ತ ನಡೆದ. ಅವನು ತನಗೆ ಅನ್ನಿಸಿದ್ದನ್ನು ಹೇಳಿದಾನೆ. ತಮಾಷೆಯಂತೂ ಅಲ್ಲ.... ಅವಳಿಗೂ ಬೇಸರವಾಗಿತ್ತು.

* * *

ಮಗಳು ಅಳಿಯನನ್ನು ಆತ್ಮೀಯವಾಗಿ ಸ್ವಾಗತಿಸಿದರು. ಶಿವರಾಮಯ್ಯ ದಂಪತಿ

ಗಳು "ಏನೇ ದೀಪಾ ಖುಷಿಯಾಗಿದೇಯೇನೇ" ತಾಯಿ ಮಮತೆಯಿಂದ ಮಗಳ ಕೆನ್ನೆಯನ್ನು ಸವರಿದಳು. ದೀಪಾಳಿಗೆ ದುಃಖ ಉಮ್ಮಳಿಸಿಕೊಂಡು ಬಂತು. ತಾಯಿಯನ್ನು ತಬ್ಬಿಕೊಂಡು, ಒಳಗಿನ ರೂಮಿಗೆ ಹೋಗಿ ಮಂಚದ ಮೇಲೆ ಕುಳಿತು ಬಿಕ್ಕಿ ಬಿಕ್ಕಿ ಅತ್ತಳು. ಅಳುವಿನ ಧ್ವನಿಯನ್ನೂ ಕೇಳಿ, ತಾಯಿ, ಮಗಳನ್ನೇ ಆತಂಕದಿಂದ ಹಿಂಬಾಲಿಸಿದಳು. ಅವಳ ಹೃದಯ ನಡುಗಿತು. ಏನಾಯ್ತೆಂದು ಕೇಳಲು ನಾಲಿಗೆ ಹೊರಳಲಿಲ್ಲ. ಕೇವಲ ಮೂರು ದಿನಗಳ ಹಿಂದೆ ಅದ್ದೂರಿಯಾಗಿ ಮದುವೆ ಮಾಡಿಕೊಟ್ಟಿದ್ದೀವಿ. ಹೊಸದರಲ್ಲೇ ಇಬ್ಬರಲ್ಲೂ ಏನು ಒಡಕು ಮೂಡಿತೇ! ಮಗಳನ್ನು ಹೇಗೆ ಸಮಾಧಾನಗೊಳಿಸಬೇಕೆಂದು ತೋಚದೇ ಹಾಗೇ ನಿಂತಳು. ಹೊರಗೆ ಮಾವ, ಅಳಿಯ ವಿಶ್ವಾಸದಿಂದ ಮಾತನಾಡುತ್ತಿರುವುದು ಕೇಳಿಸಿತು. ದಿನೇಶನ ಬಗ್ಗೆ ಯಾವ ಸಂಶಯವೂ ಬರಲಿಲ್ಲ. ಮಗಳ ಮೇಲೆ ತುಸು ಕೋಪ ಹುಟ್ಟಿತು.

"ಹಾಯ್ ದೀಪೂ" ಎನ್ನುತ್ತಾ ಒಳ ಬಂದ ಸುಜಯ ದೀಪಾಳ ಅಳುಮುಖವನ್ನು ಕಂಡು ಪೆಚ್ಚಾದಳು. "ಏನೇ ಏನಾಯ್ತೇ? ಯಾಕೆ ಅಳ್ತಿದೀಯಾ?" ಎನ್ನುತ್ತಾ ಅತ್ತೆಯ ಕಡೆ ನೋಡಿದಳು. ಆಕೆ ತನಗೇನೂ ತಿಳಿಯದು ಎಂಬಂತೆ ತಲೆಯಾಡಿಸಿದಳು.

"ಓ.... ನೀನಾ? ಯಾವಾಗ್ಬಂದೆ?" ದೀಪಾ ಕಣ್ಣೀರನ್ನು ಒರೆಸಿಕೊಂಡು ಮುಗುಳ್ನಗಲು ಪ್ರಯತ್ನಿಸಿದಳು.

"ಈಗ್ಲೇ ಬರ್ತಾ ಇದೀನಿ. ನಿನ್ಹತ್ರ ಮಾತನಾಡೋಣ ಅಂತ ಬಂದೆ. ಅದ್ಸರಿ ಅಳುವಂಥಾದ್ದು ಏನಾಯ್ತು! ಅಪ್ಪ ಅಮ್ಮನ್ನ ಬಿಟ್ಟು ಡೆಲ್ಲಿಗೆ ಹೋಗ್ಬೇಕಲ್ಲ ಅಂತ ದುಃಖ ಆಗ್ತಾ ಇದೆಯೇನೇ? ಅಬ್ ದಿಲ್ಲಿ ದೂರ್ ನಹೀ ಹೈ.....ಒಂದು ಟೇಕ್ ಆಫ್.... ಒಂದು ಲ್ಯಾಂಡಿಂಗ್ ಅಷ್ಟೇ.... ಹುಡ್ಗೀರು ಅಮೆರಿಕಾಕ್ಕೆ ಮನೆಯವರ್ನೆಲ್ಲಾ ಬಿಟ್ಟು ಹಾರಿ ಹೋಗ್ತಾರೆ. ಅಂಥಾದ್ರಲ್ಲಿ ನೀನು...."

"ಇಲ್ಲಾ ಸುಜೀ..... ನಾನು ಈಗ ಡೆಲ್ಲಿಗೆ ಹೋಗ್ತಿಲ್ಲ....." ಗಂಟಲುಬ್ಬಿ ಬಂದಿತ್ತು.

"ಆಂ! ಏನಂದೆ? ಡೆಲ್ಲಿಗೆ ಹೋಗ್ತಿಲ್ವಾ? ಯಾಕೆ ಇಷ್ಟು ಬೇಗ ಬೇಡ ಆದ್ನಾ ನಿನ್ಗಂಡ?"

"ಆ ಗಂಡನೇ ನನ್ನನ್ನು ಡೆಲ್ಲಿಗೆ ಕರ್‍ಕೊಂಡು ಹೋಗ್ತಿಲ್ಲ. ಅವರಿಗೇ ನಾನು ಬೇಡವಾಗಿರೋದು" ಬಿಕ್ಕಿದಳು ದೀಪಾ.

"ಯಾಕಂತೆ? ಮೂರೇ ದಿನಕ್ಕೆ ಹೆಂಡ್ತಿ ಮೇಲೆ ಬೇಸರ ಬಂತಂತಾ?"

"ಇಲ್ಲ ಅದು ಹಾಗಲ್ಲ. ಆರು ತಿಂಗಳು ನಾನು ಇಲ್ಲೇ ಇರಬೇಕಂತೆ. ಆಮೇಲೆ ಅವರೇ ವಾಪಸ್ಸು ಬಂದು ಬಿಡ್ತಾರಂತೆ."

"ಆರು ತಿಂಗಳು! ನೀನು ಇಲ್ಲಿ ನಿನ್ಗಂಡ ಅಲ್ಲಿ!! ಫನ್ನಿಯಾಗಿದೆ. ಅಮೆರಿಕಾಕ್ಕೆ ಹೋಗೋರು ಕೂಡಾ ಜತೇಲಿ ಕರ್‍ಕೊಂಡು ಹೋಗ್ತಾರೆ. ಹಾಗಿದ್ರೆ ಮದ್ವೆಗೇನು

ಅವಸರವಿತ್ತಂತೆ? ನೀನು ಹಠ ಮಾಡ್ಬೇಕಾಗಿತ್ತು. ನಾನು ಇಲ್ಲಿರೋಲ್ಲ ಅಂತ."

"ಹೇಗೇ ಹಠ ಮಾಡೋದು? ಅವರ ನೇಚರ್ ಎಂಥದು ಅಂತ ಸಹ ನನಗೆ ಸರಿಯಾಗಿ ತಿಳಿಯದು."

"ಹಾಗಾದ್ರೆ ಒಪ್ಕೊಂಡು ಬಿಟ್ಯಾ? ಪೆದ್ದಿ ಕಣೇ ನೀನು. ಹೊಸದ್ರಲ್ಲೇ ಹೀಗಾದ್ರೆ? ದಿನ ಬರ್ತಾ ಬರ್ತಾ ಏನಾಗುತ್ತೋ ಏನೋ?"

"ಮತ್ತೇನೇ ಮಾಡೋದು?"

"ಡೈವೋರ್ಸ್ ಕೊಡ್ತೀನಿ ಅಂತ ಹೆದರಿಸಬೇಕಾಗಿತ್ತು"

"ಡೈವೋರ್ಸ್?" ಅಪ್ಪ ಅಮ್ಮ ಏನಂದ್ಕೊಳ್ತಾರೆ? ಈ ಸಣ್ಣ ಕಾರಣಕ್ಕೆ ಡೈವೋರ್ಸ್ ಅಂತಂದ್ರೆ ಕೇಳ್ದೋರು ನಗಲ್ವಾ?" ಸುಜಯಳ ಮಾತು ಸರಿ ಅನಿಸಿರಲಿಲ್ಲ.

"ನಕ್ಕರೆ ನಗಲಿ. ಲೈಫು ನಮ್ಮದು. ನಮಗೆ ಅಧಿಕಾರ ಇಲ್ವಾ?"

"ಅಧಿಕಾರ ಇದೆ ಅಂತ ಹುಚ್ಚು ಹುಚ್ಚಾಗಿ ಬಿಹೇವ್ ಮಾಡೋಕ್ಕಾಗೋಲ್ಲ. ಅಲ್ಲದೇ ದಿನೇಶ್ ಏನೂ ಕೆಟ್ಟವರಲ್ಲ."

"ಕೆಟ್ಟವರಲ್ಲ ಅಂತ, ಅವರು ಹೇಳಿದಕ್ಕೆಲ್ಲಾ ತಲೆಯಾಡಿಸುಕ್ಕೆ ಆಗುತ್ತಾ ಕೋಲೇ ಬಸವನ ತರಹಾ"

"ಸ್ವಲ್ಪ ಮೆತ್ಗೆ ಮಾತಾಡೇ ಮಾರಾಯ್ತೀ. ದಿನೇಶಂಗೆ ಕೇಳ್ಸಿದ್ರೆ ಏನಂದ್ಕೊಂಡಾರು ಚಾಡಿ ಹೇಳ್ತಿದೀನಿ ಅಂತಂದುಕೊಳ್ಳಲ್ವಾ?"

"ನಾನು ಮಾತಾಡ್ಲಾ ಅವರ್ಹತ್ರ?"

"ನೀನು, ದಿನೇಶನ ಹತ್ರ ಮಾತಾಡ್ತೀಯ? ನೀನು ಒಪ್ದೇ ಇರೋರ್ಹತ್ರ, ನಂಬೋಕೇ ಆಗ್ತಿಲ್ಲ ನನ್ಕೈಲಿ ತಮಾಷೆ ಮಾಡ್ಬೇಡ."

"ಏನೋ ಹೆಲ್ಪ್ ಮಾಡೋಣ ಅಂತನ್ನಿಸ್ತು. ನಿಂಗಿಷ್ಟವಿಲ್ದಿದ್ರೆ ಬಿಡು."

"ಹಾಗಲ್ಲ ಕಣೇ.... ನಾನು ನಿನ್ಕೈಲಿ ಎಲ್ಲಾ ಹೇಳ್ಕೊಂಡು, ನಿನ್ಹತ್ರ ಹೇಳಿಸ್ತಿದೀನಿ ಅಂತ ಕೋಪ ಮಾಡ್ಕೊಂಡ್ರೇ? ಏನೂ ಬೇಡ ಬಿಡು."

"ನಿನ್ಗಂಡಂಗೆ ಕೋಪ ಬರ್ಬಾರ್ದು..... ನೀನು ಅವರಿಗೆ ಹೆದರ್ತೀಯ.... ಅಂತಾಯ್ತು. ಏನಾದ್ರೂ ಮಾಡ್ಕೋ ನಂಗೇನಂತೆ?"

"ಹೋಗ್ಲೀ ಬಿಡೇ. ನಾನೇ ಕನ್ವಿನ್ಸ್ ಮಾಡೋಕೆ ನೋಡ್ತೀನಿ. ಆಗ್ದೇ ಇದ್ರೆ ಸುಮ್ಮನಾಗ್ತೀನಿ."

"ಅಂದ್ರೇ? ಆರು ತಿಂಗಳು ಹೊಸ್ದಾಗಿ ಮದ್ವೆಯಾದ ಗಂಡನಿಂದ ದೂರ ಇರೋಕಾಗುತ್ತೇನೆ ನಿನ್ಕೈಲಿ?" ದೀಪಾಳ ಕೆನ್ನೆ ಚಿವುಟಿದಳು.

"ಹುಂ ಇರ್ತೀನಿ. ಊರ್ಮಿಳೆ ಹದಿನಾಲ್ಕು ವರ್ಷಗಳ ಕಾಲ ಲಕ್ಷ್ಮಣನನ್ನು ಬಿಟ್ಟು ಇರ್ಲಿಲ್ವಾ?"

"ಸೀತೆ, ಊರ್ಮಿಳೆಯರ ಕತೆಯೆಲ್ಲಾ ಈಗ ಬೇಡ. ಅವರುಗಳ ಹಾಗೆ ಪತಿವ್ರತೆ

ಯರಾಗುವುದೂ ಬೇಡ. ನಾವ್ಯಾಕೇ ಕಷ್ಟ ಪಡ್ಬೇಕು?" ದೀಪ ಉತ್ತರಿಸದೇ ಏನನ್ನೋ ಯೋಚಿಸಿದವಳಂತೆ ಕೇಳಿದಳು.

"ನಿಂಗೆ ಈ ವಿಷ್ಯ ಮುಂಚೇನೇ ಏನಾದ್ರೂ ಗೊತ್ತಿತ್ತಾ? ಐ ಮೀನ್ ದಿನೇಶ ಮದ್ವೆ ಆದ್ಮೇಲೆ ಹೆಂಡ್ತಿನ್ನ ಇಲ್ಲೆ ಬಿಟ್ಟು ಒಬ್ರೇ ಡೆಲ್ಲಿಗೆ ಹೋಗುವ ವಿಷಯ ತಿಳಿದಿತ್ತಾ ಅಂತ."

"ಇಲ್ಲಮ್ಮ.... ತಿಳಿದಿದ್ರೆ ನಿಂಗೆ ಹೇಳ್ದೆ ಇರ್ತಿದ್ನಾ?"

"ನಿಜ ಹೇಳು ಸುಜೀ, ದಿನೇಶ ಎಲ್ಲಾ ರೀತಿಯಿಂದ್ಲೂ ಹೈಕ್ಲಾಸ್ ಆಗಿದ್ರು ಆದ್ರೂ ನೀನು ಅವರನ್ನ ರಿಜೆಕ್ಟ್ ಮಾಡ್ದೆ. ನಂಗೇನೋ ಅನುಮಾನ ಬರ್ತಿದೆ."

"ನಿನ್ನ ಅನುಮಾನಕ್ಕೆ ತಲೆ ಬಾಲ ಯಾವುದೂ ಇಲ್ಲ. ನಾನು ಅವರನ್ನ ಯಾಕೆ ಒಪ್ಲಿಲ್ಲ ಅಂತ ನಂಗೇ ಗೊತ್ತಿಲ್ಲ. ನಾನು ಒಪ್ಲಿಲ್ಲ ಅಂತ ಸಾಕಷ್ಟು ರಂಪ ರಾದ್ಧಾಂತ ಗಳಾದ್ವು. ಆದ್ರೆ ಈಗ ಒಳ್ಳೇದೇ ಆಯ್ತು ಅಂತ ಅನ್ನಿಸ್ತಿದೆ."

"ಒಂದ್ವೇಳೆ ನನ್ನ ಜಾಗ್ದಲ್ಲಿ ನೀನೇ ಇದ್ದಿದ್ರೆ ಏನ್ಮಾಡ್ತಿದ್ದೆ?"

"ಸೂಯಿಸೈಡ್ ಮಾಡ್ಕೋತೀನಿ ಅಂತ ಹೆದರ್ಸಿ ಒಪ್ಪಿಸ್ತಿದ್ದೆ. ಎಲ್ಲೋ ವಿಚಿತ್ರ ಜಾತಿ ಕಣೇ, ಈ ಚಂದಕ್ಕೆ ಅರ್ಜೆಂಟೇನಿತ್ತು ಮದ್ವೆಗೆ? ಆರು ತಿಂಗಳ ನಂತರವೇ ಮದ್ವೆ ಆಗಿದ್ದಿದ್ರೆ ಆಗ್ತಿರ್ಲಿಲ್ವಾ?"

"ಹೌದಲ್ವಾ! ಇದು ನನಗೆ ಗೊತ್ತಾಗ್ಲೇ ಇಲ್ಲ. ನಾನೀಗ್ಲೇ ಹೋಗಿ ಕೇಳ್ತೀನಿ."

"ಈ ಕಾದಾಟನ್ನೆಲ್ಲಾ ನಿನ್ನ ಬೆಡ್ ರೂಂನಲ್ಲಿಟ್ಕೋ. ಅತ್ತೆ ಮಾವಂಗೆ ತಿಳಿದ್ರೆ ನಿಂಗೇ ತಿಳುವಳ್ಕೆ ಹೇಳ್ತಾರೆ"

"ಹೌದು ಕಣೇ, ಯಾಕೋ ನನ್ನ ತಲೇನೇ ಓಡ್ತಿಲ್ಲ"

"ನಿನ್ನ ತಲೇನ, ತಲೆ ಒಳಗಿರೋ ಮೆದುಳನ್ನ ನಿನ್ನ ಗಂಡನ ಕೈಗೆ ಒಪ್ಪಿಸಿ ಬಿಟ್ಟಿದ್ದೀಯ. ಅದಕ್ಕೇ ಹೀಗೇ. ಏನ್ಮಾಡ್ತೀಯ?" ಸುಜಯ ನಗುತ್ತಾ ನುಡಿದಾಗ ದೀಪಾಳು ನಕ್ಕಳು. ಅವಳ ಹೃದಯ ಹಗುರವಾಗಿತ್ತು.

"ಬಾ ಅಡಿಗೆ ಮನೆಗೆ ಹೋಗಿ ಅತ್ತೆಗೆ ಸಹಾಯ ಮಾಡೋಣ"

"ನೀನು ಹೋಗು. ನಾನು ಅಪ್ಪನ್ನ ಮಾತ್ನಾಡ್ಸಿಕೊಂಡು ಬರ್ತೀನಿ." ಎಂದು ಹೇಳಿ ಎದ್ದು ಕನ್ನಡಿಯ ಮುಂದೆ ನಿಂತು ನುಡಿದಾಗ, ಸುಜಯ ಅವಳ ಬೆನ್ನು ಮೇಲೆ ಹಗುರವಾದ ಗುದ್ದು ಹಾಕಿದಳು.

* * *

"ಯಾಕೇ ಸುಜೀ, ದೀಪಾ ಅಳ್ತಿದ್ಲಲ್ಲ. ಏನಾಯ್ತು ಅಂತ ಹೇಳಿದ್ಲಾ? ಯಾಕೋ ಆತಂಕ ಆಗುತ್ತೆ ಕಣೇ ಅಮ್ಮ" ಶಕುಂತಲ ಆತಂಕವನ್ನು ವ್ಯಕ್ತಪಡಿಸಿದಳು.

"ಏನೂ ಇಲ್ಲ ಅತ್ತೆ. ನಮ್ಮನ್ನೆಲ್ಲ ಬಿಟ್ಟು ಹೋಗ್ತಿದಾಳಲ್ಲ ಅದೇ ಬೇಜಾರು ಅಷ್ಟೇ. ನಾನು ಹೊರಟು ಹೋದ್ರೆ, ಅಮ್ಮ, ಡ್ಯಾಡಿ ಇಬ್ರೇ ಆಗ್ತಾರೆ. ದಿಲೀಪನೂ

ಮದುವೆಗೆ ಬರಲಿಲ್ಲ ಅಂತ ಬೇಸರ ಮಾಡ್ಕೊಂಡ್ಲು."

"ಈ ದಿಲೀಪನೂ ಅಷ್ಟೇ. ಒಂದು ದಿನದ ಮಟ್ಟಿಗಾದ್ರೂ ಬಂದು ಹೋಗ ಬಹುದಾಗಿತ್ತು. ಅರ್ಜೆಂಟ್ನಲ್ಲಿ ಮದ್ವೆ ಆದ್ರೆ ಹೀಗೆ ಮನೆ ಮನೆಯೋರೇ ಬರೋಕ್ಕೆ ಆಗೋದಿಲ್ಲ. ಈಗ ಎರಡು ತಿಂಗಳ ಹಿಂದೆ ಮದ್ವೆ ಸೆಟ್ಲ್ ಆಗಿದ್ದಾಗ ಹದಿನೈದು ದಿನಗಳ ರಜ ಹಾಕಿ ಬಂದಿದ್ದ. ಕಡೇ ಗಳಿಗೇಲಿ ಮದ್ವೆ ನಿಂತ್ಹೋಯ್ತು. ಎಷ್ಟೋ ಒದ್ದಾಡಿದ್ವಿ.... ಈ ವಿಷಯ ದೀಪಾಳ ಗಂಡನ ಮನೆಯವರಿಗೆ ತಿಳೀದು. ತಿಳಿದರೆ ಏನಂದುಕೊಳ್ತಾರೋ?"

"ಏನ್ಯಾಕೆ ಅಂದ್ಕೊಳ್ತಾರೆ? ಇದ್ರಲ್ಲಿ ದೀಪಾದೇನು ತಪ್ಪು?"

"ಆ ಹುಡ್ಗಾನೂ ಅಷ್ಟೇ. ಕಡೇ ಗಳಿಗೇಲಿ ತನ್ನ ಮದ್ವೆ ಆಗಿರುವ ವಿಷಯಾನ ತಿಳಿಸೋದಾ? ಅದೇನು ಜನರೋ?"

"ನೀವು ಪೋಲೀಸ್ ಕಂಪ್ಲೇಂಟ್ ಕೊಡ್ಬೇಕಾಗಿತ್ತು"

"ಆಗ ನಮಗೂ ತೋಂದ್ರೆ ಆಗ್ತಿತ್ತು. ಹಾಳಾಗಿ ಹೋಗಲಿ ಅಂತ ಸುಮ್ಮನಾದೆವು. ಸಧ್ಯ ಪುಣ್ಯಾತ್ಮ ಮದ್ವೆಗೆ ಮುಂಚೇನೇ ತಿಳಿಸಿ ಉಪಕಾರ ಮಾಡ್ದ. ಅಮೆರಿಕಾಕ್ಕೆ ಕರ್ಕೊಂಡು ಹೋದ್ಮೇಲೆ ತಿಳಿದಿದ್ರೆ ಏನೇನಾಗ್ತಿತ್ತೋ.... ನೆನೆಸ್ಕೊಂಡ್ರೇ ಭಯ ಆಗುತ್ತೆ" ನಿಟ್ಟುಸಿರಿಟ್ಟಳು.

"ಹೋಗ್ಲಿ ಬಿಡಿ ಅತ್ತೆ.... ಆದದ್ದೆಲ್ಲಾ ಒಳ್ಳೆಯದಕ್ಕೆ ಅಂತಾರೆ"

"ಅದು ಸರಿ. ಆದ್ರೆ ಈ ಹುಡುಗನ್ನ ನೀನು ಒಪ್ಪಿರ್ಲಿಲ್ಲ ಅಂತ ಪ್ರಭಾವತಿ ಹೇಳಿದ್ಲು ಮತ್ತೆ ನಮ್ಮ ದೀಪಾಗೇನಾದ್ರೂ ಮೋಸ ಆಯ್ತೇನೋ ಅಂತ ಭಯ ಆಗುತ್ತೆ. ಅಂದ್ಹಾಗೇ ನೀನು ಒಪ್ಪದೇ ಇದ್ದುದಕ್ಕೆ ಕಾರಣ ಏನು.... ?"

"ಕಾರಣ ಏನೂಂತ ನಂಗೇ ಗೊತ್ತಿಲ್ಲ ಅತ್ತೆ. ಆ ಕ್ಷಣದಲ್ಲಿ ನಾನು ಅವನ ಹೆಂಡ್ತಿಯಾಗೋದು ಬೇಡಾಂತ ಅನ್ನಿಸ್ತು.... ನಂಗೆ ಒಪ್ಗೆ ಇಲ್ಲಾ ಅಂತ ಹೇಳ್ದೆ ಅಷ್ಟೇ"

"ಅದನ್ನೇ ನಿಮ್ಮಪ್ಪ ಮನಸ್ಗೆ ಹಚ್ಕೊಂಡು ಕಾಯಿಲೆ ಬಿದ್ದರು. ನೀನು ಮಾಡಿದ್ದು ತಪ್ಪಲ್ವಾ ಸುಜೀ?" ಸುಜಯ ಪೆಚ್ಚಾದಳು. ತಲೆ ತಗ್ಗಿಸಿದಳು.

"ಹೋಗ್ಲಿ ಬಿಡು. ಮಾತು ಎಲ್ಲಿಂದೆಲ್ಲಿಗೋ ಹೋಯ್ತು. ಕಳೆದು ಹೋದ ವಿಷಯದ ಚರ್ಚೆಯಿಂದ ಏನು ಲಾಭ.... ? ಈ ಕಾಫೀನ ಎಲ್ರಿಗೂ ಕೊಟ್ಟು ಬಾ...."

"ನೀವೇ ಕೊಟ್ಬನ್ನಿ ಅತ್ತೆ. ನಾನು ಮನೆಗೆ ಹೊರಡ್ತೀನಿ"

"ಹಾಗಂದ್ರೆ ಹೇಗೆ? ಇಲ್ಲೇ ಊಟ ಮಾಡ್ಕೊಂಡು ಹೋಗೂವಂತೆ. ಯಾಕೆ ದಿನೇಶನ ಎದುರಿಗೆ ಓಡಾಡುಕ್ಕೆ ಸಂಕೋಚಾನಾ?"

"ಸಂಕೋಚ ಏನಿಲ್ಲ. ದೀಪನ್ನ ಕಂಡು ಮಾತಾಡ್ಸೋಣಾಂತ ಬಂದೆ. ಆ

ಕೆಲಸ ಆಯ್ತಲ್ಲ"

"ದೀಪಾ ಅಲ್ಲೇ ಕೂತ್ಲೋ ಏನೋ? ಇದುವರೆಗೂ ಮನೆ ಮಗಳಾಗಿದ್ಲು. ಈಗ ಪರರ ವಸ್ತು ನೀನಾದ್ರೂ ನಂಗೆ ಸ್ವಲ್ಪ ಅಡಿಗೆ ಕೆಲ್ಸಕ್ಕೆ ಸಹಾಯ ಮಾಡ್ತೀಯೇನೋ ಅಂತ ಅಂದ್ಕೊಂಡೆ" ಶಕುಂತಲ ಅನುಮಾನಿಸುತ್ತಾ ಹೇಳಿದಳು.

"ಸರಿ ಅತ್ತೆ. ನಿಮಗೆ ಹೆಲ್ಪ್ ಮಾಡ್ತೀನಿ. ಏನ್ಮಾಡ್ಬೇಕು ಹೇಳಿ...."

ಅಲ್ಲಿ ಹೆಚ್ಚಿಟ್ಟಿದ್ದ ಸೌತೇಕಾಯಿಯ ಬಿಲ್ಲೆಗಳನ್ನು ಬಾಯಿಗೆ ಹಾಕ್ಕೊಂಡಳು. ಶಕುಂತಲ ಮುಗುಳ್ನಕ್ಕು ಕಾಫಿಯ ಟ್ರೇ ಹಿಡಿದು ಹೊರ ನಡೆದಳು.

* * *

ಊಟಕ್ಕೆ ಕುಳಿತಿರುವಾಗ, ಅಲ್ಲೇ ಓಡಾಡುತ್ತಿದ್ದ ಸುಜಯಳನ್ನು ದಿನೇಶ ಕುತೂಹಲದಿಂದ ಒಂದೆರಡು ಬಾರಿ ನೋಡಿದ.... ಅವಳೇ ಎದುರಿಗೆ ಕಂಡವನನ್ನು "ಹಲೋ.... ಹೇಗಿದೀರಿ" ಎಂದು ಮಾತನಾಡಿಸಿದಳು. ಆ ದಿನ ತಮ್ಮ ಮನೆಗೆ ಬಂದಿದ್ದ ಸುಜಯ ಇವಳೇನಾ ಎಂದು ಅಚ್ಚರಿ ಪಡುವಂತಾಗಿತ್ತು. ಅವಳಿಗಿಂತ ಹೆಚ್ಚಾಗಿ ಅವನೇ ಮುಜುಗರಗೊಂಡಿದ್ದ.

ಊಟವಾದ ನಂತರ, ಒಂದು ಗಳಿಗೆ ಸುಧಾರಿಸಿಕೊಂಡು ದೀಪಾ, ದಿನೇಶ್ ಮನೆಗೆ ಹೊರಟರು. "ಬರ್ತೀಯೇನೇ ಸುಜೀ.... ನಿಮ್ಮ ಮನೆತನಕ ಡ್ರಾಪ್ ಕೊಡ್ತೀವಿ" ದೀಪಾ ಕೇಳಿದಳು.

"ಇಲ್ಲಮ್ಮಾ. ನಾನು ಅತ್ತೆ ಜೊತೆ ಇನ್ನೂ ಸ್ವಲ್ಪ ಹೊತ್ತು ಇದ್ದು ಹೊರಡ್ತೀನಿ"

"ಏನೇನೋ ಹೇಳಿ ಅಮ್ಮನ ಮನಸ್ಸನ್ನು ಕೆಡಿಸ್ಬೇಡ"

"ನಂಗೇನೂ ಅಷ್ಟೂ ಗೊತ್ತಾಗೊಲ್ವಾ?"

"ದೀಪಾ, ಅಳಿಯಂದ್ರು ಕಾಯ್ತಾ ಇದಾರೆ" ಶಿವರಾಮಯ್ಯ ಮೃದುವಾಗಿ ಮಗಳನ್ನು ಗದರಿದರು. ಬೈ ಬೈ ಹೇಳಿ ದೀಪಾ ಕಾರನ್ನೇರಿದಳು.

* * *

ಸ್ವಲ್ಪ ಹೊತ್ತು ಆಕೆಗೆ ಸಹಾಯ ಮಾಡಿ, ನಂತರ ಸುಜಯ ಹೊರಟಳು. ಅತ್ತೇ, ನಾನು ನನ್ನ ಫ್ರೆಂಡ್ ಒಬ್ಬರ ಮನೆಗೆ ಹೋಗ್ಬೇಕು. ಬರ್ತೀನಿ"

"ಅವರ ಜೊತೇಲೇ ಹೋಗಿದಿದ್ರೆ ಆರಾಮವಾಗಿ ಕಾರ್ನಲ್ಲಿ ಹೋಗ್ಬಹುದಾಗಿತ್ತು. ಈಗ ಬಿಸಿಲ್ನಲ್ಲಿ ಹೊರಟ್ಯಲ್ಲಾ ಹೇಗೆ ಹೋಗ್ತೀಯಾ! ಬಸ್ನಲ್ಲಾ?"

"ಬಸ್ಸೋ, ಆಟೋನೋ ಯಾವ್ದಾದ್ರೂ ಸರಿ. ಅವರಿಬ್ರ ಮಧ್ಯೆ ನಾನೇಕೆ ಅಂತ್ಲೇ ಹೋಗ್ಲಿಲ್ಲ"

"ಹೋಗ್ಲಿ ಬಿಡು. ಮುಜುಗರ ಆಗೇ ಆಗುತ್ತೆ " ಅತ್ತೆಗೆ ಮುಂದೆ ಮಾತನಾಡಲು ಅವಕಾಶ ಕೊಡದೇ ಚಪ್ಪಲಿ ಮೆಟ್ಟಿ ಹೊರಟೇ ಬಿಟ್ಟಳು. ಸಮೀಪದ ಟೆಲಿಫೋನ್ ಬೂತ್‌ಗೆ ಹೋಗಿ ಮಹೇಶನಿಗೆ ಫೋನ್ ಮಾಡಿದಳು.

"ನಾನು ಈಗ್ಲೇ ಅರ್ಜೆಂಟಾಗಿ ನಿಮ್ಮೊಡನೆ ಮಾತಾಡ್ಬೇಕು. ಬರ್ತೀರಾ?" ಮಹೇಶ ಗಾಬರಿಗೊಂಡ.

"ಏನಾಯ್ತು ಸುಜಯ? ಎನಿ ಸೀರಿಯಸ್ ಪ್ರಾಬ್ಲಮ್?"

"ಸೀರಿಯಸ್ ಏನಿಲ್ಲ, ಆದರೆ ಅರ್ಜೆಂಟ್ ವಿಷಯ. ಬರ್ತೀರೋ ಇಲ್ಲವೋ ಹೇಳಿ"

"ಓ.ಕೇ. ಮೇಡಮ್ ಬರ್ತೀನಿ. ಸ್ಕೂಲ್ನಲ್ಲಿದ್ದೀರಾ? ಅಥವಾ ಮನೇಲಿದ್ದೀರೋ ಎಲ್ಲಿಗೆ ಬರಲಿ?"

"ನಾನು ರಾಗಿಗುಡ್ಡದ ಆಂಜನೇಯನ ದೇವಸ್ಥಾನದ ಹತ್ರ ಇದೀನಿ"

"ಅಲ್ಲೇನು ಮಾಡ್ತಾ ಇದೀರಿ ಮೇಡಮ್......ಇಷ್ಟು ಹೊತ್ನಲ್ಲಿ?" ನಕ್ಕ.

"ನಗೋ ವಿಷಯ ಅಲ್ಲ. ನಿಮ್ಮಿಂದ ಒಂದು ಫೇವರ್ ಆಗ್ಬೇಕು...."

"ಸಾರಿ, ಸಾರಿ ಬರ್ತೀನಿ. ಆದ್ರೆ ಅಲ್ಲಿಗೆ ನಂಗೆ ಬರೋಕೆ ಹದಿನೈದು - ಇಪ್ಪತ್ತು ನಿಮಿಷಗಳಾದ್ರೂ ಬೇಕು. ನೀವೇ ನನ್ನ ಆಫೀಸಿನ ಬಳಿಗೆ ಬನ್ನಿ. ಅಥವಾ ಕಾವೇರಿ ಭವನದ ಬಸ್ ಸ್ಟಾಪ್ ಬಳಿಗೆ ಬನ್ನಿ. ನಾನು ಕಾಯ್ತಾ ಇರ್ತೀನಿ."

"ಅಷ್ಟು ದೂರ? ನಾನೀಗ ಬರೋಕ್ಕಾಗುಲ್ಲ"

"ಸರಿ. ಹಾಗಾದ್ರೆ ಜಯನಗರದ ನಾಲ್ಕನೇ ಬ್ಲಾಕಿನ ಷಾಪಿಂಗ್ ಕಾಂಪ್ಲೆಕ್ಸ್‌ಗೆ ಬನ್ನಿ. ನಾನೂ ಅಲ್ಲಿಗೇ ಬಂದ್ಬಿಡ್ತೀನಿ"

"ಸರಿ" ಎಂದು ಮಾತು ಮುಗಿಸಿ, ಒಂದು ಆಟೋ ಹಿಡಿದಳು. ಅಲ್ಲಿ ಬಸ್ ಸ್ಟ್ಯಾಂಡ್ ಬಳಿಯಲ್ಲಿ ಇಳಿದು ಅವನಿಗಾಗಿ ಕಾಯುತ್ತಾ ನಿಂತಳು. ಒಬ್ಬಳೇ ನಿಂತಿದ್ದವಳನ್ನು ಕೆಲವರು ವಿಚಿತ್ರವಾಗಿ ನೋಡಿಕೊಂಡು ಹೋಗುತ್ತಿದ್ದರು. ಕಡೆಗೂ ಮಹೇಶ ಎದುರಿಗೆ ಬಂದು ನಿಂತಾಗ ಅವಳಿಗೆ ಹಾಯೆನಿಸಿದರೂ ಅವನ ಮೇಲೆ ರೇಗಿದಳು.

"ಎಷ್ಟೊತ್ತಿನಿಂದ ನಿಂತಿದೀನಿ.... ಲೇಟು ಮಾಡಿದ್ರಿ"

"ಲೇಟೇನಿಲ್ಲ, ನೀವು ಎಲ್ಲಿದೀರಿ ಅಂತ ಹುಡುಕೋಕೆ ಸ್ವಲ್ಪ ಸಮಯ ಹಿಡೀತು. ಇಂಥ ಕಡೆ ಕಾಯ್ತಾ ಇರ್ತೀನಿ ಅಂತ ಹೇಳ್ಬೇಡ್ವಾ ನೀವು?"

"ನೀವು ಕೇಳಬೇಕಾಗಿತ್ತು" ಅವನ ಮೇಲೆ ತಪ್ಪನ್ನೂ ಹಾಕಲು ನೋಡಿದಳು.

"ಓ.ಕೇ. ನಾನು ಕೇಳ್ಲಿಲ್ಲ. ಈಗ ಹೇಳಿ ನನ್ನಿಂದೇನಾಗಬೇಕು? ನಿಮ್ಮ ತಂದೆ ಹುಶಾರಾಗಿದಾರೆ ತಾನೇ?" ಆತಂಕವನ್ನು ವ್ಯಕ್ತಪಡಿಸಿದ.

"ಹುಂ, ಹುಶಾರಾಗಿದಾರೆ. ಅವರದ್ದೇನೂ ಪ್ರಾಬ್ಲಂ ಇಲ್ಲ. ಪ್ರಾಬ್ಲಂ ಎಲ್ಲಾ ನಿಮ್ಮ ಬ್ರದರ್‌ದು"

"ನನ್ನ ಬ್ರದರ್ರು! ದಿನೇಶನಾ? ಅವನೇನ್ಮಾಡ್ದ? ನಿಮಗೆಲ್ಲಿ ಸಿಕ್ಕ?"

" ಎಲ್ಲಾ ಹೇಳ್ತೀನಿ. ಎಲ್ಲಾದ್ರೂ ಕೂತು ಮಾತನಾಡೋಣ"

"ಹಿಂಭಾಗದಲ್ಲಿ ಒಂದು ಐಸ್ ಕ್ರೀಂ ಪಾರ್ಲರ್ ಇದೆ. ಬನ್ನಿ ಅಲ್ಲಿಗೆ

ಹೋಗೋಣ. ಐಸ್ ಕ್ರೀಂ ತಿನ್ನುತ್ತಾ ಕೂಲ್ ಆಗಿ ಮಾತ್ನಾಡೋಣ" ಅವನು ನಕ್ಕರೂ ಅವಳು ನಗಲಿಲ್ಲ. ಇಬ್ಬರೂ ಅಲ್ಲಿಗೆ ಬಂದರು. ಮಹೇಶ ಎರಡು ದೊಡ್ಡ ಐಸ್ ಕ್ರೀಂ ಕಪ್‌ಗಳನ್ನು ತಂದು ಅವಳಿಗೊಂದನ್ನು ಕೊಟ್ಟು, ತಾನು ಒಂದನ್ನು ಹಿಡಿದು ಕುಳಿತ. ಕಣ್ಣುಗಳನ್ನು ಕಿರಿದು ಮಾಡಿ ಅವಳನ್ನು ನೋಡಿದ.

"ಹುಂ, ಈಗ ಹೇಳಿ, ಏನು ಪ್ರಾಬ್ಲಂ?"

"ನಿಮ್ಮ ಬ್ರದರ್ ಒಬ್ರೇ ಡೆಲ್ಲಿಗೆ ಹೋಗ್ತಾ ಇದಾರಂತೆ. ದೀಪನ್ನ ಇಲ್ಲಿ ಬಿಟ್ಟು..."

"ಹಾಗಂತ ನಿಮಗ್ಯಾರು ಹೇಳಿದ್ರು? ಅತ್ತಿಗೇನಾ?"

"ಹುಂ. ದೀಪಾ ಹೇಳಿದ್ಲು. ತುಂಬಾ ಅಪ್ಸೆಟ್ ಆಗಿದಾಳೆ. ಇದು ಸರೀನಾ ನೀವೇ ಹೇಳಿ"

"ಇದಕ್ಕೆ ನಾನೇನು ಹೇಳ್ಲಿ....? ನಾನೇನ್ಮಾಡೋಕಾಗುತ್ತೆ? ಅದು ಅವರವರ ಸ್ವಂತ ವಿಷಯ...."

"ಅಂದ್ರೆ, ನನಗ್ಯಾಕೆ ಅಂತ ಯೋಚಿಸ್ತಿದೀರಾ....? ಆದರೆ, ಇದು ತಮಾಷೆ ಅಂತ ಅನ್ನಿಸೋಲ್ವಾ ನಿಮಗೆ? ಮದ್ವೆಯಾದ ಒಂದು ವಾರಕ್ಕೆ ಹೆಂಡ್ತೀನ ತವರು ಮನೇಲಿ ಬಿಟ್ಟು, ಆರು ತಿಂಗಳು ಡೆಲ್ಲಿಯಲ್ಲಿ ತಾನು ಹಾಯಾಗಿರುವುದು ಇದು ನ್ಯಾಯಾನಾ? ಕಾರಣ ಏನೂಂತ ನಿಮಗೆ ಗೊತ್ತಿರಬಹುದು ಅಲ್ವಾ?"

"ಇಲ್ಲ, ನಂಗೆ ಈ ವಿಷಯಾನೇ ಗೊತ್ತಿಲ್ಲ. ಕಾರಣ ಹೇಗೆ ಗೊತ್ತಾಗುತ್ತೆ? ಸುಳ್ಳು ಹೇಳಿ ಆಶ್ಚರ್ಯವನ್ನು ವ್ಯಕ್ತ ಮಾಡಿದ.

"ಈಗ ವಿಷಯ ಏನೂಂತ ಗೊತ್ತಾಯ್ತಲ್ಲ. ಕಾರಣ ಏನೂಂತ ತಿಳಿದುಕೊಂಡು ನಿಮ್ಮ ಬ್ರದರ್‌ಗೆ ತಿಳುವಳಿಕೆ ಹೇಳಿ"

"ಚೆನ್ನಾಗಿದೆ. ಇದರಲ್ಲಿ ನಾನು ಹೇಗೆ ತಲೆ ಹಾಕ್ಲಿ? ಅವನು ನನ್ನ ಮಾತನ್ನು ಕೇಳ್ದೆ ಇದ್ರೆ... ನಿಂಗ್ಯಾಕೆ ಅಂತ ಅಂದ್ಬಿಟ್ರೆ?"

"ಹೌದು. ಇದು ನಂಗೂ, ನಿಮ್ಗೂ ಸಂಬಂಧಿಸದ ವಿಷಯ. ಆದ್ರೆ ದೀಪ ಹೀಗೇ ಅಂತ ತಿಳಿಸ್ದಾಗ, ವಿಚಿತ್ರ ಅಂತನ್ನಿಸ್ತು. ಒಂದ್ವೇಳೆ ನಾನೇ ದೀಪಳ ಸ್ಥಾನದಲ್ಲಿದ್ದು, ನಿಮಗೆ ವಿಷಯ ಗೊತ್ತಾದ್ರೆ ಏನ್ಮಾಡ್ತಿದ್ರೀ....?"

"ಏನೋ ನಂಗೊತ್ತಿಲ್ಲ. ಹಾಗಾಗ್ಲೇ ಇಲ್ಲವಲ್ಲ...."

"ನಿಮ್ಮದು ಹೆಲ್ಪಿಂಗ್ ನೇಚರ್ ಇರಬಹುದು ಅಂತ ಅನ್ನಿಸ್ತು. ಅದಕ್ಕೇ ಕೇಳ್ದೆ. ಅಷ್ಟೂ ಮಾಡೋಕಾಗುಲ್ವಾ ನಿಮಗೆ?"

"ಮಾತಾಡ್ಬಾರ್ದು ಅಂತೇನಿಲ್ಲ. ಆದರೆ ಒಂದು ಡೌಟು.... ನಿಮ್ಮ ಕಸಿನ್ಸ್ ಗೋಸ್ಕರ ನೀವ್ಯಾಕೆ ಇಷ್ಟು ಒದ್ದಾಡ್ತಿದೀರೋ ನಂಗೆ ತಿಳೀತಿಲ್ಲ." ಅವಳನ್ನೇ ನೇರವಾಗಿ ನೋಡಿಧ. ಅವಳು ಗಲಿಬಿಲಿಗೊಂಡಳು. ಅವನು ಮುಗುಳ್ನಕ್ಕ.

"ಹೋಗ್ಲಿ ಬಿಡಿ. ಅತ್ತಿಗೇನೇ ನೀವು ನನ್ಕೈಲಿ ಮಾತ್ನಾಡಿ ಸಂಧಾನ ಮಾಡಲಿ

ಅಂತ ಹೇಳಿರ್ಬೌದು ಅಲ್ವಾ?"

"ಇಲ್ಲ. ಅವಳೇನೂ ಕೇಳ್ಲಿಲ್ಲ. ಇನ್‌ಫ್ಯಾಕ್ಟ್ ಅವಳು ನಿಮ್ಮ ಬ್ರದರ್‌ನ ಮಾತ್ಗೆ ಒಪ್ಪಿಕೊಂಡಿದ್ದಾಳೆ. ನನಗೆ ನಿಮ್ಮ ಬ್ರದರ್ ಹತ್ರ ಸಲುಗೆ ಇಲ್ಲ. ಇಲ್ದಿದ್ರೆ ನಾನು ಅವರ್ಹತ್ರಾನೇ ನೇರವಾಗಿ ಮಾತಾಡ್ತಿದ್ನೋ ಏನೋ......"

"ಪರವಾಗಿಲ್ಲ ಬಿಡಿ. ನನ್ಹತ್ರ ಮಾತ್ನಾಡಿದ್ದು ಒಳ್ಳೇದೇ ಆಯ್ತು. ಇಷ್ಟು ಸ್ನೇಹ ಇದ್ಯಲ್ಲಾ ಇಲ್ದಿದ್ರೆ ನಿಮ್ಮ ಜೊತೆ ಕುಳಿತು ಐಸ್ ಕ್ರೀಂ ತಿನ್ನುವ ಅವಕಾಶ ಎಲ್ಲಿ ಸಿಗ್ತಿತ್ತು....? ಅರೇ! ನೀವು ಐಸ್ ಕ್ರೀಂನ ತಿಂದೇ ಇಲ್ಲ. ಎಲ್ಲಾ ಕರಗಿ ಹೋಯ್ತು. ನಾನು ಬೇರೆ ಕಪ್ ತಂದು ಕೊಡ್ತೀನಿ" ಏಳಲು ಹೊರಟವನನ್ನು ತಡೆದಳು.

"ಪರವಾಗಿಲ್ಲ ಕುಡಿದ್ರಾಯ್ತು" ಎನ್ನುತ್ತಾ ನೀರಾಗಿದ್ದ ಐಸ್ ಕ್ರೀಂನ್ನು ಕುಡಿದು, ಅವನ ಕಡೆ ನೋಡಿ ಮುಗುಳ್ನಕ್ಕಳು. ಅವನೂ ತನ್ನ ನಗೆಯನ್ನು ಸೇರಿಸಿದ. ಹೀಗೆ ನಕ್ಕರೆ ಎಷ್ಟು ಚೆನ್ನಾಗಿ ಕಾಣ್ತಾಳೆ.... ತನ್ನ ಬಳಿ ಇರುವ ಫೋಟೋದಲ್ಲಿರು ವಂತೆಯೇ ಕಾಣ್ತಿದಾಳೆ.... ಅವನ ಮೆಚ್ಚುಗೆಯ ನೋಟ, ಅವಳಲ್ಲಿ ಲಜ್ಜೆಯನ್ನು ತುಂಬಿತು. ಮುಖ ಕೆಂದಾವರೆಯಾಯ್ತು. ಕಿವಿಗಳು ಬಿಸಿಯಾದವು.

"ಹೊರಡೋಣ್ವಾ?" ಕೇಳುತ್ತಾ ಎದ್ದು ನಿಂತಳು.

"ಏನಾದ್ರೂ ಸ್ನ್ಯಾಕ್ಸ್ ತಗೋತೀರಾ? ಕಟ್ಲೆಟ್.... ಚಿಪ್ಸ್.... ಪಕೋಡಾ...."

"ಏನೂ ಬೇಡ. ಅತ್ತೆ ಮನೆಯ ಊಟ ಹೆವಿಯಾಗಿತ್ತು. ನೀವು ಬೇಕಾದ್ರೆ ತಿನ್ನಿ"

"ನಮ್ಮನೆ ಊಟ ಇವತ್ತು ಬಹಳ ಸಿಂಪಲ್ ಆಗಿತ್ತು. ರಾತ್ರಿಗೆ ಹೆವಿ ಊಟದ ತಯಾರಿ ನಡೀತಿದೆ. ನೀವೂ ಬನ್ನಿ..."

"ಇಂಪಾಸಿಬಲ್.... ನಾನು ನಿಮ್ಮ ಮನೆಗೆ ಬರುಲ್ಲ.... "

"ಯಾಕ್ರೀ ಹೀಗೆ ಒರಟಾಗಿ ಹೇಳ್ತೀರಿ. ಅದೂ ಮನೇನೇ. ಅಲ್ಲಿ ವಾಸ ಮಾಡ್ತಿರೋರೂ ಮನುಷ್ಯರೇ.... ! ದೀಪಾ ನಿಮ್ಮ ಕಸಿನ್.... ನಾನು ನಿಮ್ಮ ಸ್ನೇಹಿತ....."

"ಪ್ಲೀಸ್.... ನಂಗೆ ಬರೋಕೆ ಆಗುಲ್ಲ...."

"ಮತ್ತೆಂದಾದ್ರೂ ಬರ್ತೀರಾ?" ಆಸೆಯಿಂದ ಕೇಳಿದ.

"ಮತ್ಯಾಕೆ ಬಲವಂತ ಮಾಡ್ತಿದೀರ? ನಂಗೆ ನಿಮ್ಮ ಮನೆಗೆ ಬರೋಕೆ ಮನಸ್ಸಿಲ್ಲ...." ಎರಡು ಹೆಜ್ಜೆ ಮುಂದೆ ನಡೆದವಳ ಕೈ ಹಿಡಿದು ನಿಲ್ಲಿಸಿದ.

ಅವಳು ಕೈಯನ್ನು ಒರಟಾಗಿ ಬಿಡಿಸಿಕೊಂಡಳು.

"ಸಾರಿ.... ಹೋಗ್ಲಿ ಬಿಡಿ. ನಿಮ್ಮ ಮನೆತನಕ ನಿಮ್ಮನ್ನು ಬಿಡ್ತೀನಿ... ನಿಮಗೆ ಏನೂ ಅಭ್ಯಂತರವಿಲ್ಲದಿದ್ರೆ...."

"ಥ್ಯಾಂಕ್ಸ್.... ನಾನು ಬಸ್ನಲ್ಲಿ ಹೋಗ್ತೀನಿ"

"ಯಾಕ್ರೀ.... ನನ್ಜೊತೆ ನಿಮಗೆ ಭಯಾನಾ?"

"ಭಯ ಏನಿಲ್ಲ. ಭಯ ಇದ್ದಿದ್ರೆ ನಾನೇ ಕರೆದು ಮಾತಾಡ್ತಿದ್ನಾ...? ನಂಗೆ ಹೊತ್ತಾಗುತ್ತೆ. ನಾನು ಬರ್ತೀನಿ" ಎನ್ನುತ್ತಾ ಬಸ್ ಸ್ಟಾಪ್ ಕಡೆಗೆ ಹೆಜ್ಜೆ ಹಾಕಿದಳು. ಅವಳ ಬೆನ್ನನ್ನೇ ದಿಟ್ಟಿಸಿದ ಮಹೇಶ. ದೀಪಾಳಿಗೋಸ್ಕರ ಇವಳು ತನ್ನೊಡನೆ ಮಾತಾಡಿದ್ದು ವಿಚಿತ್ರವೆನಿಸಿತ್ತು. ಬಹುಶಃ ನನ್ನೊಡನೆ ಮಾತನಾಡಲು ಒಂದು ನೆಪ ಬೇಕಾಗಿತ್ತೇನೋ.... ಇಲ್ದಿದ್ರೆ ದೀಪಾ ಡೆಲ್ಲಿಗೆ ಹೋಗದಿದ್ರೆ ಇವಳಿಗೇನು ಕಷ್ಟ...? ಹಾಗೆಂದುಕೊಂಡಾಗ ಏನೋ ಒಂದು ರೀತಿಯ ರೋಮಾಂಚನ ವಾಯಿತು.... ಬಹುಶಃ ಇವಳಿಗೂ ತಾನು ಇಷ್ಟವಾಗಿರಬಹುದೆಂದುಕೊಂಡ...."ಐ ಲವ್ ಯೂ.... ಸುಜಯಾ...." ಎಂದು ತನ್ನಲ್ಲೇ ಹೇಳಿಕೊಂಡು, ಪಾರ್ಕಿಂಗ್ ಸ್ಥಳಕ್ಕೆ ನಡೆದ.

* * *

"ಏನೋ ಮಹೀ ಬೇಗ ಬಂದ್ಬಿಟ್ಟಿದ್ದೀಯಲ್ಲಾ?"

"ಹೂಂ ಹೊರಗೆ ಸ್ವಲ್ಪ ಕೆಲ್ಸ ಇತ್ತು. ಅದು ಮುಗಿದ ಕೂಡ್ಲೇ ಸೀದಾ ಮನೆಗೆ ಬಂದು ಬಿಟ್ಟೆ. ದಿನೇಶ, ಅತ್ತಿಗೆ ಇನ್ನು ಮನೆಗೆ ಬಂದಿಲ್ವಾ?"

"ಬಂದಿದ್ದಾರೆ. ಮಲಗಿದ್ದಾರೆ ಅಂತ ಕಾಣುತ್ತೆ"

"ಅಮ್ಮಾ, ಒಂದ್ಮಾತು ನಿನಗೆ ತಿಳಿಸ್ಲೇಬೇಕು. ದಿನೂ ಒಬ್ನೇ ಡೆಲ್ಲಿಗೆ ಹೋಗ್ತಿದಾನಂತೆ. ನಿಂಗೆ ಈ ವಿಷಯಾನ ಏನಾದ್ರೂ ತಿಳ್ಸಿದಾನಾ?"

"ಹೌದಾ! ನಂಗೇನೂ ಹೇಳಿಲ್ವಲ್ಲ. ನಿಂಗ್ಯಾರು ಹೇಳಿದ್ರು?"

"ಅವನೇ ಹೇಳಿದ ಹಾಗೆ ನೆನಪು. ಅತ್ತಿಗೇನ ಇಲ್ಲೇ ನಿನ್ನ ಜೊತೆಗೆ ಅಂತ ಬಿಟ್ಟು ಹೋಗ್ತಿದಾನಂತೆ"

"ತಮಾಷೆ ಮಾಡ್ಬೇಡ. ಹೀಗೆಲ್ಲಾದ್ರೂ ಉಂಟಾ? ಅಥವಾ ನಿನ್ಹತ್ರ ತಮಾಷೆಗೆ ಹಾಗೆ ಹೇಳಿರಬಹುದು"

"ತಮಾಷೆಯೋ, ನಿಜವೋ ನಂಗೊತ್ತಿಲ್ಲ.... ಅತ್ತಿಗೇನ ಜೊತೇಲಿ ಕರ್ಕೊಂಡು ಹೋಗ್ದೇ ಇದ್ಮೇಲೆ ಮದ್ವೆಗೇನು ಅರ್ಜೆಂಟಿತ್ತು. ಆರು ತಿಂಗಳು ಕಳೆದು ಬಂದ ನಂತರವೇ ಮದ್ವೆ ಆಗ್ಬೇಕಾಗಿತ್ತು. ಅತ್ತಿಗೇನ ಇಲ್ಲೇ ಬಿಟ್ಟು ಹೋದ್ರೆ ಅವ್ರಿಗೆ ಬೇಜಾರಾಗ್ದೇ ಇರುತ್ತಾ....? ನೀನೇ ಹೇಳು....

"ಅದ್ಸರಿ. ಮದ್ವೆ ಅಂತ ಆದ್ಮೇಲೆ, ಹೆಂಡ್ತೀನ ಜತೇಲಿ ಕರ್ಕೊಂಡು ಹೋಗ್ದೇ ಇದ್ರೆ ಬೇಸ್ರ, ಕೋಪ ಎಲ್ಲಾ ಸಹಜ. ಆದರೆ ಅದನ್ನೆಲ್ಲ ಅವರವರೇ ಸರಿ ಮಾಡ್ಕೋತಾರೆ ಬಿಡು. ಅವಳೇ ಅವಳ ಗಂಡನ್ನ ಕಾಡಿ, ಬೇಡಿ ಒಪ್ಪಿಸ್ತಾಳೆ. ನೋಡ್ತಿರು"

"ಒಪ್ಪಿಸ್ದೇ ಇದ್ರೆ...?"

"ನಾನು ಒಪ್ಪಿಸ್ತೀನಿ. ಅಲ್ಲಿ ಅವನ ಅಡುಗೆ, ಊಟಕ್ಕೆ ಅನುಕೂಲವಾಗಲಿ, ಅವನ ಬೇಸರ ಕಳೀಲಿ ಅಂತ ಮದ್ವೆ ಮಾಡಿದ್ರೆ.... ಅವಳನ್ನು ಇಲ್ಲಿ ಬಿಟ್ಟು ಹೋದ್ರೆ ಅವನನ್ನು ಹುಚ್ಚ ಅನ್ನೋಲ್ವಾ?"

"ನಂಗೀಗ ಸಮಾಧಾನ ಆಯ್ತು. ಇನ್ನು ಎಲ್ಲಾ ನಿಂಗೆ ಸೇರಿದ್ದು. ನಾನು ಟೂರ್‌ಗೆ ಹೋದ್ರೆ ನೀನು ಒಂಟಿಯಾಗಿ ಬಿಡ್ತೀಯ. ನಿನ್ನ ಜೊತೆಗೆ ಒಬ್ಬರಿರಲಿ ಅಂತ ಮದುವೆ ಆದ್ನಂತೆ"

"ನನ್ನ ಜೊತೆ ಸೊಸೇನ ಬಿಟ್ಟು ಹೋಗೋಕೆ ಅವನೊಬ್ಬನೇ ಯಾಕೆ ಮದುವೆ ಆಗ್ಬೇಕು? ನೀನೂ ಯಾಕಾಗಬಾರದು? ಇಬ್ಬಿಬ್ರು ಬೇಡ್ವೇ ನನ್ನ ಸೇವೆಗೆ?" ತಮಾಷೆ ಮಾಡಿದಳು.

"ನಾನು ನನ್ನ ಹೆಂಡ್ತೀನ ನನ್ನ ಜೊತೆ ಟೂರ್‌ಗೂ ಕರ್ಕೊಂಡು ಹೋಗ್ತೀನಿ. ನಿನ್ನ ಜೊತೆ ಬಿಟ್ಟು ಹೋದ್ರೆ ಅಲ್ಲಿ ನಾನು ಒಬ್ನೇ ಹೇಗಿರಲಿ?"

"ಹುಚ್ಚು ಮುಂಡೇದೆ.... ನೀನು ಅಂಥೋನೇ ಅಂತ ನನಗೊತ್ತು. ದಿನೇಶ ಶ್ರೀರಾಮಚಂದ್ರನಂಥೋನು. ನಂಗೆ ಕಷ್ಟ ಆಗುತ್ತೆ ಅಂತ ಹೀಗೆ ಹೇಳಿದಾನೆ. ನಾನು ಅಷ್ಟು ಸ್ವಾರ್ಥಿ ಅಲ್ಲ. ಚಿಕ್ಕೋರು ನೀವುಗಳು, ಸುಖವಾಗಿರೋದು ನಂಗೆ ಮುಖ್ಯ. ಹೊಸ್ದಾಗಿ ಮದ್ವೆ ಆಗಿ ಬಂದ ಹುಡುಗಿ ನೊಂದ್ಕೊಂಡು ತವರು ಮನೇಲಿದ್ರೆ ನಮಗೆ ಬರುವ ಭಾಗ್ಯವೇನು? ಅವನು ಏಳಲಿ, ನಾನು ಇವತ್ತೇ ಮಾತಾಡ್ತೀನಿ"

"ಅತ್ತಿಗೆ ಎದುರಿಗೆ ಈ ರಾದ್ಧಾಂತ ಬೇಡಮ್ಮ. ಅವನೊಬ್ಬನೇ ಇದ್ದಾಗ ಮಾತಾಡು"

"ಒಬ್ಬನೇ ಯಾವಾಗ ಸಿಗ್ತಾನೆ? ಅವಳನ್ನು ಎಲ್ಲಿಗೆ ಕಳಿಸ್ಲಿ....? ಅವಳ್ಗೂ ಗೊತ್ತಾಗ್ಲಿ ಬಿಡು"

"ಬೇಡಮ್ಮ. ಅತ್ತಿಗೆಗೆ ಈಗಾಗ್ಲೇ ಬೇಸರ ಆಗಿರುವ ಹಾಗಿದೆ. ಅವರ ಬೇಸರ ಇನ್ನೂ ಹೆಚ್ಚುತ್ತೆ ಅಷ್ಟೇ. ನಾಳೆ ದಿನ ಅತ್ತಿಗೇನ ನನ್ನ ಜೊತೆಗೆ ಹೊರಗೆಲ್ಲಾದ್ರೂ ಕರ್ಕೊಂಡ್ಹೋಗ್ತೀನಿ. ಆಗ ಮಾತಾಡು"

"ನಿನ್ನ ಜೊತೆ ಆ ಹುಡುಗಿ ಬರುತ್ತೇನೋ, ದಿನೇಶ ಕಳಿಸ್ತಾನಾ? ಅದೇನು ಚೆನ್ನ?"

"ಬರುವ ಹಾಗೆ ಏನಾದ್ರೂ ಪ್ಲಾನ್ ಮಾಡ್ತೀನಿ.... ಈಗ ತಿನ್ನೋಕೆ ಏನಾದ್ರೂ ಇದೆಯಾ? ಮಧ್ಯಾಹ್ನ ಊಟ ಮಾಡಿದ್ರೂ ಯಾಕೋ ಹೊಟ್ಟೆ ಹಸೀತಿದೆ. ರಾತ್ರಿಯ ನಿನ್ನ ಸ್ಪೆಷಲ್ ಅಡಿಗೆವರೆಗೂ ನನಗೆ ಕಾಯೋಕ್ಕಾಗಲ್ಲ"

"ಮದ್ವೆ ಮನೆಯ ತಿಂಡಿಗಳು, ಹಾಗೇ ಡಬ್ಬದಲ್ಲಿ ಕೂತಿವೆ. ಅದಕ್ಕೇ ಹೇಳೋದು ಮನೆ ತುಂಬಾ ಮಕ್ಕಳಿರಬೇಕು ಅಂತ."

"ಇನ್ನು ನಾಲ್ಕೈದು ವರ್ಷ ತಡಿ. ನಾಲ್ಕು ಮಕ್ಕಳಾದ್ರೂ ಹುಟ್ಟಿರುತ್ವೆ. ಆದ್ರೆ ಅಲ್ಲಿವರೆಗೂ ಈ ತಿಂಡಿಗಳು ಚೆನ್ನಾಗಿರುಲ್ವೇ....?" ನಕ್ಕ

"ಸಾಕು ನಿನ್ನ ತಲೆಹರಟೆ ಮಾತು.... ತಗೋ ಎನ್ನುತ್ತಾ ಕೆಲವು ತಿಂಡಿಗಳನ್ನು ತಟ್ಟೆಗೆ ಹಾಕಿ ಕೊಟ್ಟಳು. ಕುರು ಕುರು ಸದ್ದು ಮಾಡುತ್ತಾ, ಬಾಯಿ ಅಲುಗಾಡಿಸುತ್ತಾ

ಹೊರ ಬಂದ. ಸೋಫಾದ ಮೇಲೆ ಕುಳಿತಿದ್ದ ದಿನೇಶನನ್ನು ಕಂಡು ಬೆಚ್ಚಿದ. ಸಾವರಿಸಿಕೊಂಡು, "ನಿದ್ದೆ ಆಯ್ತಾ? ನಿಂಗೂ ತಿಂಡಿ ಬೇಕಾ?" ಕೇಳಿದ. ತಮ್ಮಿಬ್ಬರ ಮಾತನ್ನು ಕೇಳಿಸಿಕೊಂಡಿರಬಹುದೆಂಬ ಅನುಮಾನ ಕಾಡಿತ್ತು.

"ಏನ್ತಿಂಡಿ? ಅದೇ ಚಕ್ಕುಲಿ, ಅದೇ ಕೋಡುಬಳೆ. ನೋಡಿ ನೋಡಿ ಸಾಕಾಗಿದೆ. ನೀನೇ ತಿನ್ನು."

"ನಿಂಗೆ ಈಗ ತಿಂಡಿ ಗಿಂಡಿ ಎಲ್ಲಾ ಎಲ್ಲಿ ಸೇರುತ್ತೆ?" ಗೇಲಿ ಮಾಡಿದ.

"ಏನು? ನೀನೂ ತಮಾಷೆ ಮಾಡೋಕೆ ಶುರು ಮಾಡಿದೀಯಲ್ಲ"

"ಏನಿಲ್ಲ, ಮದುವೆ ಎಂಬ 'ಲಾಡು' ಸಿಕ್ಕಿರುವಾಗ, ಈ ತಿಂಡಿಗಳು ಹೇಗೆ ರುಚಿಸುತ್ವೆ ಅಂತಂದೆ...." ಎನ್ನುತ್ತಾ ತಿಂಡಿಯ ಕಡೆಗೆ ಗಮನವನ್ನು ಕೊಟ್ಟ.

"ಮಹೇಶ, ನಾನು ನಿನ್ಹತ್ರ ಸ್ವಲ್ಪ ಮಾತಾಡ್ಬೇಕಾಗಿತ್ತು. ಸ್ವಲ್ಪ ಹೊರಗೆ ಹೋಗಿ ಬರೋಣ ಬರ್ತೀಯಾ?"

"ಹುಂ ಬರ್ತೀನಿ. ಕಾಫಿ ಕುಡಿದಿಲ್ಲ ಇನ್ನೂ. ನಿಂಗೂ ಬೇಕಾ?"

"ಹುಂ ಬೇಕು. ಯಾಕೋ ಸಣ್ಣಗೆ ತಲೆ ನೋಯ್ತಿದೆ"

"ಎಲ್ಲೋ ಅತ್ತಿಗೆ ಚೆನ್ನಾಗಿ ತಲೆ ಕೊರೆದಿರಬೇಕು" ಅಂತ ತನ್ನಲ್ಲೇ ಹೇಳ್ಕೊಂಡು ನಗುತ್ತಾ ಅಡಿಗೆ ಮನೆಗೆ ಬಂದ. ಎರಡು ಕಪ್‌ಗಳಲ್ಲಿ ಕಾಫಿಯನ್ನು ತುಂಬಿಸಿಕೊಂಡು ತಂದಿತ್ತ.

"ಅತ್ತಿಗೇಗೂ ಕಾಫಿ ಬೇಕಾಗಿತ್ತೇನೋ ಕೇಳ್ತೀಯಾ?"

"ಅವಳು ನಿದ್ದೆ ಮಾಡ್ತಿದಾಳೆ. ಎದ್ಮೇಲೆ ಕುಡೀತಾಳೆ ಬಿಡು"

"ಹೀಗೆಲ್ಲಾ ಮಾತಾಡ್ತೀಯಲ್ಲ. ಅತ್ಗೇಗೆ ಕೋಪ ಬರದೇ ಇರುತ್ತಾ?"

"ಕೋಪ ಬಂದ್ರೇ? ತಾನೇ ಶಾಂತವಾಗುತ್ತೆ. ಅದ್ಯಾವ ಮಹಾ ದೊಡ್ಡ ವಿಷಯ?" ಕಾಫಿ ಕುಡಿದು ಇಬ್ಬರೂ ಸಿದ್ಧರಾಗಿ ಹೊರ ನಡೆದರು. ಕಾರನ್ನು ಓಡಿಸುತ್ತಾ ದಿನೇಶ ಮಾತನಾಡಿದ.

"ನಾನು ಈ ಭಾನುವಾರ ಡೆಲ್ಲಿಗೆ ಹೊರಟಿದೀನಿ. ವಾಪಸ್ಸು ಬರೋದು ಇನ್ನೂ ಆರು ತಿಂಗಳು ಕಳೆದ್ಮೇಲೇನೇ. ಅಲ್ಲಿಯವರೆಗೂ ಮನೆಯ ಎಲ್ಲಾ ಜವಾಬ್ದಾರಿ ನಿನ್ನದು. ನಿನ್ನ ಅಕೌಂಟ್‌ಗೆ ಒಂದು ಲಕ್ಷ ರೂಪಾಯಿ ಹಾಕಿದೀನಿ. ಅಮ್ಮಂಗೆ ಏನೂ ತೊಂದರೆಯಾಗದಂತೆ ನೋಡ್ಕೋ"

"ಮಧ್ಯೆ ಬರೋಕೇ ಆಗುಲ್ವಾ?"

"ಬರಬಹುದು, ಬಂದ್ರೂ ಮತ್ತೆ ಬೇಗ ವಾಪಸ್ಸು ಹೋಗಬೇಕಾಗುತ್ತೆ. ನೀನು ಟೂರ್ ಹೋಗುವ ದಿನಗಳಲ್ಲಿ ಅಮ್ಮನ್ನ ಒಬ್ಬಳ್ನೇ ಮಾತ್ರ ಬಿಟ್ಟು ಹೋಗ್ಬೇಡ. ದೀಪನ್ನ ಕರ್ಕೊಂಡ್ಬಂದು ಅಮ್ಮನ ಜೊತೆಯಲ್ಲಿ ಬಿಟ್ಟು ನೀನು ಟೂರ್ ಹೋಗ್ಬೇಕು. ಉಳಿದಂತೆ ಅವಳು ಅವಳ ತಾಯಿಯ ಮನೆಯಲ್ಲಿರಲಿ"

"ಯಾಕೆ! ಅತ್ಗೇನ ನಿನ್ಜೊತೇಲಿ ಕರ್‍ಕೊಂಡು ಹೋಗ್ತಿಲ್ವಾ?" ಏನೂ ತಿಳಿಯದವನಂತೆ ಕೇಳಿದ.

"ಇಲ್ಲ, ಕೇವಲ ಆರು ತಿಂಗಳ ಮಾತು ತಾನೇ?"

"ಅತ್ಗೆ ಒಪ್ಕೊಂಡಿದಾರಾ?"

"ಹುಂ, ಒಪ್ಸಿದೀನಿ...."

"ನಾನು ಟೂರ್‌ಗಳನ್ನು ಕ್ಯಾನ್ಸಲ್ ಮಾಡಿಸ್ಕೊಳ್ತೀನಿ. ಅಮ್ಮನ್ನ ಚೆನ್ನಾಗಿ ನೋಡ್ಕೊಳ್ತೀನಿ. ನನ್ಮೇಲೆ ನಂಬ್ಕೆ ಇಲ್ವಾ ನಿಂಗೆ. ನಾನೂ ಅವಳಿಗೆ ಮಗನೇ"

"ಹಾಗಲ್ಲ ಕಣೋ.... ಒಂದ್ವೇಳೆ ನೀನು ಟೂರ್ ಹೋಗ್ಲೇಬೇಕಾಗಿ ಬಂದ್ರೇ ಅಮ್ಮ ಒಂಟಿಯಾಗ್ತಾಳೆ ಅಂತ.... ಅಷ್ಟೇ.... "

"ಕೆಲಸಕ್ಕೆ ರಾಜೀನಾಮೆ ಕೊಡ್ತೀನಿ"

"ಅಂಥ ಕೆಲ್ಸ ಮಾತ್ರ ಮಾಡ್ಬೇಡ. ಕೆಲಸ ಬಿಡೋದು ತುಂಬಾ ಸುಲಭ ಮತ್ತೆ ಸಿಗೋದು ಬಹಳ ಕಷ್ಟ"

"ಅಲ್ಲಿ ನಿಂಗೆ ಊಟ ತಿಂಡಿಗೆ ಕಷ್ಟ ಆಗುಲ್ವಾ?"

"ಹೇಗೋ ಮ್ಯಾನೇಜ್ ಮಾಡ್ತೀನಿ. ಅದು ನಂಗೆ ಸೇರಿದ್ದು...."

"ಆದರೂ...." ರಾಗ ಎಳೆದ.

"ಆದರೂ ಗೀದರೂ ಏನಿಲ್ಲ. ಆರು ತಿಂಗಳು ನೀನು ಮನೆಯ ಯಜಮಾನನಾಗಿರ್ತೀಯ. ನಿಂಗೂ ಸ್ವಲ್ಪ ಜವಾಬ್ದಾರಿ ಬರಲಿ." ದಿನೇಶ ವಿಚಿತ್ರವಾಗಿ ನಕ್ಕು ನುಡಿದಾಗ, ತನ್ನನ್ನು ಪರೀಕ್ಷಿಸುತ್ತಿರಬಹುದೇ ಅಂತೆನ್ನಿಸದೇ ಇರಲಿಲ್ಲ. ಕಾರು ಮತ್ತೆ ಹಿಂದಕ್ಕೆ ಓಡಿತು. ಬಾಗಿಲ ಬಳಿ ನಿಂತಿದ್ದ ವನಜಮ್ಮ ಕೇಳಿದಳು,

"ಅದೇನೋ ಇದ್ದಕ್ಕಿದ್ದ ಹಾಗೆ ಇಬ್ರೂ ಎಲ್ಲಿಗೆ ಹೋಗಿದ್ರಿ?"

"ಹೀಗೇ ಸ್ವಲ್ಪ ಮಾತಿತ್ತು. ಹೋಗಿದ್ವಿ"

"ಹೌದಾ? ನಾನು ಇಲ್ಲೇ ದೇವಸ್ಥಾನಕ್ಕೆ ಹೋಗಿ ಬರ್ತೀನಿ. ದೀಪಾ ಎದ್ದಿಲ್ಲವೇನೋ. .... ನಾನು ಬೇಗ ಬಂದು ಬಿಡ್ತೀನಿ."

"ನಡ್ಕೊಂಡು ಹೋಗ್ಬೇಕೇನಮ್ಮ. ದಿನೇಶ ಕರ್‍ಕೊಂಡು ಹೋಗ್ತಾನೆ" ದಿನೇಶನ ಕಡೆ ನೋಡಿದ.

"ನೀನು ಹೋಗು...." ದಿನೇಶನೆಂದ.

"ನಂಗೆ ಒಂದು ಫೋನ್ ಕಾಲ್ ಬರೋದಿದೆ. ನೀನೇ ಕರ್‍ಕೊಂಡು ಹೋಗು" ಎಂದು ಮತ್ತೆ ಹೇಳಿ ತಾಯಿಗೆ ಸಂಜ್ಞೆ ಮಾಡಿದ. ದಿನೇಶ ಕಾರಿನ ಬಳಿಗೆ ಹೊರಟ. ಮಹೇಶ ಪಿಸುದನಿಯಲ್ಲಿ ಅವನೊಡನೆ ಸರಿಯಾಗಿ ಮಾತನಾಡಬೇಕೆಂದು ತಿಳಿಸಿದ. ವನಜಮ್ಮ ಹೂವು ಹಣ್ಣುಗಳ ಬುಟ್ಟಿಯನ್ನು ಹಿಡಿದು ಹೊರಬಂದಳು. ಕಾರನ್ನು ಸೀದಾ ದೇವಸ್ಥಾನಕ್ಕೆ ಓಡಿಸಿದ.

ದೇವರ ದರ್ಶನ ತೀರ್ಥ, ಪ್ರಸಾದ, ನಮಸ್ಕಾರಗಳ ನಂತರ ಹೊರಬಂದು ಅಲ್ಲಿದ್ದ ಕಲ್ಲಿನ ಬೆಂಚಿನ ಮೇಲೆ ಕುಳಿತರು. "ಇನ್ನು ಹೊರಡೋಣ್ವಾ? ದೀಪಾ ಏನಂದುಕೊಳ್ತಾಳೋ...." ಮೆಲ್ಲನೆ ನುಡಿದ.

"ಮಲಗಿದ್ದಲ್ಲ, ಏನು ಭಯ? ಮನೇಲಿ ಮಹೀ ಇದಾನಲ್ಲ. ನೀನು ಡೆಲ್ಲಿಗೆ ಹೊರಟು ಹೋದ್ರೆ, ಆಗ ಅಪರೂಪ ಆಗಿ ಹೋಗ್ತೀಯ. ಒಂದ್ಗಳ್ಗೆ ಕೂತ್ಕೋ ಮಾತ್ನಾಡೋಣ" ವನಜಮ್ಮ ಮಾತಿಗೆ ಶುರು ಮಾಡಿದಳು.

"ಮಹೇಶಂಗೆ ಜವಾಬ್ದಾರಿ ಕಡಿಮೆ. ನಂಗೆ ಅದೇ ಆತಂಕ. ಹೊರಗೆ ಸುತ್ತಾಡ್ತಾನೇ ಇರ್ತಾನೆ.... ನಿಂಗೆ ತೊಂದ್ರೆ ಆಗ್ಬಹುದು"

"ಅದಕ್ಕೆ, ನಿನ್ನ ಹೆಂಡ್ತೀನ ನನ್ಜೊತೆ ಬಿಟ್ಟು ಹೋಗುವ ಪ್ಲಾನ್ ಮಾಡಿಲ್ಲ ತಾನೇ...." ವನಜಮ್ಮ ಕೇಳಿದಾಗ ಅಚ್ಚರಿಗೊಂಡ.

"ಹುಂ. ನನ್ನ ಪ್ಲಾನ್ ಅದೇ. ನಿಂಗೆ ಹೇಗೆ ಗೊತ್ತಾಯ್ತು?"

"ನೀನು ನನ್ನ ಮಗ. ನಿನ್ನ ಮನಸ್ನಲ್ಲಿ ಏನಿದೆ ಅಂತ ತಿಳಿಯೋದು ಕಷ್ಟವಲ್ಲ. ಅದಿರಲಿ, ಹಾಗೆ ಮಾತ್ರ ಮಾಡ್ಬೇಡ. ಆ ಹುಡ್ಗೀನ ಇಲ್ಲೇ ಮಾತ್ರ ಬಿಟ್ಟು ಹೋಗ್ಬೇಡ. ಅದು ತಪ್ಪಾಗುತ್ತೆ"

"ಅದ್ಯಾಕಮ್ಮ ತಪ್ಪಾಗುತ್ತೆ? ನಿಂಗೆ ಕಷ್ಟ ಆಗದಿರಲಿ ಅಂತ...."

"ನನ್ನ ಕಷ್ಟ–ಸುಖಕ್ಕೆ ನೀನು ಒದ್ದಾಡೋದು ಸರಿ.....ಆದರೆ, ನಿನ್ನ ಈ ಪ್ಲಾನ್‌ನಿಂದ ನಂಗೆ ಬೇಜಾರಾಗುತ್ತೆ. ಮಹೇಶನೂ ನನ್ನ ಮಗನೇ, ಅವನಿಗೂ ಜವಾಬ್ದಾರಿ ಬರಲಿ. ಅವನು ಚಿಕ್ಕವನೇನಲ್ಲ"

"ದಿಢೀರನೇ ಎಲ್ಲವನ್ನೂ ಹೀಗೆ ಬಿಟ್ಟು ಹೋಗೋಕೆ ನನ್ನ ಮನಸ್ಸು ಒಪ್ತಿಲ್ಲ"

"ಡೆಲ್ಲಿ ಏನೂ ದೂರವಿಲ್ಲ. ಅಲ್ಲದೇ ದೀಪಾ ಕೂಡಾ ಈ ಮನೆಗೆ ಹೊಸಬಳು, ಚಿಕ್ಕವಳು. ಅವಳ ಮೇಲೆ ನಿನಗೆ ನಂಬಿಕೆ. ನಮ್ಮ ಮಹೇಶನ ಮೇಲೆ ಏಕಿಲ್ಲ?"

"ಅವನು ವಾರಗಟ್ಟಲೆ ಟೂರ್ ಹೋಗ್ತಾನೆ. ಅದನ್ನು ಬಿಡೋಕೆ ಆಗುತ್ತಾ?"

"ಬಾಸ್‌ಗೆ ಹೇಳಿ, ಟೂರ್ ಕೆಲ್ಸಾನ ಕಡಿಮೆ ಮಾಡ್ಕೋತಾನೆ"

"ಇದರಿಂದ ಅವನ ಕೆಲಸಕ್ಕೆ ತೊಂದರೆ ಆಗುತ್ತೆ...."

"ಅಷ್ಟು ತೊಂದ್ರೆ ಆದ್ರೆ ಬೇರೆ ಕೆಲ್ಸಕ್ಕೆ ಸೇರ್ಕೋತಾನೆ. ನಿಂಗ್ಯಾಕೆ ಆತಂಕ? ನಿನ್ನ ಹೆಂಡ್ತೀನ ನಿಂಜೊತೆ ಕರ್ಕೊಂಡು ಹೋಗೋಕೆ ಆಗದಿರುವಂಥ ಭಾರೀ ತೊಂದ್ರೆ ಏನಾದ್ರೂ ಇದ್ರೆ ಹೇಳು..... ಪರಿಹಾರವನ್ನು ಹುಡುಕೋಣ"

"ದಿನೇಶ ಮೌನಿಯಾದ.... ಯಾಕೋ ಸುಮ್ಮನಾದೆ? ಬೇಕಾದ್ರೆ ನಾನೂ ನಿಮ್ಮ ಜೊತೆ ಬಂದು, ಹೊಸ ಸಂಸಾರಾನ ಹೂಡಿಸ್ತೀನಿ. ನನಗೂ ಡೆಲ್ಲಿ, ಆಗ್ರಾ, ಮಥುರಾ, ಹೃಷಿಕೇಶ, ಹರಿದ್ವಾರ ಎಲ್ಲಾ ನೋಡೋ ಆಸೆ ಇದೆ. ಈ ನೆವದಲ್ಲಿ ನನಗೆ ಕಾಶೀಯಾತ್ರೆ ಮಾಡಿಸು. ಆ ಪುಣ್ಯ ನಿನಗೆ ಬರಲಿ."

ದಿನೇಶ ತಾಯಿಯಿಂದ ಈ ಮಾತುಗಳನ್ನು ನಿರೀಕ್ಷಿಸಿರಲಿಲ್ಲ. ಉತ್ತರ ಹೊಳೆಯದೇ ಅವಳನ್ನು ಮಿಕಿ ಮಿಕಿ ನೋಡಿದ.

"ಯಾಕೋ, ನಾನು ಬರೋದು ನಿಂಗೆ ಇಷ್ಟವಿಲ್ವಾ?"

"ಹಾಗಲ್ಲಮ್ಮ, ಈಚೆಗೆ ಅಲ್ಲಿ ಟೆರರಿಸ್ಟ್‌ಗಳ ಆತಂಕ ಜಾಸ್ತಿಯಾಗಿದೆ. ನಮಗೆ ಹೆಚ್ಚು ಪರಿಚಯವಿಲ್ಲದ ಸ್ಥಳ, ಎಂದು ಏನಾಗುತ್ತೋ ಅಂತ ಆತಂಕ... "

"ಯಾಕೆ? ಅಲ್ಲಿ ವಾಸ ಮಾಡೋರೂ ಮನುಷ್ಯರೇ ತಾನೇ! ಟೆರರಿಸಂ ಎಲ್ಲಿಲ್ಲ? ಅಲ್ಲಿ ನೀನೊಬ್ಬನೇ ಇದ್ರೆ ನಮ್ಮ ಆತಂಕ ಕಡಿಮೆ ಏನೂ ಆಗುಲ್ಲ. ನಾನು ಬರ್ತೀನಿ. ದೀಪಾಳನ್ನೂ ಹೊರಡಿಸ್ತೀನಿ. ಮನೆ ಈಗ್ಲೇ ವ್ಯವಸ್ಥೆ ಮಾಡು" ಆಕೆ ಆಜ್ಞೆ ಮಾಡುವವಳಂತೆ ನುಡಿದಳು.

"ಮನೆಗೆ ತೊಂದ್ರೆ ಇಲ್ಲ. ಕಂಪೆನಿಯವರದ್ದೇ ಮನೆ ಗಿನೆ ಅಂತ ಕೊಡ್ತಾರೆ. ಆದರೆ ಭಾಷೆ ಬೇರೆ, ಪರಿಸರ ಬೇರೆ, ಯಾವಾಗ ಏನು ತೊಂದ್ರೆ ಬರುತ್ತೋ ಗೊತ್ತಾಗುಲ್ಲ. ನಾನು ಒಬ್ಬನೇ ಆದ್ರೆ ಹೇಗೂ ನಡೆಯುತ್ತೆ. ಆರು ತಿಂಗಳ ಮಾತು ತಾನೇ.....?"

"ಆರು ತಿಂಗಳು ಅಂತಂದ್ರೆ ಆರು ದಿನವಲ್ಲ. ಹೊಸದಾಗಿ ಮದುವೆಯಾಗಿ ಬಂದಿರುವ ಹುಡ್ಗಿಗೆ ನೂರಾರು ಆಸೆಗಳಿರುತ್ತವೆ. ಇಲ್ಲಿ ಒಂಟಿಯಾಗಿ, ನನ್ನೆದುರು ಕುಳಿತು ಮನಸ್ಸನ್ನು ಕೆಡಿಸ್ಕೊಳ್ತಾಳೆ. ನಂಗೆ ಇದೆಲ್ಲಾ ಸರಿ ಹೋಗುಲ್ಲ." ಬೇಸರಿಸಿದಳು.

"ಬೇಕಾದ್ರೆ ಯಾವ್ದಾದ್ರೂ ಕೋರ್ಸ್‌ಗೋ, ಕೆಲ್ಸಕ್ಕೋ ಸೇರ್ಕೊಳ್ಳಲಿ"

"ಏನೂ ಬೇಡ. ಅಲ್ಲಿ ನಿನ್ನ ಜೊತೆಗಿರಲಿ. ಅಲ್ಲೇ ಯಾವ್ದಾದ್ರೂ ಕ್ಲಾಸ್‌ಗೆ ಸೇರ್ಕೊಳ್ಳಲಿ. ಅವಳು ಧೈರ್ಯವಂತೆ. ಎಲ್ಲಾದಕ್ಕೂ ಹೊಂದ್ಕೋತಾಳೆ. ಸುಮ್ನೆ ನಾನು ಹೇಳಿದಷ್ಟನ್ನು ಕೇಳು"

"ನನಗೊಬ್ಬನಿಗೇ ಮಾತ್ರ ಕಂಪೆನಿಯವರು ಏರ್ ಟಿಕೆಟ್ ಮಾಡ್ಸಿದ್ದಾರೆ"

"ಅದ್ಯಾವ ದೊಡ್ಡ ಮಾತು? ನಮ್ಮಿಬ್ಬರ ಟಿಕೆಟ್ ನೀನು ಮಾಡಿಸು. ಇಲ್ಲಿ ಮಹೇಶ ರೈಲಿನಲ್ಲಿ ಕೂರಿಸ್ತಾನೆ. ಅಲ್ಲಿ ನೀನು ಇಳಿಸ್ಕೋ...." ತಾಯಿ ಕಡ್ಡಿ ತುಂಡು ಮಾಡಿದಂತೆ ಹೇಳಿದಾಗ ಅವನು ಗಂಭೀರನಾದ.

"ಇನ್ನು ಹೊರಡೋಣ. ಎಲ್ಲವನ್ನೂ ನೋಡಿಕೊಳ್ಳಲು ಭಗವಂತನಿದ್ದಾನೆ. ನಿನಗ್ಯಾಕೆ ಆತಂಕವೋ ನಂಗೇ ತಿಳೀದು" ಅವನ ಗಂಭೀರವದನವನ್ನು ನೋಡಿ ನುಡಿದಳು.

"ಈಗನ್ನಿಸ್ತಿದೆ, ಆರು ತಿಂಗಳು ಕಳೆದ ನಂತರವೇ ಮದ್ವೆ ಮಾಡ್ಕೊಂಡಿದ್ರೆ ಚೆನ್ನಾಗಿತ್ತು ಅಂತ....."

"ಆಗ ನಿಂಗೆ ದೀಪಾ ಹೆಂಡ್ತಿಯಾಗ್ತಿದ್ದಳೋ ಇಲ್ಲವೋ ಯಾರಿಗ್ಗೊತ್ತು? ದೀಪಾ ಎಲ್ಲಾ ರೀತಿಯಿಂದಲೂ ನಿಂಗೆ ಸರಿಯಾಗಿದಾಳೆ. ಸುಜಯ ನಿಂಗೆ ತಪ್ಪಿದ್ದು

ಒಳ್ಳೇದೇ ಆಯ್ತು. ಏನೋ ಮಂಕುತನ, ಒಂಥರಾ ಮುಖೇಡಿ. ಯಾಕೋ ವಿಚಿತ್ರ ವಾಗಿ ವರ್ತಿಸ್ತಾಳೆ ಅಂತ ಅನ್ನಿಸುತ್ತೆ. ಡೆಲ್ಲಿಯಂಥ ದೊಡ್ಡ ಷಹರು ಅವಳಂಥೋಳಿಗಲ್ಲ. ನಿನಗೆ ಇವಳೇ ಸರಿ."

"ಈಗ್ಯಾಕೆ ಆ ಮಾತು?" ಅಸಹನೆಯಿಂದ ಕೇಳಿದ.

"ಏನೋ ಹೇಳ್ದೆ.... ಹೂಂ ನಡೀ" ಇಬ್ಬರೂ ಎದ್ದರು.

* * *

ಕಂಪ್ಯೂಟರ್ ಮುಂದೆ ಕುಳಿತು ಏನನ್ನೋ ನೋಡುತ್ತಿರುವಾಗ, ದಿನೇಶ ಅವನ ಬಳಿ ಬಂದು ನಿಂತಿದ್ದು ತಿಳಿದು ಇತ್ತ ತಿರುಗಿದ. ದಿನೇಶ ಅವನ ಕೈಗೆ ಕವರನ್ನಿತ್ತ.

"ಇದರಲ್ಲಿ ಎರಡು ಏರ್ ಟಿಕೆಟ್‌ಗಳಿವೆ. ಅಮ್ಮನ್ನ, ದೀಪನ್ನ ಏರ್‌ಪೋರ್ಟ್‌ಗೆ ಕರ್ಕೊಂಡ್ಹೋಗಿ ಪ್ಲೇನ್ ಹತ್ತಿಸುವ ಜವಾಬ್ದಾರಿ ನಿಂದು." ಮಹೇಶ ನಂಬದವನಂತೆ ಕಣ್ಣರಳಿಸಿದ.

"ಅಮ್ಮ ತಾನು ಡೆಲ್ಲಿಗೆ ಬರಬೇಕೂಂತ ಆಸೆ ಪಡ್ತಿದಾಳೆ. ಹೇಗೂ ಕಂಪೆನಿಯ ಕ್ವಾರ್ಟ್ರಸ್ ಇರುತ್ತೆ. ನೋಡೋಣ ಹತ್ತಿರದ ಊರುಗಳನ್ನು ಸುತ್ತಾಡಿಸುವ ವ್ಯವಸ್ಥೆ ಮಾಡ್ತೀನಿ. ಆದರೆ ನಾನು ಡೆಲ್ಲಿಲಿರುವ ವಿಷಯ ಮನೆಯವರ ಹೊರತು, ಹೊರಗಿನವರ್‍ಯಾರಿಗೂ ಗೊತ್ತಾಗಬಾರದು?"

"ಯಾಕೆ? ನಿನ್ನ ಲೈಫ್‌ಗೇನಾದ್ರೂ ತೊಂದ್ರೆ ಇದೆಯಾ?"

"ಹಾಗೇನಿಲ್ಲ. ಇದು ಕಂಪೆನಿಯ ಅಧಿಕಾರಿಗಳ ಇನ್ಸ್‌ಟ್ರಕ್ಷನ್, ಕಿಡ್ನಾಪ್, ರ್‍ಯಾನ್ಸಮ್ ಅದೂ ಇದೂ ಗಲಾಟೆಗಳು ನಡೀತಾನೇ ಇರುತ್ವಲ್ಲ. ನನ್ನ ಅಡ್ರೆಸ್, ಫೋನ್ ನಂಬರ್‍ರು ಇದನ್ನೆಲ್ಲ ಅಪರಿಚಿತ ವ್ಯಕ್ತಿಗಳಿಗೆ ಕೊಡಲೇ ಬಾರದು ತಿಳೀತಾ? ಹ್ಞಾಂ, ಹಾಗೇ.... ಈ ಏರ್ ಟಿಕೆಟ್ ವಿಷಯಾನಾ, ಅಮ್ಮಂಗಾಗಲೀ, ದೀಪನಿಗಾಗಲೀ, ಈಗ್ಲೇ ತಿಳಿಸ್ಬೇಡ. ಸರ್ಪ್ರೈಸಾಗಿರಲಿ. ಹಾಗೇ ನಿಂಗೆ ಒಂದು ಅಡ್ವೈಸು, ಮನೇಲಿ ಬೇರೆ ಯಾರೂ ಇಲ್ಲ ಅಂತ, ಹೆಚ್ಚು ಹೊರ ಹೊರಗೇ ತಿರುಗ್ಬೇಡ. ವಾರದಲ್ಲಿ ಎರಡು ಮೂರು ಸರಿಯಾದ್ರೂ ನನ್ನ ಆಫೀಸ್ಗೆ ಫೋನು ಮಾಡು ತಿಳೀತಾ?"

"ಹೂಂ, ತಿಳೀತು ಬ್ರದರ್.... ಅಪ್ಪ ಬದುಕಿದ್ದಿದ್ರೂ ಇಷ್ಟೇ ಬುದ್ಧಿ ಹೇಳ್ತಿದ್ರೋ ಇಲ್ವೋ?" ಮಹೇಶ ನಕ್ಕ. ದಿನೇಶ ನಗಲಿಲ್ಲ.

"ನನ್ನ ಟೆನ್ಶನ್ ಏನೂಂತ ನಿಂಗೆ ಅರ್ಥವಾಗುಲ್ಲ. ನಿಂಗೆ ನಗು ಬರುತ್ತೆ ಅಲ್ವಾ?"

"ಫಸ್ಟ್ ಟೈಂ ಊರ್‍ನಿಂದ ಆಚೆ ಹೋಗ್ತಾ ಇದೀಯ ನೋಡು. ಅದಕ್ಕೆ ನಿನಗೆ ಈ ಟೆನ್ಶನ್. ನನ್ಹಾಗೇ ಬೇರೆ ಬೇರೆ ಊರು ಕೇರಿ ಸುತ್ತಿದ್ದಿದ್ರೆ ಇಷ್ಟೊಂದು ತಲೆ ಕೆಡಿಸಿಕೊಳ್ತಿರ್‍ಲಿಲ್ಲ ನೀನು"

"ಇರಬಹುದು. ನನ್ನ ಸ್ವಭಾವ, ನಿನ್ನ ಸ್ವಭಾವ ಎರಡೂ ಬೇರೆ ಬೇರೆ"

"ಅಮ್ಮಾ ನಿನ್ನನ್ನು ಅತೀ ಮುದ್ದು ಮಾಡಿ ಬೆಳೆಸಿದಳು. ನನ್ನನ್ನು ಹೇಗೋ ಬೆಳ್ಕೋತಾನೆ ಅಂತ ಬಿಟ್ಟು ಬಿಟ್ಟಳು. ನೀನು ಸೂಕ್ಷ್ಮ... ನಾನು ರಫ್....ಅತ್ಗೆ ನಿನ್ನನ್ನು ಬದ್ಲಾಯಿಸ್ತಾರೆ ಬಿಡು. ಈಗ್ಲೇ ಸ್ವಲ್ಪ ಸ್ವಲ್ಪ ಗೊತ್ತಾಗ್ತಿದೆ.... ಹ್ಹಾಂ"

"ಹಾಗೇನಿಲ್ಲ. ಅಮ್ಮನ ಮಾತಿಗೆ ಇಲ್ಲ ಅನ್ನುಕ್ಕಾಗ್ಲಿಲ್ಲ"

"ಪರವಾಗಿಲ್ಲ ಬಿಡು.... ನಿನ್ನ ಮಿಸೆಸ್‌ನ ನಿಂಜೊತೆ ಕರ್‍ಕೊಂಡು ಹೋಗೋಕೆ ಅಮ್ಮನ ಬಲವಂತ ಬೇಕಿರಲಿಲ್ಲ" ಎಂದು ಕೆಳದನಿಯಲ್ಲಿ ನುಡಿದ. ದಿನೇಶ ಕೇಳಿಸಿದರೂ ಕೇಳಿಸದವನಂತೆ ನಟಿಸಿ, ರೂಮಿನಿಂದ ಹೊರ ಬಂದ.

* * *

ಈ ವಿಷಯವನ್ನು ತಕ್ಷಣವೇ ಸುಜಯಳಿಗೆ ಹೇಳಬೇಕೆನ್ನಿಸಿತ್ತು. ಅವಳ ಮನೆಯ ನಂಬರನ್ನು ಡಯಲ್ ಮಾಡಿದ. ಪ್ರಭಾವತಿ ಫೋನನ್ನೆತ್ತಿಕೊಂಡಳು.

"ಸುಜಯಾ ಇದಾರಾ?" ಧ್ವನಿ ನಡುಗಿತ್ತು.

"ಹೂಂ. ಇದಾಳೆ, ಯಾರು ಮಾತ್ನಾಡೋದು?"

"ನಾನು ಅವರ ಕಲೀಗ್.....ಸ್ವಲ್ಪ ಕರೀತೀರಾ?"

"ಸುಜೀ.... ಯಾರೋ ನಿನ್ನ ಕಲೀಗ್ ಅಂತೆ. ಫೋನು ಮಾಡಿದಾರೆ" ಆಕೆ ಮಗಳನ್ನು ಕರೆದದ್ದು ಕೇಳಿಸಿತ್ತು. ಅವಳು "ಹಲೋ" ಎನ್ನುತ್ತಿದ್ದಂತೆ,

"ನಿಮಗೊಂದು ಹ್ಯಾಪಿ ನ್ಯೂಸ್...."

"ಯಾರ್‍ರೀ ಮಾತಾಡ್ತಿರೋದು...."

"ಯಾರು ಹೇಳಿ ನೋಡೋಣ...." ತಮಾಷೆ ಮಾಡಿದ.

"ಯಾರೋ ಗೊತ್ತಾಗ್ಲಿಲ್ಲ. ತಮಾಷೆ ಬೇಡ. ಏನಾಗ್ಬೇಕಾಗಿತ್ತು...." ಅವಳು ಗಡುಸಾಗಿ ಕೇಳಿದಾಗ ನಕ್ಕ.

"ಇಷ್ಟು ಬೇಗ ನನ್ನ ವಾಯ್ಸ್‌ನ ಮರೆತು ಬಿಟ್ರಾ ಮೇಡಂ. ನಾನು ಮಹೇಶ್ ಅಂತ ಗೊತ್ತಾಯ್ತಾ?"

"ಮುಂಚೇನೇ ಹೇಳುಕ್ಕೆ ಆಗ್ತಿರಲಿಲ್ವಾ? ಕಲೀಗ್ ಅಂತ ಯಾಕೆ ಹೇಳಿದ್ರಿ?"

"ನಿಮ್ಮ ತಾಯಿ ಏನಂದು ಕೊಳ್ತಾರೋ ಅಂತ ಹಾಗೆ ಹೇಳ್ದೆ...."

"ನಮ್ಮ ತಾಯಿ ಹಾಗೇನೂ ಅಂದ್ಕೊಳ್ಳಲ್ಲ. ಹೋಗ್ಲಿ ಬೇಗ ಹೇಳಿ ಅದೇನು ನ್ಯೂಸ್ ಅಂತ"

"ಯಾಕೆ ಅರ್ಜೆಂಟು... ಬರೀ ನ್ಯೂಸ್ ಅಲ್ಲ. ಹ್ಯಾಪಿ ನ್ಯೂಸ್..."

"ಸರಿ. ಹ್ಯಾಪಿ ನ್ಯೂಸ್.... ಅದೇನೂಂತ ಹೇಳ್ತೀರಾ ಅಥವಾ ಪೀಠಿಕೇಲೇ ಇರ್ತೀರೋ...."

"ಹೋಗ್ಲಿ ಬಿಡಿ. ಸಸ್ಪೆನ್ಸ್‌ನಲ್ಲಿರಲಿ. ನಿಮ್ಮ ಮೂಡ್ ಚೆನ್ನಾಗಿಲ್ಲ ಅಂತ ಕಾಣುತ್ತೆ.

....." ಅವನು ಲೈನ್ ಕಟ್ ಮಾಡಿದ. ಅವಳೇ ತನಗೆ ಮಾಡಬಹುದೆಂದು ಕಾದ. ಆದರೆ ಅವಳು ಮಾಡಲಿಲ್ಲ ನಿರಾಸೆಯಾಗಿತ್ತು. ಹ್ಯಾಪಿ ನ್ಯೂಸ್ ಅಂತಂದ್ರೂ ಕುತೂಹಲ ಇಲ್ಲವಲ್ಲ. ಬರೀ ಜಂಭ ಎಂದುಕೊಂಡು ಸುಮ್ಮನಾದ. ಎಷ್ಟೋ ಹೊತ್ತಿನ ನಂತರ ಫೋನು ರಿಂಗಾಗಿತ್ತು. ಅವಳೇ ಇರಬೇಕೆಂದು ಓಡಿ ಬಂದು ಫೋನನ್ನೆತ್ತಿದ. ಶಿವ ರಾಮಯ್ಯ ಮಾತನಾಡಿದರು "ನಾಡಿದ್ದು ಸಾಯಂಕಾಲ ಒಂದು ಪಾರ್ಟಿ ಇಟ್ಟು ಕೊಂಡಿದ್ದೇವೆ. ಎಲ್ಲರೂ ಬರಬೇಕೆಂದು ಹೇಳಿದರು. ಮಹೇಶ ತಾಯಿಯನ್ನು ಕರೆದು ಆಕೆಯ ಕೈಗೆ ರಿಸೀವರ್‌ನ ಕೊಟ್ಟು ತಾನು ಆಚೆ ಬಂದು ನಿಂತ. ಸುಜಯ ಯಾಕೆ ಮತ್ತೆ ಫೋನ್ ಮಾಡಲಿಲ್ಲ? ತಾನೇ ಹೋಗಿ ಹೇಳಿದರೇ.... ಅವಳ ಪ್ರತಿಕ್ರಿಯೆ ಹೇಗಿರುತ್ತದೆ....? ಅಷ್ಟರಲ್ಲಿ ಅವನ ಮೊಬೈಲ್ ಫೋನ್ ರಾಗ ಹಾಡಿತು. ಅವನ ಸ್ನೇಹಿತನೊಬ್ಬ ಕರೆ ಮಾಡಿದ್ದ.

"ದೀಪಾ, ನಿಮ್ಮ ತಂದೆ ಮಾತಾಡ್ಬೇಕಂತೆ...." ವನಜಮ್ಮ ಕರೆದಳು. ಅವಳ ಕೈಗೆ ರಿಸೀವರ್ ಕೊಟ್ಟು ತಾನು ದಿನೇಶನೊಂದಿಗೆ ಮಾತನಾಡಲೆಂದು ಅವನಿದ್ದೆಡೆಗೆ ಬಂದಳು.

"ಇನ್ನು ನಾಲ್ಕೈದು ದಿನಕ್ಕೆ ಹೊರಟೇ ಬಿಡ್ತೀಯ. ನಿನ್ನ ಹೆಂಡ್ತೀನ ಕರ್ಕೊಂಡು ಹೋಗೋ ವಿಷಯ ಏನ್ಮಾಡ್ದೇ?"

"ನಾನು ದೀಪಾಳನ್ನು ಒಪ್ಪಿಸಿದೀನಿ. ನೀನು ಸುಮ್ನಿರಮ್ಮ"

"ಕೇಳೋರ್ಗೆಲ್ಲಾ ಏನು ಹೇಳೋದು! ದೀಪಾಗೆ ಬೇಸರ ಆಗುಲ್ವಾ?"

"ಬೇಸರ ಗೀಸರ ಅಂತ ಅದನ್ನೆಲ್ಲಾ ಅವಳ ತಲೆಗೆ ತುಂಬಬೇಡ. ಏನೇನೋ ಆಡ್ತೀಯ"

"ಸರಿಯಪ್ಪಾ ನಾನು ಏನನ್ನೂ ಆಡಕೂಡ್ದು. ಹೋಗ್ಲಿ ಪ್ಯಾಕಿಂಗ್ ಮುಗೀತಾ! ಅಲ್ಲಿ ತುಂಬಾ ಚಳಿ ಅಂತಾರೆ. ರಗ್ಗು, ಶಾಲು, ಸ್ವೆಟರ್ ಎಲ್ಲಾ ಇಟ್ಕೋ.....

"ಈಗ ಚಳಿಗಾಲ ಮುಗಿದಿದೆ. ಸಮ್ಮರ್ ಶುರುವಾಗುತ್ತೆ.... ಹೆಚ್ಗೆ ಬಟ್ಟೆ ಏನೂ ಬೇಡ"

"ಮತ್ತೆ ಅಲ್ಲಿ ಹೇಗಿರ್ತೀಯಾ? ಊಟ ತಿಂಡಿಗೆ ಏನು ಮಾಡ್ತೀಯಾ?

"ಅಲ್ಲೂ ಬೇಕಾದಷ್ಟು ಉಡುಪಿ ಹೋಟೆಲ್ಲುಗಳಿರುತ್ತವೆ. ಬ್ರಾಹ್ಮಣರು ನಡೆಸುವ ಮೆಸ್‌ಗಳಿವೆಯಂತೆ. ಬೇಕಾದ್ರೆ ಅಡ್ಗೆಯವನನ್ನು ಇಟ್ಕೊಂಡ್ರಾಯ್ತು"

"ಇಷ್ಟೆಲ್ಲಾ ಯಾಕೆ? ಲಕ್ಷಣವಾಗಿ ನಿನ್ನ ಹೆಂಡತಿಯ ಕೈನಿಂದ ಅಡುಗೆ ಮಾಡಿ ಸ್ಕೊಂಡು ತಿನ್ನು. ಎಲ್ಲಿ ಗ್ರಹಚಾರ ಅಡುಗೆ ಬರುತ್ತೆ ಅಂತ ಅವರಮ್ಮ ಹೇಳ್ತಿದ್ರು"

"ನಂಗಂತೂ ಗೊತ್ತಿಲ್ಲ. ನಂಗೂ ಅಡುಗೆ ಮಾಡುಕ್ಕೆ ಬರುಲ್ಲ. ದೇವ್ರೇ ಗತಿ..." ದೀಪಾಳ ಕಡೆ ನೋಡಿ ನಕ್ಕ. ಅವಳಿಗೆ ಇತ್ತ ಗಮನವಿರಲಿಲ್ಲ.

"ಮೊದಮೊದ್ಲು ಕಷ್ಟ ಆಗುತ್ತೆ. ಒಂದು ಸಂಸಾರಕ್ಕಾಗುವಷ್ಟು ಪಾತ್ರೆ ಪಡಗ

ಎಲ್ಲಾ ಕೊಟ್ಟಿದಾರೆ. ಕಲಿತ್ಕೊಂಡು ಮಾಡಿ ಹಾಕ್ತಾಳೆ. ಈಗೇನು ಅಡುಗೆ ವಿಧಾನದ ಬಗ್ಗೆ ಬೇಕಾದಷ್ಟು ಪುಸ್ತಕಗಳಿವೆ."

"ಅವಳು ಕಲಿತ್ಕೊಂಡು, ಮಾಡಿ ಹಾಕುವಷ್ಟರಲ್ಲಿ ನಾನು ಊರಿಗೆ ವಾಪಸ್ಸು ಬರುವ ಸಮಯ ಬಂದಿರುತ್ತೆ ಅಷ್ಟೇ" ದೀಪಾ ಮಾತು ಮುಗಿಸಿ ಬಂದಳು. ಅವಳ ಮುಖದಲ್ಲಿ ಗೆಲುವು ಇರಲಿಲ್ಲ. ವನಜಮ್ಮ ಮಗನ ಕಡೆ ನೋಡಿದಳು. ಅವನು ನಸುನಕ್ಕ. ದೀಪಾ ಒಳಗೆ ಹೋಗಿ ದಿಂಬಿನ ಮೇಲೆ ಮುಖ ಇಟ್ಟು ಅತ್ತಳು.

"ಹೋಗು ಸಮಾಧಾನ ಮಾಡು. ಹುಡ್ಗಿ ಅಳ್ತಿದೆ"

"ನಿನ್ನ ಮುದ್ದು ಹೆಚ್ಚಾಯ್ತು ಅವಳಿಗೆ. ನೀನು ಸುಮ್ನಿರು. ಹೇಗೆ ಸಮಾಧಾನ ಮಾಡ್ಬೇಕೂಂತ ನಂಗೂ ಗೊತ್ತು" ತಾಯಿ ಅತ್ತ ಸರಿದು ಹೊರ ಬಂದ ಕೂಡಲೇ ರೂಮಿನ ಬಾಗಿಲನ್ನು ಹಾಕಿಕೊಂಡ.

"ದೀಪಾ.... ದೀಪಾ.... ಏನಾಯ್ತು? ನಿಮ್ಮಪ್ಪ ಏನಾದ್ರೂ ಅಂದ್ರಾ?" ಅವಳ ಬಳಿ ಕುಳಿತು ಕೇಳಿದ. ಅವಳು ಅವನ ಕಡೆ ಕೋಪದಿಂದ ನುಡಿದಳು.

"ನಾನು ಪಾರ್ಟಿಗೆ ಹೋದಾಗ ವಾಪಸ್ಸು ನಿಮ್ಮ ಜೊತೆ ಬರುಲ್ಲ. ಅಲ್ಲೇ ಅಮ್ಮನ ಮನೇಲೇ ಇದ್ದು ಬಿಡ್ತೀನಿ"

"ಅಷ್ಟೇ ತಾನೇ.... ಅದಕ್ಕೆ ಅಳೋದ್ಯಾಕೆ? ಹಾಗೇ ಮಾಡು" ಅವಳ ಕೆನ್ನೆಗಳ ಮೇಲೆ ಇಳಿಯುತ್ತಿದ್ದ ನೀರನ್ನು ಒರೆಸಿದ.

"ಇಷ್ಟೇನಾ ನಿಮ್ಮ ಪ್ರೀತಿ? ಹಾಗಾದರೆ ನನ್ನನ್ಯಾಕೆ ಮದುವೆಯಾದ್ರಿ?"

"ನಮ್ಮ ಹುಡ್ಗೀನ ಸ್ವಲ್ಪ ಗೋಳು ಹೊಯ್ದುಕೊಳ್ಳೋಣಾಂತ" ಅವಳ ಗಲ್ಲವನ್ನು ಚಿವುಟಿದ.

"ನಾನೇನು ತಪ್ಪು ಮಾಡ್ದೇ ಅಂತ ಈ ಶಿಕ್ಷೆ ಕೊಡ್ತಿದೀರಿ? ಇದರ ಬದಲು ಆರು ತಿಂಗಳ ನಂತರವೇ ಮದ್ವೆ ಆಗ್ಬೇಕಾಗಿತ್ತು"

"ಹೌದು ಚಿನ್ನಾ ಈಗ ನನಗೂ ಹಾಗೇ ಅನ್ನಿಸ್ತಿದೆ" ಅವಳನ್ನು ತೋಳಿನಿಂದ ಬಳಸಿದ. ಅವಳು ಅವನನ್ನು ಹಿಂದಕ್ಕೆ ತಳ್ಳಿದಳು.

"ಈ ನಾಟಕ ಎಲ್ಲಾ ಆಡ್ಬೇಡಿ. ನನ್ಮೇಲೆ ನಿಮ್ಗೆ ಇಷ್ಟಾನೇ ಇಲ್ಲ"

"ಇಷ್ಟವಿಲ್ಲದೇ ಇಷ್ಟು ಮುದ್ದು ಮಾಡ್ತೀನಾ?" ಅವಳ ಕೆನ್ನೆಯ ಬಳಿಗೆ ತುಟಿಗಳನ್ನು ತಂದ. ಅವಳು ಹಿಂದೆ ಸರಿದಳು.

"ನಿಮ್ಮ ಪ್ರೀತಿ, ಮುದ್ದು ಯಾವುದೂ ಬೇಡ. ನಾನು ಇಲ್ಲಿರುಲ್ಲ. ಅಲ್ಲಿಗೇ ಹೋಗಿ ಇದ್ದು ಬಿಡ್ತೀನಿ"

"ನಿನಗೇ ನಾನು ಬೇಡವಾದ್ರೆ ನಾನೇನ್ಮಾಡೋಕಾಗುತ್ತೆ? ಹೇಗೋ ಅಡ್ಜಸ್ಟ್ ಮಾಡ್ಕೊಳ್ತೀನಿ" ಅವನೂ ಹಾಸಿಗೆಯ ಮೇಲೆ ಕೈಗಳನ್ನು ಊರಿ ನುಡಿದ. ಅವಳು

ಎರಡೂ ಕೈಗಳನ್ನು ಮುಷ್ಟಿ ಮಾಡಿ ಅವನ ಎದೆಯ ಮೇಲೆ ಹಗುರವಾಗಿ ಗುದ್ದಿದಳು. ಅವನು ಹಾಗೇ ಹಿಂದಕ್ಕೆ ಉರುಳಿದ. ಅವಳು ಗಾಬರಿಯಿಂದ ಅವನ ಕಡೆ ವಾಲಿದಳು. ಅವನು ಸರ್‍ರನೆ ಅವಳನ್ನು ತನ್ನ ಬಳಿಗೆ ಎಳೆದುಕೊಂಡು ನಕ್ಕ.

"ನೀವು ತುಂಬಾ ಕೆಟ್ಟೋರು. ಐ ಹೇಟ್ ಯೂ...." ಮುಂದೆ ಮಾತನಾಡ ಲಾಗದೆ ಅತ್ತಳು.

"ಬಟ್, ಐ ಲವ್ ಯೂ" ಎನ್ನುತ್ತಾ ಅವಳನ್ನು ತನ್ನ ಎದೆಗೆ ಒರಗಿಸಿಕೊಂಡು ಸಮಾಧಾನ ಮಾಡಿದ" ಈಗ ಒಂದು ತಿಂಗಳ ಕೆಳಗೆ ನೀನ್ಯಾರೂಂತ್ಲೇ ಗೊತ್ತಿರ್ಲಿಲ್ಲ ನಂಗೆ. ಈಗ ನನ್ನನ್ನೇ ಕೆಟ್ಟೋನು ಅನ್ನೋವಷ್ಟು ಧೈರ್ಯ ನಿಂಗೆ ಹೇಗೆ ಬಂತು?"

"ಇದಕ್ಕೆಲ್ಲ ನೀವೇ ಕಾರಣ...."

"ಹೇಗೋ ಇಲ್ಲಿಂದ ಹೋಗ್ತಿದೀನಲ್ಲ. ಈ ಕೆಟ್ಟೋನಿಂದ ದೂರವೇ ಇದ್ದು ಬಿಡು.... ಆಯ್ತಾ?"

"ದಿನೇಶ್...."

"ದೀಪ್.... ದೂರ ಇದ್ರೆ ಪ್ರೀತಿ ಹೆಚ್ಚುತ್ತೆ ಅಂತ ಅಂತಾರೆ. ಆರು ತಿಂಗಳು ಪರೀಕ್ಷೆ ಮಾಡಿ ನೋಡೋಣ....."

"ಇಲ್ಲ. ನನ್ನನ್ನು ಇಲ್ಲಿ ಬಿಟ್ಟು ಹೋಗ್ಬೇಡಿ. ಕರ್ಕೊಂಡ್ಹೋಗಿ.... ಪ್ಲೀಸ್...." ಗೋಗರೆದಳು.

"ತ್ರೀ ವೀಕ್ಸ್ ಆದ್ಮೇಲೆ ನಾನೇ ಒಂದ್ಸಾರಿ ಬಂದು ಹೋಗೋಕೆ ಟ್ರೈ ಮಾಡ್ತೀನಿ. ನೀನು ಹೀಗೆ ಅತ್ತರೆ ನಂಗೂ ಹಿಂಸೆ ಆಗುತ್ತೆ"

"ಈ ಕೆಲ್ಸಕ್ಕೆ ರಿಸೈನ್ ಮಾಡ್ಬಿಡಿ" ಸಲಹೆಯನ್ನಿತ್ತಳು. ಗೊಳ್ಳನೆ ನಕ್ಕ.

"ಏನಂದೆ? ಸರಿ ಹೋಯ್ತು. ಆಮೇಲೆ ನನ್ನ ಹೊಟ್ಟೆ ಬಟ್ಟೆ ಗತಿ? ಈಗ ನಿಂಗೂ ಕೆಲ್ಸ ಇಲ್ಲ. ನನಗೆ ಒಂದ್ಮಾತೂ ತಿಳಿಸದೇ ರಿಸೈನ್ ಮಾಡಿ ಬಿಟ್ಟಿದ್ದೀಯ. ನೀನಾದ್ರೂ ಸಂಪಾದಿಸ್ತಾ ಇದ್ದಿದ್ರೆ 'ಅಮ್ಮಾವ್ರ ಗಂಡ'ನಾಗಿ ನೀನು ಹೇಳಿದ ಹಾಗೆ ಕೇಳ್ಕೊಂಡು, ನೀನು ಹಾಕಿದ್ದನ್ನು ತಿನ್ಕೊಂಡು.... ನಿನ್ನ ಸೇವೆ ಮಾಡ್ಕೊಂಡು....."

"ತಮಾಷೆ ಮಾತಲ್ಲ ದಿನೇಶ್.... ಬೇರೆ ಕೆಲ್ಸಕ್ಕೆ ಸೇರಿಕೊಂಡ್ರಾಯ್ತು"

"ಇಂಥ ಒಳ್ಳೆ ಪೊಸಿಷನ್‌ನಲ್ಲಿದ್ದೀನಿ ಅಂತ ನಿಮ್ಮಪ್ಪ ಹಿಂದು ಮುಂದು ಯೋಚಿಸ್ದೇ ನಂಗೆ ನಿನ್ನನ್ನು ಮದ್ವೆ ಮಾಡ್ಕೊಟ್ರು.... ಅವ್ರನ್ನ ಕೇಳು ಅಳಿಯ ಮಗಳನ್ನು ಮನೇಲಿಟ್ಕೊಂಡು ಸಾಕ್ತಾರಾ ಅಂತ. ನಾನು ಇವತ್ತೇ ಕೆಲ್ಸಕ್ಕೆ ರಾಜೀನಾಮೆ ಕೊಟ್ಟು ಬಿಡ್ತೀನಿ...." ದೀಪಾ ಗಂಭೀರಳಾದಳು.

"ತಮಾಷೆಗೂ ನಿಮ್ಮಪ್ಪನ್ನ ಕೇಳೋಕೆ ನಿಂಗಿಷ್ಟವಿಲ್ಲ. ಗಂಡಸಿಗೆ ಕೆಲ್ಸ ಸಂಪಾದ್ನೆ ಅಂತ ಇದ್ದರೇನೇ ಗೌರವ. ಈ ಆರು ತಿಂಗಳ ಡೆಪ್ಯುಟೇಶನ್ ಮುಗಿದ್ಮೇಲೆ ನನಗೆ ಪ್ರಮೋಷನ್ ಸಿಗುತ್ತೆ. ಫಾರಿನ್ನಿಗೆ ಕಳಿಸ್ತಾರೆ....." ಆ ಛಾನ್ಸೂ ಇದೆ.

"ಫಾರಿನ್ನಿಗಾ? ಅಲ್ಲಿಗಾದ್ರೂ ಕರ್ಕೊಂಡು ಹೋಗ್ತೀರೋ ಅಥವಾ.... ಇಲ್ಲೇ ಬಿಟ್ಟು ಹೋಗ್ತೀರೋ?"

"ನೋಡೋಣಾ.... ಆದ್ರೆ ನಮ್ಮೂರಿನಷ್ಟು ಯಾವ ಊರೂ ಚೆನ್ನಾಗಿಲ್ಲ"

"ನಿಮಗೆ ಮಹಾ ಗೊತ್ತಿರೋದೂ? ಎಲ್ಲೆಲ್ಲಿಗೆ ಹೋಗಿದೀರಿ ನೀವು?"

"ಮಹೇಶ ಹೇಳ್ತಾನಲ್ಲ. ಅವನ್ಗಂತೂ ಟೂರ್ ಅಂತ ಅಲ್ಲಿ ಇಲ್ಲಿ ತಿರುಗೋದೇ ಆಯ್ತು"

"ಎಷ್ಟು ಮಜಾ ಅಲ್ವಾ? ಬೇಕಾದಷ್ಟು ಊರುಗಳನ್ನು ನೋಡ್ಬಹುದು"

"ಮಜವೋ..... ಸಜವೋ..... ನಂಗಂತೂ ಬೇಜಾರೂ....."

"ಮತ್ತೆ ಈಗ್ಯಾಕೆ ಒಪ್ಪಿಕೊಂಡ್ರೀ?"

"ಕೆರಿಯರ್ ಪ್ರಶ್ನೆ.... ಎಲ್ರನ್ನೂ ಒಂದಲ್ಲ ಒಂದು ಕಡೆಗೆ ಕಳಿಸ್ತಿರ್ತಾರೆ. ಈಗ ನನ್ನ ಸರದಿ ಅಷ್ಟೇ"

"ಹಾಗಾದ್ರೆ ಅಲ್ಲಿಂದ ಬಂದ್ಮೇಲೆ....?"

"ಗೊತ್ತಿಲ್ಲ. ಬಹುಶಃ ನಾನು ಇನ್ನೆಲ್ಲಿಗೂ ಹೋಗುಲ್ಲ. ನಾನು... ನಮ್ಮೂರು..." ಅವಳ ಕೈ ಬೆರಳುಗಳನ್ನು ನೇವರಿಸುತ್ತಾ ನುಡಿದ.

"ಥೂ... ಬೇಜಾರು... ನಂಗೆ ತಿರುಗಾಡೋದು ಅಂತಂದ್ರೆ ಇಷ್ಟ...."

"ಸದಾ ತಿರುಗಾಡ್ತಾನೇ ಇರೋಕಾಗುತ್ತಾ ದೀಪೂ.... ಆಮೇಲೆ ಅದೂ ಸಹ ಬೇಜಾರಾಗುತ್ತೆ.... ನನ್ನ ಕೈಯಲ್ಲಂತು ಸಾಧ್ಯವಿಲ್ಲ"

"ಇದನ್ಯಾಕೆ ಮುಂಚೇನೇ ಹೇಳ್ಲಿಲ್ಲ....?"

"ನೀನು ಕೇಳ್ಲಿಲ್ಲ. ನಾನು ಹೇಳ್ಲಿಲ್ಲ. ಇನ್ನು ಜಗಳ ಸಾಕು.... ಎದ್ದು ರೆಡಿಯಾಗು. ಇನ್ನೊಂಡೆರಡು ದಿನ ಹೊರಗೆಲ್ಲಾದ್ರೂ ತಿರುಗಾಡಿಸ್ತೀನಿ... ಆಮೇಲೆ ನಿನ್ನನ್ಯಾರು ತಿರುಗಾಡಿಸುತ್ತಾರೆ....!" ಒಬ್ಬೊಬ್ಳೇ ಎಲ್ಲೂ ಹೊರಗೆ ತಿರುಗಾಡ್ಬಾರ್ದು ತಿಳೀತಾ?"

ದೀಪಾ ಅವನ ಎರಡೂ ಕೆನ್ನೆಗಳನ್ನು ಜೋರಾಗಿ ಹಿಂಡಿದಳು. ಅವನು 'ಹ್ಹಾಂ' ಎಂದು ಕಿರುಚಿ ಬಾಯನ್ನು ಮುಚ್ಚಿಕೊಂಡು, ಕೈಕಾಲುಗಳನ್ನು ಒದರಿದ. ಅವಳು ನಕ್ಕು ಅವನಿಂದ ದೂರ ಸರಿದಳು....." "ನಗ್ತೀಯಾ ತಡಿ" ಎಂದವನ ಕೈಗೆ ಸಿಕ್ಕದಂತೆ, ಮಂಚದಿಂದ ಇಳಿದು, ರೂಮಿನಿಂದ ಹೊರ ಬಂದಳು. ಅವನು ಎದ್ದು ಕನ್ನಡಿಯ ಮುಂದೆ ನಿಂತು ನೋಡಿಕೊಂಡ ಕೆನ್ನೆಗಳೆರಡೂ ಕೆಂಪಾಗಿದ್ದವು. ಕೈಗಳಿಂದ ಉಜ್ಜಿಕೊಂಡು ಮುಗುಳ್ನಕ್ಕ. ಈ ಪ್ರೀತಿಯ ಕದನ ಆಪ್ಯಾಯಮಾನವಾಗಿತ್ತು.

ಅವರಿಬ್ಬರೂ ಹೊರಟಾಗ, ವನಜಮ್ಮ ನುಡಿದಳು. "ತಿಂಡಿ ಕಾಫೀನ ಮುಗಿಸ್ಕೊಂಡು ಹೊರಡಿ. ವಾಪಸ್ಸು ಬರೋಕೆ ಎಷ್ಟು ಹೊತ್ತಾಗುತ್ತೋ ಏನೋ?"

"ಬೇಡಿ ಅಮ್ಮ ಹೊರಗೇ ಎಲ್ಲಾದ್ರೂ ತಿಂತೀವಿ. ಊಟಕ್ಕೆ ನಮಗೋಸ್ಕರ ಕಾಯಬೇಡಿ ಬರ್ತೀವಿ" ನೀಟಾಗಿ ಅಲಂಕರಿಸಿಕೊಂಡು ಆಕರ್ಷಕಳಾಗಿದ್ದ

ಸೊಸೆಯನ್ನು ಕಣ್ತುಂಬ ನೋಡಿದಳು. ತೆಳ್ಳನೆಯ ಎತ್ತರವಾದ ಬಳುಕುವ ದೇಹ, ದೇಹಸಿರಿಯನ್ನು ಹೆಚ್ಚಿಸುವಂತೆ ಉಟ್ಟಿದ್ದ ಸಿಲ್ಕ್ ಸೀರೆ, ಅದಕ್ಕೆ ಒಪ್ಪುವ ತೋಳಿಲ್ಲದ ರವಿಕೆ, ಉಡುಗೆಗೆ ಹೊಂದುವಂಥ ಒಡವೆಯ ಸೆಟ್. ಮುಖದ ಸೌಂದರ್ಯವನ್ನು ಇಮ್ಮಡಿಗೊಳಿಸುವಂತಿದ್ದ ಕೇಶ ವಿನ್ಯಾಸ.... ಮೆಚ್ಚುಗೆ ಕಣ್ಣಲ್ಲಿ ಹೊಮ್ಮಿತು.

ನೋಡಿದವರು ಕಣ್ಣು ಅರಳಿಸುವಂತಿದೆ ಅವಳ ರೂಪ. ಅದಕ್ಕೆ ಇವನಿಗೆ ಪರವೂರಿಗೆ ಕರೆದುಕೊಂಡು ಹೋಗಲು ಭಯ ಅಂತಂದುಕೊಂಡಳು. ಅವರುಗಳು ಹೋಗಿ ಹತ್ತು ನಿಮಿಷಗಳೂ ಆಗಿರಲಿಲ್ಲ. ಮುಂಬಾಗಿಲ ಬೆಲ್ ಆಯಿತು. ಬಾಗಿಲನ್ನು ತೆರೆದ ವನಜಮ್ಮ, ಹೊರ ಬಾಗಿಲಲ್ಲಿ ನಿಂತಿದ್ದ ಸುಜಯಳನ್ನು ಕಂಡು ಹುಬ್ಬೇರಿಸಿದಳು.

"ಆಂಟೀ.... ದೀಪಾ ಇದಾಳಾ?" ಅತ್ತ ಇತ್ತ ನೋಡುತ್ತಾ ಇಬ್ಬಗೆಯ ಗೊಂದಲ ದಲ್ಲಿ ಕೇಳಿದಳು.

"ಇಲ್ಲ, ಈಗ್ತಾನೇ ಹೊರಗೆಲ್ಲೋ ಹೋದ್ರು..... ಒಳಗ್ಬಾ..... ಅಲ್ಲೇ ನಿಂತಿದೀಯಲ್ಲ" ಸೌಜನ್ಯದಿಂದ ಕರೆದಳು.

"ಪರವಾಗಿಲ್ಲ ಆಂಟೀ.... ಆಟೋರಿಕ್ಷಾನ ನಿಲ್ಲಿಸ್ಕೊಂಡಿದೀನಿ. ನನ್ನ ತಂಗೀನೂ ಬಂದಿದಾಳೆ. ಷಾಪಿಂಗ್ ಹೊರಟಿದ್ದೆವು. ದೀಪನ್ನ ಕರ್ಕೊಂಡು ಹೋಗೋಣ ಅಂತ ಬಂದ್ವು...."

"ನಿನ್ನ ತಂಗೀನೂ ಕರಿ. ಒಂದು ಗಳಿಗೆ ಕೂತಿದ್ದು ಹೋಗೋರಂತೆ, ಕುಡಿಯೋಕೆ ಏನಾದ್ರೂ ಕೊಡ್ತೀನಿ"

"ಏನೂ ಬೇಡ ಆಂಟೀ...." ಅವಳ ಮುಖದಲ್ಲಿ ವಿಚಿತ್ರ ಭಾವನೆಗಳು ಮೂಡಲಾರಂಭಿಸಿತು. ಆಕೆಯ ಬಲವಂತ ಅಸಹನೀಯವೆನಿಸಿತು. ಚಡಪಡಿಸುತ್ತಾ ಹೊರಗೇ ನಿಂತವಳನ್ನು ವನಜಮ್ಮ ವಿಸ್ಮಯದಿಂದ ನೋಡಿದಳು.

"ಹೋಗ್ಲಿ ಬಿಡು. ಒಳಗೆ ಬರೋಕೆ ನಿಂಗೆ ಸಂಕೋಚ, ಕೋಡುಬಳೆ, ಕೊಬ್ಬರಿ ಮಿಠಾಯಿನ ಮಾಡಿದ್ದೆ.... ಒಂದ್ನಾಲ್ಕನ್ನು ಕವರಿಗೆ ಹಾಕಿ ಕೊಡ್ತೀನಿ.... ಒಂದ್ಗಳಿಗೆ ನಿಂತ್ಕೋ" ಎಂದು ಹೇಳಿ ವನಜಮ್ಮ ಒಳಗೆ ಬಂದಳು. ಅವಳು ವಾಪಸ್ಸು ಬರುವಷ್ಟರಲ್ಲಿ ಸುಜಯ ಅಲ್ಲಿರಲಿಲ್ಲ. ವನಜಮ್ಮನ ಹಿಂದೆಯೇ ಎರಡು ಅಡಿ ಇಟ್ಟು ಒಳ ಬಂದವಳ ಕಣ್ಣುಗಳು ಅಭ್ಯಾಸ ಬಲದಿಂದ ಗೋಡೆಯ ಮೇಲೆ ತೂಗು ಹಾಕಿದ್ದ ಫೋಟೋಗಳ ಕಡೆ ಹರಿಯಿತು. ಯಾರು ಇಲ್ಲ ಎನ್ನುವುದನ್ನು ತಿಳಿದು ನೇರವಾಗಿ ಹತ್ತಿರದಿಂದ ನೋಡಲು ಪ್ರಯತ್ನಿಸಿದಳು. ಆದರೆ ಏಕೋ ಏನೋ ನೋಡಲು ಆಗಲೇ ಇಲ್ಲ. ಏನೋ ವೇದನೆ, ಏನೋ ತಳಮಳ ಪ್ರಾರಂಭವಾಗುತ್ತಿದ್ದಂತೆಯೇ ಎಲ್ಲವನ್ನೂ ಮರೆತು ಬಾಗಿಲಿಂದಾಚೆ ಬಂದು ಬಿಟ್ಟಳು. ವನಜಮ್ಮನಿಗೆ ಆಟೋರಿಕ್ಷಾ ಹೊರಟ ಸದ್ದು ಕೇಳಿಸಿತು. ಅವಸರದಿಂದ ಹೊರ ಬಂದು ಹಿಂದಿನಿಂದ ಕೂಗು ಹಾಕಿದಳು. ಸುಜಯ ತಿರುಗಿ ನೋಡಿರಲಿಲ್ಲ.

"ಎಷ್ಟು ಸೊಕ್ಕು ಈ ಹುಡುಗಿಗೆ.... ನನ್ನ ಮಾತಿಗೆ ಗೌರವ ಬೇಡ್ವೇ.... ಅಂಥಾ ಅವಾಂತರ ಏನಿತ್ತು. ಒಳಗ್ನಿಂದ ಬರೋ ಅಷ್ಟರಲ್ಲಿ ಹೊರಟು ಹೋದಳಲ್ಲ. ಅಷ್ಟು ಸಹನೆ ಬೇಡವೇ....! ಅಸಹನೆಯಿಂದ ತುಟಿ ಸೊಟ್ಟ ಮಾಡಿದಳು.

*        *        *

ಪಾರ್ಟಿ ಏರ್ಪಾಡಾಗಿದ್ದ ಹಾಲಿಗೆ ಎಲ್ಲರೂ ಒಟ್ಟಾಗಿ ಬಂದಿಳಿದರು. ನವ ದಂಪತಿಗಳೇ ಕೇಂದ್ರ ಬಿಂದುಗಳಾಗಿದ್ದುದರಿಂದ, ಎಲ್ಲರ ಗಮನವೂ ಅವರಿಬ್ಬರ ಮೇಲೆ. ಕಡು ನೀಲಿ ಮಿಶ್ರಿತ ಕಪ್ಪು ಬಣ್ಣದ ಸೂಟ್‌ನ್ನು ದಿನೇಶ ಧರಿಸಿದ್ದ. ಕಪ್ಪು, ನೀಲಿ ಚುಕ್ಕಿಗಳಿರುವ ಟೈ ಸೂಟ್‌ಗೆ ಚೆನ್ನಾಗಿ ಹೊಂದುತ್ತಿತ್ತು. ದೀಪಾಳ ತಂದೆ ವರೋಪಚಾರದಲ್ಲಿ ಅಳಿಯನಿಗೆ ಕೊಟ್ಟ ಭಾರಿ ಸೂಟ್.... ದೀಪ ಮೆಚ್ಚುಗೆಯ, ಪ್ರೀತಿಯ ನೋಟವನ್ನು ಅನೇಕ ಬಾರಿ ಅವನ ಮೇಲೆ ಹರಿಸಿದ್ದಳು.

ಅವನ ಉಡುಗೆಗೆ ಸರಿ ಹೊಂದುವಂತೆ ದೀಪ ಆಕಾಶ ನೀಲಿ ಬಣ್ಣದ ಭಾರಿ ರೇಶಿಮೆ ಸೀರೆಯನ್ನು ಉಟ್ಟಿದ್ದಳು. ಒಡಲ ತುಂಬಾ ಹೊಳೆಯುವ ಜರಿಯ ಬೂಟಾ ಹೂಗಳು, ಕಡು ನೀಲಿ ಬಣ್ಣದ ಅಂಚು ಹಾಗೂ ಸೆರಗು ಇರುವ ಸೀರೆಗೆ ಒಪ್ಪುವಂತೆ, ಕಡು ನೀಲಿ ಬಣ್ಣದ ತೋಳಿಲ್ಲದ ರವಿಕೆಯನ್ನು ತೊಟ್ಟಿದ್ದಳು. ನೀಲಮಣಿಯ ನೆಕ್ಲೆಸ್, ಬಿಳಿಯ ಕೊರಳಲ್ಲಿ ಎದ್ದು ಕಾಣುತ್ತಿತ್ತು. ಕಿವಿಯಲ್ಲಿ ನೀಲಮಣಿಯ ಓಲೆಗಳು, ಕೈಗಳಲ್ಲಿ ನೀಲಮಣಿಯ ಬಳೆಗಳೊಂದಿಗೆ, ಚಿನ್ನದ ಬಳೆಗಳು... ಬ್ಯೂಟಿ ಪಾರ್ಲರ್‌ಗೆ ಹೋಗಿ, ಸಾಯಂಕಾಲದ ಪಾರ್ಟಿಗೆ ಒಪ್ಪುವಂತೆ ವಿಶೇಷ ವಿನ್ಯಾಸದ ಹೇರ್‌ಸ್ಟೈಲ್ ಮಾಡಿಸಿಕೊಂಡಿದ್ದಳು. ಎಲ್ಲರೂ ನವದಂಪತಿಗಳನ್ನು ಮೆಚ್ಚುಗೆಯಿಂದ ನೋಡಿ ಹೊಗಳುವವರೇ, ವನಜಮ್ಮ ಹಿಗ್ಗಿ ಹೆಗ್ಗೋಡಾಗಿದ್ದಳು.

ದಿನೇಶ ಅದೃಷ್ಟವಂತ. ಅಪ್ಸರೆಯಂಥ ಹೆಂಡತಿ ಸಿಕ್ಕಿದ್ದಾಳೆ. ಮಹೇಶನಿಗೂ ಹೀಗೆ ಚೆನ್ನಾಗಿರುವ ಹುಡುಗಿಯನ್ನು ನೋಡಬೇಕು. ವನಜಮ್ಮ ಮನದಲ್ಲೇ ಯೋಚಿಸು ತ್ತಿದ್ದಳು. ಹಾಗೇ ಅತ್ತಿತ್ತ ನೋಡುವಾಗ ಅವಳಿಗೆ ಸುಜಯ ಕಣ್ಣಿಗೆ ಬಿದ್ದಳು. ಮುಖದಲ್ಲಿ ನೆರಿಗೆಗಳು ಮೂಡಿದವು.

ಹೊರಬಾಗಿಲಲ್ಲಿ ನಿಂತು ಮಾತನಾಡುತ್ತಿದ್ದ ಮಹೇಶ, ಸುಜಯ ತನ್ನ ತಂಗಿಯೊಂದಿಗೆ ಬಂದುದನ್ನು ಗಮನಿಸಿದ. ಮಂದಹಾಸ ಮಿನುಗಿತು. ಅವಳ ಬಳಿ ಸಾರಿ "ಹಲೋ....." ಎಂದ. ಅವಳೂ ಮುಗುಳ್ನಕ್ಕು "ಹಾಯ್" ಎಂದಳು. ತನ್ನ ತಂಗಿಯ ಪರಿಚಯವನ್ನು ಮಾಡಿಕೊಟ್ಟಳು.

"ಇವಳು ನನ್ನ ತಂಗಿ ಸುಮತಿ....."

"ಹೂಂ, ಮದುವೇಲಿ ಇವರನ್ನು ನೋಡಿದ್ದೆ.... ಹೇಗಿದೀರಿ?" ಅವಳನ್ನು ಕೇಳಿದ.

"ಫೈನ್, ನೀವಿಬ್ರೂ ಮಾತಾಡ್ತಾಇರಿ. ನಾನು ದೀಪನ್ನ ಮಾತನಾಡಿಸಿ ಬರ್ತೀನಿ"

ತಂಗಿ ಅತ್ತ ಸರಿದು ಹೋಗಿದ್ದಳು.

"ನಿಮ್ಮ ತಂಗಿ ತುಂಬಾ ಕ್ಲೆವರ್....." ಹೊಗಳಿದ.

"ಹೂಂ. ಇಲ್ದಿದ್ರೆ ಇಂಜಿನಿಯರಿಂಗ್ ಮಾಡೋಕೆ ಆಗ್ತಿತ್ತಾ?"

"ನಾನು ಆ ಅರ್ಥದಲ್ಲಿ ಹೇಳಲಿಲ್ಲ. ಹೋಗ್ಲಿ ಬಿಡಿ. ಈ ಡ್ರೆಸ್‌ನಲ್ಲಿ ನೀವು ಚಿಕ್ಕ ಹುಡುಗಿ ಥರ ಕಾಣ್ತಿದೀರಿ" ಅವನ ಹೊಗಳಿಕೆ ಅವಳಿಗೆ ಇಷ್ಟವಾಗಲಿಲ್ಲ.

"ನಂಗೆ ಈ ಕಲರ್ ಒಂದು ಚೂರೂ ಇಷ್ಟವಿಲ್ಲ. ದೀಪಂದು ಒಂದೇ ಹಠ. ಇದು ಅವಳು ಕೊಡಿಸಿರುವ ಡ್ರೆಸ್......ನಂಗೆ ನನ್ನ ತಂಗಿಗೆ ಒಂದೇ ತರಹ.....ಇವತ್ತು ಹಾಕ್ಕೊಂಡು ಬರ್ಲೇಕೂಂತ ಫೋನ್ ಮಾಡಿದ್ಲು....."

"ಯಾಕೆ ಏನಾಗಿದೆ? ಈ ಕಲರ್ ನಿಮಗೆ ಒಪ್ಪುತ್ತೆ. ನನಗೆ ಈ ಕಲರ್ ಅಂತಂದ್ರೆ ಒಂಥರಾ ಇಷ್ಟ....."

"ತಮಾಷೆ ಮಾಡ್ತಿದೀರಿ ನಂಗೊತ್ತು" ಮುಖ ಸಿಂಡರಿಸಿದಳು.

"ಇಲ್ಲ, ಖಂಡಿತಾ ಇಲ್ಲ. ನಾನು ನಿಜ ಹೇಳಿದ್ರೂ ನಂಬುಲ್ಲವಲ್ಲ. ಒಳಗೆ ಕೂತು ಮಾತ್ನಾಡೋಣ ಬನ್ನಿ" ಅವರಿಬ್ಬರೂ ಒಳ ಬರುತ್ತಿದ್ದಂತೆ ತಂಗಿ ಎದುರಾದಳು. ಸುಜಯಳ ಕಿವಿಯಲ್ಲಿ ಏನನ್ನೋ ನುಡಿದಳು.

"ಒಂದ್ನಿಮಿಷ ಈಗ್ಬಂದೆ" ಎಂದು ಹೇಳಿ ಹೋದಳು ಎಲ್ಲಿ ಮರೆಯಾದಳೋ ಮತ್ತೆ ಅವನ ಕಣ್ಣಿಗೆ ಬೀಳಲಿಲ್ಲ.

"ಆಗ್ಲೇ ನಿಂಜೊತೆ ಮಾತಾಡ್ತಾ ಇದ್ಲಲ್ಲ ಆ ಹುಡ್ಗಿ ಯಾರು?" ವನಜಮ್ಮ ಹತ್ತಿರ ಬಂದು ಕೇಳಿದಾಗ ಬೇಸರಿಸಿದ.

"ಯಾಕೆ?"

"ಹುಡುಗಿ ಚೆನ್ನಾಗಿಲ್ಲ.... ಅದಕ್ಕೇ ಯಾರೂಂತ ಕೇಳ್ದೆ....."

"ಸುಜಯ, ಅವಳ ತಂಗಿ ಸುಮತಿ ಇಬ್ರೂ ನನ್ಹತ್ರ ಮಾತಾಡ್ತಿದ್ರು. ಇಬ್ರೂ ಚೆನ್ನಾಗಿದಾರೆ ನೀನು ಯಾರ ಬಗ್ಗೆ ಹೇಳಿದ್ಯೋ ನಂಗೆ ಗೊತ್ತಾಗ್ಲಿಲ್ಲ" ಅವನಿಗೆ ಒಳಗೊಳಗೇ ಒಂಥರಾ ಖುಷಿಯಾಗಿತ್ತು.

"ಸುಜಯಾನಾ? ನಾನು ಇನ್ಯಾರೋ ಅಂತ ಅಂದ್ಕೊಂಡೆ..... ಅವಳು ಒಂದೊಂದ್ಸಾರಿ ಒಂದೊಂದು ಥರ ಕಾಣ್ತಾಳೆ. ಸೀರೆ ಉಟ್ಕೊಂಡಿದ್ರೆ ದೊಡ್ಡ ಹೆಂಗಸಿನ ಥರ ಕಾಣ್ತಾಳೆ. ಅದೇ ಈ ಡ್ರೆಸ್‌ನಲ್ಲಿ ಚಿಕ್ಕ ಹುಡುಗಿ ಥರ ಕಾಣ್ತಾಳೆ. ನಂಗೆ ಗುರುತೇ ಸಿಗಲಿಲ್ಲ" ಮಹೇಶ ಮಾತಾಡಲಿಲ್ಲ, ಸುಮ್ಮನೇ ನಿಂತಿದ್ದ.

"ನೀನೂ ಸೂಟ್ ಹೊಲಿಸ್ಕೋ ಬೇಕಾಗಿತ್ತು. ದಿನೇಶನ್ನ ನೋಡು ಒಳ್ಳೇ ರಾಜಕುಮಾರನ ಹಾಗೆ ಕಾಣ್ತಿದಾನೆ......"

"ಅದು ಅವರ ಮಾವ ಕೊಟ್ಟ ಸೂಟ್..... ನಂಗೂ ಒಬ್ಬ ಮಾವ ಕೊಟ್ರೆ ಹಾಕ್ಕೋತೀನಿ. ಇಲ್ದಿದ್ರೆ ಸಾವಿರಾರು ರೂಪಾಯಿ ಖರ್ಚು ಮಾಡಿ, ನಾನಂತೂ

ಸೂಟ್ ಗೀಟ್ ಹೊಲಿಸಿಕೊಳ್ಳೋನಲ್ಲ..... ಈಗೇನಾಗಿದೆ ನನ್ನ ಡ್ರೆಸ್‌ಗೆ?"

"ಚೆನ್ನಾಗಿದೆ. ಏನೋ ನೀನೂ ಸೂಟ್ ಹಾಕ್ಕೊಂಡಿದಿದ್ರೆ ಚೆನ್ನಾಗಿತ್ತು ಅಂತನ್ನಿಸ್ತು ಹೇಳ್ದೆ. ಇಷ್ಟು ಗ್ರ್ಯಾಂಡ್ ಪಾರ್ಟಿ ಕೊಡ್ತಿದಾರೆ. ನಿನ್ನ ಫ್ರೆಂಡ್ಸ್‌ನ್ನು ಕರೆಯಬಹುದಾಗಿತ್ತು. ದಿನೇಶನಾದ್ರೂ ಅವನ ಸ್ನೇಹಿತರನ್ನು ಕರೆಯಬೇಕಾಗಿತ್ತು.....ಬರೀ ಅವರ ಕಡೆಯವರೇ..... ನಮ್ಮ ಕಡೆಯವ್ರು ಯಾರೂ ಇಲ್ಲ...."

"ಅದಕ್ಕೇ ನಿಂಗ್ಯಾಕೆ ಬೇಜಾರು?"

"ನಾನಂತೂ ಪಾರ್ಟಿ ಮಾಡಿ ಯಾರನ್ನು ಕರೆಯಲ್ಲ. ಈ ನೆವದಲ್ಲಿ ನಮ್ಮ ಬಳಗದವರಿಗೆ ಹೇಳಬಹುದಾಗಿತ್ತು. ಶಿವರಾಮಯ್ಯರಿಗೆ ಅಷ್ಟು ತಿಳೀಬೇಡ್ವೇ?"

"ಅದು ಅವರ ಇಷ್ಟ. ಇದಕ್ಕೆ ನಿನ್ನ ಆಕ್ಷೇಪಣೆ ಯಾಕೆ?"

"ಆಕ್ಷೇಪಣೆ ಏನಿಲ್ಲ. ಅನ್ನಿಸಿದ್ದನ್ನ ಹೇಳ್ದೆ ಅಷ್ಟೇ. ನಿಂಗ್ಯಾಕೆ ಕೋಪ?"

"ಮತ್ತೆ? ಇಲ್ಲಿ ನಿಂತು ಹೀಗೆಲ್ಲಾ ಮಾತಾಡ್ತೀಯಲ್ಲಮ್ಮ.... ನಿಂಗಂತೂ ಏನೂ ಗೊತ್ತಾಗುಲ್ಲ...."

"ಹೌದು. ನಂಗೆ ಏನೂ ಗೊತ್ತಾಗುಲ್ಲ. ನೀನು ತಿಳಿಸ್ಕೊಡು. ದಿನೇಶನೂ ಹೊರಟು ಹೋದ್ರೆ ನಿನ್ನನ್ನೇ ಎಲ್ಲಾದಕ್ಕೂ ಅವಲಂಬಿಸ್ಬೇಕು. ಇನ್ನು ಎಷ್ಟೆಷ್ಟು ಅನ್ನಿಸ್ಕೋಬೇಕೋ?"

"ನೀನೂ ಅವನ ಜೊತೆ ಹೊರಟು ಹೋಗು. ನಾನು ಹಾಯಾಗಿರ್ತೀನಿ" ನಕ್ಕ.

"ನಾನಾಗಿಯೇ ಬರ್ತೀನಿ ಅಂತಂದ್ರೂ ಒಪ್ಪಲಿಲ್ಲ. ಏನು ವಿಚಿತ್ರವೋ ನಂಗಂತೂ ತಿಳಿಯದು. ಹೆಂಡ್ತೀನ್ನೇ ಕರ್ಕೊಂಡು ಹೋಗ್ತಿಲ್ಲ. ಇನ್ನು ನನ್ನನ್ನು ಕರ್ಕೊಂಡು ಹೋಗ್ತಾನಾ?"

"ನಿನ್ನನ್ನು ಕರ್ಕೊಂಡ್ಹೋಗು ಅಂತ ನಾನು ಅವನ್ಗೆ ಹೇಳ್ತೀನಿ"

"ನಿನ್ನ ಮಾತನ್ನೆಲ್ಲಿ ಕೇಳ್ತಾನೆ?"

"ನಿಂಗ್ಯಾಕೆ ಅನುಮಾನ ಅವನು ನನ್ನ ಮಾತಿಗೆ ಒಪ್ಪಿ ನಿನ್ನನ್ನ ಕರ್ಕೊಂಡು ಹೋದ್ರೆ ನಾನು ಕೇಳಿದ್ದನ್ನು ಕೊಡ್ತೀಯಾ?"

"ಅಯ್ಯೋ ಪೆದ್ದೇ ಏನಿದೆ ನನ್ಹತ್ರ! ಹಣವೇ ಆಸ್ತಿಯೇ....?"

"ಹಣ ಆಸ್ತಿ ಏನೂ ಬೇಡ ಆದರೆ ನಾನು ಕೇಳಿದ್ದಕ್ಕೆ ಇಲ್ಲ ಅಂತ ಅನ್ಬಾರ್ದು.... ಆದರೆ ಈಗಲೇ ಅಲ್ಲ ಸಮಯ ಬಂದಾಗ ಕೇಳ್ತೀನಿ."

"ಸರಿ. ನೀನೊಬ್ಬ ತರಲೆ. ಒಂದ್ಸಾರಿಯಾದ್ರೂ ಸರಿಯಾಗಿ ಮಾತನಾಡುಲ್ಲ. ನಾವಿಬ್ರೇ ಇಲ್ಲಿ ನಿಂತು ಮಾತಾಡ್ತಿದ್ರೆ ನೋಡಿದೋರು ಏನಂದ್ಕೊಂಡಾರು? ನಡೀ...."

"ಏನದು? ತಾಯಿ ಮಗ ಇಬ್ಬರೂ ಭಾರೀ ಚರ್ಚೆಯಲ್ಲಿ ಮುಳುಗಿದೀರಿ?" ಶಕುಂತಲ ಬಂದು ವಿಚಾರಿಸಿದಾಗ ಮುಜುಗರವೆನಿಸಿತು.

"ಏನಿಲ್ಲ...." ವನಜಮ್ಮ ನುಡಿದಳು. ಮಹೇಶ ಅಲ್ಲಿಂದ ಸರಿದಿದ್ದ. ಅಷ್ಟರಲ್ಲಿ ಪ್ರಭಾವತಿ ಬಂದು ಅವರಿಬ್ಬರನ್ನು ಸೇರಿಕೊಂಡಳು.

"ಓ, ಪ್ರಭಾವತಿ! ಈಗ ನಿಮ್ಮ ಯಜಮಾನ್ರು ಹೇಗಿದಾರೆ? ಪರವಾಗಿಲ್ವಾ?"

"ಹುಂ ಹುಶಾರಾಗಿದಾರೆ. ಆದರೂ ಹೆಚ್ಚಿಗೆ ಓಡಾಡಬಾರದು ಅಂತ ಡಾಕ್ಟ್ರು ಹೇಳಿದಾರೆ.... ದೀಪಾ ಡೆಲ್ಲಿಗೆ ಹೋಗ್ತಾ ಇಲ್ಲವಂತೆ.... ಯಾಕೆ? ನಿಮ್ಮ ಮಗ ಒಬ್ರೇ ಹೊರಟಿದ್ದಾರಂತೆ ಹೌದಾ?" ಪ್ರಭಾವತಿ ಈ ಮಾತನ್ನೆತ್ತಿದಾಗ ಶಕುಂತಲಳ ಮುಖ ಹುಳ್ಳಗಾಯಿತು. ಅಲ್ಲಿ ನಿಲ್ಲಬೇಕೆನಿಸಲಿಲ್ಲ.

"ಎಲೆ ಹಾಕಿದ್ದಾಗಿದೆ. ಎಲ್ಲಾ ಊಟಕ್ಕೆ ಬನ್ನಿ" ಎಂದು ಹೇಳಿ ಒಳಗೆ ನಡೆದಳು.

"ಹುಂ. ಆಫೀಸಿನ ಕೆಲ್ಸದ ಮೇಲೆ ಆರು ತಿಂಗಳ ಮಟ್ಟಿಗೆ ಹೋಗ್ತಾ ಇದಾನಲ್ಲ. ಅಲ್ಲಿ ಕೆಲ್ಸ ಜಾಸ್ತಿ ಇರುತ್ತೆ. ಹೊರಗೆಲ್ಲೂ ತಿರುಗಾಡುಕ್ಕೆ ಆಗುಲ್ಲವಂತೆ. ಈ ಹುಡ್ಗಿ ಮನೇಲಿ ಒಂದೇ ಕೂತು ಏನ್ಮಾಡುತ್ತೆ? ಹೊಸ ಜಾಗ, ಹೊಸ ಜನ, ಹೊಸ ಭಾಷೆ.... ಹೊತ್ತು ಕಳೆಯೋದಾದ್ರೂ ಹೇಗೆ? ಅದಕ್ಕೇ ನಮ್ಮ ಮನೇಲೇ ಇದ್ಕೊಂಡು, ಕಂಪ್ಯೂಟರ್ ಕೋರ್ಸ್‌ಗೆ ಸೇರ್ಕೋತಾಳೆ" ವನಜಮ್ಮ ಹೆಮ್ಮೆಯಿಂದ ಹೇಳಿಕೊಂಡಳು.

"ದೀಪಾ, ಕೆಲ್ಸಾನ ಬಿಡ್ಬಾರ್ದಾಗಿತ್ತು. ಲಗ್ನಪತ್ರಿಕೆ ಆಗುವ ಮೊದಲೇ ಯಾರ್ಗೂ ತಿಳಿಸ್ದೇ ರೆಸಿಗ್ನೇಷನ್ ಲೆಟರ್ ಕೊಟ್ಟು ಬಂದಳಂತೆ. ಇದ್ದ ಕೆಲ್ಸಾನ ಹಿಂದು ಮುಂದೆ ಯೋಚಿಸದೇ ಯಾರಾದ್ರೂ ಬಿಡ್ತಾರ್ಯೇ! ಪೆದ್ದು ಹುಡುಗಿ...."

"ಅವಳು ಕೆಲ್ಸಕ್ಕೆ ಹೋಗೋದು, ನಮ್ಮ ದಿನೇಶಂಗೆ ಸುತರಾಂ ಇಷ್ಟವಿಲ್ಲ. ಮನೇಲಿ ಹಾಯಾಗಿ ನನ್ನ ಜೊತೆಗಿರ್ತಾಳೆ ಬಿಡಿ. ದಿನೇಶಂಗೇ ಒಳ್ಳೆಯ ಸಂಬಳ ಬರುತ್ತೆ. ಇವಳ ಸಂಪಾದನೆಯ ಅಗತ್ಯ ನಮಗೆ ಇಲ್ಲವೇ ಇಲ್ಲ. ಇನ್ನೆರಡು ತಿಂಗಳಿಗೆ, ನಿಮಗೇ ಅವಳ ಗುರ್ತು ಸಿಗುಲ್ಲ.... ಹಾಗೇ ಗುಂಡು ಗುಂಡಗಾಗ್ತಾಳೆ ನೋಡ್ತಿರಿ"

"ಈಗಿನ ಕಾಲದ ಹುಡ್ಗೀರು ಮೊದಲೇ ನಾಜೂಕು. ಮೈ ಬರುತ್ತೆ ಅಂತ ಹೆಚ್ಚು ತಿನ್ನೋಲ್ಲ. ಮಧ್ಯಾಹ್ನ ಮಲಗುಲ್ಲ. ಹೊಸ್ದಾಗಿ ಮದ್ವೆಯಾಗಿ, ಗಂಡನಿಂದ ದೂರ ಇದ್ರೆ ಊಟ ಸೇರುತ್ಯೇ? ಕಣ್ತುಂಬಾ ನಿದ್ದೆ ಬರುತ್ಯೇ?.....ಇನ್ನೂ ಸಣಕಲು ಆಗದಿದ್ರೆ ಸಾಕು"

"ಏನ್ಮಾತಾಡ್ತೀರಿ ಪ್ರಭಾವತೀ! ನನಗೆ ಹೆಣ್ಣು ಮಕ್ಕಳಿಲ್ಲ. ದೀಪಾಳನ್ನು ನನ್ನ ಮಗಳಂತೆ ಕಣ್ಣಲ್ಲಿ ಕಣ್ಣಿಟ್ಟು ನೋಡ್ಕೋತೀನಿ. ಆದಷ್ಟು ಬೇಸರವಾಗದಂತೆ ಚೆನ್ನಾಗಿ ನೋಡ್ಕೋಳ್ತೀನಿ.... ಏನು ಹಿಂದಿನ ಕಾಲ ಕೆಟ್ಹೋಯ್ತೇ....? ನಮ್ಮ ಮನೇಲಿ ಎಲ್ಲಾ ಅನುಕೂಲಗಳಿವೆ. ಯಾವುದಕ್ಕೂ ಕೊರತೆ ಇಲ್ಲ. ಮನೇಲಿ ಫೋನಿದೆ.... ಗಂಡ ಹೆಂಡ್ತಿ ಫೋನಿನಲ್ಲಿ ಮಾತನಾಡಿಕೊಳ್ತಾರೆ.... ಆರು ತಿಂಗಳು ಕಳೆಯೋಕೆ ಏನು ಕಷ್ಟ ನೋಡ್ತಾ ನೋಡ್ತಾ ಕಳೆದ್ಹೋಗುತ್ತೆ"

"ಆರು ತಿಂಗಳು ಗಂಡ ಹೆಂಡ್ತಿ ದೂರ ದೂರ ಇರೋದು ಅಂದ್ರೇನು....! ಈ ಕಾಲದೋರು ಆರು ನಿಮಿಷ ಅಗಲಿರೋಲ್ಲ.... ಹಾಗಿರ್ತಾರೆ.... ಅಂಥಾದ್ರಲ್ಲಿ.... ಇದೇನೋ ನಂಗೆ ಅರ್ಥವಾಗುಲ್ಲ. ಆರು ತಿಂಗಳು ಕಳೆದ ನಂತರವೇ ಮದ್ವೆ ಮಾಡ್ಕೋಬೇಕಾಗಿತ್ತು. ನೀವು ಅರ್ಜೆಂಟು ಮಾಡ್ಬಿಟ್ರಿ.... ಯಾಕೋ ಇದು ಸರಿಯಲ್ಲ ಅಂತ ಅನ್ನಿಸುತ್ತೆ.... ಒಂದ್ಕೆಲ್ಸ ಮಾಡಿ. ಒಂದ್ವಾರ ಕಳೆದ್ಮೇಲೆ, ಏನಾದ್ರೂ ಉಪಾಯ ಮಾಡಿ ಇವಳನ್ನು ಕಳಿಸ್ಬಿಡಿ. ಒಂದ್ಸಾರಿ ಹೊರಟು ಹೋದ್ಮೇಲೆ, ಎಲ್ಲಾ ತಾನಾಗೇ ಸರಿ ಹೋಗುತ್ತೆ! ನಿಮಗ್ಯಾಕೆ ಹೆಣ್ಣು ಹುಡುಗಿಯ ಜವಾಬ್ದಾರಿ?"

"ಎಲ್ಲಾ ನೀವು ಹೇಳುವಷ್ಟು ಸುಲಭ ಅಲ್ಲ. ನನ್ನ ಮಗನ ಇಷ್ಟಕ್ಕೆ ವಿರುದ್ಧವಾಗಿ ನಾವು ಹೀಗೆ ಮಾಡೋಕಾಗುಲ್ಲ.... ಅವಳಿಗೆ ನಮ್ಮ ಮನೇಲಿ ಇರೋಕೆ ಆಗದಿದ್ರೆ ಅವಳ ತಂದೆ ಮನೇಲಿರ್ತಾಳೆ....ಬನ್ನಿ ಊಟಕ್ಕೆ ಹೋಗೋಣ"

"ಇವತ್ತು ಏಕಾದಶಿ. ನಾನು ಊಟ ಮಾಡುಲ್ಲ. ನಿಮ್ಹತ್ರ ಮಾತಾಡ್ಬೇಕೂಂತ್ಲೇ ಬಂದೆ...." ಇಬ್ಬರೂ ಡೈನಿಂಗ್ ಹಾಲ್‌ಗೆ ಬಂದರು.

"ಓ....ಇಷ್ಟಕ್ಕೋಸ್ಕರ ನಿಮ್ಮವರೊಬ್ಬರನ್ನೇ ಮನೇಲಿ ಬಿಟ್ಟು ಬಂದ್ರಾ" ವ್ಯಂಗ್ಯದಿಂದ ಕೇಳಿದಳು. ಮಹೇಶ ತಾಯಿಯ ಬಳಿಗೆ ಬಂದ.

"ಇಲ್ಲ. ಸುಜಯ ಸುಮತಿ ಇಬ್ರೂ ಮನೆಗೆ ಬಂದ್ಮೇಲೇ ನಾನು ಬಂದೆ" ಈ ಮಾತು ಮಹೇಶನ ಕಿವಿಗೆ ಬಿತ್ತು. ಸುಜಯ ಇಲ್ಲಿಲ್ಲ. ತನಗೆ ಗೊತ್ತಾಗದಂತೆ ಯಾವಾಗಲೋ ಹೊರಟು ಹೋಗಿದಾಳೆ.... ಅವನಿಗೆ ಬೇಸರವಾಯಿತು. ಊಟ ಕೂಡ ಬೇಡವೆನ್ನಿಸಿತು. ಆದರೆ ಮನೆಯವರೆಲ್ಲರೂ ಊಟಕ್ಕೆ ಕುಳಿತಾಗ, ಅವನೂ ಕೂರಲೇ ಬೇಕಾಯಿತು.

ಪಾರ್ಟಿ ಮುಗಿಸಿ ಎಲ್ಲರೂ ಮನೆಗೆ ವಾಪಸ್ಸಾದರು. ಒಳಗೆ ಬರುತ್ತಿದ್ದಂತೆಯೇ ದಿನೇಶ ದೀಪಾ ತಮ್ಮ ರೂಮನ್ನು ಸೇರಿಕೊಂಡರು. ವನಜಮ್ಮ ಅಡಿಗೆ ಮನೆಯ ಉಳಿದ ಕೆಲಸಗಳನ್ನು ಮಾಡತೊಡಗಿದಳು. ಸುಜಯಂಗೆ ಫೋನು ಮಾಡಿ, ಮಾತನಾಡಲೇ ಅಂತಂದುಕೊಂಡರೂ ಮಾಡಲಿಲ್ಲ. ಏನಂತ ಕೇಳುವುದು? ನನಗೆ ತಿಳಿಸದೇ ಏಕೆ ಮನೆಗೆ ಹೊರಟು ಹೋದ್ರಿ ಅಂತ ಹೇಗೆ ಕೇಳುವುದು!

"ನಿಮಗ್ಯಾಕೆ? ಅದನ್ನೆಲ್ಲ ಕೇಳೋಕೆ ನೀವ್ಯಾರು ಅಂತ ಅಂದುಬಿಟ್ಟರೇ? ಅತ್ತಿಂದಿತ್ತ ಹತ್ತು ಬಾರಿ ಓಡಾಡಿದ. ಹೊರ ಬಂದ ವನಜಮ್ಮ ಮಗ ಶತಪಥ ತಿರುಗುತ್ತಿರುವುದನ್ನು ಕಂಡಳು.

"ಏನಾಯ್ತೋ.... ಯಾಕೆ ಹೀಗೆ ತಿರುಗ್ತಿದೀಯ?"

"ಅಲ್ಲಮ್ಮ, ನೀನ್ಯಾಕೆ ಆಕೆ ಹತ್ರ ಅಷ್ಟು ಮಾತಾಡ್ದೇ" ಇದ್ದಕ್ಕಿದ್ದಂತೆ ಮಹೇಶ ಕೇಳಿದಾಗ ಅವಳು ಹುಬ್ಬು ಗಂಟಿಕ್ಕಿದಳು.

"ಯಾರ ಹತ್ರ? ನಾನೇನ್ಮಾತಾಡ್ದೆ?"

"ಸುಜಯನ ತಾಯಿ ಹತ್ರ.... ಸ್ವಲ್ಪ ಪರಿಚಯವಿದ್ದ ಮಾತ್ರಕ್ಕೇ ಅಷ್ಟು ಹೊತ್ತಾ ಮಾತ್ನಾಡೋದು...."

"ಅಕೇ ಕೇಳಿದ್ದಕ್ಕೆ ತಕ್ಕ ಉತ್ತರ ಕೊಟ್ಟೆ.... ಅದು ತಪ್ಪಾ? ಅಲ್ಲಾ ಆಕೆ ಹಾಗಾ ಮಾತ್ನಾಡೋದು? ನಯ ನಾಜೂಕು ಬೇಡ್ವೇ? ಆಕೆಯ ಮಗಳೇ ನನ್ನ ಸೊಸೆಯಾಗಿ ಬಂದಿದ್ದಿದ್ರೆ ಇಷ್ಟು ಮಾತಾಡ್ತಿರ್ಲಿಲ್ಲ. ಆ ಹುಡ್ಗಿ ತಪ್ಪಿದ್ದು ಒಳ್ಳೇದೇ ಆಯ್ತು. ಆ ಹುಡ್ಗಿ ಸರಿಯಿಲ್ಲ...."

"ಏನಮ್ಮಾ.... ಹೀಗ್ಮಾತಾಡ್ತೀಯ? ಅವಳೇನ್ಮಾಡಿದ್ಲು ನಿಂಗೆ?"

"ಅಯ್ಯೋ.... ನೀನ್ಯಾಕೆ ಹೀಗೆ ಆಡ್ತೀಯ? ನಮ್ಮನೆಗೆ ಬಂದಾಗೆಲ್ಲಾ ವಿಚಿತ್ರವಾಗಿ ವರ್ತಿಸುತ್ತೆ. ಖಂಡಿತಾ ಸರಿಯಿಲ್ಲ.... ಈಗೊಂದೆರಡು ದಿನಗಳ ಕೆಳಗೆ ತಂಗೀನೂ ಕರ್ಕೊಂಡು ನಮ್ಮನೆಗೆ ಬಂದಿತ್ತು.... ದೀಪಂಗೋಸ್ಕರ ಷಾಪಿಂಗ್ ಹೊರಟಿದ್ಲಂತೆ.... ಒಳಕ್ಕೆ ಕರೆದ್ರೆ ಬರ್ಲಿಲ್ಲ.... ಹೋಗ್ಲಿ ಅಂತ, ಒಂದ್ನಿಮಿಷ ನಿಂತ್ಕೋ ತಿಂಡಿ ತಂದು ಕೊಡ್ತೀನಿ ಅಂತ ಒಳಗೆ ಹೋಗಿ ಹೊರಗೆ ಬರುವಷ್ಟರಲ್ಲಿ ಹೊರಟೇ ಹೋಗಿದ್ಲು..... ಒಂದು ಗೌರವ, ಸೌಜನ್ಯ ಏನೂ ಬೇಡ್ವೇ... ನಂಗಂತೂ ಸರಿ ಕಾಣ್ಲಿಲ್ಲ. ಒಟ್ನಲ್ಲಿ ಆ ಹುಡ್ಗಿ ಸರಿಯಿಲ್ಲ ಬಿಡು" ಮಹೇಶ ಸುಜಯಳನ್ನು ಕುರಿತು ಚಿಂತಿಸುತ್ತಿದ್ದ.

"ಈಗ ನಿಂಗೇನಾಯ್ತೋ ಒಳ್ಳೇ ಗರ ಬಡಿದೋನ ಹಾಗೆ ನಿಂತಿದೀಯಲ್ಲ...." ಆಕೆ ಎಚ್ಚರಿಸಿದಳು.

"ಏನೋ ಯೋಚಿಸ್ತಿದ್ದೆ.... ಅವಳಿಗೂ ಒಂಥರ ಮುಜುಗರ ಇರುಲ್ವೇನಮ್ಮಾ.... ಅವಳಿಗೆ ದಿನೇಶ ಒಪ್ಗೆ ಆಗ್ಲಿಲ್ಲ.... ಅದಕ್ಕೆ ಒಳಗೆ ಬರ್ಲಿಲ್ಲವೇನೋ....?"

"ನೀನ್ಯಾಕೆ ಅವಳ ಪರ ವಹಿಸ್ಕೊಂಡು ಮಾತಾಡ್ಬೇಕು...? ದಿನೇಶನ್ನ ಒಪ್ಲಿಲ್ಲ ಅನ್ನೋ ನಾಚ್ಕೆ ಮುಜುಗರ ಇದ್ದರೆ, ಬರಲೇಬಾರದು.... ಮತ್ತೆ ಮತ್ತೆ ಬರೋದು.... ಒಳಗೆ ಬರದೇ, ಹೊರಗೆ ನಾಟಕ ಆಡೋದು... ಇದು ಒಳ್ಳೇ ಹುಡುಗೀರ ಲಕ್ಷಣವಲ್ಲ...."

"ಹಿಂದು ಮುಂದು ಯೋಚಿಸದೇ ಹೀಗೆಲ್ಲಾ ಮಾತಾಡ್ಬೇಡಮ್ಮ. ನಂಗೆ ಇಷ್ಟವಾಗುಲ್ಲ. ಯಾರ್ಯಾರ ಕಷ್ಟ ಏನೇನಿರುತ್ತೋ... ?"

"ಸರಿ ಬಿಡು. ನಿಂಗೇನಾದ್ರೂ ಹೇಳಿದ್ರೆ ನಂಗೇ ಉಪದೇಶ ಮಾಡ್ತೀಯ.....ದಿನೇಶ ಡೆಲ್ಲಿಗೆ ಹೋದ್ಮೇಲೆ ದೀಪ ಅಲ್ಲಿ ಅವರಮ್ಮನ ಮನೇಲಿರ್ತಾಳೆ.... ಈ ಸುಜಯ ಅಲ್ಲಿಗೆ ಹೋಗ್ತಾಳೆ. ನಂಗೆ ನಿಂಗೆ ಚಿಂತೆ ಯಾಕೆ?" ಆಕೆ ಮಾತು ಮುಗಿಸಿದಳು. ಆದರೆ ಮಹೇಶನ ಚಿಂತೆ ಹೆಚ್ಚಾಯಿತು.

"ಏನಾಗಿದೆ ಸುಜಯಂಗೆ? ಅಮ್ಮ ಹೇಳಿದ ಹಾಗೆ ಏನಾದರೂ ಪ್ರಾಬ್ಲಂ ಇರಬಹುದೇ?" ಅದನ್ನು ತಿಳಿದು ಕೊಳ್ಳುವುದು ಹೇಗೆ?" ತನ್ನ ರೂಮಿಗೆ ಬಂದ. ಅವಳ ಫೋಟೋ ತೆಗೆದಿಟ್ಟುಕೊಂಡು ಪರೀಕ್ಷಿಸುವವನಂತೆ ನೋಡಿದ. ಈ ಮುಗುಳ್ನಗೆ

ಈ ಚೆಲುವು ತನ್ನ ತಲೆಯನ್ನು ಕೆಡಿಸಿರುವುದಂತೂ ನಿಜ.... ನಿನ್ನ ವಿಚಿತ್ರ ವರ್ತನೆಯಿಂದ ನನ್ನ ಹೃದಯಕ್ಕೆ ಹತ್ತಿರವಾಗುತ್ತಿರುವುದು ನಿಜ.... ದಿನೇಶ ನಿನಗೆ ಒಪ್ಪಿಗೆ ಆಗಲಿಲ್ಲ. ನಾನು ನಿನಗೆ ಒಪ್ಪಿಗೆಯೇ? ಇದನ್ನು ತಿಳಿದುಕೊಳ್ಳಲು ನಾನೇನು ಮಾಡಬೇಕು....? ತನ್ನನ್ನು ಯಾರೂ ಗಮನಿಸುತ್ತಿಲ್ಲವೆನ್ನುವುದನ್ನು ಖಚಿತ ಪಡಿಸಿಕೊಂಡು, ಮುಗುಳ್ನಗುವ ತುಟಿಗಳ ಬಳಿಗೆ ತನ್ನ ತುಟಿಯನ್ನು ಒಯ್ದು ಮೃದುವಾಗಿ ಚುಂಬಿಸಿದ. ಹಿತವೆನಿಸಿತು. ಫೋಟೋವನ್ನ ತನ್ನ ಎದೆಯ ಮೇಲಿರಿಸಿಕೊಂಡು ಹಾಗೇ ಹಾಸಿಗೆಯ ಮೇಲೆ ಮಲಗಿದ. ನಿದ್ದೆ ಆವರಿಸುತ್ತಿದ್ದಂತೇ.... ಕನಸಿನ ಮಾಲೆ....

ತಾನು ತನ್ನ ಮನೆಯ ಒಳಗೆ ನಿಂತುಕೊಂಡಿದಾನೆ. ಹೊರಗಡೆ ನಿಂತಿರುವ ಸುಜಯ ಇವನನ್ನೇ ಮುಗುಳ್ನಗುತ್ತಾ ನೋಡುತ್ತಿದ್ದಾಳೆ. ಇವನು ಕೈ ಮಾಡಿ ಬಾ.... ಬಾ.... ಎಂದು ಕರೆದಾಗ ಅವಳು ತಲೆಯಾಡಿಸುತ್ತಾ ಬರುವುದಿಲ್ಲ ಎನ್ನುತ್ತಿದ್ದಾಳೆ.... ಇವನು ಮತ್ತೆ ಮತ್ತೆ ಕರೆದಾಗ, ಅವಳು ಅತ್ತಿತ್ತ ನೋಡಿ, ನಿಧಾನವಾಗಿ ಹೆಜ್ಜೆಗಳನ್ನಿಡುತ್ತಾ ಇವನು ನಿಂತಿದ್ದೆಡೆಗೆ ಬರುತ್ತಿದ್ದಾಳೆ.... ಅವಳಿನ್ನೇನು ಅವನನ್ನು ಸಮೀಪಿಸುವುದರಲ್ಲಿದ್ದಳು... ಇವನು ಕೈ ಚಾಚಿ ಅವಳನ್ನು ತನ್ನೆಡೆಗೆ ಎಳೆದುಕೊಳ್ಳಬೇಕೆನ್ನುವಷ್ಟರಲ್ಲಿ.... ಒಂದು ಹೆಂಗಸು ಅಡ್ಡ ಬಂದು ಅವರಿಬ್ಬರ ಮಧ್ಯೆ ನಿಂತಿತು. ಆ ಹೆಂಗಸು ಬೇರೆ ಯಾರೂ ಆಗಿರಲಿಲ್ಲ. ವನಜಮ್ಮನೇ.... ಅವನಿಗೆ ಸುಜಯಳ ಮುಖವೂ ಕಾಣದಂತಾಗಿತ್ತು.... ಅಮ್ಮಾ ಆ ಕಡೆ ಸರಿಯಮ್ಮಾ.... ಅವನ ಎತ್ತರದ ದನಿಯಲ್ಲಿ ಗದರಿದ.... ಅಷ್ಟೇ.... ಕನಸು ಮುರಿದು ಬಿತ್ತು. ಅವನಿಗೆ ಎಚ್ಚರವಾಗಿತ್ತು. ತನ್ನ ಸುಂದರವಾದ ಕನಸಿಗೆ ತಾಯಿ ಭಗ್ನವನ್ನು ತಂದಿದ್ದಳು. ತಾಯಿಯ ಮೇಲೆ ಸಿಡಿಮಿಡಿಗೊಳ್ಳುವಷ್ಟರಲ್ಲಿ ನಿದ್ದೆಯ ಮಂಪರು ಇಳಿಯಿತು. ಓಹ್ ಬರೀ ಕನಸು ಎಂದು ತನಗೆ ತಾನೇ ಹೇಳಿಕೊಂಡು ಮಗ್ಗುಲು ಬದಲಾಯಿಸಿದ. ಮತ್ತೆ ಇದೇ ಕನಸು ಬಿದ್ದರೇ, ತಾಯಿ ಅಡ್ಡ ಬರುವಷ್ಟರಲ್ಲಿ ತಾನು ಅವಳನ್ನು ನನ್ನ ಬಳಿಗೆ ಎಳೆದುಕೊಂಡಿರಬೇಕು.... ಆದರೆ ತಕ್ಷಣಕ್ಕೆ ನಿದ್ದೆ ಹತ್ತಲಿಲ್ಲ. ಕನಸೂ ಬೀಳಲಿಲ್ಲ.

* * *

ದಿನೇಶ ಡೆಲ್ಲಿಗೆ ಹೊರಡುವ ದಿನ ಸಮೀಪಿಸುತ್ತಿತ್ತು. ಎಲ್ಲಾ ಸಿದ್ಧವಾಗಿತ್ತು. ಹಿಂದಿನ ದಿನದಿಂದ ಅವನಿಗೆ ದೀಪಾಳನ್ನು ರಮಿಸಿ ರಮಿಸಿ ಸಾಕಾಗಿತ್ತು. ಆದರೂ ಅವಳ ದುಗುಡ ಕಡಿಮೆ ಆಗಿರಲಿಲ್ಲ. ನಿರಾಸೆ, ವ್ಯಥೆ ಬೇಸರಗಳು ಅವಳ ಮುಖದ ಮೇಲೆ ಎದ್ದು ಕಾಣುತ್ತಿದ್ದವು.

ವನಜಮ್ಮ ಹತ್ತಾರು ಬಾರಿ ಹೇಳಿದ್ದನ್ನೇ ಹೇಳಿ, ಮಗನನ್ನು ಬೇಸರಗೊಳಿಸಿದ್ದಳು. "ಹೂಂನಮ್ಮ ನಂಗೆ ಎಲ್ಲಾ ಗೊತ್ತಾಗಿದೆ. ಎಷ್ಟು ಸಾರಿ ಹೇಳ್ತೀಯ?" ಮಗ ರೇಗಿದಾಗ, ಅವಳ ಕಣ್ಣಂಚುಗಳು ತೇವಗೊಂಡವು.

"ಮೊದಲ್ನೇ ಸಲ ಬೇರೆ ಊರಿಗೆ ಹೊರಟಿದೀಯ. ಆತಂಕ ಕಾಡುತ್ತಪ್ಪಾ....

ಅದಕ್ಕೇ ಸಾರಿ ಸಾರಿ ಹೇಳ್ತೀನಿ"

"ನಂಗಂತೂ ಒಂದು ದಿನವೂ ನೀನು ಹೇಳಿಲ್ಲ" ಅಲ್ಲೇ ಇದ್ದ ಮಹೇಶ ಗೊಣಗಿದ.

"ನೀನು ಡೆಲ್ಲಿಗೋ ಕಲ್ಕತ್ತಾಗೋ ಹೊರಡು. ಖಂಡಿತಾ ಹೇಳ್ತೀನಿ"

"ಅತ್ತಿಗೆಯ ಅಣ್ಣ ದಿಲೀಪ, ಕಲ್ಕತ್ತಾದಲ್ಲೇ ಇರೋದು. ಅವರೂ ಹೀಗೇ ಆಡ್ತಾರಾಂತ ಕೇಳು"

"ಅದೆಲ್ಲ ಅವರವರ ಮನೆಯ ವಿಚಾರ. ಅವನೀಗಾಗ್ಲೇ ಎಷ್ಟೋ ವರ್ಷಗಳಿಂದ ಅಲ್ಲೇ ಇದಾನೆ. ಅಭ್ಯಾಸವಾಗಿರುತ್ತೆ"

"ಇವನೇನೂ ಚಿಕ್ಕವನಲ್ಲ. ಮದುವೆಯೂ ಆಗಿದೆ. ಜವಾಬ್ದಾರಿ ತಿಳಿದಿದೆ. ಕಂಪೆನಿಯ ಕೆಲಸಗಳನ್ನು ಸಮರ್ಥವಾಗಿ ನಿಭಾಯಿಸಬಲ್ಲ ಸಾಮರ್ಥ್ಯವಿದೆ...."

"ನಾನು ತಾಯಿ, ನನ್ನ ಆತಂಕಗಳೇ ಬೇರೆ. ನೀನು ಸುಮ್ನಿರು. ನನ್ನ ಎಲ್ಲಾ ಮಾತಿಗೂ ಅಡ್ಡ ಬರಬೇಡ" ಮಹೇಶನಿಗೆ ತನಗೆ ಬಿದ್ದ ಕನಸಿನ ನೆನಪಾಗಿತ್ತು. ನಕ್ಕ. "ನಗುವಂಥಾದ್ದು ಏನಾಯ್ತು? ನಿನಗೆ ನಾನು ಒಂದು ತಮಾಷೆಯ ವಸ್ತುವಾಗಿ ಬಿಟ್ಟಿದೀನಿ"

"ಹಾಗೇನಿಲ್ಲ.... ನಗಲೂ ಬಾರದಾ! ಆ ಹಕ್ಕೂ ನನಗಿಲ್ವಾ?" ಹೊರಗೆ ಕಾರು ನಿಂತ ಸದ್ದು ಕೇಳಿಸಿತ್ತು. ಶಿವರಾಮಯ್ಯ ದಂಪತಿಗಳು, ಸುಜಯ ಸುಮತಿಯರೊಡನೆ ಬಂದಿದ್ದರು. ಮಹೇಶನನ್ನು ಕಂಡೊಡನೆ,

"ಎಲ್ಲಾ ರೆಡೀನಾ.... ಹೊರಡೋದಾ?" ಅಲ್ಲಿಂದಲೇ ಕೂಗಿದರು.

"ಹುಂ ಎಲ್ಲಾ ರೆಡಿ. ಬನ್ನಿ ಕಾಫಿ ಕುಡಿಯೋರಂತೆ...."

"ಕಾಫಿ ತಿಂಡಿ ಎಲ್ಲಾ ಮುಗಿಸ್ಕೊಂಡೇ ಹೊರಟೆವು.... ಏರ್‌ಪೋರ್ಟ್ ತಲುಪಲು ಸಾಕಷ್ಟು ಸಮಯ ಬೇಕು. ಬೇಗ ಹೊರಡೋದು ಒಳ್ಳೇದು"

"ದಿನೇಶ, ನಿಮ್ಮ ಅತ್ತೆ ಮಾವ ಬಂದ್ರು" ದಿನೇಶ ಮತ್ತೊಮ್ಮೆ ಹೆಂಡತಿಯನ್ನು ರಮಿಸುವುದರಲ್ಲಿ ಬಿಸಿಯಾಗಿದ್ದ. ಮಹೇಶನ ಕೂಗು ಕೇಳಿಸಿತ್ತು.

"ಪ್ಲೀಸ್.... ದೀಪ್ ಅಳ್ಬೇಡ. ನನಗೂ ಹೊರಡೋದು ಕಷ್ಟ ಆಗುತ್ತೆ. ಆರು ತಿಂಗಳು ಅಷ್ಟೇ.... ದಿನಾ ಫೋನು ಮಾಡ್ತೀನಿ. ಐ ಮಿಸ್ ಯೂ ಎ ಲಾಟ್" ಎನ್ನುತ್ತಾ ಕಣ್ಣೀರನ್ನು ಒರೆಸಿ, ಕೆನ್ನೆಗಳನ್ನು ಚುಂಬಿಸಿದ. ದೀಪಾ ತಳ್ಳಿದಳು.

"ಪ್ಲೀಸ್.... ಇದನ್ನೆಲ್ಲಾ ಮಾಡ್ಬೇಡಿ.... "

"ಯಾಕೆ ಡಿಯರ್....? ಇನ್ನೂ ಆರು ತಿಂಗಳು ಈ ಕಿಸ್‌ಗಳ ನೆನಪ್ನಲ್ಲೇ ಬದುಕಬೇಕು. .... ಪ್ಲೀಸ್....ಇನ್ನೊಂದೇ ಒಂದು.... ಅವಳ ಮುಖವನ್ನು ತನ್ನ ಬೊಗಸೆಯಲ್ಲಿ ಹಿಡಿದು ತುಟಿಗಳನ್ನು ಚುಂಬಿಸಿದ. ಅವಳು ಅವನನ್ನು ತಬ್ಬಿಕೊಂಡು ಭುಜದ ಮೇಲ ತಲೆಯನ್ನಿಟ್ಟು ಬಿಕ್ಕಿದಳು. ಮಹೇಶ ರೂಮಿನ ಬಾಗಿಲನ್ನು ಬಡಿದ.

"ಇನ್ನೂ ಮುಗಿಲಿಲ್ವೇನಪ್ಪಾ.... ನಿನ್ನ ಅತ್ತೆ ಮಾವ ಕಾಯ್ತಾ ಇದಾರೆ" ದಿನೇಶ ದೀಪಾಳನ್ನು ಸರಿಸಿ, ಅವಳ ಕಣ್ಣುಗಳನ್ನು ತಪ್ಪಿಸಿದ.

"ಸಾರಿ ದೀಪಾ.... ಬೇಸ್ರ ಮಾಡ್ಕೋಬೇಡ.... ನಗು ನಗ್ತಾ ಕಳಿಸ್ಕೊಡು.... ಇಲ್ದಿದ್ರೆ ನಂಗೆ ನಿಂದೇ ಚಿಂತೆಯಾಗುತ್ತೆ"

"ನನ್ಕೈಲಿ ಸಾಧ್ಯವಿಲ್ಲ ದಿನೇಶ್...." ಅವಳು ಅವನ ಕೈಗಳನ್ನು ಬಿಗಿಯಾಗಿ ಹಿಡಿದಳು. ಮತ್ತೆ ಬಾಗಿಲನ್ನು ಬಡಿದು ಸದ್ದು ಕೇಳಿದಾಗ ಇಬ್ಬರೂ ಎಚ್ಚೆತ್ತರು. ದಿನೇಶ ಬಾಗಿಲನ್ನು ತೆರೆದ. ಹೊರ ಬಾಗಿಲಲ್ಲಿ ನಿಂತಿದ್ದ ಮಹೇಶ ಇಬ್ಬರನ್ನೂ ಪ್ರಶ್ನಾರ್ಥವಾಗಿ ನೋಡಿ ಮುಗುಳ್ನಕ್ಕ. ದಿನೇಶ ಹೊರ ಬಂದ.

"ಅತ್ಗೆ ಏರ್‌ಪೋರ್ಟ್‌ಗೆ ಬರ್ತಾರೆ ತಾನೇ?"

"ಹೊರ ಬರ್ತಾಳೆ. ಸ್ವಲ್ಪ ಮೇಕಪ್ ಮಾಡ್ಕೋಬೇಕು. ಕನ್ನಡಿ ಮುಂದೆ ನಿಂತಿದಾಳೆ.... ದೀಪಾ...." ಒಳಕ್ಕೆ ಇಣುಕಿದ.

"ನೀನು ಮತ್ತೆ ಒಳಕ್ಕೆ ಹೋಗ್ಬೇಡಪ್ಪಾ... ಬರೋಕೆ ಹತ್ತೂ ನಿಮಿಷಗಳಾದ್ರೂ ಬೇಕಾಗುತ್ತೆ. " ಮಹೇಶ ತಮಾಷೆ ಮಾಡಿದ. ದಿನೇಶ ನಕ್ಕಂತೆ ಮಾಡಿ ತಾಯಿಯ ಕಡೆ ತಿರುಗಿದ.

"ಹೋಗಿ ದೇವರಿಗೆ ನಮಸ್ಕಾರ ಮಾಡು. ತುಪ್ಪದ ದೀಪಗಳನ್ನು ಹಚ್ಚಿಟ್ಟಿದ್ದೀನಿ" ದಿನೇಶ ತಾಯಿಯ ಅಣತಿಯನ್ನು ಪರಿಪಾಲಿಸಿ ಹೊರ ಬಂದ. ಅಷ್ಟರಲ್ಲಿ ದೀಪಾ ಸ್ವಲ್ಪ ರಿಫ್ರೆಷ್ ಆಗಿ ಹೊರ ಬಂದಿದ್ದಳು. ಎಲ್ಲರೂ ಏರ್‌ಪೋರ್ಟ್‌ಗೆ ಹೊರಟರು.

* * *

ದಿನೇಶ, ಸೆಕ್ಯೂರಿಟಿ ಲಾಂಜ್‌ಗೆ ಹೋಗುವ ಮೊದಲು ಎಲ್ಲರಿಗೂ ಕೈ ಮಾಡಿ ಬೈ ಬೈ ಹೇಳಿದ. ಎಲ್ಲರ ಮುಖಗಳೂ ಗಂಭೀರವಾಗಿದ್ದವು. ದೀಪಾ ಸುಜಯಳ ಭುಜಕ್ಕೆ ಒರಗಿ, ಅವಳ ಕೈ ಹಿಡಿದು ನಿಂತಳು. ಯಾರಿಗೂ ತಿಳಿಯದಂತೆ ಕಣ್ಣೊರೆಸಿ ಕೊಂಡಿದ್ದಳು.

"ಪ್ಲೇನ್‌ನ ಹತ್ತೋದಾಗಲಿ, ಪ್ಲೇನು ಹೊರಡೋದಾಗ್ಲೀ ನಮಗೆ ಏನೂ ಕಾಣಲ್ಲ. ಇಲ್ಲಿ ಕೂತು ಏನು ಮಾಡೋದು! ಹೊರಡೋಣ" ಶಿವರಾಮಯ್ಯನವರು ಎಲ್ಲರನ್ನೂ ಹೊರಡಿಸಿದರು.

ಮಹೇಶ ಈಗ ಡ್ರೈವರ್ ಸೀಟಿನಲ್ಲಿ ಕುಳಿತ. "ನೀವು ಸೇಫ್ ಆಗಿ ಮನೆ ತಲುಪಿಸ್ತೀರಿ ತಾನೇ?" ಸುಜಯ ಗೇಲಿ ಮಾಡಿದಳು. ವನಜಮ್ಮ ಕೆಟ್ಟ ಮುಖ ಮಾಡಿದಳು.

"ಏನ್ರೀ ಹೀಗೆ ಕೇಳ್ತೀರಿ? ಇನ್ಮೇಲೆ ಅತ್ತಿಗೆಯ ಡ್ರೈವರ್ ನಾನೇ...." ದೀಪಾಳ ಕಡೆ ನೋಡಿದ. ಅವಳ ಜ್ಞಾನ ಎಲ್ಲೋ ಇತ್ತು.

"ಅತ್ತಿಗೆಯ ಮೂಡ್ ಏನೇನೂ ಚೆನ್ನಾಗಿಲ್ಲ. ದಿನೂ ಹತ್ರ ಮಾತಾಡ್ತೀರಾ

ಅತ್ಗೆ...." ಮಹೇಶ ಸೆಲ್ ಫೋನ್ ತೆಗೆದ.

"ಹೂಂ. ಡಯಲ್ ಮಾಡಿಕೊಡಿ" ದೀಪಾ ಉತ್ಸಾಹದಿಂದ ಹೇಳಿದಳು. ಮಹೇಶ ಬಟನ್‌ಗಳನ್ನು ಒತ್ತಿ ಅವಳ ಕೈಗೆ ಕೊಟ್ಟ.

"ನೋಡಿ, ಆ ಕಡೆ ಸ್ವಲ್ಪ ದೂರದಲ್ಲಿ, ನಮಗೆ ಬೆನ್ನು ಮಾಡಿ ನಿಂತು ಏನು ಬೇಕಾದ್ರೂ ಮಾತ್ನಾಡಿ" ತಮಾಷೆ ಮಾಡಿದ.... ತಾಯಿ ಇತ್ತ ತಿರುಗಿ ಏನನ್ನಾದರೂ ಕೇಳುವ ಮೊದಲೇ, "ಅಮ್ಮಾ ಬರ್ತೀಯಾ?" ಎನ್ನುತ್ತಾ ಕಾರಿನ ಬಾಗಿಲನ್ನು ತೆರೆದ.

"ದೀಪಾ, ಯಾರ ಹತ್ರವೋ ಮಾತಾಡ್ತಿದಾಳೆ"

"ಹುಂ, ನಿನ್ನ ಮಗನ ಜೊತೆ ಫೋನಿನಲ್ಲಿ ಮಾತಾಡ್ತಿದಾರೆ.... ನಾವು ಹೊರಡೋಣ. ಅವರು ಕರ್‍ಕೊಂಡು ಬರ್ತಾರೆ" ಮಹೇಶ ಕಾರನ್ನು ಸ್ಟಾರ್ಟ್ ಮಾಡಿದ. ದೀಪಾ ಇತ್ತ ತಿರುಗಿದಳು.

"ಮಾತು ಮುಗಿಸಿ ಬಿಟ್ರಾ?" ಬರ್ತೀರಾ?"

"ನಾನು ಅಮ್ಮನ ಮನೆಗೆ ಹೋಗ್ತೀನಿ. ನಾಳೆ ಬರ್ತೀನಿ, ತಗೊಳ್ಳಿ"

"ಇರಲಿ, ನಿಮ್ಮ ಹತ್ರಾನೇ ಇರಲಿ. ಮನೆ ತಲುಪುವವರೆಗೂ ಮಾತಾಡಬಹುದು" ಗೇಲಿ ಮಾಡಿದ. ದೀಪಾ ನಾಚಿದಳು. ಮಹೇಶ ಹುಬ್ಬೇರಿಸಿ, ಸುಜಯಳ ಕಡೆ ನೋಡಿದ. ಕಾರಣವಿಲ್ಲದೇ ಅವಳೂ ನಾಚಿದ್ದಳು.

"ಬನ್ನಿ, ನಿಮ್ಮಿಬ್ರನ್ನೂ ನಿಮ್ಮ ಮನೆಗೆ ತಲುಪಿಸ್ತೀನಿ"

"ಪರವಾಗಿಲ್ಲ. ಇವತ್ತು ನಾವು ದೀಪಾಳ ಜೊತೆ ಅತ್ತೆಯ ಮನೆಗೇ ಹೋಗ್ತಿದೀವಿ. ದೀಪಾಗೆ ಇವತ್ತು ನಮ್ಮಿಬ್ಬರ ಅವಶ್ಯಕತೆ ಇದೆ" ಸುಜಯಳೂ ದೀಪಾಳನ್ನು ಚುಡಾಯಿಸಿದಳು.

"ಸರಿ.... ಓ..ಕೇ" ಮಹೇಶ ಕಾರನ್ನು ಸ್ಟಾರ್ಟ್ ಮಾಡಿ, ತಾಯಿಯ ಕಡೆ, ಅಮ್ಮಾ ನಿಂಗೂ ತುಂಬಾ ಬೇಜಾರಾಗುತ್ತಿದ್ದರೆ ಹೇಳು.... ಎಲ್ಲಾದ್ರೂ ತಿರುಗಾಡಿಕೊಂಡು ಮನೆಗೆ ಹೋಗೋಣ" ಎಂದ.

"ಬೇಜಾರೇನೋ ಆಗ್ತಿದೆ. ಆದರೆ ಮನೆಯಂಥ ಸ್ಥಳ ಬೇರೆ ಇಲ್ಲ. ನಡೀ ಸೀದಾ ಮನೆಗೇ ಹೋಗೋಣ"

"ಹೂಂನಮ್ಮ ನಂಗೂ ಒಂಥರಾ ಬೇಜಾರೇ"

"ನಮ್ಗೇ ಇಷ್ಟು ಬೇಜಾರಾದ್ರೆ, ಮೊನ್ನೆ ಮೊನ್ನೆ ಕೈ ಹಿಡಿದ ಆ ಹುಡ್ಗಿಗೆ ಎಷ್ಟೋ ಬೇಜಾರಾಗಿರುಲ್ಲ. ಎಷ್ಟು ಥರ ಹೇಳಿದ್ರೂ ಅವನ ಹಠವೇ ಹಠ..." ನಿಟ್ಟುಸಿರು ಬಿಟ್ಟಳು. ಮಹೇಶ ತಾಯಿಯ ಕಡೆ ಕಳ್ಳ ನೋಟವನ್ನು ಬೀರಿದ....ತಾಯಿಗೆ ಅವನ ಮೇಲೆ ಗಮನವಿರಲಿಲ್ಲ. ತಾನು ಒಂದು ಮುಖ್ಯವಾದ ವಿಷಯವನ್ನು ಸುಜಯಂಗೆ ತಿಳಿಸಿಯೇ ಇಲ್ಲ ಎನ್ನುವುದು ನೆನಪಿಗೆ ಬಂತು. ಸುಜಯ ದೀಪಾಳ ಮನೆಗೆ ಹೋಗ್ದೆ ಇದ್ದಿದ್ರೆ, ಅವಳಿಗೆ ಫೋನು ಮಾಡಿರುತಿದ್ನೋ ಏನೋ....

ಅಂತಂದುಕೊಂಡು,

"ಅತ್ಗೇನೂ ನಮ್ಮನೆಗೆ ಬಂದಿದ್ರೆ ಚೆನ್ನಾಗಿತ್ತು" ಗೊಣಗಿದ.

"ಹೆಣ್ಣು ಮಕ್ಕಳಿಗೆ ಯಾವಾಗಲೂ ತವರಿನವರೇ ಹತ್ತಿರ.... ಅದೂ ಅಲ್ದೇ ನಾವೆಲ್ಲಾ ಇನ್ನೂ ಹೊಸಬ್ರೇ. ಗಂಡನೇ ಹತ್ತಿರದಲ್ಲಿ ಇಲ್ಲದಿರುವಾಗ, ನಮ್ಮಗಳ ಜೊತೆ ಹೇಗೆ ಹೊತ್ತು ಕಳೀತಾಳೆ? ಅವಳ ಜೊತೆ, ಅವಳ ಕಸಿನ್ಸ್ ಇರ್ತಾಳಲ್ಲ.... ಆದ್ರೆ ನಂಗೆ ಆ ಸುಜಯನ ಮೇಲೆ ನಂಬ್ಕೆ ಇಲ್ಲ. ಇವಳ ತಲೇನೂ ಕೆಡಿಸಿಟ್ಟು ಬಿಡ್ತಾಳೆ ಅಷ್ಟೇ...."

"ಸುಜಯ ಯಾಕಮ್ಮಾ ಹಾಗೆಲ್ಲಾ ಮಾಡ್ತಾಳೆ? ನೋಡಿದ್ರೆ ಹಾಗನ್ನಿಸುತ್ತಾ?"

"ಯಾರ್ಯಾರು ಹೇಗ್ಹೇಗೋ ಯಾರಿಗೊತ್ತು? ಮೇಲೆ ನೋಡೋಕೆ ಒಂಥರ ಒಳಗಿನ ಬುದ್ಧಿಯೇ ಇನ್ನೊಂಥರ...." ತಾಯಿಯ ಈ ಮಾತು ಮಹೇಶನಿಗೆ ಹಿಡಿಸಲಿಲ್ಲ. ಗಾಡಿಯ ವೇಗವನ್ನು ಹೆಚ್ಚಿಸಿದ.

"ಇದೇನೋ.... ನಿಂಗೇನಾಯ್ತು? ಉತ್ತರಿಸದೇ ಗಾಡಿಯನ್ನು ಓಡಿಸಿದ.

ಮನೆಯ ಮುಂದೆ ಗಾಡಿಯನ್ನು ನಿಲ್ಲಿಸಿ, ತಾಯಿಯ ಕೈಯಿಂದ ಬೀಗದ ಕೈಗಳನ್ನು ತೆಗೆದುಕೊಂಡು ಮನೆಯ ಬಾಗಿಲನ್ನು ತೆಗೆದ. ಮನೆಯೊಳಗಿನ ಮೌನ ಅವನನ್ನು ಸ್ವಾಗತಿಸಿತು. ದಿನೇಶ ಮನೆಯಲ್ಲಿಲ್ಲ, ಊರಿನಲ್ಲಿಲ್ಲ ಎನ್ನುವುದು ಅತಿಯಾಗಿ ವ್ಯಕ್ತವಾಗುತ್ತಿದೆ ಎಂದುಕೊಂಡು ತಕ್ಷಣವೇ ದೀಪಾಳಿಗೆ ಫೋನು ಮಾಡಿದ. ಸುಮತಿ ಫೋನನ್ನೆತ್ತಿಕೊಂಡಳು.

"ದೀಪಾರವರ ಹತ್ರ ಮಾತಾಡ್ಬೇಕಾಗಿತ್ತು" ಎಂದು.

"ದೀಪಾ ಮನೆಗೆ ಬರಲಿಲ್ಲ. ಸುಜಯ ಅವಳು ಇಬ್ಬರೂ ಷಾಪಿಂಗ್ ಕಾಂಪ್ಲೆಕ್ಸ್ ಹತ್ರ ಇಳಿದುಬಿಟ್ಟರು...." ಮಹೇಶ ಅಚ್ಚರಿಗೊಂಡು ಲೈನ್ ಕಟ್ ಮಾಡಿದ.

"ಯಾರದ್ದೋ ಫೋನು? ಮಾತಾಡ್ತಿದ್ದ ಹಾಗಿತ್ತು...."

"ಅತ್ಗೇನ ಇಲ್ಲಿಗೇ ಬಂದ್ಬಿಡಿ ಅಂತ ಹೇಳೋಕೆ ಕಾಲ್ ಮಾಡ್ದೆ. ಆದ್ರೆ ಅವ್ರು ಮನೆಗೇ ಹೋಗಿಲ್ಲ. ಷಾಪಿಂಗ್ ಕಾಂಪ್ಲೆಕ್ಸ್‌ಗೆ ಹೋದರಂತೆ...."

"ಹೋಗ್ಲಿ ಬಿಡು. ಮನೆಗೆ ಹೋಗಿ ಏನ್ಮಾಡ್ತಾಳೆ....? ಜೊತೆಗೆ ಯಾರು ಇದಾರಂತೆ"

"ಸುಜಯ ಇದಾಳಂತೆ...." ವನಜಮ್ಮನ ಮುಖ ಕಪ್ಪಾಯಿತು. ಅವಳೇನಾದರೂ ಹೇಳುವ ಮೊದಲೇ ಮಹೇಶ ಸ್ಕೂಟರಿನ ಕೀ ತೆಗೆದುಕೊಂಡು ಹೊರ ಹೊರಟ. "ನಾನು ಆಫೀಸ್ಗೆ ಹೋಗ್ಬರ್ತೀನಿ.... ಬೇಗ ಬಂದ್ಬಿಡ್ತೀನಿ.... ನಿನಗೂ ಬೇಜಾರಾದ್ರೆ ಪಕ್ಕದ ಮನೆಗೆ ಹೋಗಿರು"

"ಬೇಡ. ತಲುಪಿದ ಕೂಡ್ಲೆ ದಿನೇಶ ಫೋನು ಮಾಡ್ತೀನಿ ಅಂತ ಹೇಳಿದಾನೆ"

ತಾಯಿ ಒಬ್ಬಳನ್ನೇ ಬಿಟ್ಟು ಹೋಗುವ ಮನಸ್ಸಿಲ್ಲದಿದ್ರೂ ಅವಳ ಎದುರಿಗೆ

ಇರುವ ಮನಸ್ಸಾಗದೇ 'ಬರ್ತೀನಿ' ಅಂತ ಹೇಳಿ ಹೊರಟ. ವನಜಮ್ಮ ಅಡುಗೆ ಕೆಲಸ ಮಾಡುತ್ತಾ ದಿನೇಶನ ಫೋನಿಗಾಗಿ ಕಾದಳು. ಆದರೆ ಫೋನು ರಿಂಗಾಗಲೇ ಇಲ್ಲ. ಆತಂಕವಾಗತೊಡಗಿತ್ತು. ಅಷ್ಟರಲ್ಲಿ ಮಹೇಶನೇ ವಾಪಸ್ಸು ಬಂದ. ಬಂದವನೇ ಸೀದಾ ಫೋನನ್ನಿಟ್ಟ ಸ್ಥಳಕ್ಕೆ ಬಂದ. ಅವನ ಅನುಮಾನ ಸರಿಯಾಗಿತ್ತು. ರಿಸೀವರ್‌ನ್ನು ಸರಿಯಾಗಿ ಇಟ್ಟಿರಲಿಲ್ಲವಾದ್ದರಿಂದ ಫೋನು ಬಂದಿರಲಿಲ್ಲ.

"ದಿನೇಶ ತಲುಪಿದ ಕೂಡ್ಲೇ ಮನೆಗೆ ಫೋನು ಮಾಡಿದ್ನಂತೆ. ಎಂಗೇಜ್ ಬರ್ತಿತ್ತಂತೆ.... ನೋಡಿದ್ರೆ ರಿಸೀವರ್ ಸರಿಯಾಗೇ ಇಟ್ಟಿಲ್ಲ ನೀನು" ದಬಾಯಿಸಿದ.

"ನಿಂಗ್ಯಾರು ಹೇಳಿದ್ರು.... ?"

"ಅವನೇ ಇಲ್ಲಿಗೆ ಟ್ರೈ ಮಾಡಿ ಸಾಕಾಗಿ, ನಂಗೆ ಮಾಡಿದ್ನಂತೆ. ಅಲ್ಲಮ್ಮ ನೀನು ನೋಡ್ಬೇಡ್ವಾ?"

"ನಂಗೇನು ಗೊತ್ತಿತ್ತು? ನಾನಂತೂ ಕಾದಿದ್ದೇ ಕಾದಿದ್ದು.... ಹೋಗಲಿ ಹುಶಾರಾಗಿ ತಲುಪಿದ್ನಾ? ಏನೂ ತೊಂದ್ರೆ ಆಗಲಿಲ್ವಂತಾ....? ನಾನು ದೀಪಂಗೆ ಈಗ್ಲೇ ತಿಳಿಸಿ ಬಿಡ್ತೀನಿ" ಉತ್ಸಾಹದಿಂದ ಹೊರಟವಳನ್ನು ತಡೆದ.

"ಅವನೇ ಅತ್ಗೆಗೆ ಈಗಾಗ್ಲೇ ಫೋನು ಮಾಡಿದಾನೆ...." ಎನ್ನುತ್ತಾ ಶೂಸ್‌ಗಳನ್ನು ಬಿಚ್ಚಿದ. ಕೈಕಾಲು ತೊಳೆದ. ಅಷ್ಟರಲ್ಲಿ ವನಜಮ್ಮ ಊಟಕ್ಕೆ ಬಡಿಸಲು ಸಿದ್ಧಮಾಡಿದಳು. ಒಂದು ತುತ್ತು ಸಾರನ್ನವನ್ನು ಕಲಿಸಿ ತಿಂದು ತಟ್ಟೆಗೆ ಉಗುಳಿದ.

"ಥೂ ಸಾರಿಗೆ ಉಪ್ಪನ್ನೇ ಹಾಕಿಲ್ಲ. ರುಚಿಯೇ ಇಲ್ಲ"

"ಹಾಕಿದ್ರಾಯ್ತು. ಅದಕ್ಯಾಕೆ ಹಾಗಾಡ್ತೀ.... ದಿನೂ ಇಷ್ಟಕ್ಕೆಲ್ಲಾ ಎಂದೂ ರೇಗಾಡಿದವನಲ್ಲ" ಉಪ್ಪನ್ನು ತಂದು ಬಡಿಸಿದಳು.

"ದಿನೂ.... ದಿನೂ... ನಿಂಗೆ ಸದ್ಯ ಅವನದ್ದೇ ಚಿಂತೆ. ನನ್ನನ್ನಂತೂ ಮರೆತೇ ಬಿಟ್ಟಿದ್ದೀಯ.

"ನಿನ್ನನ್ನ ಮರೆಯೋಕೆ ಆಗುತ್ತಾ?" ಅವನ ಮುಖವನ್ನೇ ನೋಡಿದಳು....

"ಏನು ಹಾಗೆ ನೋಡ್ತೀಯ? ನಾನೇನು ಹೊರಗ್ನೋನಾ?"

"ಏನಿಲ್ಲ. ಏನೋ ನೆನಪಾಯ್ತು....." ತಾಯಿ ಪೆಚ್ಚಾದುದನ್ನು ಗಮನಿಸಿದ. ತನ್ನ ಆರ್ಭಟ ಸ್ವಲ್ಪ ಹೆಚ್ಚಾಯಿತೇನೋ ಅಂತೆನ್ನಿಸಿತು.

"ನೀನೂ ಊಟ ಮಾಡು. ಈಗಾಗ್ಲೇ ಎಷ್ಟು ಹೊತ್ತಾಗಿದೆ"

"ಹೂಂ ಮಾಡ್ತೀನಿ" ತನಗೂ ತಟ್ಟೆ ಬಟ್ಟಲುಗಳನ್ನಿಟ್ಟು ಕೊಂಡಳು.

* * *

ದೀಪಾಳಿಂದ ಕರೆ ಬರಬಹುದೆಂದು ನಿರೀಕ್ಷಿಸಿದ್ದ ವನಜಮ್ಮ, ಕಡೆಗೆ ತಾನೇ ಅವರ ಮನೆಗೆ ಫೋನು ಮಾಡಿದಳು. ಶಕುಂತಲ ಮಾತನಾಡಿ, ಸುಜಯಳೊಂದಿಗೆ ಹೊರಗೆ ಹೋಗಿದಾಳೆ ಎಂದು ತಿಳಿಸಿದಾಗ ಅಸಮಾಧಾನವಾಗಿತ್ತು.

"ನನ್ನೊಡನೆ ಮಾತಾಡ್ಬೇಕೂಂತ ಅನ್ನಿಸಲಿಲ್ವಾ ಈ ಹುಡ್ಗಿಗೆ.....ಎಲ್ಲಿಗೆ ಎಳೆದ್ಕೊಂಡು ಹೋಗಿದಾಳೋ?" ವಿನಾಕಾರಣ ಸುಜಯಳ ಮೇಲೆ ಸಿಟ್ಟು ಬಂದಿತ್ತು.

ರೂಮಿನಿಂದ ಹೊರ ಬಂದು ಟಿ.ವಿ.ಯ ಮುಂದೆ ಕುಳಿತ ಮಹೇಶನಿಗೆ ಕಾಫಿಯನ್ನು ತಂದಿತ್ತಳು. ಅಲ್ಲೇ ನಿಂತವಳನ್ನು ಗಮನಿಸಿ ಕೇಳಿದ.

"ಏನಾದ್ರೂ ಬೇಕಿತ್ತಾ...?" ಕಾಫಿಯನ್ನು ಹೀರಲಾರಂಭಿಸಿದ.

"ನಿನ್ಹತ್ರ ಮಾತಾಡ್ಬೇಕು....."

"ಆದು.... ಯಾವ ವಿಷಯ...?"

"ನಿನ್ನ ಮದುವೆ ವಿಷಯ...."

"ಮಹೇಶ ನಕ್ಕ. ಕಾಫಿ ತುಳುಕಿತು! ಇದ್ದಕ್ಕಿದ್ದಂತೆ ನನ್ನ ಮದುವೆ ಮಾತ್ಯಾಕೆ! ಅರ್ಜೆಂಟೇನು?"

"ಹೂಂ ನಾನೂ ಯೋಚಿಸ್ದೆ.... ದಿನೇಶ ನನ್ನೊಂದಿಗಿರಲಿ ಅಂತ ಮದುವೆಯಾಗಿ ಆ ಹುಡ್ಗೀನ ಕರ್‍ಕೊಂಡು ಸಹ ಹೋಗ್ಲಿಲ್ಲ. ಅವಳು ಅಪ್ಪನ ಮನೇಲಿದ್ದು ಬಿಟ್ಟಳು. ನೆನ್ನೆಯಿಂದ ನಾನು ಕಾಯ್ತಾನೇ ಇದೀನಿ. ನಂಗೆ ಒಂದು ಫೋನು ಮಾಡ್ಬೇಕೂಂತ ಅನ್ನಿಸ್ಲಿಲ್ಲ ಅವಳಿಗೆ. ನಾನೇ ಮಾಡಿದ್ರೆ ಮನೇಲಿಲ್ಲವಂತೆ. ಹೊರಗೆ ತಿರುಗಾಡೋಕೆ ಹೋಗಿದ್ದಾಳಂತೆ"

"ಅತ್ತಿಗೆಗೆ ಮನೇಲಿ ಬೇಜಾರಾಗುತ್ತೇನೋ.... ಹೊರಗೆ ಹೋಗಿರ್ತಾರೆ. ಅದರಲ್ಲಿ ತಪ್ಪೇನು?"

"ತಿರುಗಲಿ ಯಾರು ಬೇಡಾಂದ್ರು.... ? ಆದ್ರೆ ಸುಜಯಳ ಜೊತೆ ತಿರುಗೋದು ನಂಗೆ ಇಷ್ಟ ಆಗುಲ್ಲ" ಮಹೇಶ ಅನುಮಾನದಿಂದ ತಾಯಿಯ ಕಡೆ ನೋಡಿದ.

"ಸುಜಯ ಅತ್ಗೆಗೆ ಕಸಿನ್.... ಬೇರೆ ಯಾರೂ ಅಲ್ಲ...."

"ಸುಜಯ ಏನೇನು ಹೇಳಿ ಕೊಡ್ತಾಳೋ ಅಂತ ಭಯ. ದಿನೇಶ ವಾಪಸ್ಸು ಬರುವಷ್ಟರಲ್ಲಿ ಸಾಕಷ್ಟು ತಲೆ ಕೆಡಿಸಿರ್ತಾಳೆ"

"ಹಾಗ್ಯಾಕಮ್ಮ ಮಾಡ್ತಾಳೆ! ಸುಮ್ಮನೆ ಯಾಕೆ ದೂಷಿಸ್ತೀಯ?" ವ್ಯಥೆಗೊಂಡಿದ್ದ.

"ತಾನು ದಿನೇಶನ್ನ ಒಪ್ಪಿರ್‍ಲಿಲ್ಲ. ದಿನೇಶನು ದೀಪಾಳನ್ನು ಮದುವೆಯಾದ ಅಂತ ಅಸೂಯೆ ಇರುಲ್ವೇ?"

"ಹಾಗಿದ್ದಿದ್ರೆ ಮದುವೆಗೆ ಸಹ ಬರ್ತಿರಲಿಲ್ಲ. ನಿಂದಂತೂ ಏನೋ ಅನುಮಾನ... ಅದಿರ್‍ಲಿ.... ಇದಕ್ಕೂ ನನ್ನ ಮದುವೆಗೂ ಏನು ಸಂಬಂಧ?" ಮಾತಿನ ಧಾಟಿಯನ್ನೂ ಬದಲಾಯಿಸಲು ನೋಡಿದ.

"ನಿನ್ನ ಹೆಂಡ್ತಿ ಬಂದ್ರೆ, ಮನೇಲೇ ಇರ್ತಾಳೆ. ನಂಗೂ ಜೊತೆಯಾಗುತ್ತೆ. ಆಗ ದೀಪಾನೂ ಇಲ್ಲೇ ಬಂದಿರ್ತಾಳೆ. ಸುಜಯಳ ಸಹವಾಸ ತಪ್ಪುತ್ತೆ"

"ನಿನ್ನ ಮಾತಿಗೆ ನಂಗೆ ನಗು ಬರುತ್ತೆ.... ಸುಮ್ನೇ ಎಲ್ರನ್ನೂ ಅವರವರ

ಪಾಡಿಗೆ ಹಾಯಾಗಿರಲು ಬಿಟ್ಟು ರಾಮಾಕೃಷ್ಣಾ ಅಂತ ಇರು. ವಯಸ್ಸಾಯ್ತು"

ನಿನಗೂ ಮದುವೆ ಮಾಡಿ, ಮನೆಯ ಜವಾಬ್ದಾರೀನ ಸೊಸೆಯರ್ಗೆ ವಹಿಸ್ಕೊಟ್ಟು ಆಮೇಲೆ ರಾಮಾ – ಕೃಷ್ಣಾ ಅಂತ ಹಾಯಾಗಿರಬಹುದು....."

ಅವನಿಗೆ ಸುಜಯ ನೆನಪಿಗೆ ಬಂದಳು. "ಸೊಸೆ ಬಂದ್ರೆ ನಿನಗೆ ಹಾಯಾಗಿರುಕ್ಕೆಲ್ಲಿ ಆಗುತ್ತೆ? ಕೆಣಕಿದ....."

"ತಮಾಷೆ ಮಾಡ್ಬೇಡ ಮಹೀ.... ನಿಂಗೆ ಎಂಥ ಹುಡ್ಗಿ ಬೇಕು ಹೇಳು. ನಾನು ಸರಿಯಾಗಿ ಹುಡುಕ್ತೀನಿ"

"ಆ ಕಷ್ಟ ನಿನಗೆ ಬೇಡ.... ನಾನು ಮದುವೆಯಾಗೋಳನ್ನ ನಾನೇ ಹುಡುಕ್ಕೊಳ್ತೀನಿ...."

"ಆಂ! ಲವ್ ಮ್ಯಾರೇಜ್ ಮಾಡ್ಕೋತೀಯಾ?"

"ಹುಂ. ನಾನು ಲವ್ ಮಾಡಿದ ಹುಡುಗೀನ ನೀನು ಒಪ್ಪಿ ಮದುವೇನ ಮಾಡಿಸಿ ಬಿಡು. ಅಷ್ಟೇ.... ಸಿಂಪಲ್"

"ನಂಗಿದೆಲ್ಲ ಇಷ್ಟವಿಲ್ಲಪ್ಪಾ...."

"ಹಾಗಾದ್ರೆ ನನ್ನ ಮದುವೆ ಮಾತನ್ನಾಡಬೇಡ ಅಷ್ಟೇ....."

"ಯಾಕೋ ಹೀಗೆ ಒರಟಾಗಿ ಮಾತಾಡ್ತೀಯ? ದಿನೇಶ ನಾನು ತೋರ್ಸಿದ ಹುಡುಗೀರ್ನೇ ನೋಡಿ, ಒಪ್ಪಿಗೆ ಕೊಡಲಿಲ್ವಾ...? ನಿಂಗೂ, ನಿಂಗೆ ತಕ್ಕವಳನ್ನೇ ನೋಡ್ತೀನಿ"

"ಏನೂ ಬೇಡಮ್ಮ. ಸದ್ಯಕ್ಕೆ ನನ್ನ ಮದುವೆ ಮಾತು ಬೇಡ. ಬೇಕಾದಾಗ ನಾನೇ ಹೇಳ್ತೀನಿ. ಟಿ.ವಿ.ಲಿ ಯಾವ್ದೋ ಸಿನೆಮಾ ಬರ್ತಿದೆ. ಇಂಟರೆಸ್ಟಿಂಗ್ ಆಗಿದೆ. ನಾನು ನೋಡ್ಬೇಕು.... ನೀನು ಬೇಕಾದ್ರೆ ಹೊರಗೆಲ್ಲಾದ್ರೂ ಹೋಗ್ಬಾ...."

"ಸರಿ. ದೇವಸ್ಥಾನಕ್ಕೆ ಹೋಗ್ಬರ್ತೀನಿ. ಮನೆ ಕಡೆ ಜೋಪಾನ...."

"ಹುಂ. ಬಾಗಿಲನ್ನು ಲಾಕ್ ಮಾಡ್ಕೊಂಡು ಹೋಗು. ನಾನು ಒಳಗೇ ಇರ್ತೀನಿ" ಸರಿಯಾಗಿ ಕುಳಿತು ಟಿ.ವಿ.ಯ ವಾಲ್ಯೂಮ್ ಕಡಿಮೆ ಮಾಡಿದ.

* * *

ದೇವಸ್ಥಾನದಿಂದ ಹಿಂತಿರುಗಿದ ವನಜಮ್ಮ ಬೆಳಗಿನ ಅಡುಗೆಯನ್ನು ಬಿಸಿ ಮಾಡಿ, ಮಹೇಶನನ್ನು ಊಟಕ್ಕೆ ಎಬ್ಬಿಸಲು ಬಂದಳು. ಅಷ್ಟರಲ್ಲಿ ಫೋನು ಟ್ರಿನ್ ಗುಟ್ಟಿತು. ಸೋಫಾದ ಮೇಲೆ ಕಣ್ಣು ಮುಚ್ಚಿಕೊಂಡು ಒರಗಿದ್ದ ಮಹೇಶ ಏಳಲಿಲ್ಲ. ವನಜಮ್ಮ ಎತ್ತಿಕೊಂಡಳು.

"ಹಲೋ.... ದಿನೂನಾ? ಹುಶಾರಾಗಿದೀಯ ಕಂದಾ?"

"ಅಲ್ಲಿ ಎಲ್ಲಾ ಹೇಗಿದೆ? ಯಾವ್ದಕ್ಕೂ ತೊಂದ್ರೆ ಇಲ್ಲ ತಾನೇ?"

"ದೀಪಾಳ ಹತ್ರ ಮಾತಾಡಿದ್ಯಾ! ಅವಳು ಇಲ್ಲಿಗೆ ಯಾವಾಗ.... ಬರ್ತಾಳೋ

ನಂಗೊತ್ತಿಲ್ಲ"

"ಮಹೇಶನ ಹತ್ರ ಮಾತಾಡ್ತೀಯ? ಟಿ.ವಿ. ನೋಡ್ತಾ ಇದಾನೆ...."

"ಹುಂ. ಹಾಗೇ ಮಾಡು.... ನಿನ್ನ ಆರೋಗ್ಯ ಚೆನ್ನಾಗಿ ನೋಡ್ಕೋ. ನಂಗೆ ನಿಂದೇ ಚಿಂತೆ"

"ಚಿಂತೆ ಯಾಕೆ ಅಂತಂದ್ರೆ? ಈಗಂತೂ ಎಲ್ಲಿ ನೋಡಿದ್ರೂ ದೊಂಬಿ, ಗಲಾಟೆ, ಬಾಂಬ್, ಬೆಂಕಿ.... ಬರೀ ಅದೇ ಸುದ್ದಿ. ಆತಂಕವಾಗುತ್ತೆ ಕಣಪ್ಪಾ"

"ಆಯ್ತು. ಹಾಗೇ ಮಾಡು. ದೀಪ ಏನಂತಾಳೆ?"

"ಅದೂ ಸರಿ. ನೀನೇ ಇಲ್ಲಿಲ್ಲದಿರುವಾಗ, ಅವಳು ಇಲ್ಲಿ ಬಂದು ಏನ್ಮಾಡ್ತಾಳೆ?"

"ನೀನ್ಯಾಕೆ ಹೀಗೆ ಮಾಡಿದ್ಯೋ ನಂಗಂತೂ ಅರ್ಥವಾಗ್ಲಿಲ್ಲ"

"ಆದ್ರೂ ಆರು ತಿಂಗಳು ಬೇಗ ಕಳೀಬಾರದೇ ಅಂತ ಹಗಲೂ ರಾತ್ರಿ ಬೆರಳು ಎಣಿಸ್ತಿದೀನಿ"

"ಹೂಂ, ಒಳ್ಳೇದು" ತಾಯಿ ಮಾತನ್ನು ಮುಗಿಸಿ ರಿಸೀವರ್‌ನ್ನು ಇಟ್ಟ ಸದ್ದು ಕೇಳಿಸಿದರೂ ಮಹೇಶ ಕಣ್ಣುಗಳನ್ನು ತೆರೆಯಲಿಲ್ಲ. ತಾಯಿಯ ಮಾತುಗಳನ್ನು ಕೇಳಿಸಿಕೊಂಡಿದ್ದ ತಾಯಿ ಇತ್ತ ತಿರುಗಿದಳು.

"ಮಹೀ ಏನೋ ಕೂತಲ್ಲೇ ನಿದ್ದೆ ಮಾಡ್ತಿದೀಯಾ.... ದಿನೂ ಫೋನು ಮಾಡಿದ್ದ. ನೀನೂ ಮಾತಾಡ್ತಿದ್ಯಾ?"

"ಪರವಾಗಿಲ್ಲ ಬಿಡು, ಏನ್ಹೇಳ್ದ?"

"ಎಲ್ಲಾ ಅನುಕೂಲವಾಗಿದೆ. ಯೋಚ್ನೆ ಮಾಡ್ಬೇಡಾಂತ ಹೇಳಿದ. ದೀಪಾಂಗೂ ಮಾಡಿದ್ನಂತೆ. ಅವಳು ನೋಡು, ನಮಗೆ ಏನೂ ಹೇಳಲೇ ಇಲ್ಲ. ಆ ಹುಡುಗಿ ಜೊತೇಲಿದ್ರೆ ಎಲ್ಲಾ ಮರೆತು ಹೋಗುತ್ತೆ ಅಂತ ಕಾಣುತ್ತೆ"

"ಊಟ ಹಾಕ್ತೀಯಾ?" ಆಕಳಿಸುತ್ತಾ ಎದ್ದ.

"ಊಟಕ್ಕೆ ಎಬ್ಬಿಸೋಣಾಂತ್ಲೇ ಬಂದೆ. ಅಷ್ಟರಲ್ಲಿ ಫೋನ್ ಬಂತು. ಹೂಂ, ನಡೀ...."

"ಏನಡುಗೆ ಮಾಡಿದೀಯ?" ತಟ್ಟೆ ಮುಂದೆ ಕೂರುತ್ತಾ ಕೇಳಿದ.

"ನಾವಿಬ್ರೇ ತಾನೇ ಅಂತ ಅನ್ನ, ಹುಳಿ, ಅಷ್ಟೇ ಮಾಡಿರೋದು"

"ಚಪಾತಿ ಮಾಡ್ಲಿಲ್ವಾ?" ಬೇಸರದಿಂದ ಕೇಳಿದ.

"ನಾಳೆ ಮಾಡ್ತೀನಿ. ಯಾಕೋ ಮಾಡುಕ್ಕೆ ಮನಸ್ಸೇ ಇರ್ಲಿಲ್ಲ"

"ಮೊದ್ಲೇ ಹೇಳಿದ್ದಿದ್ರೆ ಹೋಟೆಲ್ನಿಂದ ಕಟ್ಟಿಸ್ಕೊಂಡು ಬರ್ತಿದ್ದೆ"

"ಎಲ್ಲಾದಕ್ಕೂ ಯಾಕೆ ಸಿಡುಕ್ತೀಯೋ.... ಇದೆಲ್ಲ ನಿನ್ನ ಹೆಂಡ್ತಿಗಿರಲಿ" ತಾಯಿ ಮೆಲುವಾಗಿ ನಗುತ್ತಾ ತಮಾಷೆ ಮಾಡಿದಳು. ಮಹೇಶ ಮನದಲ್ಲೇ ಏನನ್ನೋ ಲೆಕ್ಕಾಚಾರ ಹಾಕುತ್ತಾ ಅನ್ನ ಹುಳಿಯನ್ನು ಕಲೆಸಿದ. ಸೌತೇಕಾಯಿಯ ಹುಳಿ ಘಂ

ಎನ್ನುತ್ತಿತ್ತು. ಎರಡು ತುತ್ತು ಹೆಚ್ಚಾಗಿಯೇ ತಿಂದ. ಹೊಟ್ಟೆ ತುಂಬಿದ ಮೇಲೆ ಮನದ ಬೇಸರ ಸ್ವಲ್ಪ ಕಡಿಮೆ ಆಗಿದೆ ಅಂತೆನ್ನಿಸಿತ್ತು. ಕೈ ತೊಳೆದು ತನ್ನ ರೂಮಿಗೆ ಬಂದ. ಯಾವುದೋ ಬಿಸಿನೆಸ್ ವಾರಪತ್ರಿಕೆಯನ್ನು ಹಿಡಿದು ಹಾಳೆಗಳನ್ನು ತಿರುವಿ ಹಾಕಿದ, ಆದರೆ ಓದಬೇಕೆನಿಸಲಿಲ್ಲ.

ಇವತ್ತಿಗೆ ಐದು ದಿನಕ್ಕೆ ಅಮ್ಮನನ್ನು ಅತ್ತಿಗೆಯನ್ನು ಡೆಲ್ಲಿಗೆ ಕಳಿಸಬೇಕು. ಇಬ್ಬರಿಗೂ ಇನ್ನೂ ಆ ವಿಷಯವನ್ನು ತಿಳಿಸಿಲ್ಲ. ಅಮ್ಮ ಹೊರಟು ಹೋದರೆ ಇಲ್ಲಿ ತಾನು ಒಂಟಿಯಾಗುವುದಂತೂ ನಿಜ. ತನಗೆ ಅಡುಗೆ ಕೆಲಸಗಳು ಗೊತ್ತಿಲ್ಲ. ಅವಳು ವಾಪಸ್ಸು ಬರುವವರೆಗೆ ಕಾಮತ್ ಹೋಟೆಲ್ಲೇ ಗತಿ. ತಾನೂ ದಿನೇಶನ ಜೊತೆಯಲ್ಲೇ ಮದುವೆಯಾಗಿದ್ದಿದ್ರೆ, ಹೆಂಡತಿಯ ಕೈಯ ಊಟ ಸಿಗುತ್ತಿತ್ತು ಅಂತಂದುಕೊಂಡಾಗ ನಗು ಬಂತು. ಸುಜಯಂಗೆ ಅಡಿಗೆ ಕೆಲಸ ಬರುತ್ತೋ ಇಲ್ವೋ ತಿಳಿಯದು, ತಾನೆಷ್ಟು ಸ್ವಾರ್ಥಿ.... ತನ್ನ ಅನುಕೂಲಕ್ಕಾಗಿ ಮದುವೆಯಾಗುವ ಆಲೋಚನೆ ಬರುತ್ತಿದೆಯಲ್ಲ. ನಾನೇನೋ ಅವಳನ್ನು ಮೆಚ್ಚಿದೀನಿ. ಅವಳು ನನ್ನನ್ನು ಇಷ್ಟ ಪಡ್ತಾಳೋ ಇಲ್ಲವೋ ಯಾರಿಗೆ ಗೊತ್ತು? ಅಲ್ಲದೇ ಅಮ್ಮನಿಗೆ ಸುಜಯನ ಬಗ್ಗೆ ಒಳ್ಳೆಯ ಅಭಿಪ್ರಾಯವಿಲ್ಲ. ಇಂಥ ಸಮಯದಲ್ಲಿ ತಾನು ತನ್ನ ಮದುವೆ ಬಗ್ಗೆ ಯೋಚಿಸಿದರೆ.... ಈ ವಿಷಯದಲ್ಲಿ ಅತ್ತಿಗೆ ತನಗೆ ಸಹಾಯ ಮಾಡಬಹುದೇ.....? ಅವರನ್ನು ಕೇಳುವುದು ಹೇಗೆ...? ಅವರ ಮನಸ್ಸಲ್ಲಿ ಏನಿದೆಯೋ? ಹೇಗಾದರಾಗಲೀ, ಅತ್ತಿಗೆಯ ಹತ್ತಿರ ಮಾತನಾಡಬೇಕು. ಹೇಗೂ ಸುಜಯ ಅವರ ಜೊತೆ ಜೊತೇಲಿ ಇರ್ತಾಳೆ.... ಆಗ ಈಗ ನಾನೂ ಅವಳೂ ಭೇಟಿಯಾದರೆ, ನಮ್ಮಿಬ್ಬರ ಸ್ನೇಹ ಇನ್ನೂ ಹೆಚ್ಚಾಗಬಹುದು.... ಆಗ ಅವಳ ಮನಸ್ನಲ್ಲಿ ಏನಿದೆ ಅಂತ ತಿಳಿದರೂ ತಿಳಿಯುತ್ತೆ.... ತನ್ನ ಬಳಿ ಇದ್ದ ಸುಜಯಳ ಫೋಟೋ ಹೊರ ತೆಗೆದು ನೋಡಿದ. "ಏನ್ ಮೇಡಂ.... ಏನಿದೆ ನಿಮ್ಮ ಮನಸ್ನಲ್ಲಿ? ಹೀಗೇ ಸುಮ್ನೆ ನಕ್ಕು ಬಿಟ್ಟರೆ ಆಯ್ತಾ...? ಮುಗುಳ್ನಕ್ಕು ಮೋಡಿ ಮಾಡಿ ಕೈ ಕೊಡಲ್ಲ ತಾನೇ?"

ಮಹೇಶ ಯಾರೊಂದಿಗೋ ಫೋನಿನಲ್ಲಿ ಮಾತನಾಡುತ್ತಿದ್ದಾನೆಂದುಕೊಂಡು, ವನಜಮ್ಮ ಮಾತುಗಳನ್ನಾಲಿಸಲು ಬಾಗಿಲ ಬಳಿ ಅವನಿಗೆ ಕಾಣದಂತೆ ನಿಂತಳು. ಹೆಜ್ಜೆಯ ಸಪ್ಪಳ ಕೇಳಿಸಿತ್ತಾದ್ದರಿಂದ ಮಹೇಶ ಮಾತನ್ನು ನಿಲ್ಲಿಸಿದ. ಒಂದು ಗಳಿಗೆಯ ನಂತರ ವನಜಮ್ಮ ಹಿಂದಕ್ಕೆ ಹೊರಟಿದ್ದು ತಿಳಿಯಿತು. ತನ್ನ ಕೈಯಲಿದ್ದ ಫೋಟೋ ವನ್ನು ಎದೆಯ ಮೇಲಿರಿಸಿಕೊಂಡು ಹಾಗೇ ಉರುಳಿಕೊಂಡ.

"ನನ್ನ ನೆಮ್ಮದಿಯನ್ನು ಕೆಡಿಸ್ತಾ ಇದೀಯಾ.... ಒಂಟಿಯಾಗಿ ನನ್ನ ಕೈಗೆ ಸಿಕ್ಕಾಗ ವಿಚಾರಿಸ್ಕೊಳ್ತೀನಿ" ಎನ್ನುತ್ತಾ.... ನಿದ್ರಿಸಲು ಯತ್ನಿಸಿದ.

ಆಫೀಸಿನ ನಂತರ ಸೀದಾ ಶಿವರಾಮಯ್ಯನವರ ಮನೆಯ ಕಡೆಗೆ ಗಾಡಿಯನ್ನು ಓಡಿಸಿದ. ಪೋರ್ಟಿಕೋದಲ್ಲಿ ಕುಳಿತು, ಯಾವುದೋ ಇಂಗ್ಲೀಷ್ ಕಾದಂಬರಿಯನ್ನು

ಓದುತ್ತಿದ್ದ ದೀಪಾ ಅವನನ್ನು ಕಂಡು ಮುಗುಳ್ನಕ್ಕಳು.

"ಹಲೋ ಅತ್ತಿಗೆ ಹೇಗಿದೀರಿ?" ಆತ್ಮೀಯತೆಯಿಂದ ಕೇಳಿದ.

"ಫೈನ್.... ನೀವು ಹೇಗಿದೀರಿ.... ಬನ್ನಿ...." ಒಳಕ್ಕೆ ಕರೆದಳು.

"ಊಟ ಸೇರ್ತಿದೆಯಾ? ನಿದ್ದೆ ಬರ್ತಿದೆಯಾ? ಅಥವಾ ವಿರಹಾ.... ನೂರು ನೂರು ತರಹಾ.... ಅಂತ ಹಾಡ್ತಾ ಶಿವರಾತ್ರಿ ಮಾಡ್ತಿದೀರೋ....?"

"ಮಹೇಶ್...." ಅವಳು ನಾಚಿದಳು.

"ಷಾಪಿಂಗ್‌ಗೆ ಹೋಗ್ಲಿಲ್ವಾ..? ಮನೇಲೇ ಇದೀರಿ..... ಒಬ್ರೇ ಇದೀರಾ?"

"ಷಾಪಿಂಗ್ ಬೋರ್. ಅಲ್ದೆ ನನ್ನನ್ನು ಕರ್‍ಕೊಂಡು ಹೋಗೋಕೆ ಯಾರೂ ಇಲ್ಲ. ಒಬ್ಬಳೇ ಹೋಗುಕ್ಕೆ ಬೇಜಾರು......"

"ಅವರೂ ನಿಮ್ಮ ಕಸಿನ್.... ಸುಜಯ ಬರಬಹುದಲ್ಲಾ...."

"ದಿನಾ ಸಾಯಂಕಾಲ ಸ್ವಲ್ಪ ಹೊತ್ತು ಬರ್ತಾಳೆ. ಈಗ ಇನ್ನೇನು ಅವಳೂ ಬರುವ ಹೊತ್ತು" ತನ್ನ ಕೈ ಗಡಿಯಾರದ ಕಡೆ ನೋಡಿದಳು. ಅವನ ಮನಸ್ಸು ಕುಣಿಯಿತು.

"ಹಾಗಾದ್ರೆ ಹೊರಗೆ ತಿರುಗಾಡುಕ್ಕೆ ಹೋಗ್ತೀರೇನೋ? ನಾನು ಬರ್ತೀನಿ"

"ಎಲ್ಲೂ ಹೋಗೋಕ್ಕೆ ಬೇಜಾರು.... ನಿಮ್ಮಣ್ಣ ಹೀಗೆ ಮಾಡ್ತಾರೆ ಅಂತ ನಾನು ಅಂದ್ಕೊಂಡಿರ್‍ಲಿಲ್ಲ"

"ನೀವು ಹಠ ಮಾಡಿ ಹೊರಟೇ ಬಿಡಬೇಕಾಗಿತ್ತು.... ಈಗ್ಲೂ ಏನಂತೆ? ಸೀದಾ ಹೋಗಿ ಅವನ ಮುಂದೆ ನಿಂತ್ಕೊಂಡ್ಬಿಡಿ"

"ಚೆನ್ನಾಗಿದೆ ನಿಮ್ಮ ಮಾತು......"

"ಇಲ್ಲ.... ಸಲಹೆ ಕೊಡ್ತಿದೀನಿ. ನಾನು ಬರ್ತಾ ಇದೀನಿ ಅಂತ ಫೋನಿನಲ್ಲಿ ಹೇಳ್ಬಿಟ್ಟು ಪ್ಲೇನ್ ಹತ್ಬಿಡಿ. ಖಂಡಿತಾ ಏರ್ ಪೋರ್ಟ್‌ಗೆ ಬರ್ತಾನೆ. ಅವನಿಗೂ ಒಳೊಳಗೇ ಒಂಥರಾ ಖುಷಿಯಾಗುತ್ತೆ"

"ತಮಾಷೆ ಸ್ವಲ್ಪ ಹೆಚ್ಚಾಯಿತು ಮಹೇಶ್.... ಹೋಗ್ಲಿಬಿಡಿ"

"ಇಲ್ಲ ಅತ್ತಿಗೆ, ಸೀರಿಯಸ್ ಆಗೇ ಹೇಳ್ತಿದೀನಿ. ನಾನು ನಿಮ್ಮ ಫ್ಲೈಟ್‌ಗೆ ಎಲ್ಲಾ ರೆಡಿ ಮಾಡ್ತೀನಿ. ಹೊರಟು ಬಿಡಿ... ಅವನು ಏನೂ ಮಾಡುಕ್ಕಾಗುಲ್ಲ"

"ಅವರಿಗೆ ಕೋಪ ಬರುತ್ತೆ. ಕೋಪದಲ್ಲಿ ಹೊಡೆದ್ರೆ?" ಮಹೇಶ ನಕ್ಕ.

"ಅವನು ಒಂದು ದಿನ ಒಂದು ಸೊಳ್ಳೇನ ಹೊಡೆದೋನಲ್ಲ. ಅವನಿಗೆ ಕೋಪವೇ ಬರುಲ್ಲ. ಅಷ್ಟು ಒಳ್ಳೆಯವನು. ನಿಮ್ಮನ್ನು ಕಂಡು ಅವನಿಗೆ ಖುಷಿಯೇ ಆಗುತ್ತೆ. ಅವನ್ಗೂ ಈಗಾಗ್ಲೇ ಬೇಸರ ಆಗ್ತಾ ಇರುತ್ತೆ...."

"ಫೋನ್ನಲ್ಲಿ ಒಂದು ಸಲವಾದ್ರೂ ಬೇಸರ ಆಗುತ್ತೆ ಅಂತ ಹೇಳಿಲ್ಲ...." ಮೂತಿ ಉದ್ದ ಮಾಡಿದಳು.

"ಅವನೊಂದು ಥರಾ ಹಾಗೇ.... ನನ್ನ ಹಾಗೆ ಹೆಚ್ಚು ಮಾತನಾಡುಲ್ಲ. ಆದರೆ ಒಳ್ಳೆಯವನು.... ನಿಮ್ಮ ಮೇಲೆ ಅವನಿಗೆ ತುಂಬಾ ಪ್ರೀತಿ ಇದೆ"

"ಪ್ರೀತಿ ಇರೋರ ರೀತೀನ ಇದು? ಪ್ರೀತಿಯೂ ಇಲ್ಲ. ಏನೂ ಇಲ್ಲ"

"ಸರಿ. ಅವನಿಗೆ ಪ್ರೀತಿ ಇಲ್ಲ. ನಿಮಗೆ ಅವನ ಮೇಲೆ ಪ್ರೀತಿ ಇದೆ ತಾನೇ. ಅದನ್ನು ನೀವೇ ತೋರಿಸಿದ್ರಾಯ್ತು. ಜೈ ಅಂತ ಹೊರಟು ಬಿಡಿ"

"ಹೇಗಾಗುತ್ತೆ ಮಹೇಶ್? ನಮ್ಮಪ್ಪ ನಮ್ಮಮ್ಮ ನಂಗೇ ತಿಳುವಳಿಕೆ ಹೇಳ್ತಾರೆ ಅಷ್ಟೇ.... ನಿಮ್ಮ ತಾಯಿ ಏನಂದುಕೊಳ್ತಾರೆ?"

"ಹೇಳಲಿ ಬಿಡಿ. ನಿಮ್ಮ ಗಂಡನ ಮನೆಗೆ ಹೋಗೋಕೆ ಯಾರ ಆಕ್ಷೇಪಣೆಯೂ ಬೇಡ. ನೀವು ಯಾರಿಗೂ ಕೇರ್ ಮಾಡ್ಬೇಕಾಗಿಲ್ಲ"

"ನಿಮ್ಮ ಮಾತುಗಳನ್ನು ಕೇಳಿದ್ರೆ, ಭಯ ಆಗುತ್ತೆ ಮಹೇಶ್...."

"ಭಯ ಯಾಕ್ರೀ? ಬಾಂಬ್ ಎಸೆದು ಬನ್ನಿ ಅಂತ ಹೇಳಿದ್ನಾ? ಏನೋ ನಿಮ್ಮ ಬೇಸರ ಕಡಿಮೆ ಆಗ್ಲಿ ಅಂತ ಈ ಉಪಾಯ ಹೇಳಿದೆ ಬಿಡಿ"

"ಉಪಾಯ ಏನೋ ಚೆನ್ನಾಗಿದೆ. ಆದರೆ ಕೀಟಲೆಗೆ ಹೇಳ್ತಾ ಇದೀರೇನೋ ಅಂತನ್ನಿಸ್ತಿದೆ"

"ಛೇ.... ಛೇ.... ನಾನು ಯಾವ ಹುಡುಗಿಯರನ್ನು ಕೀಟಲೆ ಮಾಡ್ಡೋನಲ್ಲ. ನೀವು ನನ್ನ ಅತ್ತಿಗೆ, ಸಲುಗೆಯಿಂದ ಈ ಸಲಹೆ ಕೊಟ್ಟೆ. ನೀವು ಡೆಲ್ಲಿಗೆ ಹೋಗಲು ಇಷ್ಟ ಪಡೋದಾದ್ರೆ ಹೇಳಿ, ನಾನು ನಿಮಗೆ ಹೆಲ್ಪ್ ಮಾಡ್ತೀನಿ. ಏರ್ ಟಿಕೆಟ್ ಮಾಡಿಸಿ ಕಳಿಸಿಕೊಡುವ ಜವಾಬ್ದಾರಿ ನನಗಿರಲಿ...."

"ಹಾಗೇ ಮಾಡೋದು ಸರಿ ಅಂತೀರಾ?"

"ಮತ್ತೆ ಮತ್ತೆ ಕೇಳ್ತೀರಲ್ಲ. ನಾನು ಒಂದ್ಸಲ ಹೇಳಿದ್ಮೇಲೆ ಮುಗೀತು.... ನೀವು ಹೂಂ ಅನ್ನಿ.... ಅಷ್ಟು ಸಾಕು.... ಆದರೆ ಒಂದ್ಮಾತು, ಈಗ್ಲೇ ಯಾರ್ಗೂ ಹೇಳ್ಬೇಡಿ. ನೀವು ಹೊರಡೋ ವಿಷಯ ಸಸ್ಪೆನ್ಸ್ ಆಗಿರಲಿ" ಅಷ್ಟರಲ್ಲಿ ಗೇಟು ತೆರೆದ ಸದ್ದಾಯಿತು. ಒಳಗೆ ಬರುತ್ತಿದ್ದ ಸುಜಯ ಕಂಡಳು.

"ಸುಜಿ ಬಂದ್ಲು" ಎನ್ನುತ್ತಾ ಅವನನ್ನು ಅಲ್ಲಿಯೇ ಬಿಟ್ಟು ತಾನೇ ಹೊರ ಬಂದಳು.

"ಏನೇ.... ಎಷ್ಟು ಇಳಿದು ಹೋಗಿದೆಯಲ್ಲೇ. ಆರು ತಿಂಗಳು ಕಳೆಯೋ ಹೊತ್ಗೇ ಏನಾಗಿರ್ತೀಯೋ....? ನಿನ್ನ ಗಂಡಂಗೆ ನಿನ್ನ ಗುರುತೇ ಸಿಗೋಲ್ಲ ಅಷ್ಟೇ" ಸುಜಯ ನಕ್ಕರೂ ದೀಪಾ ನಗಲಿಲ್ಲ. ಸಂಜ್ಞೆ ಮಾಡಿ,

"ಮಹೇಶ್ ಬಂದಿದಾರೆ....." ಎಂದಳು ಪಿಸುದನಿಯಲ್ಲಿ.

"ಹೌದಾ! ಏನಂತೆ? ಯಾವಾಗ ಬಂದ್ರು?"

"ಈಗ್ತಾನೇ ಬಂದ್ರು.... ಸುಮ್ನೇ ಬಂದಿರಬಹುದು."

"ಹೋಗಿ ಅತ್ಗೇನ ನೋಡಿ ಮಾತಾಡಿಸ್ಕೊಂಡು ಬಾ ಅಂತ ಶ್ರೀರಾಮಚಂದ್ರ ಅಪ್ಪಣೆ ಕೊಡಿಸಿರಬಹುದು. ಈ ಲಕ್ಷ್ಮಣ ಶಿರಸಾವಹಿಸಿ ಬಂದು ಬಿಟ್ಟಿದಾನೆ" ಈ ಮಾತುಗಳು ಮಹೇಶನ ಕಿವಿಗೆ ಬಿದ್ದವು. ತಾನೂ ಎದ್ದು ಹೊರ ಬಂದ. ಸುಜಯ ನಾಚಿಕೆಯಿಂದ ತುಟಿಗಳನ್ನು ಕಚ್ಚಿಕೊಂಡಳು.

"ಅತ್ಗೇ ನಾನಿನ್ನು ಬರ್ತೀನಿ. ನಿಮ್ಮ ಹಿತೈಷಿ ಬಂದಾಯ್ತಲ್ಲ" ತಾನೂ ನಕ್ಕು, ಹಲೋ ಹೇಗಿದೀರಿ ಸುಜಯಾರವರೇ.... ನಮ್ಮ ಅತ್ತಿಗೇನ ಚೆನ್ನಾಗಿ ಕಂಪೆನಿ ಕೊಡ್ತಿದೀರಿ. ಅದಕ್ಕೆ ನಮ್ಮಣ್ಣನ ಪರವಾಗಿ ನಾನು ಥ್ಯಾಂಕ್ಸ್ ಹೇಳ್ತೀನಿ" ಸುಜಯ ಮಾತನಾಡಲಿಲ್ಲ.

"ಇಬ್ರೂ ಕೂತ್ಕೊಂಡು ಮಾತಾಡ್ತಿರಿ. ನಾನು ಜ್ಯೂಸ್ ಮಾಡ್ಕೊಂಡು ತರ್ತೀನಿ"

"ದೀಪೂ ನಾನೇ ಮಾಡ್ಕೊಂಡು ಬರ್ತೀನಿ. ನೀನು ಕೂತ್ಕೋ...."

"ಇರಲಿ. ನೀವು ಕೂತ್ಕೊಳ್ಳಿ. ಏನೋ ರಾಮಾಯಣದ ಕತೇನ ಹೇಳ್ತಿದ್ದ ಹಾಗಿತ್ತು.... ಮುಂದುವರೆಸಿ" ಅಲ್ಲಿದ್ದ ಕುರ್ಚಿಯ ಮೇಲೆ ಕೂರುತ್ತಾ ಚುಡಾಯಿಸಿದ.

"ಏನಿಲ್ಲವಲ್ಲ...."

"ನಾನಿಲ್ಲಿ ರಾಮದೂತನಾಗಿ ಬಂದಿಲ್ಲ. ನಿಜ ಹೇಳ್ಲಾ.... ನಿಮ್ಮನ್ನು ನೋಡೋಣಾಂತ್ಲೇ ಇಲ್ಲಿಗೆ ಬಂದಿದ್ದು" ಚುಡಾಯಿಸಿದ. ಅವಳು ಕೆಂಪಾದಳು.

"ಯಾಕೆ? ನಾನಿಲ್ಲಿಗೆ ಬರ್ತೀನಿ ಅಂತ ಯಾರು ಹೇಳಿದ್ರು?"

"ಅತ್ಗೆ ಹೇಳಿದ್ರು.... ನೀವು ಕಂಪೆನಿ ಕೊಡೋಕೆ ಆಗಾಗ್ಗೆ ಬರ್ತೀರಿ ಅಂತ"

"ನನಗೆ ಹೇಳೋದೇನಾದ್ರೂ ಇತ್ತಾ?"

"ಇಲ್ಲ. ನಿಮ್ಮನ್ನು ಕೇಳೋದು ಬಹಳ ಇದೆ. ಆದರೆ ಈಗ ಬೇಡ ಬಿಡಿ"

"ನನ್ನನ್ನು ಏನು ಕೇಳ್ಬೇಕೂಂತ ಇದೀರಿ? ಗಲಿಬಿಲಿಯಿಂದ ಅವಳ ಧ್ವನಿ ನಡುಗಿತ್ತು. ಕೆನ್ನೆಗಳು ಗುಲಾಬಿ ಹೂಗಳಾಗಿದ್ದವು. ಮಹೇಶ ಸಂತೃಪ್ತಿಯಿಂದ ಅವಳ ಕೆನ್ನೆಗಳನ್ನು ನೋಡಿದ. ಅವಳು ನಾಚಿಕೆಯಿಂದ ಕತ್ತೆತ್ತದೇ ಏನು ಕೇಳಿ ಬಿಡುವನೋ ಎಂಬ ತವಕದಲ್ಲಿ ಕುಳಿತಿದ್ದಳು. ತನ್ನ ಅಂತರಂಗದ ಮಾತುಗಳು ಗಂಟಲಿನಿಂದ ಹೊರ ಬಂದೇ ಬಿಡುತ್ತದೆ ಎಂಬ ಉದ್ವೇಗದಲ್ಲಿ ಅವನಿದ್ದ. ದೀಪಾ ಅವನ ಮುಂದೆ ತಟ್ಟೆಯನ್ನು ಹಿಡಿದಳು. ಅವನು ವಾಸ್ತವಕ್ಕೆ ಬಂದ. ಜ್ಯೂಸ್ ತುಂಬಿದ ಗ್ಲಾಸನ್ನು ಎತ್ತಿಕೊಂಡು, ಥ್ಯಾಂಕ್ಯು ಎಂದ. ದೀಪಾ ಸುಜಯಳಿಗೂ ಒಂದು ಗ್ಲಾಸನ್ನಿತ್ತು ತಾನೂ ಒಂದನ್ನು ಹಿಡಿದು ಕುಳಿತಳು. ಎಲ್ಲರೂ ಒಬ್ಬರನ್ನೊಬ್ಬರು ನೋಡುತ್ತಾ ಜ್ಯೂಸ್ ಕುಡಿದರು.

"ನಾನಿನ್ನು ಬರ್ತೀನಿ" ಮಹೇಶ ಎದ್ದು ನಿಂತ.

"ನಾಳೆ ಸಾಯಂಕಾಲ ನಾನು ನಿಮ್ಮ ಮನೆಗೆ ಬರ್ತೀನಿ" ದೀಪಾ ಹೇಳಿದಳು. ಮಹೇಶ ತಲೆಯಾಡಿಸಿ ಇಬ್ಬರಿಗೂ ಬೈ ಬೈ ಹೇಳಿ ಹೊರಟ.

* * *

ದೇವಸ್ಥಾನದಲ್ಲಿ ಏನೋ ಪ್ರವಚನ ಇದೆಯೆಂದು ವನಜಮ್ಮ ಹೊರಟು ಹೋಗಿದ್ದಳು. ದೀಪಾ ಬರುವ ವಿಷಯವನ್ನು ಮಹೇಶ ತಾಯಿಗೆ ತಿಳಿಸಿರಲಿಲ್ಲ.

"ಅಮ್ಮಾ ಇಲ್ವಾ? ಹೊರಗೆ ಹೋಗಿದಾರಾ?" ದೀಪಾ ಸುತ್ತಲೂ ನೋಟ ಹರಿಸುತ್ತಾ ಕೇಳಿದಳು.

"ಹುಂ. ದೇವಸ್ಥಾನಕ್ಕೆ ಹೋಗಿದಾಳೆ. ಕಾಫಿ, ತಿಂಡಿ ಏನಾದ್ರೂ ತಗೋತೀರಾ?"

"ಏನೂ ಬೇಡ ಮಹೇಶ್.... ನೆನ್ನೆ ರಾತ್ರಿ ನಂಗೆ ನಿದ್ದೇನೇ ಬರಲಿಲ್ಲ. ನೀವು ಸಜೆಸ್ಟ್ ಮಾಡಿದ್ದೇ ತಲೆ ತುಂಬಾ ಕೊರೀತಿತ್ತು"

"ದಿನೇಶ್ ಫೋನು ಮಾಡಿದ್ನಾ? ಅವನಿಗೆ ಹೇಳಿ ಬಿಟ್ರಾ?"

"ಇಲ್ಲ ಹೇಳ್ಲಿಲ್ಲ. ಅವ್ರಿಗೆ ಒಬ್ರೇ ತುಂಬಾ ಬೇಸರವಂತೆ. ಹಾಗೇ ಆಗ್ಬೇಕು ಅಂತ ಅಂದೆ"

"ಅದಕ್ಕೆ ಏನಂದ?"

"ಅದಕ್ಕೆ ಉತ್ತರವನ್ನೇ ಕೊಡ್ಲಿಲ್ಲ.... ನಾನೇನಾದ್ರೂ ಹೋದ್ರೆ ಅದೇ ಒಂದು ದೊಡ್ಡ ಹಗರಣವಾಗಿ ಬಿಡುತ್ತಾ ಅಂತ ಭಯ ಆಗುತ್ತೆ"

"ಭಯ ಯಾಕೆ? ಏನೂ ಆಗುಲ್ಲ. ಧೈರ್ಯವಾಗಿ ಹೊರಡಿ"

"ಅಪ್ಪ ಅಮ್ಮ ಕೇಳಿದ್ರೆ ಏನ್ಹೇಳಲಿ?"

"ನಿಜಾನೇ ಹೇಳಿ, ಗಂಡನ ಮನೆಗೆ ಹೊರಟ್ರೆ ಅವರ್‍ಯಾಕೆ ಬೇಡಾಂತಾರೆ. ಬೇಕಾದ್ರೆ ನನ್ನ ತಲೆ ಮೇಲೆ ಎಲ್ಲಾ ಹಾಕಿ. ನನಗೇನೂ ಭಯವಿಲ್ಲ"

"ಹಾಗಲ್ಲ ಮಹೇಶ್ ನನ್ನನ್ನು ಒಬ್ಬಳನ್ನೇ ಕಳಿಸ್ತಾರೋ ಇಲ್ಲವೋ? ನೀವೂ ನನ್ನ ಜೊತೆಗೆ ಬರ್ತೀರಾ?"

"ನಾನಾ?" ಮಹೇಶ ನಕ್ಕ. ನನಗೆ ರಜ ಇಲ್ಲ. ಕೆಲ್ಸ ಹೋದ್ರೆ ಆಮೇಲೆ ನನ್ನ ಗತಿ?" ದೀಪಾಳೂ ನಕ್ಕಳು. ಹಾಗಾದ್ರೆ ಒಂದ್ಕೆಲ್ಸ ಮಾಡೋಣ, ಅಮ್ಮನ್ನ ನಿಮ್ಮ ಜೊತೆಗೆ ಬರೋಕೆ ಒಪ್ಪಿಸ್ತೀನಿ.....ನಿಮಗೆ ಏನೂ ಅಬ್ಜೆಕ್ಷನ್ ಇಲ್ಲ ತಾನೇ?"

"ಛೇ... ಛೇ... ಏನಿಲ್ಲ. ಆದರೆ ನಿಮ್ಮ ತಾಯಿ ಒಪ್ಪದಿದ್ದರೇ?"

"ನೋಡೋಣ. ನಾನು ಒಪ್ಪಿಸೋಕ್ಕೆ ಪ್ರಯತ್ನ ಮಾಡ್ತೀನಿ. ಅಮ್ಮನೂ ದಿನೇಶನ್ನ ತುಂಬಾ ಮಿಸ್ ಮಾಡ್ಕೋತಿದ್ದಾಳೆ. ಹೊರಟರೂ ಹೊರಡಬಹುದು. ಆ ಕಡೆಯ ತೀರ್ಥ ಕ್ಷೇತ್ರಗಳಿಗೆಲ್ಲಾ ಹೋಗಿ ಬರಬಹುದು ಅನ್ನೋ ಆಸೇನೂ ಇರುತ್ತೆ. ನಿಮಗೂ ಪುಣ್ಯ ಬರುತ್ತೆ"

"ನಂಗಿಂತ ಹೆಚ್ಚಿನ ಪುಣ್ಯ ನಿಮಗೆ ಸಿಗುತ್ತೆ ಮಹೇಶ್"

"ಹೌದು ಹೌದು. ಎರಡೆರಡು ಕಡೆಯಿಂದ. ನಾನು ಇವತ್ತೇ ಅಮ್ಮನ ಹತ್ರ ಮಾತ್ನಾಡ್ತೀನಿ. ಆದ್ರೆ ಈಗ್ಗೇ ಯಾರ್‍ಗೂ ಹೇಳ್ಬೇಡಿ.... ಓಕೆ"

"ಥ್ಯಾಂಕ್ಸ್ ಮಹೇಶ್.... ನಿಮಗೆ ಊಟ, ತಿಂಡಿಗೆ ತೊಂದ್ರೆ ಆಗುತ್ತೇನೋ?"

"ಅದೆಲ್ಲಾ ಪರವಾಗಿಲ್ಲ. ಹೊರಗೆ ತಿಂದು ಅಭ್ಯಾಸವಿದೆ ನನ್ಗೆ. ನಾನು ಮ್ಯಾನೇಜ್ ಮಾಡ್ಕೋಳ್ತೀನಿ"

"ನಮ್ಮ ತಂದೆ ಮನೆಗೆ ದಿನಾ ಬಂದು ಊಟ ಮಾಡಬಹುದು"

"ನಿಮ್ಮ ತಂದೆ ಮನೆ ದೂರ ಆಗುತ್ತೆ. ಹತ್ರ ಇದ್ದಿದ್ರೆ ನಾನೇ ಹೇಳ್ತಿದ್ದೆ. ನಂಗೆ ಅಡುಗೆ ಗಿಡಿಗೆ ಬರಲ್ಲ. ಇಲ್ದಿದ್ರೆ ನಾನೇ ಮಾಡ್ಕೊತಿದ್ದೆ"

"ಇಫ್ ಯೂ ಡೋಂಟ್ ಮೈಂಡ್.... ನಾನು ನಮ್ಮ ಮಾವಂಗೆ ಹೇಳ್ಲಾ? ಸುಜಯ ಬೇಕಾದ್ರೆ ನಿತ್ಯ ಕ್ಯಾರಿಯರ್ ತಂದು ಕೊಡ್ತಾಳೆ"

"ನೋ ನೋ. ಅವ್ರುಗಳಿಗೆ ಸುಮ್ನೆ ತೊಂದರೆ.... ಅದೆಲ್ಲಾ ಚೆನ್ನಾಗಿರುಲ್ಲ" ಹಾಗೆ ಹೇಳಿದರೂ, ಈ ನೆವದಲ್ಲಿ ಸುಜಯ ತನ್ನ ಮನೆಗೆ ಪ್ರತಿನಿತ್ಯ ಬಂದರೂ ಬರಬಹುದು ಅಂತ ಅನ್ನಿಸಿತ್ತು. ಆದರೆ, ಸುಜಯ ದಿನಾ ನಮಗೆ ಊಟ ಸಪ್ಲೈ ಮಾಡೋಕೆ ಒಪ್ಪದಿದ್ರೆ? ಅಲ್ದೇ ಅದು ಸರಿಯೂ ಅಲ್ಲ ಅಂತಂದುಕೊಂಡು,

"ಸುಜಯ ಯಾವ ಸ್ಕೂಲ್ನಲ್ಲಿ ಟೀಚರ್ ಆಗಿರೋದು?" ಕೇಳಿದ.

"ಸರ್ವೋದಯ ಸ್ಕೂಲ್ ಅಂತ. ಪಾರ್ಟ್ ಟೈಂ ಟೀಚರ್. ಸುಮ್ನೆ ಟೈಂ ಪಾಸ್‌ಗೆ ಅಂತ ಹೋಗ್ತಿದಾಳೆ. ದೂರ ಇಲ್ಲ. ಆದ್ರೆ ಅವಳ್ಗೆ ಟೀಚರ್ ಕೆಲ್ಸ ಇಷ್ಟವೇ ಇಲ್ಲ"

"ಇಷ್ಟವಿಲ್ದಿದ್ರೆ ಯಾಕ್ಮಾಡ್ಬೇಕು? ಬಿಟ್ಟು ಬಿಡಬಹುದಲ್ಲ"

"ಮದ್ವೆ ಗೊತ್ತಾದ್ರೆ ಬಿಟ್ಟು ಬಿಡ್ತಾಳೆ.... ಸುಜಯ ಒಪ್ಕೊಂಡಿದ್ರೆ ಈ ದಿನ ಅವಳು ನಿಮ್ಮ ಅತ್ಗೆ ಆಗಿರ್ತಿದ್ಲು"

"ಇರಬಹುದು.... ಆದರೆ ಒಪ್ಪದೇ ಇದ್ದುದಕ್ಕೆ ಕಾರಣವೇ ತಿಳಿದಿಲ್ಲ"

"ಹೌದು. ನಾನೂ ಎಷ್ಟೋ ಸಲ ಕೇಳ್ದೆ. ಹೇಳ್ಲೇ ಇಲ್ಲ. ಮದುವೆ ಗೊತ್ತಾದ್ಮೇಲೇ ನಂಗೂ ಸ್ವಲ್ಪ ಮುಜುಗರ ಆಗಿತ್ತು. ಬಹುಶಃ ದಿನೇಶ ಡೆಲ್ಲಿಗೆ ಕರ್ಕೊಂಡು ಹೋಗದೇ ಅತ್ತೆ ಮನೇಲೇ ಬಿಟ್ಟು ಹೋಗ್ತಾರೆ ಅಂತ ಮೊದಲೇ ತಿಳಿದಿರಬಹುದು. ಅದಕ್ಕೆ ಒಪ್ಪಲಿಲ್ಲವೇನೋ ಅಂತ ಅನ್ನಿಸುತ್ತೆ.... ಯಾಕೆಂದ್ರೆ, ದಿನೇಶ ಮದುವೆಗೆ ಮುಂಚೆ ನಂಗೆ ಈ ವಿಷಯ ಹೇಳಲೇ ಇಲ್ಲ"

ಈ ವಿಷಯ ಮಹೇಶನಿಗೆ ತಿಳಿಯದು. ದಿನೇಶ, ಸುಜಯ ಮಾತಾಡುವದಿರಲಿ, ಸರಿಯಾಗಿ ಒಬ್ಬರನ್ನೊಬ್ಬರು ನೋಡಲಿಲ್ಲ ಅಂತ ತಿಳಿದಿತ್ತು. ಆದರೆ ಅವನು ಒಪ್ಪಿಗೆ ಕೊಟ್ಟಿದ್ದ. ಯಾರಿಗೂ ತಿಳಿಸದೇ ಫೋನಿನಲ್ಲಿ ಮಾತನಾಡಿರಬಹುದೇ.... ಇರಲಾರದು. ಅತ್ತೆ ಜೊತೆ ಇರುಕ್ಕೆ ಇಷ್ಟವಿಲ್ದಿದ್ರೆ ತಾಯಿ ಮನೇಲಿರಬಹುದಾಗಿತ್ತು.

"ನಮ್ಮ ಮಾವ ಒಂಥರಾ. ಅವರ ಸ್ವಭಾವ ಅವಳಿಗೆ ಹಿಡಿಸುವುದಿಲ್ಲ. ತಂದೆ ಮೇಲೆ ಏನಾದ್ರೂ ಕಂಪ್ಲೇಟ್ ಹೇಳ್ತಾನೇ ಇರ್ತಾಳೆ. ನಾನು ಅವರ ಸ್ವಂತ ಮಗಳೇ

ಅಲ್ಲವೇನೋ ಅಂತನ್ನಿಸುತ್ತೆ ಅಂತ ಸಹ ಹೇಳ್ಕೊಂಡು ಅತ್ತಿದ್ದಾಳೆ"

ಮಹೇಶ ಸುಮ್ಮನೆ ನಕ್ಕು, "ನಂಗೂ ಅಮ್ಮನ ಮೇಲೆ ಎಷ್ಟೋ ಸಾರಿ ಹಾಗೇ ಅನ್ನಿಸುತ್ತೆ. ಅವಳಿಗೆ ನನಗಿಂತ ದಿನೇಶನ ಮೇಲೇ ಹೆಚ್ಚು ಪ್ರೀತಿ...."

"ನಮ್ಮನೇಲಿ ಅಮ್ಮಂಗೆ ದಿಲೀಪನ ಮೇಲೆ ಪ್ರೀತಿ ಜಾಸ್ತಿ. ಡ್ಯಾಡಿಗೆ ನನ್ನ ಮೇಲೆ ಪ್ರೀತಿ ಜಾಸ್ತಿ. ಅದಕ್ಕೇ ಸುಜಯಂಗೆ ಸ್ವಲ್ಪ ಹೊಟ್ಟೆ ಕಿಚ್ಚು ಅಂತನ್ನಿಸುತ್ತೆ"

ಅತ್ತಿಗೆಯ ಈ ಮಾತು ಮಹೇಶನಿಗೆ ಹಿಡಿಸಲಿಲ್ಲ. "ನಾವು ಹಾಗೆ ಅಂದು ಕೊಳ್ಳೋದು ತಪ್ಪೇನೋ.... ಅಲ್ದೇ ನಮಗೆ ತಂದೆ ಇಲ್ಲ. ತಂದೆಯ ಪ್ರೀತಿ ಏನೂ ಅಂತ ತಿಳೀದು"

ಮಹೇಶನ ಕಡೆ ಓರೆ ನೋಟ ಬೀರಿದಳು. "ನಿಮಗೆ ದಿನೇಶನ ಮೇಲೆ ಅಸೂಯೆ ಇರುವಂತೆ ಅನ್ನಿಸುವುದಿಲ್ಲ"

"ಛೇ.... ಛೇ.... ನೀವ್ಯಾಕೆ ಚಿಂತೆ ಮಾಡ್ತೀರಿ? ನಾವಿಬ್ರೂ ಫ್ರೆಂಡ್ಸ್ ಥರ ಇದೀವಿ. ಅದಕ್ಕೇ ಅಲ್ವಾ ಅವನಿಗೆ ಹೆಲ್ಪ್ ಆಗ್ಲಿ ಅಂತ ನಿಮ್ಮನ್ನು ಡೆಲ್ಲಿಗೆ ಕಳಿಸುತ್ತಿರುವ ಪ್ಲಾನ್ ಮಾಡ್ತಿರೋದು?" ಸ್ವಲ್ಪ ಜೋರಾಗಿಯೇ ನಕ್ಕ.

"ಅಂದ್ರೇ..... ನಿಮ್ಮಣ್ಣಂಗೆ ಊಟ, ತಿಂಡಿಗೆ ತೊಂದ್ರೆ ಆಗದಿರಲಿ ಅಂತ್ಲಾ.....?"

"ಬರೀ ಅಷ್ಟೇ ಅಲ್ಲ. ಒಂಟಿಯಾಗಿರುವ ಬದಲು ಕಂಪೆನಿ ಇದ್ದರೆ ಒಳ್ಳೇದು..... ಕಾಣದ ಊರು, ಒಬ್ಬನೇ ಇರ್ತಾನೆ..... ಆಮೇಲೆ....."

"ಪ್ಲೀಸ್ ಹೀಗೆಲ್ಲಾ ಹೆದರಿಸ್ಬೇಡಿ. ದಿನೇಶ ಅಂಥೋರಲ್ಲ. ನಂಗೆ ಅವರ ಮೇಲೆ ನಂಬಿಕೆ ಇದೆ"

"ನಾನು ಆ ಅರ್ಥದಲ್ಲಿ ಹೇಳ್ಲಿಲ್ಲ. ಅಮ್ಮ ಹೇಳುವ ಹಾಗೆ ದಿನೇಶ ಶ್ರೀರಾಮಚಂದ್ರ ನಂಥೋನು.... ಆದರೆ ಶೂರ್ಪನಖಿಯಂಥೋರೂ ಇರ್ತಾರೆ ಅಲ್ವಾ!"

"ಮಹೇಶ್.... ನಾನು ದಿನೇಶಂಗೆ ನೀವು ಹೀಗ್ರೆ ಹೇಳಿದ್ರಿ ಅಂತ ಹೇಳ್ತೀನಿ ಅಷ್ಟೇ"

"ಪ್ಲೀಸ್ ಹೇಳ್ಬೇಡಿ. ಸುಮ್ಮನೆ ಕೀಟಲೆ ಮಾಡಿದೆ. ಸಾರಿ.... ನಾನು ನನ್ನ ಕಲೀಗ್ಸ್ ಜೊತೆ ಹೀಗೇ ಫ್ರೀಯಾಗಿ ಮಾತಾಡಿ ಬಿಡ್ತೀನಿ. ಅದೇ ಅಭ್ಯಾಸ"

"ಹಾಗಾದ್ರೆ ಡೆಲ್ಲಿಗೆ ಟಿಕೆಟ್ ಯಾವಾಗ ಮಾಡಿಸ್ತೀರಿ? ಫೇರ್ ನಾನು ಕೊಡ್ತೀನಿ.... ನೀವು ಬೇಡ ಅನ್ಬಾರ್ದು"

"ಏನ್ರೀ ಹೀಗೆಲ್ಲಾ ಹೇಳ್ತೀರಿ! ನಾನು ಶ್ರೀಮಂತನಲ್ಲದಿರಬಹುದು.....ಆದರೆ, ದಿನೇಶನೇ ಖರ್ಚಿಗೆ ಅಂತ ಹಣ ಕೊಟ್ಟು ಹೋಗಿದಾನೆ.....ಸಾಕಷ್ಟಿದೆ"

"ಸಾರಿ. ನೀವು ತಪ್ಪು ತಿಳ್ಕೊತಾ ಇದೀರಾ.... ಐ ಡಿಡ್ ನಾಟ್ ಮೀನ್ ಇಟ್....." ಅವಳು ಕ್ಷಮೆ ಯಾಚಿಸುವ ಧ್ವನಿಯಲ್ಲಿ ಕೇಳಿದಾಗ ಅವನು ಮೆತ್ತಗಾದ.

"ಪರವಾಗಿಲ್ಲ ಬಿಡಿ...." ಆದರೂ ಅವನ ಮನಸ್ಸಿಗೆ ನೋವಾಗಿದೆ ಅಂತ

ತಿಳಿದು ಅವನ ಕೈಗಳನ್ನು ಹಿಡಿದಳು. ಅವನು ತಬ್ಬಿಬ್ಬಾದ. ಕೈಗಳನ್ನು ಹಿಂದಕ್ಕೆ ಎಳೆದುಕೊಂಡ.

"ನನ್ನ ಬ್ರದರ್ ಥರ ಅನ್ನೋ ಸಲುಗೆಯಿಂದ ಹೀಗೆಲ್ಲಾ ಮಾತಾಡಿ ಬಿಡ್ತೀನಿ. ನನಗೆ ನಿಮ್ಮ ಸ್ವಭಾವ ಹಿಡಿಸ್ತು.....ಅದಕ್ಕೇ"

"ಓ.ಕೆ... ಥ್ಯಾಂಕ್ಸ್.... ಈಗ ನಿಮಗೆ ತಿನ್ನೋಕೆ, ಕುಡಿಯೋಕೆ ಏನಾದ್ರೂ ಕೊಡ್ಲೇಬೇಕು. ಏನಾದ್ರೂ ಇದೆಯಾ ಅಂತ ನೋಡ್ತೀನಿ" ಅಡುಗೆ ಮನೆಯ ಕಡೆಗೆ ನಡೆದವನನ್ನು ಹಿಂಬಾಲಿಸಿದಳು. ಸಾಲಾಗಿ ಜೋಡಿಸಿಟ್ಟಿದ್ದ ಡಬ್ಬಿಗಳ ಮುಚ್ಚಳಗಳನ್ನು ತೆಗೆ ತೆಗೆದು ನೋಡಿದರು. ಒಂದಿಷ್ಟು ಚಕ್ಕುಲಿ, ಕೋಡುಬಳೆ, ಮಿಠಾಯಿ ಸಿಕ್ಕಿತು. ಇಬ್ಬರೂ ನಗುತ್ತಾ ತಿಂಡಿಗಳನ್ನು ತಟ್ಟೆಗೆ ಹಾಕ್ಕೊಂಡರು. ಮಹೇಶ ಕಾಫಿ ಬೆರೆಸಿದ.

"ಸ್ವಲ್ಪ ನೀರು ಬೇಕಾಗಿತ್ತು.... ನಾನೇ ತಗೋತೀನಿ" ಎನ್ನುತ್ತಾ ದೀಪಾ ಲೋಟ ತೆಗೆದುಕೊಂಡು ಕುಡಿಯುವ ನೀರನ್ನು ತೆಗೆದುಕೊಳ್ಳುವುದರಲ್ಲಿದ್ದಳು. ಅಷ್ಟರಲ್ಲಿ,

"ಮುಂಬಾಗಿಲನ್ನು ಹಾರುಹೊಡೆದು ಒಳಗೇನು ಮಾಡ್ತಿದೀಯೋ.... ?" ಎನ್ನುವ ವನಜಮ್ಮನ ಧ್ವನಿ ಕೇಳಿ, ಅವಳ ಕೈಯಿಂದ ಲೋಟ ಜಾರಿ ಕೆಳಗೆ ಬಿತ್ತು. ಮಹೇಶನ ಕಡೆ ನೋಡಿದಳು. ಅವನಿಗೂ ಕಸಿವಿಸಿಯಾಗಿತ್ತು. ಇಬ್ಬರೂ ಅಡುಗೆ ಮನೆಯಿಂದ ಹೊರ ಬಂದರು.

"ಯಾರು ದೀಪಾನಾ? ಇಬ್ರೂ ಅಡ್ಗೆ ಮನೇಲೇನು ಮಾಡ್ತಿದೀರಿ? ನೀನು ಯಾವಾಗ್ಬಂದೆ!" ಆಕ್ಷೇಪಣೆ ಮಾಡಿದಳು. ಇಬ್ಬರೂ ಮುಖ ಮುಖ ನೋಡಿಕೊಂಡರು.

"ಈಗ ಸ್ವಲ್ಪ ಹೊತ್ತಾಯ್ತು. ನಿಂಗೋಸ್ಕರಾನೇ ಕಾಯ್ತಾ ಇದ್ರು. ಅತ್ತಿಗೆಗೆ ತಿನ್ನೋಕೆ ಏನಾದ್ರೂ ಕೊಡೋಣಾಂತ ಅನ್ನಿಸ್ತು. ಡಬ್ಬಿಗಳನ್ನೆಲ್ಲಾ ತಳಮೇಲೆ ಮಾಡಿದೆವು.... ಚೂರು ಪಾರು ಸಿಕ್ತು. ಅದನ್ನೇ ಕೊಟ್ಟೆ. ಕಾಫಿ ಬೆರೆಸಿದೀನಿ. ಕುಡೀತೀಯಾ?" ವನಜಮ್ಮ ಸಂಶಯದಿಂದ ಇಬ್ಬರ ಕಡೆ ನೋಡಿದಳು.

"ಕಾಫಿ ಕುದ್ದ ವಾಸ್ನೆ ಬರ್ತಾ ಇದೆ. ಸ್ಟವ್ ಆರಿಸು.... ಅಲ್ಲಮ್ಮ ಬರ್ತೀನೀಂತ ಫೋನ್ ಮಾಡಿದ್ದಿದ್ರೆ ಮನೇಲೇ ಇರ್ತಿದ್ದೆ" ಅವಳು ಉತ್ತರಿಸಲಿಲ್ಲ. ಅವನು ಅಲ್ಲಿಂದಲೇ ಹೇಳಿದ. "ಅವರ ಮನೆಗೆ ಅವರು ಬರೋಕೆ ಫೋನ್ಯಾಕೆ? ಅಲ್ವಾ ಅತ್ಗೆ....."

"ಅದು ... ನಿಮ್ಮನೇಲಿ ಎಲ್ಲಾ ಹೇಗಿದೀರಿ! ದಿನೂ ದಿನಾ ಫೋನು ಮಾಡ್ತಾನಂತೆ. ಅಲ್ಲಿ ಎಲ್ಲಾ ಅನುಕೂಲಗಳಿವೆ, ಅಂತ ಹೇಳಿದ್ನಾ.....?"

"ಹೂಂ.....ಯಾವ್ದಕ್ಕೂ ತೊಂದ್ರೆ ಇಲ್ಲಾಂತ ಹೇಳಿದ್ರು"

"ಆದ್ರೇನಮ್ಮ? ಒಬ್ನಿಗೇ ಇರೋಕೆ ಸಖತ್ ಬೇಜಾರಂತೆ.... ಅಲ್ವಾ ಅತ್ಗೆ?"

"ಅನುಭವಿಸಲಿ, ಗಿಣಿಗೆ ಹೇಳ್ದ ಹಾಗೆ ಹೇಳ್ದೆ. ನನ್ಮಾತನ್ನೆಲ್ಲಿ ಕೇಳ್ತಾನೆ?"

"ಈಗ ನಂಗೊಂದು ಉಪಾಯ ಹೊಳೀತು... ಅತ್ಗೇನ ನಾವೇ ಅಲ್ಲಿಗೆ

ಕಳಿಸಿಬಿಟ್ರೆ?" ದೀಪಾ ಚಕಿತಳಾಗಿ ಅವನನ್ನೇ ನೋಡಿದಳು. ಮಂದಹಾಸ ಮಿನುಗಿತು.

"ಅವನ್ಗೆ ಇದೆಲ್ಲ ಹಿಡಿಸುಲ್ಲ. ಅವನು ಕೋಪ ಮಾಡ್ಕೋತಾನೆ ಅಷ್ಟೇ.... ಅವನೇ ಜೊತೇಲಿ ಕರ್ಕೊಂಡು ಹೋಗಿದಿದ್ರೆ.... ಆ ಮಾತೇ ಬೇರೆ.... ಒಬ್ಬಳೇ ಹೇಗೆ ಹೋಗ್ತಾಳೆ? ನಿನ್ನ ಪ್ಲಾನೆಲ್ಲಾ ಇಂಥದೇ"

"ಯಾಕೆ? ಒಬ್ಬನ್ನೇ ಕಳ್ಸೋಕೆ ಭಯಾನ? ಬೇಕಾದ್ರೆ ಜೊತೆಗೆ ನೀನೂ ಹೋಗು.... ನಾನು ಪ್ರಯಾಣಕ್ಕೆ ಎಲ್ಲ ಏರ್ಪಾಡೂ ಮಾಡ್ತೀನಿ"

"ತಮಾಷೆಗೂ ಒಂದು ಮಿತಿ ಇದೆ.... ತಿಳೀತಾ?"

"ತಮಾಷೆ ಅಲ್ಲಮ್ಮಾ ಸೀರಿಯಸ್ಸಾಗೇ ಹೇಳ್ತಿದೀನಿ. ಅಲ್ಲಿ ಅಣ್ಣಂಗೆ ಬೇಜಾರು. ಇಲ್ಲಿ ಅತ್ಗೇಗೆ ಬೇಜಾರು. ಅತ್ಗೆ ಡೆಲ್ಲಿಗೆ ಹೋದ್ರೆ ಅವನ್ಗೆ ಎಲ್ಲಾ ರೀತೀಲೂ ಅನುಕೂಲ ಆಗುತ್ತೆ.... ನೀನೇ ಯೋಚಿಸು.... ನೀನೂ ಜೊತೆಗೆ ಹೋಗು"

"ನನ್ನ ಚಿಂತೆ ಅದಲ್ಲ.... ಒಬ್ಬಳನ್ನೇ ಕಳಿಸ್ಬೌದು. ಆದರೆ..."

"ದಿನೇಶ ಕೋಪಿಸ್ಕೋಬಹುದು ಅನ್ನೋದೇ ನಿನ್ನ ಚಿಂತೆ. ನಂಗೊತ್ತು, ಅದಕ್ಕೇ ಹೇಳಿದ್ದು ಒಬ್ಬರಿಗಿಂತ ಇಬ್ಬರು ಮೇಲು. ನಿನ್ನನ್ನಂತೂ ಬೈಯೋಲ್ಲ. ಅಷ್ಟು ನಂಗೊತ್ತು" ಏನಾದರೂ ವ್ಯಂಗ್ಯವಾಡುತ್ತಿದ್ದಾನ್ಯೇ ಅಂತ ಅವನನ್ನೇ ಹರಿತವಾದ ದೃಷ್ಟಿಯಿಂದ ನೋಡಿದಳು. ಅವನು ನಗುತ್ತಿದ್ದಾನೆಂದೆನಿಸಿತ್ತು.

"ನನ್ನನ್ನು ಕಳಿಸಿಬಿಟ್ರೆ ನಿಂಗೆ ತೊಂದರೆ ಆಗುಲ್ವೇನೋ.... ಅಥವಾ ನನ್ನ ಕಾಟವಿಲ್ಲದೇ ಹಾಯಾಗಿರಬಹುದು ಅಂತ ಆಸೇನೋ....?"

"ನನಗೆ ಯಾವ ತೊಂದರೆಯೂ ಇಲ್ಲ. ಯಾವ ಆಸೆಯೂ ಇಲ್ಲ. ನಿಂಗೂ ಇದೊಂದು ಅವಕಾಶ. ಅವನು ವಾಪಸ್ಸು ಬಂದ್ಮೇಲೆ ನಿಂಗೆ ಆಸೆ ಇದ್ರೂ ಹೋಗುಕ್ಕೆ ಆಗುತ್ತಾ? ಡೆಲ್ಲಿ ನಮ್ಮ ದೇಶದ ರಾಜಧಾನಿ. ಕುತುಬ್ ಮಿನಾರ್, ಜಂತರ್ ಮಂತರ್ ನೋಡಬಹುದು. ಷಹಜಹಾನ್ ಕಟ್ಟಿಸಿರುವ ಸುಪ್ರಸಿದ್ಧ ತಾಜ್ ಮಹಲ್ ನೋಡ್ಬೇ ಕೂಂತ ಆಸೆ ಇಲ್ವಾ? ಹಾಗೆ ಅಮ್ಮಂಗೆ ಕಾಶಿಯಾತ್ರೆ ಮಾಡ್ಸಿ ಅತ್ಗೇ ಮರೀಬೇಡಿ. ಕಾಶ್ಮೀರಕ್ಕೂ ಕರ್ಕೊಂಡು ಹೋಗಿ ಅಂತ ಹೇಳ್ಬಹುದಾಗಿತ್ತು. ಆದರೆ ಈಗ ಅಲ್ಲಿ ಬರೀ ಆತಂಕವಾದಿಗಳ ಭಯವೋ ಭಯ....."

"ನಾನು ಸುಮ್ನಿದೀನೀಂತ ಎಷ್ಟು ಮಾತಾಡ್ತೀಯ.... ಅಲ್ಲಾ ದಿನೇಶ ಒಪ್ತಾನ ಮೊದ್ಲು ಕೇಳಿ ತಿಳ್ಕೋ. ನಾವು ಇಲ್ಲಿಂದ ಕಷ್ಟ ಪಟ್ಕೊಂಡು ಹೋಗೋದು ಅವನಿಗೆ ಸರಿ ಹೋಗದೆ ಇರೋದು. ನಾನೇನೋ ಸಹಿಸ್ಕೋತೀನಿ. ನಿನ್ನೆ ಮೊನ್ನೆ ಬಂದ ಹುಡುಗಿಗೆ ಅವನೂಂದ್ರೆ ಏನೂಂತ ಸರಿಯಾಗಿ ಗೊತ್ತಿಲ್ಲ. ಏನಮ್ಮ ದೀಪ ಏನಂತೀಯ?" ದೀಪ ಮಹೇಶನ ಕಡೆ ಪ್ರಶ್ನಾರ್ಥಕವಾಗಿ ನೋಡಿದಳು.

"ನಿಂಗೆ ಹೋಗ್ಬೇಕೂಂತ ಆಸೆ ಆಗ್ತಾ ಇದೆ.... ಖಂಡಿತಾ ಹೋಗ್ಬಾ. ಮುಂದೆ ಏನಾಗುತ್ತೋ ಅನ್ನೋ ಆತಂಕ ಇವತ್ನಿಂದ ಯಾಕೆ? ನಿನಗೆ ಅತ್ತಿಗೆ, ಅತ್ತಿಗೆಗೆ

ೀನು ಸಪೋರ್ಟ್ ಆದ್ರೆ ಸಾಕು" ವನಜಮ್ಮ ಮರು ನುಡಿಯುದಿದ್ದಾಗ ತುಟಿಯಂಚಿನಲ್ಲಿ ಕಿರುನಗೆ ಮೂಡಿತು. ದೀಪಾಳ ಕಡೆ ನೋಡಿ ಹೆಬ್ಬೆರಳು ತೋರಿ ಎಸ್' ಎಂದ.

"ಬನ್ನಿ ಅತ್ಗೆ ನಿಮ್ಮನ್ನು ಮನೆಗೆ ಬಿಟ್ಟು ಬರ್ತೀನಿ" ಎನ್ನುತ್ತಾ ಕಾರಿನ ಕೀಯನ್ನು ಕೈಗೆತ್ತಿಕೊಂಡ.

"ಬೆಳಿಗ್ಗೆ ಹೋದ್ರೆ ಆಗುಲ್ವಾ? ಇಲ್ಲೇ ಊಟ ಮಾಡಿ ಇಲ್ಲೇ ಮಲಗು. ನಿಮ್ಮ ತಂದೆ ಮನೆಗೆ ಫೋನು ಮಾಡಿಬಿಡು"

"ನಾಳೆ ನಾಡಿದ್ದರಲ್ಲಿ ಮತ್ತೆ ಬರ್ತಾರೆ ಬಿಡಮ್ಮಾ. ವಿತ್ ಲಗೇಜ್ ಬಂದ್ಬಿಡಿ ಅತ್ಗೇ. ಇಲ್ಲಿಂದ್ಲೇ ಏರ್ ಪೋರ್ಟ್‌ಗೆ ಹೋಗೋರಂತೆ...."

"ಪ್ಲೇನ್‌ನಲ್ಲಿ ಹೋಗ್ಬೇಕಾ? ಟ್ರೈನ್ ಅಲ್ವಾ...? ಟಿಕೆಟ್ಟು?"

"ಅದನ್ನೆಲ್ಲ ನಂಗೆ ಬಿಡು. ಪ್ಲೇನ್‌ನಲ್ಲಾದ್ರೆ ಅವತ್ತೇ ಡೆಲ್ಲಿಗೆ ಹೋಗಿ ಸೇರ್ಬಹುದು. ಟ್ರೈನ್ ಆದರೆ ಎರಡು ರಾತ್ರಿ ಪ್ರಯಾಣ ಮಾಡ್ಬೇಕಾಗುತ್ತೆ"

"ಪ್ಲೇನ್ ಟಿಕೆಟ್ ಅಂದ್ರೆ ದುಬಾರಿ ಆಗುಲ್ವೇ?"

"ಆದ್ರೆ ಆಯ್ತು. ಹಣಾನ ಕೂಡಿಟ್ಟು ಏನ್ಮಾಡ್ತೀಯ? ಖರ್ಚು ಮಾಡಿ ಸುಖ ಪಡ್ಬೇಕು. ಬನ್ನಿ ಅತ್ಗೆ ಹೊತ್ತಾಯ್ತು"

"ಬರ್ತೀನಿ ಅತ್ತೆ" ಎಂದು ಹೇಳಿ ಅವಳು ಅವನ ಹಿಂದೆ ನಡೆದಳು. ವನಜಮ್ಮನ ಮನಸ್ಸು ಉಯ್ಯಾಲೆ ಆಡಿತು. ಇವನ ಮಾತಿಗೆ ಕುಣಿದು ಡೆಲ್ಲಿಗೆ ಹೊರಡುವುದೋ ಅಥವಾ ಹೋಗದೇ ಅವಕಾಶವನ್ನು ಕಳೆದುಕೊಳ್ಳುವುದೋ.... ಇವನನ್ನು ಒಂಟಿಯಾಗಿ ಬಿಟ್ಟು ಹೋಗುವುದು ಹೇಗೆ? ಊಟ ತಿಂಡಿಗೆ ತೊಂದರೆ ಆಗುತ್ತೆ. ಇವನು ಟೂರ್ ಅಂತ ಹೊರಗೆ ಹೋದರೆ ಮನೆ ಕಡೆ ಯಾರು ದಿಕ್ಕು... ? ಹೋಗುವುದು ಬೇಡಾಂತ ಅಂದು ಕೊಂಡಳು. ಆದರೆ ಮರುಕ್ಷಣವೇ ದೀಪಾಳ ಬೇಸರದ ಮುಖ ಕಣ್ಣೆದುರಿಗೆ ಬಂತು. ದಿನೂ ಏನೋ ಆಲೋಚನೆ ಮಾಡಿ ಇಲ್ಲಿ ಬಿಟ್ಟು ಹೋಗಿದಾನೆ. ಅಲ್ಲಿ ಅವನಿಗೆ ಎಷ್ಟು ಬೇಸರವಾಗುತ್ತಿದೆಯೋ.... ಬಾಯಿ ಬಿಟ್ಟು ಹೇಳಲಾರ.... ನಾನೇ ಇವಳನ್ನು ಕರೆದುಕೊಂಡು ಹೋದರೆ.... ಅವನಿಗೂ ಹಿತವಾಗಬಹುದು ಎಂದುಕೊಂಡು ಹೊರಡಲು ನಿರ್ಧರಿಸಿದಳು.

* * *

"ಅತ್ಗೇ.... ನಿಮ್ಮ ಕಸಿನ್‌ಗೆ ಹೇಳಿ, ಈ ರಾಮದೂತ ಸೀತಾದೇವಿಯವರನ್ನು ರಾಮಚಂದ್ರನ ಬಳಿಗೆ ಕಳಿಸುವ ಏರ್ಪಾಡು ಮಾಡಿದಾನೆ ಅಂತ...." ಕಾರನ್ನು ಓಡಿಸುತ್ತಾ ದೀಪಾಳಿಗೆ ಹೇಳಿದ.

"ನನ್ನ ಕಸಿನ್.... ಯಾರದು?" ಏನೋ ಆಲೋಚನೆಯಲ್ಲಿದ್ದ ದೀಪಾಳಿಗೆ ತಕ್ಷಣಕ್ಕೆ ಅರ್ಥವಾಗಲಿಲ್ಲ.

"ಮಿಸ್.... ಸುಜಯಾರವರು...."

"ಓ... ಅವಳಾ? ಅವಳೊಬ್ಬಳು ಶುದ್ಧ ತಲೆ ಹರಟೆ. ತೋಚಿದ್ದನ್ನೆಲ್ಲ ಆಡಿಬಿಡ್ತಾಳೆ.... ನಾನು ಅವಳ ಪರವಾಗಿ ಕ್ಷಮೆ ಕೇಳ್ತೀನಿ"

"ಪರವಾಗಿಲ್ಲ ಬಿಡಿ. ಸದ್ಯ ರಾಮದೂತ ಲಕ್ಷ್ಮಣ ಅಂತಂದ್ರಲ್ಲ ಹನುಮಂತ ಅಂತ ಅನ್ನಲಿಲ್ಲವಲ್ಲ....." ಮುಂದಿನ ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಂಡು ನಕ್ಕ....

"ಸಾರಿ.... ನಿಮಗೆ ಬೇಸರವಾಯ್ತೇನೋ....?"

"ನೀವ್ಯಾಕೆ ಸಾರಿ ಕೇಳ್ಬೇಕು? ಅವರು ಕೇಳಿದ್ರೆ ಅದು ಬೇರೆ ಮಾತು"

"ನಾನು ಅವಳಿಗೆ ಹೇಳ್ತೀನಿ. ಯೂ ಡೋಂಟ್ ವರಿ"

"ಓ..ಕೇ.... ಮರೀಬೇಡಿ. ನೀವು ಊರಿಗೆ ಹೊರಡೋಕ್ಮುಂಚೇನೇ ಹೇಳ್ಬಿಡಿ"

"ಇಲ್ಲ ಮರೆಯುಲ್ಲ. ಬೇಕಾದ್ರೆ ಈಗ್ಲೇ ನನ್ನನ್ನು ಅವಳ ಮನೆಗೆ ಕರ್ಕೊಂಡು ಹೋಗಿ. ಈಗ್ಲೇ ಹೇಳ್ತೀನಿ"

"ಈಗ ಹೊತ್ತಾಗುಲ್ವಾ ಅತ್ಗೇ...." ಮನದ ಆಸೆಯನ್ನು ಮರೆಮಾಚಿ ನುಡಿದ.

"ನೀವು ಇದೀರಲ್ಲ ಜೊತೆಗೆ. ಒಂದೈದು ನಿಮಿಷ ಅಷ್ಟೇ. ಹಾಗೇ ಅತ್ತೆ ಮಾವನ್ನ ಮಾತಾಡ್ಸಿಕೊಂಡು ಬರ್ತೀನಿ"

"ಸರಿ. ನಿಮ್ಮಿಷ್ಟ" ಕಾರು ಸುಜಯಳ ಮನೆಯ ದಿಕ್ಕಿಗೆ ಓಡಿತು. ಕಾರು ನಿಂತ ಸದ್ದು ಕೇಳಿ ಸುಜಯ ಕಿಟಕಿಯಲ್ಲಿ ಇಣುಕಿದಳು. ನಂತರ ಬಾಗಿಲನ್ನು ತೆಗೆದಳು. ಎದುರಿಗೆ ನಿಂತಿದ್ದ ದೀಪಾಳನ್ನು ಕಂಡಳು.

"ಅದೇನೇ ಇಷ್ಟೊತ್ನಲ್ಲಿ? ನೀನು ಡ್ರೈವ್ ಮಾಡ್ಕೊಂಡು ಬಂದ್ಯಾ ಒಬ್ಬಳೇ...."

"ಇಲ್ಲ ಲಕ್ಷ್ಮಣ ಇದಾರೆ. ನಾನು ನನ್ನ ಅತ್ತೆ ಮನೆಗೆ ಹೋಗಿದ್ದೆ ಹಾಗೇ ನಿಮ್ಮೆಲ್ರನ್ನೂ ನೋಡ್ಕೊಂಡು ಹೋಗೋಣ ಅಂತ ಬಂದೆ. ಹೇಗಿದೀರಿ ಅತ್ತೆ? ಮಾವ ಹುಶಾರಾಗಿದಾರಾ?"

"ಬೆಳಕಿನ ಹೊತ್ನಲ್ಲಿ ಬರ್ಬಾರ್ದಾ? ಹೋಗ್ಲಿ ಇಲ್ಲೇ ಇದ್ಬಿಡು.... ನಿಮ್ಮನೆಗೆ ಫೋನು ಮಾಡಿದ್ರಾಯ್ತು.... ಲಕ್ಷ್ಮಣ ಯಾರು? ಹೊಸಾ ಡ್ರೈವರ್ರಾ?"

ಸುಜಯಳ ಕಡೆ ನೋಡಿ ಕಣ್ಣು ಹೊಡೆದು ನಕ್ಕು ಏನೋ ಸನ್ನೆ ಮಾಡಿದಳು. "ಹೊತ್ತಾಗುತ್ತೆ ಅತ್ತೆ? ಮತ್ತೆ ನಾಳೆ ನಾಡಿದ್ದರಲ್ಲಿ ಬರ್ತೀನಿ.....ಡ್ರೈವರ್‌ಗೆ ಹೊತ್ತಾಗುತ್ತೆ" ಅವಸರಿಸಿದಳು.

"ಸರಿ ಕುಂಕುಮ ಕೊಡ್ತೀನಿ. ಒಂದ್ನಿಮಿಷ ಕೂತ್ಕೋ......ಈಗ್ಬಂದೆ ಅಂತ ಒಳಗೆ ಹೋದಳು" ಇವಳು ಸುಜಯಳ ಕಡೆ ತಿರುಗಿದಳು.

"ನಮ್ಮ ಡ್ರೈವರ್ರು ಲಕ್ಷ್ಮಣ ನಿನ್ಹತ್ರ ಮಾತಾಡ್ಬೇಕಂತೆ. ಸ್ವಲ್ಪ ಬರ್ತೀಯಾ?"

"ಅವನಿಗೇನು ನನ್ಹತ್ರ ಮಾತು?" ಸಿಡುಕಿದಳು.

"ಏನೋ ನೀನೇ ಬಂದು ಕೇಳು....." ಅವಳ ಕೈ ಹಿಡಿದೆಳೆದಳು. ಅವರಿಬ್ಬರೂ ಹೊರ ಬಂದರು. ಮಹೇಶ ಕೆಳಗಿಳಿದು ಬಂದು "ಹಲೋ......" ಎಂದ. ಸುಜಯ ಕಕ್ಕಾಬಿಕ್ಕಿಯಾದಳು.

"ಯಾರೋ ಲಕ್ಷ್ಮಣ ಅಂತ ಹೇಳಿದ್ಯಲ್ಲೇ ದೀಪಾ.....?"

"ನಾನೇ ರೀ ರಾಮದೂತ ಲಕ್ಷ್ಮಣ. ಸೀತಾದೇವಿಯವರ ಮೈದುನ" ನಾಟಕೀಯವಾಗಿ ನುಡಿದ. ಸುಜಯ ಎರಡು ಹೆಜ್ಜೆ ಹಿಂದೆ ಸರಿದಳು.

"ನಾನು ಸದ್ಯದಲ್ಲೇ ಡೆಲ್ಲಿಗೆ ಹೋಗ್ತಾ ಇದೀನಿ ಕಣೇ. ಅದನ್ನು ನಿಂಗೆ ಹೇಳಿ ಹೋಗೋಣಾಂತ ಬಂದೆ....."

"ಹೌದೇನೇ.... ಆದ್ರೆ... ಹೇಗೆ?"

"ಹುಂ. ಸಡನ್ ಆಗಿ ಫಿಕ್ಸ್ ಆಯ್ತು. ಆ ಪ್ಲಾನ್ ಎಲ್ಲಾ ಇವರದ್ದೇ" ಮಹೇಶನ ಕಡೆ ಕೈ ತೋರಿದಳು.

"ಹುಂ. ಸ್ಕೀಂ ನಂದೇ. ಆದರೆ ಪ್ರೇರಣೆ ನಿಮ್ಮದು"

"ಅಂದ್ರೇ...." ಇಬ್ಬರೂ ಒಟ್ಟಿಗೆ ಕೇಳಿದರು.

"ರಾಮದೂತ ಲಕ್ಷ್ಮಣ ಅಂತ ಬಿರುದುಗಳನ್ನು ಕೊಟ್ರಿ, ಪಾಪ, ಈ ಸೀತಾದೇವಿ ಯಾಕೆ ವನವಾಸ ಮಾಡ್ಬೇಕು ಅಂತ ಪುಷ್ಪಕ ವಿಮಾನದಲ್ಲಿ ಕಳಿಸಿ ಕೊಡ್ತಿದೀನಿ"

"ನಿಜವಾಗ್ಲೂ....? ಒಬ್ಳೇ ಹೋಗ್ತಿದೀಯಾ?"

"ಇಲ್ಲ. ನಮ್ಮತ್ತೆನೂ ನನ್ನ ಜೊತೆ ಬರ್ತಿದಾರೆ. ಅದಿರ್ಲಿ ನೀನೀಗ ಇವರನ್ನು ಸಾರಿ ಕೇಳ್ಬೇಕು... ಕ್ವಿಕ್...."

"ನಾನ್ಯಾಕೆ ಸಾರಿ ಕೇಳ್ಬೇಕು?"

"ನಿನ್ನ ಮಾತ್ನಿಂದ ಇವರಿಗೆ ಹರ್ಟ್ ಆಗಿದೆ. ಅದಕ್ಕೆ....."

"ಹರ್ಟ್ ಆಗುವಂಥ ಮಾತನ್ನೇನೂ ಆಡಿಲ್ಲ. ಒಂದ್ವೇಳೆ ಆಡಿದ್ರೆ... ಐ ಆಮ್ ವೆರಿ ಸಾರಿ ಮಹೇಶ್...." ಅವಳ ಮುಖ ಕಂದಿತು.

"ದಟ್ಸ್ ಲೈಕ್ ಎ ಗುಡ್ ಗರ್ಲ್.... ಅದಕ್ಕೆ ಇವರನ್ನು ಕರ್ಕೊಂಡು ಬಂದೆ. ನಾನಿನ್ನು ಬರ್ಲಾ. ಅತ್ತೆಗೆ ಹೇಳಿ ಬಿಡು"

"ಕುಂಕುಮ ಇಟ್ಕೊಂಡು ಹೋಗು. ನೀವೂ ಬನ್ನಿ ಮಹೇಶ್...." ಮಹೇಶ ತಲೆಯಾಡಿಸಿದ. ಎಲ್ಲರೂ ಒಳ ಬಂದರು.

"ಅದೇನೇ ಕುಂಕುಮದ ಬಟ್ಟಲು ತರೋ ಅಷ್ಟರಲ್ಲಿ ಹೊರಗೆ ಹೊರಟು ಹೋಗಿದ್ಯಲ್ಲ.... ಅಲ್ಲಿ ಯಾರ ಹತ್ರ ಮಾತಾಡ್ತಿದ್ರಿ?"

"ನಂಜೊತೆ ಮಹೇಶ್ ಬಂದಿದ್ರು...."

"ಅವರನ್ನೂ ಒಳಕ್ಕೆ ಕರಿ....." ಎನ್ನುವಷ್ಟರಲ್ಲಿ ಎಲ್ಲರಿಗಿಂತ ಹಿಂದಿದ್ದ ಮಹೇಶ ಕಣ್ಣಿಗೆ ಬಿದ್ದ. 'ನಮಸ್ಕಾರ' ಎಂದು ಕೈ ಮುಗಿದ.

"ಒಂದ್ನಿಮ್ಷ ಕೂತ್ಕೊಳ್ಳಿ. ಕುಡಿಯೋಕೆ ಹಾಲನ್ನಾದ್ರೂ ಕೊಡ್ತೀನಿ" ಎಂದು ಹೇಳಿ ಎರಡು ಲೋಟಗಳಲ್ಲಿ ಹಾಲನ್ನು ತಂದಿತ್ತಳು. ಇಬ್ಬರೂ ಕುಡಿದರು. ದೀಪಾ ಕುಂಕುಮವನ್ನಿಟ್ಟುಕೊಂಡು ಹೊರಟಳು. ಏನನ್ನೋ ಜ್ಞಾಪಿಸಿಕೊಂಡವಳಂತೆ,

"ಇನ್ನೊಂದೆರಡು ಮೂರು ದಿನಗಳಲ್ಲಿ ನಾನು ಡೆಲ್ಲಿಗೆ ಹೊರಡ್ತಿದೀನಿ ಅತ್ತೆ. ಸುಜಯನ್ನ ಕರ್ಕೊಂಡು ಹೋಗ್ತೀನಿ.... ಕಳಿಸ್ಕೊಡಿ...."

"ಎಲ್ಲಿಗೆ? ಡೆಲ್ಲಿಗಾ? ಇವಳ್ಯಾಕೆ....?" ಪ್ರಭಾವತಿ ಗೇಲಿ ಮಾಡಿದಳು.

"ಅಲ್ಲ ಅತ್ತೆ. ಈಗ ನಂಜೊತೆ ಸುಜಯನ್ನ ನಮ್ಮ ಮನೆಗೆ ಕಳಿಸಿ. ನಾಳೆ ಅಲ್ಲಿಂದ್ಲೇ ಸ್ಕೂಲ್ಗೆ ಹೋಗಲಿ.... ಬಾರೇ.... ಸುಜೀ.... ತುಂಬಾ ಮಾತಾಡೋದಿದೆ"

"ಅಮ್ಮ ಹೋಗ್ಲೇನಮ್ಮಾ....?"

"ಹುಂ.... ಹೋಗ್ಬಾ.... ಆಸೆಯಿಂದ ಕರೀತಿದಾಳಲ್ಲ" ಸುಜಯ ಸಡಗರದಿಂದ ಒಂದು ಸೆಟ್ ಬಟ್ಟೆಗಳನ್ನು ಒಂದು ಹ್ಯಾಂಡ್ ಬ್ಯಾಗ್‌ಗೆ ಹಾಕಿಕೊಂಡು ಹೊರಟಳು. ಮಹೇಶ ಅವಳ ಚಲನವಲನವನ್ನೇ ಗಮನಿಸಿದ. ಒಂದು ದಿನ ಹೀಗೇ ಸಡಗರದಿಂದ ನನ್ನ ಮನೆಗೆ ಬರುವಂತಾದರೇ....

"ಮಹೇಶ್..." ದೀಪಾ ಮೈ ಮುಟ್ಟಿ ಎಚ್ಚರಿಸಿದಳು. ಸುಜಯ ನಕ್ಕಳು. ಮೂವರೂ ಕಾರನ್ನೇರಿದರು. ಮಹೇಶ ಅವರಿಬ್ಬರನ್ನೂ ದೀಪಾಳ ಮನೆಗೆ ತಲುಪಿಸಿ, ಅವಳ ತಂದೆ ತಾಯಿಯರ ಹತ್ತಿರ ಕುಶಲವನ್ನು ವಿಚಾರಿಸಿ ಮತ್ತೆ ಹೊರಟ... ಅವನು ಕಾರನ್ನು ಹತ್ತುವಷ್ಟರಲ್ಲಿ ಅವನ ಹಿಂದೆ ಸುಜಯ ಬಂದಳು.

"ಥ್ಯಾಂಕ್ಯೂ ಮಹೇಶ್....."

"ಯಾತಕ್ಕೆ....?" ಅರ್ಥವಾಗದವನಂತೆ ಕೇಳಿದ.

"ನನ್ನ ಸಂಧಾನ ಫಲಿಸಿತು.... ಇಷ್ಟು ಬೇಗ ನೀವು ಏರ್ಪಾಡು ಮಾಡ್ತೀರಿ ಅಂತ ಅಂದ್ಕೊಂಡಿರಲಿಲ್ಲ...."

"ಹೂಂ ಹಾಗೇ ಕೆಲವು ಸಲ ಕೆಲವರ ಮಾತು ತೀವ್ರ ಪರಿಣಾಮ ಬೀರುತ್ತೆ. ಎನಿವೇ.... ಒಂದು ವಿಷಯ ನಂಗೆ ಅರ್ಥವಾಗ್ಲಿಲ್ಲ. ಇದ್ದಕ್ಕಿದ್ದ ಹಾಗೆ ನೀವು ಹಾಗೇಕೆ ಮಾತಾಡ್ತೀರ್ರೀ? ಅತ್ಗೆ ಹೇಳ್ಕೊಟ್ರಾ? ಅಥವಾ ನೀವೇ ಆಡಿದ್ರೋ....?"

"ಅವಳು ಕೇಳೂಂತ ಏನು ಹೇಳ್ಲಿಲ್ಲ. ಆದ್ರೆ ನೀವು ಈ ಕೆಲಸ ಮಾಡಬಲ್ಲಿರಿ ಅಂತ ನಂಗೆ ಅನ್ನಿಸ್ತು. ಅದಕ್ಕೇ ಹೇಳ್ದೆ.... ನಾನು ಅಂದ್ಕೊಂಡಿದ್ದು ನಿಜ ಆಯ್ತು...."

"ಇದ್ರಿಂದ ನಂಗೆ ಲಾಭಕ್ಕಿಂತ ನಷ್ಟವೇ ಜಾಸ್ತಿ..."

"ಅದ್ಹೇಗೆ?"

"ಅಮ್ಮಾ ವಾಪಸ್ಸು ಬರೋವರ್ಗೂ ನಂಗೆ ಹೋಟೆಲ್ಲಿನ ಊಟವೇ ಗತಿ..."

"ಅಯ್ಯೋ ಹೋಟೆಲ್ಲಿಗ್ಯಾಕೆ ಹೋಗ್ಬೇಕು? ನಮ್ಮನೇಗೆ ಬಂದ್ಬಿಡಿ..." ಹಾಗೆ ಹೇಳಿದವಳು ನಾಲಿಗೆ ಕಚ್ಚಿಕೊಂಡಳು.

"ನೀವು ಕರೆದ್ರಿ ಅಂತ ನಾನು ಸುಲಭವಾಗಿ ಬಂದ್ಬಿಡುಲ್ಲ. ಡೋಂಟ್ ವರಿ.... ಎನಿವೇ ಥ್ಯಾಂಕ್ಸ್...."

"ಪರವಾಗಿಲ್ಲ.... ಬನ್ನಿ..." ಅವಳು ಮತ್ತೊಮ್ಮೆ ಸಂಕೋಚದಿಂದ ಹೇಳಿದಾಗ ಅವನು ತಲೆಯಾಡಿಸಿದ.

"ಗುಡ್ ನೈಟ್" ಎಂದು ಹೇಳಿ ಕೈಯಾಡಿಸಿ ಕಾರನ್ನು ಹತ್ತಿರ.

"ಅದೇನೇ ಅಷ್ಟೊಂದು ಮಾತು ಲಕ್ಷ್ಮಣನ ಹತ್ರ?"

"ಏನಿಲ್ಲ.... ಊಟಕ್ಕೆ ತೊಂದ್ರೆ ಮಾಡ್ಕೋಬೇಡಿ ನಮ್ಮನೆಗೆ ಊಟಕ್ಕೆ ಬನ್ನಿ ಅಂತ ಹೇಳ್ದೆ.... ಬರುಕ್ಕಾಗುಲ್ಲ ಅಂತಂದ್ರು...."

"ನೀನು, ಅವರನ್ನು ಊಟಕ್ಕೆ ಕರೆದ್ಯಾ? ಅದೇನು ಅಷ್ಟು ಫ್ರೆಂಡ್ ಷಿಪ್!"

"ಅಪ್ಪಂಗೆ ಹುಷಾರಿಲ್ದೆ ಇದ್ದಾಗ ನರ್ಸಿಂಗ್ ಹೋಂಗೆ ಸೇರಿಸುಕ್ಕೆ ಅವರೇ ಓಡಾಡಿದ್ದು. ಆ ಋಣ ನಮ್ಮ ಮೇಲಿದೆ"

"ಆ ಋಣಾನ ಊಟ ಹಾಕಿ ತೀರಿಸ್ತೀಯಾ?"

"ಹಾಗಲ್ಲ ಏನೋ ಹೇಳಬೇಕು ಅಂತ ಅನ್ನಿಸ್ತು. ಏನೀಗ?"

"ಏನಿಲ್ಲ. ಒಳ್ಳೇದೇ ಮಾಡ್ದೆ. ನಾನೇ ನಿಂಗೆ ಹೇಳೋಣ ಅಂತಿದ್ದೆ. ನಾವಿಬ್ರೂ ಹೊರಟು ಹೋದ್ರೆ ಊಟಕ್ಕೆ ತೊಂದ್ರೆ ಆಗುತ್ತಲ್ಲ ಅಂತ ಯೋಚಿಸ್ತಿದ್ದೆ"

"ನಾನೇನೋ ಹೇಳಿದೀನಿ.....ಬರದಿದ್ರೆ ನಾನೇನು ಮಾಡ್ಲಿ....?"

"ನಾನು ಮತ್ತೆ ಹೇಳ್ತೀನಿ. ಬರ್ತಾರೆ ಬಿಡು. ಅವರೊಂಥರ ಫ್ರೆಂಡ್ಲೀ.... ಅವರಿಗೆ ಜನ ಬೇಕು.... ನಂಗೆ ಅದೇ ಆಶ್ಚರ್ಯ, ನಿನ್ನ ಹತ್ರ ಎಷ್ಟು ಫ್ರೀಯಾಗಿ ಮಾತಾಡ್ತಾರಲ್ಲ.... ದಿನೇಶ ಹೀಗಿಲ್ಲ. ಒಂಥರಾ ರಿಸರ್ವ್.... ಐ ಲೈಕ್ ಮಹೇಶ್. ಹೀ ಈಸ್ ಎ ನೈಸ್ ಗೈ....

"ಡೆಲ್ಲಿಗೆ ಹೋಗೋಕೆ ಹೆಲ್ಪ್ ಮಾಡ್ತಿದಾರೆ ಅಂತ ಇಷ್ಟು ಹೊಗಳ್ತಾ ಇದ್ದೀಯ. ಮಾಡ್ದೆ ಇದ್ದಿದ್ರೆ...."

"ಏನೋ ನಂಗೊತ್ತಿಲ್ಲ. ಆದ್ರೆ ಡೆಲ್ಲಿಯಿಂದ ಬರುವಾಗ, ಮಹೇಶಂಗೆ ಒಂದು ಒಳ್ಳೆ ಗಿಫ್ಟ್ ತಂದು ಕೊಡೋದಂತು ಗ್ಯಾರಂಟಿ... ನಿಂಗೇನಾದ್ರೂ ಬೇಕಾ ಹೇಳು ತಂದು ಕೊಡ್ತೀನಿ"

"ಮಹೇಶ್‌ಗೆ ಏನು ತಂದು ಕೊಡ್ತೀಯೋ ಅದನ್ನೇ ನಂಗೂ ತಂದ್ಕೊಡು"

"ಆಂ.... ಯಾಕಮ್ಮಾ ಅಮ್ಮಣ್ಣೀ...."

"ಅವರು, ನಾನು ಒತ್ತಾಯ ಮಾಡ್ದೇ ಇದ್ದಿದ್ರೆ, ಇದನ್ನೆಲ್ಲಾ ಮಾಡ್ತಿರಲಿಲ್ಲ" ಎನ್ನುತ್ತಾ ತಾನು ಮಹೇಶನೊಡನೆ ಮಾತನಾಡಿದ್ದನ್ನು ತಿಳಿಸಿದಳು.

"ಹೌದೇನೇ ಮಹೇಶ್ ನಂಗೆ ಹೇಳ್ಲೇ ಇಲ್ಲ...."

"ಕ್ರೆಡಿಟ್ ಎಲ್ಲಾ ಅವರ್ಗೇ ಬೇಕು ಅಲ್ವಾ...!"

"ಒಟ್ನಲ್ಲಿ ನಿಮ್ಮಿಬ್ರಿಗೂ ನನ್ನ ಕಷ್ಟ ಅರಿವಾಯ್ತು. ಎನಿವೇ ಗಾಡ್ ಬ್ಲೆಸ್ ಯೂ. ಒಂದ್ಮಾತು ಕೇಳ್ಲಾ....ಅವರನ್ನು ನೋಡಿದ್ರೆ ನಿಂಗೇನನ್ನಿಸುತ್ತೇ?"

"ಏನನ್ನಿಸಬೇಕು....?"

"ಮೇಡ್ ಫಾರ್ ಈಚ್ ಅದರ್ ಅಂತನ್ನಿಸುತ್ತೆ" ಸುಜಯ ಕಸಿವಿಸಿಗೊಂಡಳು.

"ನಿನಗೆ ಮಹೇಶ್ ಲೈಕ್ ಆಗಿದ್ರೆ ಹೇಳು.... ನಾನು ಅವರ ಹತ್ರ ಮಾತಾಡ್ತೀನಿ"

"ಸದ್ಯ ಸುಮ್ನಿರು ಮಾರಾಯ್ತಿ.... ನಾನು ಈಗ್ಲೇ ಮದ್ವೆ ಮಾಡ್ಕೋಳ್ಳಲ್ಲ...."

"ಯಾವಾಗ ಮಾಡ್ಕೋತೀಯಾ....?"

"ನೋಡೋಣ. ನನ್ನ ಮದುವೆ ಬಗ್ಗೆ ನಿಂಗೆ ಚಿಂತೆ ಬೇಡ...."

"ಇಬ್ರೂ ಒಳಕ್ಕೆ ಬರ್ತೀರಾ.... ಎಷ್ಟು ಹೊತ್ತಾಗಿದೆ. ಊಟ ಮಾಡುಲ್ವಾ?" ಶಕುಂತಲ ಕರೆದಾಗ ಇಬ್ಬರೂ ಒಳಬಂದರು.

* * *

ಆಫೀಸ್ನಿಂದ ಮೊದಲು ತಾಯಿಗೆ ಫೋನು ಮಾಡಿದ ಮಹೇಶ, "ಭಾನುವಾರದ ಬೆಳಗಿನ ಫ್ಲೈಟ್‌ಗೆ ಟಿಕೆಟ್ಟುಗಳು ಸಿಕ್ಕಿವೆ. ಏನೇನು ಪ್ಯಾಕ್ ಮಾಡ್ಕೋಬೇಕೋ ಅದನ್ನೆಲ್ಲ ಒಂದೊಂದಾಗಿ ತೆಗೆದಿಟ್ಕೋ. ಹಾಗೇ ನಾನು ಇವತ್ತು ರಾತ್ರಿ ಹುಬ್ಬಳ್ಳಿಗೆ ಹೋಗ್ಬೇಕು. ಸ್ವಲ್ಪ ನನ್ನ ಬಟ್ಟೆಗಳನ್ನು ಸೂಟ್‌ಕೇಸ್‌ಗೆ ತುಂಬಿಸಿಡೋಕೆ ಆಗುತ್ತಾ?" ಎಂದು ಕೇಳಿದ.

"ನೀನು ಟೂರ್‌ಗೆ ಹೋದ್ರೆ ಬರೋದು ಯಾವಾಗ? ದೀಪಂಗೆ ಫೋನು ಮಾಡಿದ್ಯಾ!" ಕೇಳಿದಳು ತಾಯಿ.

"ಹೂಂ. ಅತ್ಗೆ ಸಾಯಂಕಾಲದ ಹೊತ್ಗೆ ಲಗೇಜ್‌ನೊಂದಿಗೆ ಬರ್ತಾರೆ. ನಾನು ಶನಿವಾರ ಬೆಳಿಗ್ಗೆ ವಾಪಸ್ಸು ಬಂದು ಬಿಡ್ತೀನಿ"

"ಅಂದ್ರೆ ನಾವುಗಳು ಡೆಲ್ಲಿಗೆ ಹೊರಟಿರೋದು ಖಂಡಿತಾನಾ? ನಾನಿನ್ನೂ ಸರಿಯಾಗಿ ಯೋಚ್ನೇನೇ ಮಾಡಿಲ್ಲ"

"ಏನಮ್ಮಾ ಈಗ ಹೀಗೆ ಹೇಳ್ತೀಯಲ್ಲ. ಟಿಕೆಟ್ ಮಾಡ್ಸಿದ್ದಾಗಿದೆ. ಅತ್ತಿಗೇನೂ ಹೋಗುಲ್ಲ ಅಂತ ಅಂದ್ಬಿಟ್ರೆ ನಮಗೇ ಲಾಸ್ ಆಗೋದು. ನಾನು ದಿನೇಶನಿಗೆ ಫೋನು ಮಾಡಿ, ನಿಮ್ಮಿಬ್ರನ್ನೂ ಕಳಿಸ್ತಿದೀನಿ ಅಂತ ಹೇಳಿದ್ದೂ ಆಯ್ತು. ಭಾನುವಾರ ಅವನು ಅಲ್ಲಿ ಏರ್‌ಪೋರ್ಟ್‌ನಲ್ಲಿ ನಿಮಗೋಸ್ಕರ ಕಾಯ್ತಾ ಇರ್ತಾನೆ"

"ಅವನಿಗೂ ಹೇಳಿದ್ದಾಯ್ತಾ? ಅದಕ್ಕೇನಂದ?"

"ಏನಂತಾನೆ ಅತ್ಗೆ ನೆನ್ನೇನೇ ತಿಳಿಸಿದ್ರಂತೆ. ಕೂಲ್ ಆಗಿದ್ದ"

"ಮತ್ತೆ ನಂಗ್ಯಾಕೆ ಫೋನ್ ಮಾಡ್ಲಿಲ್ಲ! ನನ್ಮೇಲೆ ಕೋಪಾನಾ?"

"ಫೋನು ಮಾಡೋದು ಬಿಟ್ಟು ಬೇರೆ ಕೆಲಸವೇ ಇಲ್ವಾ ಅವನ್ಗೆ... ಮನೇಲೇ ಇರೋಳ್ಗೆ ಹೊರಗ್ಹೋಗೋರ ಕಷ್ಟ ಏನೂ ತಿಳಿಯಲ್ಲ" ರೇಗಿದ.

"ಹುಂ, ಹೌದು. ನಂಗೆ ಆತಂಕ ಆಗುತ್ತೆ. ಅದಕ್ಕೆ ಫೋನು ಮಾಡಿ ಅಂತ ಹೇಳ್ತೀನಿ. ಫೋನ್ ಇರೋದು ಯಾತಕ್ಕೆ, ಅದಕ್ಯಾಕೆ ರೇಗೋದು? ನಿಂಗಿಂತ ದಿನೇಶನೇ ವಾಸಿ. ಮಾತು ಮಾತಿಗೆ ರೇಗಲ್ಲ"

"ಸರಿ, ಈಗ ಹೇಗೂ ಅವನ ಮನೆಗೆ ಹೊರಟಿದೀಯಲ್ಲ ಅಲ್ಲೇ ಇದ್ಬಿಡು" ತಮಾಷೆಯಾಗಿ ನುಡಿದು ಮಾತನ್ನು ಮುಗಿಸಿದ.

* * *

ಏರ್‌ಪೋರ್ಟ್‌ಗೆ ಹೊರಡುವವರೆಗೂ ವನಜಮ್ಮನ ಪ್ಯಾಕಿಂಗ್ ಮುಗಿದಿರಲಿಲ್ಲ. ದೀಪಾಳ ಷಾಪಿಂಗ್ ಮುಗಿದಿರಲಿಲ್ಲ. ಮಹೇಶ ಇಬ್ಬರಿಗೂ ಹೇಳಿದ.

"ಹೆಚ್ಗೆ ಲಗೇಜ್ ಮಾಡ್ಕೋಬೇಡಿ. ನಿಮ್ಗೇ ಕಷ್ಟ ಆಗುತ್ತೆ" ಎಂದಿದ್ದ.

"ಒಂದ್ನಾಲ್ಕು ಸೆಟ್ ಬಟ್ಟೆಗಳು, ಒಂದಿಷ್ಟು ದಿನೇಶನಿಗೆ ಇಷ್ಟವಾದ ತಿಂಡಿಗಳು.... ಅಷ್ಟೇ.... ದೀಪಂದೇ ಭಾರೀ ಸೂಟ್‌ಕೇಸ್...."

"ಅತ್ಗೇ ನಿಮ್ಗೆ ಕಷ್ಟ ಆಗುಲ್ವಾ?" ನಗುತ್ತಾ ಪ್ರಶ್ನಿಸಿದ.

"ಸೂಟ್‌ಕೇಸ್‌ಗೆ ವೀಲ್ಸ್‌ಗಳಿವೆ. ಎಳೆದುಕೊಂಡು ಹೋಗಬಹುದು" ಮಹೇಶ ಎಳೆದು ನೋಡಿದ.

"ವೈಟ್ ಜಾಸ್ತಿ ಇರೋ ಹಾಗಿದೆ ಅತ್ಗೆ. ಸ್ವಲ್ಪ ಕಡಿಮೆ ಮಾಡ್ಕೊಳ್ಳಿ. ಅಲ್ಲಿ ಗಲಾಟೆ ಮಾಡ್ತಾರೆ ಅಷ್ಟೇ. ಆಮೇಲೆ ದಿನೇಶ ಬೈತಾನೆ ನೋಡ್ತಿರಿ"

"ಬರೀ ನನ್ನ ಬಟ್ಟೆಗಳು ಅಷ್ಟೇ. ಅಲ್ಲಿ ನಂಗೆ ಬೇಕಾಗುತ್ತಲ್ಲ"

"ಅಲ್ಲೇ ಹೊಸದನ್ನು ತಗೊಂಡ್ರಾಯ್ತು. ಆಕಡೆ ಎಲ್ಲ ರೆಡಿಮೇಡ್ ಬಟ್ಟೆಗಳು ತುಂಬಾ ಚೆನ್ನಾಗಿರುತ್ವೆ"

"ಸರಿ, ಒಂದೆರಡು ಸೆಟ್ ಕಡ್ಮೆ ಮಾಡ್ತೀನಿ. ಅಲ್ಲಿಂದ ನಿಮಗೆ ಏನು ತರಲಿ ಮಹೇಶ್. ನಿಮಗೇನು ಇಷ್ಟ?" ಸೂಟ್‌ಕೇಸ್‌ನ್ನು ಮತ್ತೆ ತೆರೆದಳು.

"ಅಲ್ಲಿ ಏನೇನು ಸಿಗುತ್ತೆ ಅಂತ ತಿಳಿಸಿ. ಯೋಚಿಸ್ಬಿಟ್ಟು ಹೇಳ್ತೀನಿ. ಇನ್ನೂ ಆರು ತಿಂಗಳು ಟೈಂ ಇದೆಯಲ್ಲ"

"ಮಧ್ಯೆ ನಮ್ಮ ದಿಲೀಪಂಗೆ ಮದುವೆ ಗೊತ್ತಾದ್ರೆ ಬರಬೇಕಾಗುತ್ತೆ...." ಅಷ್ಟರಲ್ಲಿ ಕಾರು ನಿಂತ ಸದ್ದು ಕೇಳಿಸಿತು.

"ಡ್ಯಾಡಿ ಬಂದ್ರೂಂತ ಕಾಣುತ್ತೆ" ಸರಸರನೆ ಸೂಟ್‌ಕೇಸ್ ಮುಚ್ಚಿ ಲಾಕ್ ಮಾಡಿದಳು.

"ಏನಮ್ಮಾ ದೀಪಾ ಎಲ್ಲಾ ರೆಡೀನಾ" ಶಿವರಾಮಯ್ಯನವರು ಕೇಳುತ್ತಾ ಒಳ ಬಂದರು.

"ಒಬ್ರೇ ಬಂದ್ರಾ? ಅಮ್ಮ ಬರ್ಲಿಲ್ವಾ?" ಅವಳು ಕಾತುರದಿಂದ ಕೇಳಿದಳು.

"ಅಮ್ಮ, ಸುಜಯ, ಸುಮತಿ ಎಲ್ಲಾ ಬಂದಿದಾರೆ, ಕಾರ್ನಲ್ಲಿದ್ದಾರೆ. ರೆಡಿಯಾಗಿದ್ದರೆ

ಹೊರಡೋಣ. ಬೆಳಗಿನ ಹೊತ್ತು ಟ್ರಾಫಿಕ್ ಇರುತ್ತೆ. ನಿಧಾನ ಆಗುತ್ತೆ" ಆತ ಮಹೇಶನ ಕಡೆ ನೋಡಿದರು. ಎಲ್ಲರೂ ಹೊರಡುವ ಆತುರದಲ್ಲಿದ್ದರು.

"ದೇವರಿಗೆ ದೀಪವನ್ನು ಹಚ್ಚಿಟ್ಟಿದ್ದೀನಿ. ನಮಸ್ಕಾರ ಮಾಡಿ ಬಿಡು. ಹಾಗೇ ನಿಮ್ಮ ತಂದೆಗೂ ಮಾಡು" ವನಜಮ್ಮ ದೀಪಳಿಗೆ ಹೇಳಿದರು. "ಮನೆ ಕಡೆ ಜೋಪಾನ ಕಣೋ ಮಹೀ...." ಮತ್ತೆ ನೆನಪಿಸಿದಳು.

"ಹೂಂನಮ್ಮಾ" ಎನ್ನುತ್ತಾ ಮಹೇಶ ಲಗೇಜುಗಳನ್ನು ಕಾರಿನ ಡಿಕ್ಕಿಯಲ್ಲಿರಿಸಲು ಎತ್ತಿಕೊಂಡು ಹೋದ. ಡಿಕ್ಕಿಯಲ್ಲಿರಿಸುತ್ತಾ ಕಿಟಕಿಯ ಬಳಿ ಕುಳಿತಿದ್ದ ಸುಜಯಳ ಕಡೆ ನೋಡಿ ಕೈಯಾಡಿಸಿ "ಹಲೋ" ಎಂದ. ವನಜಮ್ಮ ಮುಂಬಾಗಿಲಿಗೆ ಬೀಗ ಹಾಕಿ ಪಕ್ಕದ ಮನೆಯವರಿಗೆ ಸ್ವಲ್ಪ ಮನೆ ಕಡೆ ನಿಗಾ ಇಡುವಂತೆ ಹೇಳಿ ಕಾರಿನ ಬಳಿಗೆ ಬಂದರು.

"ತಗೋ ಬೀಗದ ಕೈಗಳು, ಜೋಪಾನ, ಮರೆತು ಅಲ್ಲಿ ಇಲ್ಲಿ ಇಟ್ಟು ಬಿಡಬೇಡ"

"ಅತ್ಗೇ ನೀವು ನಮ್ಮ ಜೊತೆ ಬರ್ತೀರೋ, ನಿಮ್ಮ ತಂದೆ ಜೊತೆ ಬರ್ತೀರೋ...."

"ಅಲ್ಲಿ ಜಾಗ ಇದೆಯಾ ಅಂತ ನೋಡ್ತೀನಿ" ಅಷ್ಟರಲ್ಲಿ ಸುಜಯ ಕೆಳಗಿಳಿದು ಬಂದಳು.

"ನೀನು ಅತ್ತೆ ಜೊತೆ ಕೂತ್ಕೋ.... ಅವರು ಡಲ್ ಆಗ್ಬಿಟ್ಟಿದ್ದಾರೆ. ರಸ್ತೇಲಿ ಸ್ವಲ್ಪ ಮಾತಾಡಿದ್ರೆ ಸರಿ ಹೋಗ್ಬಹುದು. ನಾನು ಇವರ ಕಾರ್ನಲ್ಲಿ ಬರ್ತೀನಿ"

"ಥ್ಯಾಂಕ್ಸ್ ಕಣೇ.... ನಿಂಗೆ ತೊಂದ್ರೆ ಆಯ್ತು. ಮಹೇಶ್, ಸುಜಯ ನಿಮ್ಮ ಜೊತೆ ಬರ್ತಾಳೆ. ನಾನು ಅವರ ಜೊತೆ ಬರ್ತೀನಿ"

"ಓ..ಕೇ.... ಬನ್ನಿ ಸುಜಯಾ...." ಕಾರಿನ ಹಿಂಬಾಗಿಲನ್ನು ತೆಗೆದ.

ವನಜಮ್ಮ ಸುಜಯಳನ್ನು ಉದಾಸೀನದಿಂದ ನೋಡಿದಳು. "ಹೇಗಿದೀರಿ ಆಂಟೀ" ಸುಜಯ ವಿಚಾರಿಸಿದಳು. ವನಜಮ್ಮ "ಹೂಂ. ಹೀಗೇ...." ಎಂದಳು. ಅವಳನ್ನು ಮರುವಿಚಾರಿಸಲಿಲ್ಲವೆನ್ನುವುದನ್ನೂ ಮಹೇಶ ಗಮನಿಸಿದ. ಕಾರನ್ನು ಸ್ಟಾರ್ಟ್ ಮಾಡಿದ. ಎಲ್ಲರೂ ಏರ್‌ಪೋರ್ಟ್ ತಲುಪಿದರು.

ಮಹೇಶ, ಮತ್ತೊಮ್ಮೆ ದೀಪಾಳಿಗೆ ಎಲ್ಲವನ್ನೂ ವಿವರಿಸಿ, "ಹೋಪ್ ಯೂ ವಿಲ್ ಮ್ಯಾನೇಜ್ ಎವ್ವೆರಿಥಿಂಗ್...." ಎಂದ

"ಷೂರ್.... ಅಮ್ಮಾ ಬನ್ನಿ" ದೀಪಾ ಚಿಗರೆಯಂತೆ ನಡೆದಳು. ತನ್ನ ಸಮೀಪದಲ್ಲಿದ್ದ ಸುಜಯಳ ಕಡೆ ನೋಡಿದ.

"ಇವಳೇನಾದ್ರೂ ಈ ದಿನ ಅತ್ತಿಗೆಯ ಜಾಗದಲ್ಲಿದ್ದಿದ್ರೆ...? ಅಂತಂದುಕೊಂಡಾಗ ತನ್ನ ಅನಿಸಿಕೆ ಸರಿ ಇಲ್ಲ.... ಇವಳು ತನ್ನ ಅತ್ತಿಗೆಯಾಗದಿದ್ದುದ್ದೇ ಒಳ್ಳೆಯದು ಎಂದುಕೊಂಡ. ಕಿರುನಗೆ ತುಟಿಯಂಚಿನಲ್ಲಿ ಮೂಡಿತು.

ಹೊರಗಿನ ಫಾರ್ಮಾಲಿಟಿಗಳನ್ನೆಲ್ಲ ಮುಗಿಸಿ, ಸೆಕ್ಯೂರಿಟಿ ಲಾಂಜ್‌ನೊಳಗೆ

ಹೋಗುವ ಮುನ್ನ ದೀಪಾ ಒಬ್ಬೊಬ್ರನ್ನೇ ತಬ್ಬಿಕೊಂಡು, ಕಣ್ಣುಗಳನ್ನು ಒದ್ದೆಮಾಡಿ ಕೊಂಡಳು. ಮಹೇಶನ ಕೈ ಕುಲುಕಿ, "ಥ್ಯಾಂಕ್ಯೂ ಮಹೇಶ್...." ಎಂದವಳು ಏನನ್ನೋ ನೆನೆಪಿಸಿಕೊಂಡವಳಂತೆ "ರಾತ್ರಿಯ ಹೊತ್ತು ಸುಜಯಳ ಮನೆಗೆ ಊಟಕ್ಕೆ ಹೋಗಿ. ನಾನು ಅತ್ತೆಗೆ ಹೇಳಿದೀನಿ" ಎಂದಳು ಮರೆಯದೇ.... ವನಜಮ್ಮನಿಗೆ ಆ ಮಾತುಗಳು ಕೇಳಲಿಲ್ಲ. ಇಬ್ಬರೂ ಒಳ ನಡೆದು, ಎಲ್ಲೋ ಮರೆಯಾದರು.

"ಇನ್ನು ಹೊರಡೋಣ. ಎಷ್ಟು ಹೊತ್ತು ಇಲ್ಲಿ ಕೂತಿದ್ರೂ ಅವರು ಮತ್ತೆ ಹೊರ ಬರುವುದಿಲ್ಲ. ನಮಗೆ ಏನೂ ಕಾಣಿಸುವುದಿಲ್ಲ" ಶಿವರಾಮಯ್ಯ ಅವಸರಿಸಿದರು.

"ನಾನು ಪ್ಲೇನ್ ಡಿಪಾರ್ಚರ್ ಆಗುವವರೆಗೂ ಇಲ್ಲೇ ಇರ್ತೀನಿ. ಕಡೇ ಗಳಿಗೇಲಿ ಏನಾದ್ರೂ ಬೇಕಾದ್ರೇ... ? ನೀವುಗಳು ಬೇಕಾದ್ರೆ ಹೊರಡಿ" ಅವನು ನುಡಿದಾಗ, ಸುಜಯಳಿಗೆ ಅವನ ಬಗ್ಗೆ ಗೌರವ ಹುಟ್ಟಿತು.

"ಹೌದು ಮಾವ, ಪ್ಲೇನ್ ಹೊರಡೋಕೆ ಇನ್ನೂ ತುಂಬಾ ಸಮಯ ಇದೆ. ನೀವು ಬೇಕಾದ್ರೆ ಹೊರಡಿ, ನಾನು ಇವರ ಜೊತೇಲಿ ಬರ್ತೀನಿ. ಸುಮತಿ, ನಿಮ್ಮ ಜೊತೇಲಿ ಬರ್ತಾಳೆ"

"ಪರವಾಗಿಲ್ಲ ನಿಮಗ್ಯಾಕೆ ತೊಂದರೆ?" ಎಂದು ಮಹೇಶ ನುಡಿದರೂ ಅವಳು ಹಾಗೆ ಹೇಳಿದ್ದು ಅವನಿಗೆ ಹಿತವಾಗಿತ್ತು. ಕಣ್ಣುಗಳು ಮಿಂಚಿದವು.

"ಒಬ್ರೇ ಬೋರ್ ಆಗುತ್ತೆ. ನಾನು ಕಂಪೆನಿ ಕೊಡ್ತೀನಿ"

"ಪರವಾಗಿಲ್ವೇನಮ್ಮ.... ನಿಮ್ಮಮ್ಮ ಏನಂತಾಳೋ?"

"ನಾನು ಅಮ್ಮಂಗೆ ಫೋನು ಮಾಡ್ತೀನಿ. ಸುಮತೀನ ನಿಮ್ಮನೇಗೇ ಕರ್ಕೊಂಡ್ಹೋಗಿ, ಸಾಯಂಕಾಲದ ತನಕ ನಿಮ್ಮನೇಲಿ ಇರಲಿ....

"ಸರಿಯಮ್ಮಾ.... ಬರ್ತೀನಪ್ಪಾ...." ಮತ್ತೊಮ್ಮೆ ಹೇಳಿ ಶಿವರಾಮಯ್ಯ ಅವರಿಬ್ಬರನ್ನು ಹೊರಡಿಸಿದರು.

* * *

"ಪ್ಲೇನ್ ಟೇಕಾಫ್" ಆಗುವವರೆಗೂ ಮಹೇಶ ಅತ್ತಿತ್ತ ನೋಡುತ್ತಾ ಚಡಪಡಿಸುತ್ತಿದ್ದ.

"ನೀವು ಏಕೆ ಇಷ್ಟು ಟೆನ್ಶನ್‌ನಲ್ಲಿದ್ದೀರಿ?"

"ಅಮ್ಮನ ಬಗ್ಗೆ ಸ್ವಲ್ಪ ಆತಂಕ ಆಗ್ತಿದೆ. ನಾನು ಹೊರಡಿಸಿದ್ದೇನಲ್ಲ...." ಮುಗುಳ್ನಕ್ಕ.

"ದೀಪಾ ಜೊತೆಗಿದ್ದಾಳೆ, ನೋಡ್ಕೋತಾಳೆ.." ಪ್ಲೇನ್ ಹೊರಟಿದ್ದ ಅನೌನ್ಸ್‌ಮೆಂಟ್ ಕೇಳಿ ಎದ್ದ.

"ಹೊರಡೋಣ್ವಾ?" ಇಬ್ಬರೂ ಕಾರನ್ನು ಪಾರ್ಕ್ ಮಾಡಿದ್ದ ಸ್ಥಳಕ್ಕೆ ಬಂದರು.

ಕಾರು ಅವನ ಮನೆಯ ರಸ್ತೆಯ ಕಡೆ ತಿರುಗಿದಾಗ ಸುಜಯ ಎಚ್ಚರಿಸಿದಳು.

"ಅರೇ! ಮೊದಲು ನನ್ನನ್ನು ನಮ್ಮ ಮನೆಗೆ ಬಿಡ್ತೀನಿ ಅಂತ ಅಂದಿದ್ರೀ...."

"ಹೌದಲ್ವಾ...? ಸಾರಿ, ಅಭ್ಯಾಸ ಬಲ.... ನನಗೇ ತಿಳಿಯದ ಹಾಗೆ ಈ ಕಡೆ ತಿರುಗಿಸಿದೆ. ಏನಾಯ್ತೀಗ? ಸ್ವಲ್ಪ ಹೊತ್ತು ನಮ್ಮನೆಗೆ ಬನ್ನಿ, ಕಾಫಿ ಮಾಡಿಕೊಡ್ತೀನಿ"

"ಬೇಡಾ.... ಮಹೇಶ್...." ಅವಳು ಗೊಂದಲಗೊಂಡಳು. ಅವಳ ಗೊಂದಲವನ್ನು ಗಮನಿಸಿ ಕಾರನ್ನು ನಿಲ್ಲಿಸಿದ.

"ಯಾಕೆ? ನಾನು ಕೊಡುವ ಕಾಫೀನ ಕುಡಿಯೋಕೆ ಭಯಾನ?" ತಮಾಷೆಯಿಂದ ಕೇಳಿದ.

"ಕಾಫೀ ಮಾತಲ್ಲ. ಈಗ ನಿಮ್ಮನೇಗೆ ಯಾಕೆ ಅಂತ. ನಿಮಗೆ ತೊಂದ್ರೆ ಆಗೋದಾದ್ರೆ ಹೇಳಿ, ನಾನು ಇಲ್ಲಿಂದ ಬಸ್‌ನಲ್ಲಿ ಹೋಗ್ತೀನಿ...."

"ಯಾಕ್ರೀ ನನ್ನೊಜ್ತೆ ಬರೋಕೆ ಇಷ್ಟವಿಲ್ವಾ....? ನಂಗೆ ತೊಂದ್ರೆ ಏನಿಲ್ಲ. ಇಟ್ ಈಸ್ ಮೈ ಪ್ಲೆಷರ್.... ನಿಮ್ಮನ್ನು ನಿಮ್ಮ ಮನೆ ತಲುಪಿಸುವ ಜವಾಬ್ದಾರಿ ನನಗಿರಲಿ, ಬರೋದಾದ್ರೆ ಬನ್ನೀಂತ ಕರೆದೆ ತಪ್ಪಾ?"

"ತಪ್ಪೇನಿಲ್ಲ. ಸುಮ್ಸುಮ್ನೆ ಇವತ್ಯಾಕೆ ಅಂತ...."

"ಸುಮ್ಸುಮ್ನೆ ನೀವು ಮತ್ಯಾಕೆ ನಮ್ಮನೇಗೆ ಬರ್ತೀರಿ? ನಿಮ್ಮ ಕಸಿನ್ನೇ ಊರಲ್ಲಿಲ್ಲ ವಲ್ಲ" ಸುಜಯ ಮತ್ತೆ ಪೇಚಿಗೆ ಸಿಕ್ಕಿದಳು.

"ನಂಗೆ ನಿಮ್ಮನೆಗೆ ಬರೋಕೆ ಇಷ್ಟವಿಲ್ಲಾಂತಂದ್ರೂ ಬಲವಂತ ಯಾಕೆ ಮಾಡ್ತೀರಿ?"

"ಬಲವಂತ ಅಂತ ಯಾಕೆ ಅಂದ್ಕೋತೀರಿ.... ಸೌಜನ್ಯಕ್ಕೆ ಕರೀತೀನಪ್ಪಾ.... ಹೋಗ್ಲಿ ಬಿಡಿ. ಮನೆಗೆ ಒಬ್ಬನೇ ಹೋಗಿ ಏನ್ಮಾಡ್ಲೀ.... ನಿಮ್ಮನ್ನು ನಿಮ್ಮ ಮನೆಗೆ ಬಿಟ್ಟು ಯಾವ್ದಾದ್ರೂ ಹೋಟೆಲ್ಲಿಗೆ ಹೋಗಿ ಊಟ ಮಾಡಿ, ಮ್ಯಾಟಿನಿ ಷೋಗೆ ಹೋಗ್ತೀನಿ...." ಕಾರನ್ನು ರಿವರ್ಸ್ ತಗೊಂಡ.

"ಹೋಟೆಲ್ಲಿಗೆ ಯಾಕೆ ಊಟಕ್ಕೆ ಹೋಗ್ಬೇಕು. ನಮ್ಮನೆಗೆ ಬನ್ನಿ"

"ನಾನ್ಯಾಕೆ ಬರ್ಬೇಕು? ನಂಗಿಷ್ಟವಿಲ್ಲ"

"ದೀಪ ಹೇಳಿದಾಳೆ.... ಪರವಾಗಿಲ್ಲ ಬನ್ನಿ"

"ದೀಪ ಹೇಳಿದಾರೆ ಅಂತ ಕರೀತಿದೀರೇನೋ.... ನಿಮ್ಮ ತಂದೆ ತಾಯಿ ಏನಂದುಕೊಳ್ತಾರೋ. ನಿಮಗಿಷ್ಟ ಇದೆಯೋ ಇಲ್ವೋ....?"

"ಹಾಗೇನಿಲ್ಲ. ನಿಮ್ಮ ಅತ್ಗೆ ಮಾತ್ಗೆ ನೀವು ಬೆಲೆ ಕೊಡ್ತೀರಲ್ಲ. ಅದಕ್ಕೇ ಹೇಳ್ದೆ.... ನೀವು ಊಟಕ್ಕೆ ಬರಬೇಕು. ನನ್ನ ರಿಕ್ವೆಸ್ಟ್" ನಾಟಕೀಯವಾಗಿ ನುಡಿದಾಗ ಮನಸಾರೆ ನಕ್ಕ.

"ಅಂತೂ ಅತ್ತೂ ಕರೆದು ಔತಣಕ್ಕೆ ಕರೆಸಿಕೊಂಡ ಹಾಗಾಯ್ತು. ಆದರೆ ಒಂದು ಕಂಡೀಷನ್. ನೀವು ಈಗ ನನ್ನ ಜೊತೆ ನಮ್ಮ ಮನೆಗೆ ಬಂದು, ಒಂದು ಲೋಟ ಕಾಫಿ ಕುಡಿದ್ರೆ.... ನಾನು ಬರ್ತೀನಿ"

"ಮತ್ತೆ ಸುತ್ತಿ ಬಳಸಿ ಅದೇ ಮಾತಿಗೆ ಬರ್ತೀರಲ್ಲ ಮಹೇಶ್. ನಿಮಗೆ ಹೇಗೆ

ಹೇಳ್ಲಿ? ನಿಮ್ಮ ಮನೆ ಒಳಗೆ ಬಂದ್ರೆ ನಂಗೊಂದು ಥರ ವಿಚಿತ್ರವಾದ ಅನುಭವ ವಾಗುತ್ತೆ.... ಉಸಿರು ನಿಂತಂತೆ ಆಗುತ್ತೆ."

"ಆಂ.... ಏನಂದ್ರಿ? ಏನಾಗುತ್ತೆ ಅಂತಂದ್ರಿ?" ಕಣ್ಣು ಕಿರಿದು ಮಾಡಿ ನಕ್ಕ.

"ನಗ್ಬೇಡಿ ಮಹೇಶ್, ನಂಗೆ ಹೇಳುಕ್ಕೆ ಇಷ್ಟವಿಲ್ಲ. ಆದ್ರೂ ಹೇಳ್ತೀನಿ. ಫಸ್ಟ್ ಡೇ ಆವತ್ತು ಬಂದಾಗ, ಏನೇನೋ ಅನ್ನಿಸ್ತು. ಮತ್ತೆರಡು ಬಾರಿ ಬಂದಾಗ್ಲೂ ಅದೇ ರಿಪೀಟ್ ಆಯ್ತು. ಆ ಫೀಲಿಂಗ್ ನಂಗಿಷ್ಟವಾಗುಲ್ಲ. ಗಾಬರಿ ಆಗುತ್ತೆ"

"ಅಂತೂ ಏನೋ ಒಂದು ನೆವ ಹೇಳ್ತೀರಿ. ಅರ್ಥವಾಯ್ತು ಬಿಡಿ"

"ನೀವೇನು ಅರ್ಥಮಾಡ್ಕೊಂಡ್ರೋ ನಂಗೊತ್ತಿಲ್ಲ. ನಾನು ಹೇಳ್ತಿರೋದೆಲ್ಲ ನಿಜ.... ವಿಚಿತ್ರ ಅನುಭವ ಆಗುತ್ತೆ. ಉಸಿರು ಕಟ್ಟಿದ ಹಾಗಾಗುತ್ತೆ.... ಹಿಂಸೆ ಆಗುತ್ತೆ"

"ಯಾಕೆ ಹಾಗಾಗುತ್ತೆ? ಏನೋ ಭ್ರಮೆ ಅಷ್ಟೇ"

"ಮೊದಲ್ನೇ ಸಾರಿ ನಾನೂ ಹಾಗೇ ಅಂದ್ಕೊಂಡೆ. ಇಂಟರ್‌ವ್ಯೂ ಇತ್ತು. ಅದಕ್ಕೇನೋ ಅಂತ ಆದರೆ ಆಮೇಲೆ ಮತ್ತೆ ಬಂದಾಗ ಹಾಗೇ ಆಯ್ತು. ನಿಮ್ಮಣ್ಣನ್ನ ಒಪ್ಪದಿರುವುದಕ್ಕೆ ಬಹುಶಃ ಅದೇ ಮುಖ್ಯ ಕಾರಣ. ನಿಮ್ಮ ಮನೆಗೆ ಮತ್ತೆ ಬಂದಿದ್ದಾಗ ಕಾರಣ ಏನಿರಬಹುದು ಅಂತ ತಿಳಿದ್ಕೊಳ್ಳೋ ಪ್ರಯತ್ನ ಮಾಡ್ದೆ. ಆದ್ರೆ ಏನೂ ಗೊತ್ತಾಗ್ಲಿಲ್ಲ"

ಮಹೇಶ ಗಲ್ಲದ ಮೇಲೆ ಕೈಯಾಡಿಸಿಕೊಂಡ. "ಹಾಗಾದ್ರೆ ಈಗ ಬನ್ನಿ ಕಾರಣ ಏನೂಂತ ನೋಡಿಯೇ ಬಿಡೋಣ"

"ಮತ್ತೆ ಮತ್ತೆ ಪರೀಕ್ಷೆ ಮಾಡುವುದಕ್ಕೆ ಭಯ ಆಗುತ್ತೆ ಮಹೇಶ್"

"ಭಯ ಯಾಕೆ? ನಂಗೆ ತಿಳಿದಿರೋ ಹಾಗೆ ನಮ್ಮ ಮನೇಲಿ ಯಾವ ಭೂತದ ಕಾಟವಿಲ್ಲ. ದೆವ್ವದ ನೋಟವಿಲ್ಲ"

"ದೆವ್ವ ಭೂತ ಯಾವುದನ್ನು ನಾನು ನಂಬುಲ್ಲ"

"ಸರಿ ಮತ್ತೆ ಬನ್ನಿ.... ಪರೀಕ್ಷೆ ಮಾಡಿದ್ರಾಯ್ತು...." ಅವನ ಮಾತಿಗೆ ಇಲ್ಲ ಎನ್ನಲಾಗದೇ ಅವಳು ಒಪ್ಪಿದಳು. ಕಾರು ಮುಂದಕ್ಕೆ ಓಡಿತು.

* * *

ಬಾಗಿಲನ್ನು ತೆರೆದು 'ಬನ್ನಿ' ಎಂದು ಹೇಳಿ ತಾನು ಒಳ ಬಂದ. ಅವಳು ಅನುಮಾನಿಸುತ್ತಾ ಹೊರಗೇ ನಿಂತಳು. ಮತ್ತೆ "ಬನ್ನಿ" ಎಂದು ಹೇಳಿ ಅವಳ ಕೈ ಹಿಡಿದು ಮೆಲ್ಲಗೆ ಎಳೆದ. ಅವಳನ್ನೇ ಗಮನಿಸಿದ. ಒಳ ಬಂದವಳು ಗೋಡೆಯ ಮೇಲಿನ ಫೋಟೋಗಳನ್ನು ನೋಡಿ ಕಣ್ಣು ಮುಚ್ಚಿದಳು. ಮುಖವನ್ನು ಕಿವುಚಿದಳು. ಏನೋ ಹಿಂಸೆಯನ್ನು ಅನುಭವಿಸುತ್ತಿರುವಂತೆ ತೋರಿತು. ಮೈಯನ್ನು ಬಿಗಿ ಮಾಡಿದಳು. ಯಾರೋ ತನ್ನ ಬಳಿಗೆ ಬಂದು ನಿಂತಂತೆ ಭಾಸವಾಯಿತು. ಕಣ್ಣು ಬಿಟ್ಟು ನೋಡಲು ಹೆದರಿ, ಹಾಗೆ ಹಿಂದೆ ಹಿಂದಕ್ಕೆ ಸರಿದು ಹೊಸ್ತಿಲ ಬಳಿ ತಡವರಿಸಿ

ಬೀಳಲಿದ್ದವಳನ್ನು ಮಹೇಶ ಹಿಡಿದು ನಿಲ್ಲಿಸಿದ. ಅವಳು ಕಂಪಿಸುತ್ತಿದ್ದಾಳೆಂದು ಎನಿಸಿತ್ತು. "ಏನಾಗ್ತಿದೆ ಸುಜಯಾ?" ಎನ್ನುತ್ತಾ ಅವಳನ್ನು ಅಲ್ಲಿಯೇ ಕುರ್ಚಿಯ ಮೇಲೆ ಕೂರಿಸಿದ. ಮುಖ ಬೆವರಿನಿಂದ ತೋಯ್ದು ಹೋಗಿತ್ತು. "ನೀರು ಬೇಕಾ?" ಎಂದು ಕೇಳಿ, ನೀರನ್ನು ತರುವಷ್ಟರಲ್ಲಿ ಅವಳು ಎದ್ದು ಹೊರಗೆ ಬಂದು ಬಿಟ್ಟಳು. ಸೆರಗಿನಿಂದ ಬೆವರನ್ನು ಒರೆಸಿಕೊಂಡು ಮುಖಕ್ಕೆ ಗಾಳಿ ಬೀಸಿಕೊಂಡಳು. ಸ್ವಲ್ಪ ಹಾಯೆನ್ನಿಸಿತು. ಅವನು ಕೊಟ್ಟ ನೀರನ್ನು ಗಟಗಟನೆ ಕುಡಿದಳು. ಅವಳು ಗೊಂದಲ ದಲ್ಲಿದ್ದಾಳೆ ಈಗೇನೂ ಕೇಳುವುದು ಬೇಡ ಎಂದುಕೊಂಡ.

"ನೀವು ಕಾರ್‌ನಲ್ಲಿ ಕೂತಿರಿ. ನಾನು ಮುಂಬಾಗಿಲಿಗೆ ಬೀಗ ಹಾಕಿ ಬರ್ತೀನಿ" ಎಂದು ಮತ್ತೆ ಒಳಗೆ ಬಂದ. ಒಂದು ಗಳಿಗೆ ನಿಂತು ಸುತ್ತಲೂ ನೋಡಿದ. ಕತ್ತನ್ನು ಮೇಲೆತ್ತಿ ಅವಲೋಕಿಸಿದ. ಭಾವಚಿತ್ರಗಳನ್ನು ನೋಡಿದ. ಹೆದರಿಸವಂಥ ಅಥವಾ ಗೊಂದಲಕ್ಕೊಳಗಾಗುವಂಥದ್ದು ಏನೂ ಕಾಣಲಿಲ್ಲ. ಬಹುಶಃ ತನ್ನಲ್ಲೇ ಏನನ್ನೋ ಕಲ್ಪಿಸಿಕೊಳ್ಳುತ್ತಾಳೇನೋ ಎಂದುಕೊಂಡು, ಮುಂಬಾಗಿಲಿಗೆ ಬೀಗ ಹಾಕಿ ಹೊರ ಬಂದ. ಸುಜಯ ಚೇತರಿಸಿಕೊಂಡಳು. ಅವನ ಕಡೆ ನೋಡಿ ಮುಗುಳ್ನಕ್ಕಳು. ಕೆಲವೇ ಕ್ಷಣಗಳ ಹಿಂದೆ ಗೊಂದಲದಲ್ಲಿದ್ದವಳು ಇವಳೇನಾ ಎಂದು ಅನುಮಾನ ಪಡುವಷ್ಟು ಬದಲಾವಣೆ ಅವಳಲ್ಲಿ ಕಂಡು ಬಂದಿತ್ತು.

"ಆರ್ ಯೂ ಆಲ್ ರೈಟ್?"

"ಹೂಂ, ಐ ಆಮ್ ಫೈನ್....."

"ತಪ್ಪು ತಿಳ್ಕೋಬೇಡಿ. ಯಾರಾದ್ರೂ ಡಾಕ್ಟ್ರರ ಹತ್ರ ಹೋಗೋಣ್ವಾ?"

"ಏನೂ ಬೇಡ. ಈಗ ಹಾಯೆನ್ನಿಸುತ್ತಿದೆ. ಮನೆಗೇ ಹೋಗ್ತೀನಿ"

"ಆರ್ ಯೂ ಷೂರ್?" ಕಾರನ್ನು ಸ್ಟಾರ್ಟ್ ಮಾಡಿದ.

"ಎಸ್" ಹಾಗೆ ಹೇಳಿದರೂ, ಧ್ವನಿ ತಗ್ಗಿತ್ತು. ಮುಖ ಪೆಚ್ಚಾಗಿತು.

"ಸಾರಿ ಮಹೇಶ್, ಒಂದ್ಗಳಿಗೆ ಏನಾಯ್ತು ಅಂತ ನಂಗೆ ಅರ್ಥವಾಗ್ತಿಲ್ಲ. ನಿಮ್ಮ ನೇಲಿ ಮಾತ್ರ ಹೀಗೆ ಅನುಭವ ಆಗುತ್ತೆ. ಈ ಮುಂಚೆ, ಎಲ್ಲಿಯೂ ಹೀಗೆ ಆದ ನೆನಪಿಲ್ಲ"

"ಹೌದಾ?"

"ಹೌದು. ನನ್ನ ಮಾತಿನ ಮೇಲೆ ನಂಬಿಕೆ ಇಲ್ವಾ?"

"ನಂಬ್ತೀನಿ. ಆದ್ರೆ ಯಾಕೆ ಹೀಗೆ, ನಮ್ಮ ಮನೇಲೇ ಹೀಗಾಗುತ್ತೆ ಅಂತ ಯೋಚಿಸ್ತಿದೀನಿ. ನಂಗೂ ಬೇಜಾರಾಗುತ್ತೆ. ಅದಕ್ಕೆ ಕಾರಣ ಏನೂಂತ ತಿಳ್ಕೊಳ್ಳೇಬೇಕು"

"ಪ್ಲೀಸ್, ಏನೂ ಬೇಡ. ನಾನು ನಿಮ್ಮ ಮನೆಗೆ ಬರದೇನೇ ಇದ್ರೆ ಎಲ್ಲಾ ಸರಿ ಹೋಗುತ್ತೆ ಅಷ್ಟೇ"

"ನಿಮ್ಮ ಪ್ರಾಬ್ಲಂಗೆ ಅದು ಸಲ್ಯೂಷನ್ ಅಲ್ಲ. ನಮ್ಮನೇಲಿ ನಾವಿಬ್ರೇ ಗಂಡು

ಹುಡುಗ್ರು. ಹೆಣ್ಣು ಹುಡುಗೀರ್ಗೆ ಏನನ್ನಿಸುತ್ತೆ ಅಂತ ಹೇಗೆ ತಿಳಿಯುತ್ತೆ? ಅತ್ತೆ ಏನಾದ್ರೂ ಹೇಳಿದ್ರಾ?"

"ಇಲ್ಲ. ಅವಳಿಗೆ ಏನೂ ಅನ್ನಿಸಿಲ್ಲ.... ಹಾಗೇನಾದ್ರೂ ಇದ್ದಿದ್ರೆ ನನಗೆ ಖಂಡಿತಾ ಹೇಳಿರುತ್ತಿದ್ಲು. ಹೋಗ್ಲಿ ಬಿಡಿ. ಜಸ್ಟ್ ಫರ್ಗೆಟ್ ಇಟ್"

"ಹೇಗೆ ಸುಮ್ಮನಿರಲಿ? ಇದು ನಮ್ಮನೆ ವಿಷಯ ಕೂಡಾ. ಅದಕ್ಕೆ ಕಾರಣ ಏನು, ಸಲ್ಯೂಷನ್ ಏನೂಂತ ತಿಳಿದರೆ ನಮ್ಮಿಬ್ಬರಿಗೂ ಒಳ್ಳೆಯದು" ಅವಳು ಅವನ ಮೇಲೆ ಓರೆ ನೋಟವನ್ನು ಬೀರಿದಳು.

"ಬರೀ ಕುತೂಹಲ ಅಂತ ಅಂದ್ಕೋಬೇಡಿ. ನಿಮ್ಮ ಬಗ್ಗೆ ಕಾಳಜಿಯೂ ಇದೆ. ಒಂದು ಸಲಹೆ ಕೊಡ್ತೀನಿ.... ಪ್ಲೀಸ್ ಡೋಂಟ್ ಮಿಸ್ಟೇಕ್ ಮಿ"

"ಹುಂ ಹೇಳಿ"

"ಯಾರಾದ್ರೂ ಒಬ್ಬ ಡಾಕ್ಟ್ರನ್ನ ಕನ್ಸಲ್ಟ್ ಮಾಡಿದ್ರೆ.... ಒಳ್ಳೇದಲ್ವಾ?"

"ನನ್ನ ಮನಃಸ್ಥಿತಿ ಸರಿಯಾಗಿದೆ. ದೇಹಸ್ಥಿತಿ ಸರಿಯಾಗಿದೆ. ಡಾಕ್ಟರರ ಅವಶ್ಯಕತೆ ಇಲ್ಲ. ಇಷ್ಟರ ಮೇಲೆ ನನ್ನ ಬಗ್ಗೆ ನಿಮಗ್ಯಾಕೆ ಇಷ್ಟು ಆಸಕ್ತಿ ಅಂತ?" ಒರಟಾಗಿ ಪ್ರಶ್ನಿಸಿದಳು.

"ಅದನ್ನ ಇನ್ನೆಂದಾದ್ರೂ ಹೇಳ್ತೀನಿ. ನಿಮ್ಮ ಮಾತ್ನಿಂದ ನಂಗೆ ನೋವಾಗ್ತಿದೆ. ಹೋಗಲಿ ಬಿಡಿ...." ಅವನು ಮುಂದೆ ಮಾತನಾಡಲಿಲ್ಲ. ಕಾರು ಸೀದಾ ಚಲಿಸಿ, ಅವಳ ಮನೆಯ ಮುಂದೆ ನಿಂತಿತು. ಅವಳು ಇಳಿದಳು. ಅವನು ಕುಳಿತೇ ಇದ್ದ.

"ಮನೆಗೆ ಬರುಲ್ವಾ ಮಹೇಶ್. ಊಟದ ಟೈಂ ಆಗಿದೆ ಬನ್ನಿ"

"ಇವತ್ತು ಬೇಡ. ನಂಗೆ ಮೂಡಿಲ್ಲ"

"ನನ್ಮೇಲೆ ಕೋಪಾನ?"

"ನಾನ್ಯಾರು ನಿಮ್ಮ ಮೇಲೆ ಕೋಪ ಮಾಡ್ಕೊಳ್ಳೋಕೆ. ಎನಿವೇ ನನ್ನ ಮಾತುಗಳಿಂದ ನಿಮಗೆ ಹರ್ಟ್ ಆಗಿದ್ರೆ ಪ್ಲೀಸ್ ಕ್ಷಮಿಸಿ" ಅವಳ ಉತ್ತರಕ್ಕೆ ಕಾಯದೇ ಕಾರನ್ನು ತಿರುಗಿಸಿದ. ಮುಂದಿನ ಕನ್ನಡಿಯಲ್ಲಿ ಅವಳು ಅಲ್ಲಿಯೇ ನಿಂತಿದ್ದುದು ಕಂಡಿತು. ಮನಸ್ಸು ಡೋಲಾಯಮಾನ ಆಡಿತು. ಆದರೂ ಏನೋ ನಿರ್ಧರಿಸಿ, ಕಾರನ್ನು ಕಾಮತ್ ರೆಸ್ಟೋರೆಂಟ್ ಕಡೆಗೆ ಓಡಿಸಿದ.

* * *

ಊಟ ಮುಗಿಸಿ ವಾಪಸ್ಸು ಮನೆಗೆ ಬಂದ. ಒಳಗೆ ಕಾಲಿಡುವ ಮೊದಲು ಮತ್ತೊಮ್ಮೆ ತನಿಖೆ ಮಾಡುವವನಂತೆ, ಬಾಗಿಲ ಬಳಿ ನಿಂತು ಒಳಗೆಲ್ಲಾ ದೃಷ್ಟಿ ಹಾಯಿಸಿದ. ಅನುಮಾನ ಬರುವಂಥ ವಸ್ತು ಯಾವುದೂ ಗೋಚರಿಸಲಿಲ್ಲ. ಮನೆಯಲ್ಲಿ ಅತಿಯಾದ ಮೌನ ಆವರಿಸಿತ್ತು. ಅಮ್ಮನ ಗೊಣಗಾಟವಿಲ್ಲ. ಟಿ.ವಿ.ಯ ಧ್ವನಿ ಇಲ್ಲ. ಮನೆ 'ಬಿಕೋ' ಎನ್ನುತ್ತಿತ್ತು. ಒಂದು ತಿಂಗಳಿಂದ ಮನೆಯನ್ನು ತುಂಬಿ

ಕೊಂಡಿದ್ದ ಸಂಭ್ರಮ ನಿಶ್ಶಬ್ದದಲ್ಲಿ ಸೇರಿ ಹೋಗಿತ್ತು. ಏನು ಮಾಡಬೇಕೆಂದು ತಿಳಿಯದೇ ಸೋಫಾದ ಮೇಲೆ ಉರುಳಿಕೊಂಡ. ಫೋನು ಟ್ರಿನ್‌ಗುಟ್ಟಿತು. ದಿನೇಶ ಫೋನು ಮಾಡಿದ್ದ.

"ಎಲ್ಲಿ ಹೋಗಿದ್ದೆ? ಮನೇಲಿ ಇರ್ಲಿಲ್ವಾ? ರಿಂಗಾಗ್ತಾನೇ ಇತ್ತು.... ಮೊಬೈಲ್ ಫೋನ್ ಕೂಡಾ ಸ್ವಿಚ್ ಆಫ್ ಆಗಿದೆ ಅಂತ ಬರ್ತಿತ್ತು. ಯಾಕೋ....?"

"ಊಟಕ್ಕೆ ಹೋಟೆಲ್ಲಿಗೆ ಹೋಗಿದ್ದೆ. ಈಗ್ತಾನೇ ಬಂದೆ? ಅಮ್ಮ, ಅತ್ಗೆ ಸೇಫ್ ಆಗಿ ರೀಚ್ ಆದ್ರಾ?"

"ಹೂಂ. ಅದನ್ನು ತಿಳಿಸೋಕೆ ಮಾಡಿದ್ದು. ಏನೂ ಪ್ರಾಬ್ಲಂ ಇರಲಿಲ್ಲವಂತೆ. ಟೈಂಗೆ ಸರಿಯಾಗಿ ಪ್ಲೇನ್ ಬಂತು. ಎನಿವೇ ಥ್ಯಾಂಕ್ಸ್...."

"ಥ್ಯಾಂಕ್ಸೆಲ್ಲಾ ಯಾಕಪ್ಪಾ?"

"ನಿನಗೊಬ್ಬಿಗೇ ತುಂಬಾ ಬೇಜಾರಾಗ್ತಾ ಇರಬಹುದು ಅಲ್ವಾ? ನೀನೂ ಬಂದಿದ್ರೆ ಚೆನ್ನಾಗಿತ್ತು"

"ತುಂಬಾ ಬೇಜಾರಾದ್ರೆ ನಾನೇ ಟ್ರಿಪ್ ಹಾಕ್ತೀನಿ"

"ಹೂಂ ಹಾಗೇ ಮಾಡು. ಅಮ್ಮನ ಹತ್ರ ಮಾತಾಡ್ತೀಯ?"

"ಈಗ ಬೇಡ ಮೂಡ್ ಇಲ್ಲ"

"ಓಕೇ ಮನೆ ಕಡೆ ಜೋಪಾನ. ಊಟ, ತಿಂಡಿ, ನಿದ್ದೆ ಎಲ್ಲಾ ಸರಿಯಾಗಿ ಮಾಡು. ಅಲ್ಲಿ ಇಲ್ಲಿ ಬಿಸಿಲ್ನಲ್ಲಿ ತಿರುಗ್ಬೇಡ. ಕಿಟಕಿ ಬಾಗಿಲುಗಳಿಗೆ ಸರಿಯಾಗಿ ಬೋಲ್ಟ್ ಹಾಕಿಕೊಂಡು ಮಲಕ್ಕೋ. ಹೊರಗೆ ಹೋಗುವಾಗ, ಬಾಗಿಲಿಗೆ ಸರಿಯಾಗಿ ಬೀಗ ಹಾಕ್ಕೋ. ಇವೆಲ್ಲಾ ನನ್ನ ಮಾತುಗಳಲ್ಲವೋ.... ಅಮ್ಮನ ನುಡಿಗಳು."

"ಅರ್ಥವಾಯ್ತು ಅಂತ ಅಮ್ಮಂಗೆ ಹೇಳ್ಬಿಡು" ದಿನೇಶ ಮಾತು ಮುಗಿಸಿದ. ಮಹೇಶ ಫೋನಿನ ರಿಸೀವರ್ ಅತ್ತ ಇಟ್ಟು ಅಡಿಗೆ ಮನೆಗೆ ಬಂದ. ಕಾಫಿ ಬೆರೆಸಿ ಕೊಂಡು ಕುಡಿದು ಹೊರ ಬಂದು ಟಿ.ವಿಯ ಮುಂದೆ ಕೂತು, ರಿಮೋಟ್ ಕೈಗೆತ್ತಿಕೊಂಡ. ಅದೂ ಇದೂ ಕಾರ್ಯಕ್ರಮಗಳನ್ನು ನೋಡುವಷ್ಟರಲ್ಲಿ ಸಾಕೆನ್ನಿಸಿತ್ತು. ಟಿ.ವಿ ಆರಿಸಿ ತನ್ನ ರೂಮಿಗೆ ಬಂದು ಮಂಚದ ಮೇಲೆ ಉರುಳಿಕೊಂಡು ಕಣ್ಣುಗಳನ್ನು ಮುಚ್ಚಿದ. ಅಕ್ಷಿಪಟಲದ ಮುಂದೆ ಆ ದಿನದ ವಿಷಯಗಳೆಲ್ಲಾ ಸರಿದು ಬಂದವು.... ಒಂದು ಘಳಿಗೆ ತಾನು ಸುಜಯಂಗೆ ಹರ್ಟ್ ಮಾಡಿದೆ ಅಂತೆನ್ನಿಸಿದರೆ, ಮರು ಘಳಿಗೆಯೇ, ತಾನು ಹೇಳಿದ್ದರಲ್ಲಿ ತಪ್ಪೇನೂ ಇರಲಿಲ್ಲ ಅಂತೆನ್ನಿಸಿತು. ನಿಧಾನವಾಗಿ ನಿದ್ದೆ ಆವರಿಸಿತು.

ಮತ್ತೆ ಎಚ್ಚರವಾದಾಗ ನಸುಗತ್ತಲೆಯಾಗಿತ್ತು. ಆರೂವರೆ ಗಂಟೆಯಾಗಿತ್ತು. ಮತ್ತೆ ಕಾಫಿಯನ್ನು ಬೆರೆಸಿಕೊಂಡು ಕುಡಿದು, ಮುಂಬಾಗಿಲಿಗೆ ಬಂದು ನಿಂತ. ರಸ್ತೆಯಲ್ಲಿ ಓಡಾಡುವ ವಾಹನಗಳ ಸದ್ದು ಬೇಸರವನ್ನುಂಟುಮಾಡಿತು. ಒಳಗೆ

ಬಂದು ಟಿ.ವಿ ಆನ್ ಮಾಡಿದ. ಅಷ್ಟಾದರೂ ಸಮಯ ಸರಿಯಲಿಲ್ಲ. ಕಂಪ್ಯೂಟರ್ ಮುಂದೆ ಕೂತ. ಮೇಲ್‌ಗಳನ್ನು ಚೆಕ್ ಮಾಡಿ ಕ್ಲೋಸ್ ಮಾಡಿದ. ಫೋನ್ ಟ್ರಿನ್ ಗುಟ್ಟಿತು. ಬೇಸರದಿಂದ ರಿಸೀವರ್ ಎತ್ತಿದ. ಸುಜಯಳ ಧ್ವನಿಯನ್ನು ಕೇಳಿ ಚುರುಕಾದ. ಆದರೆ, ಬೇಕೂಂತ,

"ಯಾರ್ರಿ ಅದು? ಏನು ಬೇಕಾಗಿತ್ತು?" ಅಂತಂದ ಮನದಲ್ಲೇ ನಗುತ್ತಾ ರಾಗವಾಗಿ ಕೇಳಿದಳು.

"ನಾನು ಸುಜಯಾ.... ಏನ್ಮಾಡ್ತಿದೀರಿ?" ಎಂದಳು.

"ಓ.... ನೀವಾ....? ಟಿ.ವಿ. ನೋಡ್ತಿದ್ದೆ. ಏನು ವಿಷಯ?"

"ನಾನು ನಿಮ್ಹತ್ರ ಸ್ವಲ್ಪ ಮಾತಾಡ್ಬೇಕಾಗಿತ್ತು ಬರ್ತೀರಾ?"

"ಏನು ಮಾತಾಡ್ಬೇಕು? ಎನಿ ಸೀರಿಯಸ್ ಪ್ರಾಬ್ಲಂ?"

"ಸೀರಿಯಸ್ ಏನಿಲ್ಲ. ನಾನು ಒಂದು ಡಿಸಿಷನ್ ತಗೊಂಡಿದೀನಿ" ಅವನ ಎದೆ ಸಣ್ಣಗೆ ಹೊಡೆದುಕೊಂಡಿತು.

"ಯಾವ ವಿಷಯದಲ್ಲಿ ಅಂತ ಕೇಳ್ಬಹುದಾ?"

"ಮನೆಗೆ ಬಂದ್ರೆ ಮಾತಾಡೋಣ. ನಾನು ಪಬ್ಲಿಕ್ ಬೂತ್‌ನಿಂದ ಮಾತಾಡ್ತಿದೀನಿ. ಬೇರೆಯವರು ಕಾಯ್ತಾ ಇದಾರೆ. ಬೇಗ ಬನ್ನಿ" ಅವಳು ಫೋನನ್ನು ಡಿಸ್‌ಕನೆಕ್ಟ್ ಮಾಡಿದಳು. ನಿಜ ಹೇಳ್ತಿದಾಳೋ ಸುಳ್ಳು ಹೇಳ್ತಿದಾಳೋ ಅವನಿಗೆ ತಿಳಿಯಲಿಲ್ಲ. ಗಡಿಯಾರದ ಕಡೆ ನೋಡಿದ. ಏಳೂವರೆಯಾಗಿತ್ತು. ಕಾರನ್ನು ಷೆಡ್‌ನಲ್ಲಿಟ್ಟು ಸ್ಕೂಟರನ್ನು ಆಚೆ ತೆಗೆದ. ಬೇಗ ಬೇಗ ಸಿದ್ಧನಾಗಿ, ಮುಂಬಾಗಿಲಿಗೆ ಬೀಗ ಹಾಕಿ ಸ್ಕೂಟರನ್ನೇರಿದ.

ಮುಂಬಾಗಿಲಿನಲ್ಲಿ ಇವನಿಗಾಗಿ ಕಾಯುತ್ತಾ ನಿಂತಿದ್ದ ಸುಜಯಳನ್ನು ಕಂಡ. ಒಂದು ಘಳಿಗೆ ಆತಂಕ ಕಾಡಿತು. ಸ್ಕೂಟರ್ರನ್ನು ನಿಲ್ಲಿಸಿ, ಮೆಟ್ಟಿಲ ಬಳಿಗೆ ಬಂದ.

"ನಿಮಗೋಸ್ಕರಾನೇ ಕಾಯ್ತಾ ಇದ್ದೆ. ನೀವು ಬರ್ತೀರೋ ಇಲ್ವೋ ಅಂತ ಆತಂಕ ಆಗಿತ್ತು"

"ಯಾಕೆ? ಎನಿ ಪ್ರಾಬ್ಲಂ!? ನಿಮ್ಮ ತಂದೆ ಹುಶಾರಾಗಿದಾರೆ ತಾನೇ?"

"ಹುಂ, ಹುಶಾರಾಗಿದಾರೆ. ಒಳಗ್ಬನ್ನಿ" ಅವನು ಅನುಮಾನಿಸುತ್ತಾ ಅಳುಕುತ್ತಾ ಅವಳ ಹಿಂದೆ ನಡೆದ. ಒಳಗಿನಿಂದ, ಪ್ರಭಾವತಿ ಬಂದು ಯೋಗಕ್ಷೇಮವನ್ನು ವಿಚಾರಿಸಿದಳು. ಸುಮತಿ ಬಂದು ಹೇಗಿದೀರಿ? ಎಂದು ಕೇಳಿದಳು. ಇವನು ಆಗಾಗ್ಗೆ ಸುಜಯಳ ಕಡೆ ನೋಡುತ್ತಿದ್ದ. ರಂಗನಾಥ ರಾಯರು ಬಂದು ಮಾತಿಗೆ ಕುಳಿತರು. ಅವಳು ಕರೆದ ಕೂಡಲೇ ಬಂದು ಮೂರ್ಖನಾದನೇನೋ ಅಂತೆನಿಸಿ ಮುಜುಗರ ದಿಂದ, ಅವರು ಕೇಳಿದ್ದಕ್ಕೆ ಉತ್ತರಿಸುತ್ತಿದ್ದ. ಸುಜಯ ಒಳಗೆದ್ದು ಹೋಗಿದ್ದಳು. ಸುಮತಿ ಬಂದು ಊಟಕ್ಕೆ ಎಬ್ಬಿಸಿದಾಗ ಇವನು ಗಲಿಬಿಲಿಗೊಂಡ.....

"ಪರವಾಗಿಲ್ಲ.... ನಾನು ಹೋಟೆಲ್ಲಿನಲ್ಲಿ ಮಾಡ್ತೀನಿ" ಎಂದು ಕಷ್ಟಪಟ್ಟು ಹೇಳಿದ.

"ಚೆನ್ನಾಯ್ತು.... ಪರಿಚಯದ ನಮ್ಮ ಮನೆ ಇರುವಾಗ, ನೀವ್ಯಾಕೆ ಹೋಟೆಲ್ಲಿನಲ್ಲಿ ಊಟ ಮಾಡ್ಬೇಕು.... ನಿಮ್ಮ ತಾಯಿ ವಾಪಸ್ಸು ಬರುವವರೆಗೂ ನಮ್ಮ ಮನೆಗೇ ಊಟಕ್ಕೆ ಬನ್ನಿ" ಆತ ಧಾರಾಳವಾಗಿ ನುಡಿದಾಗ, ಇವನ ಸಂಕೋಚ ಅಧಿಕವಾಗಿತ್ತು. ಇಕ್ಕಟ್ಟಿಗೆ ಸಿಕ್ಕಿ ಬಿದ್ದವನಂತೆ, ಎದ್ದು ಡೈನಿಂಗ್ ಹಾಲ್‌ಗೆ ಬಂದ. ಇವನ ಎದುರಿಗೆ ಊಟಕ್ಕೆ ಕುಳಿತಿದ್ದ ಸುಜಯ ನಗುತ್ತಿರುವಂತೆನ್ನಿಸಿತ್ತು. ಇವಳ ಮುಗುಳ್ನಗುವಿಗೆ ಮೊದಲು ಸೋತೆ. ಇವಳ ಮಾತಿಗೆ ಮರುಳಾಗಿ ಬಂದೆ.... ಮೂರ್ಖನಾದೆ. ಇರಲಿ, ಆಮೇಲೆ ವಿಚಾರಿಸಿಕೊಳ್ಳುತ್ತೀನಿ ಎಂದುಕೊಂಡ. ಪ್ರಭಾವತಿಯೇ ಎಲ್ಲರಿಗೂ ಬಡಿಸಿ ದಳು. ಶುಚಿ ರುಚಿಯಾದ ಊಟವನ್ನು ಹೊಟ್ಟೆ ತುಂಬಾ ತಿಂದ. ಪ್ರಭಾವತಿ ಉಪಚಾರ ಮಾಡಿ ಮಾಡಿ ಬಡಿಸಿದಳು. ಸುಜಯಳ ಗಮನ ಅವನ ಮೇಲೆ ಇದ್ದುದು ಅವನಿಗೆ ತಿಳಿಯುತ್ತಿತ್ತು.

"ಸಾಯಂಕಾಲ ಸೀದಾ ಆಫೀಸ್ನಿಂದ ಇಲ್ಲಿಗೇ ಬಂದು ಬಿಡಪ್ಪಾ. ರಾತ್ರಿಯ ಊಟವನ್ನು ಮುಗಿಸಿಕೊಂಡೇ ಹೋಗುವಂತೆ" ರಂಗನಾಥರಾಯರೂ ಒತ್ತಿ ಹೇಳಿದರು.

"ನಿತ್ಯ ಬರುಕ್ಕಾಗುಲ್ಲ. ಹೊರಗೆ ಸ್ವಲ್ಪ ಕೆಲಸವಿದ್ರೆ ಹೊತ್ತಾಗುತ್ತೆ. ಬೇಗ ಕೆಲಸ ಮುಗಿದ ದಿನ ಬರ್ತೀನಿ." ಸಂಕೋಚ ಮುಜುಗರಗಳಿಂದ ಹೇಳಿದ.

"ದೀಪಾ ಹೇಳಿದಾಳಪ್ಪಾ.... ಹೋಟೆಲ್ಲು ಗೀಟೆಲ್ಲು ಅಂತ ಹೋಗ್ಬೇಡ. ಹೊಟ್ಟೆ ಕೆಡುತ್ತೆ. ಬಿಡುವು ಮಾಡಿಕೊಂಡು ಬಾ. ಸಂಪಾದನೆ ಮಾಡುವುದೇತಕ್ಕೆ? ಏನೋ ಎಲ್ಲೋ ತಿಂದ್ರಾಯ್ತು ಅಂತ ಹೊರಗೇ ತಿಂದು ತಿರುಗಿದ್ರೆ ದೇಹಕ್ಕೆ ಒಳ್ಳೇದಲ್ಲ" ಪ್ರಭಾವತಿಯೂ ಧ್ವನಿ ಕೂಡಿಸಿದಾಗ, ಮಹೇಶನಿಗೆ ಏನು ಹೇಳಬೇಕೆಂದು ತಿಳಿಯಲಿಲ್ಲ.

"ನೋಡ್ತೀನಿ, ಆದಾಗ ಬರ್ತೀನಿ. ಊಟ ತುಂಬಾ ಚೆನ್ನಾಗಿತ್ತು. ಥ್ಯಾಂಕ್ಸ್" ಎಂದು ಹೇಳಿ ಹೊರಟ. ಗೇಟಿನ ತನಕ ಅವನ ಹಿಂದೆ ಸುಜಯ ಬಂದಳು.

"ಏನ್ರೀ.... ನೀವು ಹೀಗೆ ಇಕ್ಕಟ್ಟಿಗೆ ಸಿಕ್ಕಿಸಬಹುದಾ?" ಆಕ್ಷೇಪಣೆ ಮಾಡಿದ.

"ನಾನೇನ್ಮಾಡ್ದೆ?" ಏನೂ ತಿಳಿಯದವಳಂತೆ ನುಡಿದಳು.

"ಪ್ಲೀಸ್ ಆಕ್ಟ್ ಮಾಡ್ಬೇಡಿ. ಏನೋ ಮಾತಾಡ್ಬೇಕೂಂತ ಹೇಳಿದ್ರಿ...."

"ಊಟಕ್ಕೆ ಬನ್ನಿ ಅಂತ ಹೇಳಿದ್ರೆ ನೀವು ಬರುಲ್ಲ ಅಂತ ನಂಗೊತ್ತಿತ್ತು. ಅದಕ್ಕೇ ಸುಳ್ಳು ಹೇಳ್ದೆ.... ತಪ್ಪಾ....?"

"ಹೌದು ತಪ್ಪು. ನೀವು ಬೇರೆ-ಏನೋ ವಿಚಾರ ಹೇಳ್ತೀರಿ ಅಂತ ಬಂದೆ...."

"ಎನಿವೇ ಊಟ ಚೆನ್ನಾಗಿತ್ತು. ತುಂಬಾ ಥ್ಯಾಂಕ್ಸ್. ಆದ್ರೆ ಮತ್ತೆ ಹೀಗೆ ಮಾಡ್ಬೇಡಿ. ನಂಗೆ ಇಷ್ಟ ಆಗುಲ್ಲ"

"ಓ.ಕೆ. ಸಾರಿ. ಹೀಗೆ ಮಾಡುಲ್ಲ. ಊಟಕ್ಕೆ ಬನ್ನಿ ಅಂತ ರಿಕ್ವೆಸ್ಟ್ ಮಾಡ್ಕೊಳ್ತೀನಿ.

ಬರ್ತೀರಿ ತಾನೇ...."

"ನಾನು ಬರಲೇಬೇಕು ಅನ್ನೋ ಬಲವಂತ ಯಾಕೆ?" ಅವಳ ಧಾಟಿಯಲ್ಲೇ ಮಾತಾಡಿದ.

"ಯಾಕೋ ನಂಗೊತ್ತಿಲ್ಲ" ಅವಳು ಅಲ್ಲಿ ನಿಲ್ಲದೇ ಮನೆಯ ಕಡೆಗೆ ಹೊರಟು ಹೋದಳು. "ಸುಜಯಾ...." ಅಂತ ಮೆಲ್ಲನೆ ಕರೆದ. ಅವಳಿಗೆ ಕೇಳಿಸಲಿಲ್ಲ. ಆದರೆ ಅವಳು ಮುಂಬಾಗಿಲ ಬಳಿ ನಿಂತು ಇವನೆಡೆ ಕೈ ಆಡಿಸಿದಾಗ ಇವನಿಗೆ ಎಲ್ಲವೂ ಅರ್ಥವಾಗಿತ್ತು. ತಾನೂ ಕೈಯಾಡಿಸಿ ಸ್ಕೂಟರನ್ನೇರಿದ. ರಾತ್ರಿ ಕಳೆಯಿತು. ಬೆಳಗಾಯಿತು.

* * *

"ಹೊಸ ದಿನಚರಿ ಪ್ರಾರಂಭವಾಯಿತು" ಎಂದುಕೊಳ್ಳುತ್ತಾ ಮಹೇಶ ಎದ್ದ. ಹಾಲಿನವನು ತಂದಿಟ್ಟ ಹಾಲಿನ ಪ್ಯಾಕೆಟ್ಟನ್ನು ಒಡೆದು ಕಾಯಿಸಲು ಇಟ್ಟ. ವನಜಮ್ಮ ಮಗನಿಗೆ ತೊಂದರೆ ಆಗದಿರಲಿ ಅಂತ "ನೆಸ್‌ಕೆಫೆ"ಯನ್ನು ತಂದಿಟ್ಟಿದ್ದಳು. ಮುಖ ತೊಳೆದು ಬಂದು ಕಾಫಿಯನ್ನು ಬೆರೆಸಿಕೊಂಡು ಕುಡಿದ. ಅಂದಿನ ದಿನಪತ್ರಿಕೆಯನ್ನು ಓದಿದ. ಬಾಯ್ಲರಿನ ಸ್ವಿಚ್ ಹಾಕಿ ನೀರನ್ನು ಕಾಸಿಕೊಂಡು ಸ್ನಾನ ಮಾಡಿ, ಸಿದ್ಧನಾಗಿ ಕಾಮತ್ ಕೆಫೆಗೆ ಬಂದ. ಬಿಸಿ ಬಿಸಿ ಇಡ್ಲಿಯನ್ನು ತಿಂದು ಆಫೀಸಿನ ದಿಕ್ಕಿಗೆ ಗಾಡಿಯನ್ನು ಓಡಿಸಿದ.

ಮಧ್ಯಾಹ್ನದ ಲಂಚ್ ಸಮಯದಲ್ಲಿ ರಾತ್ರಿಯ ಊಟಕ್ಕೆ ಸುಜಯಳ ಮನೆಗೆ ಹೋಗುವುದೋ ಬೇಡವೋ ಅಂತ ಚಿಂತಿಸಿದ. ಹೋಗದಿದ್ದರೆ, ತನಗೇ ಎರಡು ಥರ ಲಾಸ್ ಅಂತನ್ನಿಸಿತು. ಅಷ್ಟರಲ್ಲಿ ಮೊಬೈಲ್ ಫೋನು ರಾಗ ಹಾಡಿತು. ಸುಜಯ ಫೋನು ಮಾಡಿದ್ದಳು. ಹೃದಯ ಕುಣಿಯಿತು. ಆ ಸಂಭ್ರಮದಲ್ಲಿ

"ನಾನು ನಿಮ್ಮ ಬಗ್ಗೇನೇ ಚಿಂತಿಸುತ್ತಿದ್ದೆ....." ಎಂದ.

"ರಿಯಲೀ....? ಕಾರಣ?"

"ನಿಜ ಹೇಳಲೋ? ಸುಳ್ಳು ಹೇಳಲೋ?"

"ನಿಜ ಹೇಳಿದರೆ, ನಿಜವಾಗಿಯೇ ಇರುತ್ತೆ. ಸುಳ್ಳು ಹೇಳಿದರೆ ಸುಳ್ಳನ್ನು ನಿಜ ಮಾಡಬೇಕಾಗುತ್ತೆ"

"ಅಂದ್ರೇ...."

"ಏನಿಲ್ಲ ಬಿಡಿ. ರಾತ್ರಿಯ ಊಟಕ್ಕೆ ಬರ್ತೀರಿ ತಾನೇ?"

"ಸುಮ್ನೇ ನನ್ನಿಂದ ನಿಮಗೆ ತೊಂದರೆ...."

"ತೊಂದ್ರೆ, ಖರ್ಚು ಅದನ್ನೆಲ್ಲ ನೀವು ಯೋಚಿಸ್ಬೇಡಿ. ದೀಪಾ ಫೋನು ಮಾಡಿದ್ದಳು. ನಿಮ್ಮ ಬಗ್ಗೆ ತುಂಬಾ ವಿಚಾರಿಸಿದಳು. ನೀವು ಊಟಕ್ಕೆ ಬರದಿದ್ರೆ ಅವಳು ನನ್ನನ್ನು ತರಾಟೆಗೆ ತಗೋತಾಳೆ ಅಷ್ಟೇ...."

"ನನ್ನಿಂದಾಗಿ ನೀವ್ಯಾಕೆ ಅತ್ತಿಗೆಯಿಂದ ಮಾತನ್ನು ಕೇಳ್ಬೇಕು? ನಾನು ಬರ್ತೀನಿ ಬಿಡಿ...." ಅವನ ಮಾತಿಗೆ ಅವನಿಗೇ ನಗು ಬಂತು....

ಮತ್ತೆ ಆಫೀಸಿಗೆ ಬಂದ ಮೇಲೆ, ಅವನಿಗೆ ಕೆಲಸದ ಮೇಲೆ ಗಮನವಿರಲಿಲ್ಲ. ಆಗಾಗ್ಗೆ ಗಡಿಯಾರದ ಕಡೆಯೇ ನೋಡುತ್ತಿದ್ದ. ಅದನ್ನು ಗಮನಿಸಿದ ಅವನ ಸಹೋದ್ಯೋಗಿ ಕೇಶವ ಪ್ರಶ್ನಿಸಿದ.

"ಯಾಕೆ ಮಹೇಶ್.... ಒಂಥರಾ ಟೆನ್ಶನ್‌ನಲ್ಲಿದ್ದೀರಲ್ಲ...."

"ಏನಿಲ್ಲವಲ್ಲ...." ನಗುತ್ತಾ ನುಡಿದ.

"ಮತ್ಯಾಕೆ ಗಡಿಯಾರದ ಕಢೆ ಅಷ್ಟೊಂದು ಸಾರಿ ನೋಡ್ತಿದೀರಿ? ಎನಿ ಪ್ರಾಬ್ಲಂ"

"ಪ್ರಾಬ್ಲಂ ಏನಿಲ್ಲ. ನನ್ನ ಫ್ರೆಂಡ್ ಒಬ್ಬರಿಗೆ ಬರ್ತೀನಿ ಅಂತ ಹೇಳಿದ್ದೆ" ಕತ್ತು ತಗ್ಗಿಸಿ ತನ್ನ ಕೆಲಸದ ಕಡೆ ದೃಷ್ಟಿ ಹರಿಸಿದ. ಆಫೀಸು ಬಿಟ್ಟೊಡನೆ ಸೀದಾ ಅವಳ ಮನೆಗೆ ಹೋಗುವುದು ಚೆನ್ನಲ್ಲವೆಂದುಕೊಂಡು ತನ್ನ ಮನೆಗೆ ಹೊರಟ. ರಸ್ತೆಯಲ್ಲಿ ಒಂದು ಕಡೆ ತುಂಬಾ ಜನ ಸೇರಿದ್ದರು. ಯಾರೋ ಆಟೋದವರಿಬ್ಬರು ಜಗಳವನ್ನಾಡು ತ್ತಿದ್ದರು. ಇವನಿಗೆ ಜಗಳದ ಮೇಲೆ ಆಸಕ್ತಿ ಇಲ್ಲದಿದ್ದರೂ, ಗಾಡಿಯ ವೇಗ ಕಡಿಮೆ ಯಾಗಿತ್ತು. ಹೂ ಮಾರುವ ಹುಡುಗಿಯೊಬ್ಬಳು ಹತ್ತಿರ ಬಂದಳು.

"ಹೂ.... ಬೇಕಾ ಸಾರ್.... ಮಲ್ಲಿಗೆ ಹೂ ಚೆನ್ನಾಗಿದೆ. ಐದು ರೂಪಾಗೆ ಎರಡು ಮೊಳ...." ಬುಟ್ಟಿಯಲ್ಲಿದ್ದ ಕಟ್ಟಿದ್ದ ಹೂವನ್ನು ನೋಡಿದ.

'ಬೇಡ' ಎಂದು ಹೇಳಲಿದ್ದವನು ಏನನ್ನೋ ನೆನೆಪಿಸಿಕೊಂಡವನಂತೆ, "ಹೋಗಲಿ ಹತ್ತು ರೂಪಾಯಿಗೆ ಕೊಡು" ಎಂದ.

ಆ ಹುಡುಗಿ ಜಾಣತನದಿಂದ ನಾಲ್ಕು ಮೊಳ ಹೂವನ್ನು ಅಳತೆ ಮಾಡಿ, ಬ್ಲೇಡ್‌ನಿಂದ ಕತ್ತರಿಸಿ, ಒಂದು ಪ್ಲಾಸ್ಟಿಕ್ ಚೀಲಕ್ಕೆ ಹಾಕಿ ಕೊಟ್ಟಳು. ಈ ಹೂವನ್ನು ಸುಜಯಳಿಗೆ ಕೊಟ್ಟರೆ ಅವಳಿಗೇನನ್ನಿಸಬಹುದು? ಯಾಕೋ ಸಂಕೋಚವೆನಿಸಿತು. ಮನೆಯಲ್ಲೇ ಯಾವುದಾದರೂ ದೇವರ ಪಟಕ್ಕೆ ಹಾಕಿದರಾಯ್ತು ಅಂತಂದುಕೊಂಡ.

ಮನೆಯ ಒಳಗೆ ಬಂದವನಿಗೆ, ಗೋಡೆಯ ಮೇಲೆ ವಿರಾಜಿಸುತ್ತಿದ್ದ ಫೋಟೋ ಗಳು ಕಂಡವು. ಈ ಫೋಟೋಗಳಿಗೆ ಹೂವಿನ ಹಾರವನ್ನು ಹಾಕಿದರಾಯ್ತು ಎಂದುಕೊಂಡು ಒಂದು ಸ್ಟೂಲನ್ನು ಎಳೆದುಕೊಂಡು ಹತ್ತಿ ನಿಂತು ಹಾರವನ್ನು ಹಾಕಿದ. ಹತ್ತಿರದಿಂದ ಆ ಮುಖಗಳನ್ನೇ ನೋಡಿದ. ಸುಜಯ ಈ ಭಾವಚಿತ್ರಗಳನ್ನು ನೋಡುವುದನ್ನು ಗಮನಿಸಿದ್ದ. ಮತ್ತೊಮ್ಮೆ ಹತ್ತಿರದಿಂದ ಏನಾದರೂ ವಿಶೇಷತೆ ಕಾಣಬಹುದೇ ಎಂದುಕೊಂಡು ಆಳವಾಗಿ ನೋಡಿದ. ಆದರೆ ಅವನಿಗೆ ಏನೂ ವಿಚಿತ್ರವಾಗಲೀ ವಿಶೇಷವಾಗಲೀ ಕಂಡು ಬರಲಿಲ್ಲ.... ಸುಜಯ ಏನೋ ನಟನೆ ಮಾಡುತ್ತಿರಬಹುದು, ಅಥವಾ ಏನೋ ಭ್ರಮೆಯಲ್ಲಿರಬೇಕು.... ಅಂತಂದುಕೊಂಡು ಇಳಿದು ಅಡಿಗೆ ಮನೆಯ ಕಡೆಗೆ ಬಂದ. ಹಾಗೇ ಆಲೋಚಿಸುತ್ತಾ ಕಾಫಿಯನ್ನು

ಬೆರೆಸಿಕೊಂಡು ಕುಡಿಯುವಾಗ, ಈ ವಿಷಯಗಳನ್ನು ತಾನೇಕೆ ಒಬ್ಬ ಸೈಕಿಯಾಟ್ರಿಸ್ಟ್‌ನ ಬಳಿ ಕೇಳಬಾರದು ಅಂತೆನ್ನಿಸಿತು. ಟೆಲಿಫೋನ್ ಡೈರೆಕ್ಟರಿಯ ಯೆಲ್ಲೋ ಪೇಜಸ್‌ಗಳಲ್ಲಿ ಒಬ್ಬ ಸೈಕಿಯಾಟ್ರಿಸ್ಟ್‌ನ ಫೋನ್ ನಂಬರನ್ನು ಹುಡುಕಿ ಗುರುತಿಸಿಟ್ಟುಕೊಂಡು, ಅವರಿಗೆ ಫೋನು ಮಾಡಿದ. ಅವರು ಬಂದು ಕಾಣಲು ಹೇಳಿದರು.

"ಚಿತ್ರಾ ಕ್ಲಿನಿಕ್" ಡಾ. ಸತೀಶ್, ಸೈಕಿಯಾಟ್ರಿಸ್ಟ್ ಎಂದು ಬರೆದಿದ್ದ ಫಲಕವನ್ನು ಓದಿಕೊಂಡು, ಕ್ಲಿನಿಕ್‌ನ ಒಳ ಬಂದು ತನ್ನ ಸರದಿಗಾಗಿ ಕಾಯುತ್ತಾ ಕುಳಿತ. ಈಗಾಗಲೇ ಇಬ್ಬರು ಅಲ್ಲಿ ಕಾಯುತ್ತಾ ಕುಳಿತಿದ್ದರು. ಅವರಿಬ್ಬರೂ ಇವನನ್ನೇ ಆಗಾಗ್ಗೆ ನೋಡಿದಾಗ ಇವನಿಗೆ ಮುಜುಗರವಾಗಿತ್ತು.

ತನ್ನ ಸರದಿ ಬಂದಾಗ, ಒಳಗಿನ ರೂಮಿಗೆ ಹೋಗಿ ಡಾಕ್ಟರಿಗೆ ಕೈ ಮುಗಿದು ಅವರೆದುರಿನ ಕುರ್ಚಿಯಲ್ಲಿ ಕುಳಿತ. ಮಧ್ಯ ವಯಸ್ಸಿನ ಡಾಕ್ಟರನ್ನು ಕಂಡಾಗ ಅವರಲ್ಲಿ ವಿಶ್ವಾಸ ಮೂಡಿತು. ತನ್ನ ಪರಿಚಯವನ್ನೂ ಹೇಳಿಕೊಂಡು, ಸುಜಯಳ ಬಗ್ಗೆ ಹೇಳಿ, ಸಲಹೆಯನ್ನು ಕೇಳಿದ.

"ಅವರು, ನಿಮಗೆ ಏನಾಗಬೇಕು?" ಆತ ಕೇಳಿದರು.

"ಸಧ್ಯಕ್ಕೆ ಏನಿಲ್ಲ. ನಾನು ಅವರನ್ನು ಪ್ರೀತಿಸ್ತಿದೀನಿ ಅಂತನ್ನಿಸುತ್ತೆ. ಅವರಿಗೆ ನಾನು ಒಪ್ಪಿಗೆಯಾದರೆ ಅವರನ್ನು ಮದುವೆಯಾಗುವ ಆಸೆ ಇದೆ"

"ಐಸೀ.... ನೀವು ಹೇಳಿದ ವಿವರಗಳನ್ನು ಕೇಳಿದರೆ, ಯಾವ ಸೀರಿಯಸ್ ಪ್ರಾಬ್ಲಂ ಏನೂ ಇಲ್ಲ ಅಂತನ್ನಿಸುತ್ತೆ. ಆದರೆ, ಅವರನ್ನು ನೋಡಿ, ಮಾತನಾಡದೇ ನಾನು ಯಾವ ಸಲಹೆಯನ್ನೂ ನೀಡಲಾರೆ. ಒಮ್ಮೆ ಅವರನ್ನು ಇಲ್ಲಿಗೆ ಕರ್ಕೊಂಡು ಬನ್ನಿ"

"ಹಾಗೇ ಮಾಡ್ತೀನಿ" ಎಂದು ಹೇಳಿ, ಅವರ ಫೀಸನ್ನು ಕೊಡಲನುವಾದ. "ಈಗಲೇ ಏನೂ ಬೇಡ. ಅವರನ್ನು ಪರೀಕ್ಷೆ ಮಾಡಿದ ಮೇಲೆ ಕೊಡೋರಂತೆ" ಡಾಕ್ಟರು ಮುಗುಳ್ನಗುತ್ತಾ ನುಡಿದಾಗ, "ಥ್ಯಾಂಕ್ಸ್" ಎಂದು ಹೇಳಿ ಹೊರಬಂದ. ಆದರೆ, ಸುಜಯಳನ್ನು ಒಪ್ಪಿಸಿ ಕರೆದುಕೊಂಡು ಬರುವುದು ಹೇಗೆಂದು ತಿಳಿಯಲಿಲ್ಲ. ತಾನು ಈಗ ಮಾಡುತ್ತಿರುವುದು ಎಷ್ಟರ ಮಟ್ಟಿಗೆ ಸರಿ? ತನಗೆ ಈ ಅಧಿಕಾರ ಇದೆಯಾ ಎಂದು ತನಗೆ ತಾನೇ ಹೇಳಿಕೊಂಡು, ಸುಜಯಳ ಮನೆಯ ದಿಕ್ಕಿನತ್ತ ಗಾಡಿಯನ್ನು ಓಡಿಸಿದ.

ಅವನಿಗಾಗಿಯೇ ಕಾಯುತ್ತಾ ನಿಂತಿದ್ದಳೇನೋ ಎನ್ನುವಂತೆ, "ಬೇಗನೇ ಬರ್ತೀನಿ ಅಂತ ಹೇಳಿದ್ರಿ.... ಲೇಟಾಯ್ತಲ್ಲ...." ಸುಜಯ ಅಚ್ಚರಿಯಿಂದ ನೋಡಿದ.

"ಸಾರಿ. ತಡವಾಯ್ತು. ನಂಗೋಸ್ಕರ ಕಾಯ್ಬೇಡಿ.... ನಂಗೆ ಮುಜುಗರ ಆಗುತ್ತೆ"

"ಆ ಅರ್ಥದಲ್ಲಿ ಹೇಳಲಿಲ್ಲ. ನಾನು ನಿಮ್ಹತ್ರ ಸ್ವಲ್ಪ ಮಾತಾಡ್ಬೇಕು."

"ಫೋನಿನಲ್ಲೇ ಹೇಳಬಹುದಾಗಿತ್ತಲ್ಲ. ಮನೇಲಿ.... ಯಾರೂ ಇಲ್ವಾ?"

"ಇದಾರೆ, ಅಮ್ಮ ಅಪ್ಪಂಗೆ ಬಡಿಸ್ತಾ ಇದಾರೆ"

"ಒಳ್ಳೇದಾಯ್ತು. ನಿಮ್ಮ ತಂದೆ, ನಂಗೋಸ್ಕರ ಊಟಕ್ಕೆ ಕಾಯುವುದು ಬೇಡ. ನನ್ನಿಂದ ಅವರಿಗೆ ತೊಂದರೆ ಆಗುತ್ತೆ"

"ಬನ್ನಿ ಒಳಕ್ಕೆ" ಎಂದು ಕರೆದಳು.

"ನನಗೆ ನಿತ್ಯವೂ ನಿಮ್ಮ ಮನೆಗೆ ಊಟಕ್ಕೆ ಬರೋಕ್ಕೆ ಸಂಕೋಚವಾಗುತ್ತೆ. ಸುಜಯಾ ನೀವು ತಪ್ಪು ತಿಳಿದುಕೊಳ್ಳದೇ ಇದ್ರೇ...."

"ಮತ್ತೆ ಅದೇ ಮಾತಾಡ್ತೀರಲ್ಲ. ನಮಗೆ ಯಾವ ತೊಂದರೆಯೂ ಇಲ್ಲ.... ನೀವು ಸಂಕೋಚಪಟ್ಟುಕೊಳ್ಳುವುದು ಬೇಡ... ಅಥವಾ ನಿಮಗೆ ಕಷ್ಟ ಅನ್ನಿಸಿದರೆ ಹೇಳಿ, ನಾನು ಕ್ಯಾರಿಯರ್ ತಂದು ಕೊಡ್ತೀನಿ"

"ಛೇ. ಛೇ.... ನೀವು ನಂಗೋಸ್ಕರ.... ? ಅದೆಲ್ಲಾ ಬೇಡ."

"ಯಾಕೆ? ಕ್ಯಾರಿಯರ್ ಊಟ ಸೇರಲ್ವಾ?"

"ಹಾಗಲ್ಲ, ಇದೆಲ್ಲ ಸ್ವಲ್ಪ.... ಒಂಥರಾ... ಮುಜುಗರ ಆಗುತ್ತೆ. ನಾನೇನು ನಿಮ್ಮ ಸಂಬಂಧಿ ಅಲ್ಲ ಅಥವಾ ಪರಿಚಯದವನೂ ಅಲ್ಲ"

"ಪರಿಚಯವೂ ಇದೆ. ಸಂಬಂಧವೂ ಇದೆ. ಇನ್ನೂ ಅದು ಹೆಚ್ಚು ಬೆಳೆಯ ಬಹುದು. ಆ ಮಾತೆಲ್ಲಾ ಈಗ್ಯಾಕೆ? ಅಪ್ಪಂದು ಊಟ ಮುಗಿದಿರಬಹುದು ಬನ್ನಿ"

"ಹಾಗಾದ್ರೆ ನಾನೊಂದು ಮಾತು ಕೇಳಿದ್ರೆ ನೀವು ಬೇಸರ ಪಟ್ಕೋಬಾರದು"

"ಇಲ್ಲ. ಕೇಳಿ"

"ನಾಳೆ ಸಾಯಂಕಾಲ, ನಾನೊಂದು ಕಡೆಗೆ ಹೋಗ್ಬೇಕು. ನನ್ನ ಜೊತೆಗೆ ನೀವೂ ಬರ್ತೀರಾ!"

"ಎಲ್ಲಿಗೆ ಅಂತ ಕೇಳ್ಬಹುದಾ?"

"ಈಗ್ಲೇ ಹೇಳೋದು ಬೇಡಾಂತ ಅನ್ನಿಸ್ತಿದೆ. ಬಂದ ಮೇಲೆ ನಿಮಗೇ ಗೊತ್ತಾಗುತ್ತೆ...."

"ನಾನು ಬರಲೇಬೇಕು ಅಂತ ಇದ್ರೆ ಖಂಡಿತವಾಗಿಯೂ ಬರ್ತೀನಿ...."

"ಥ್ಯಾಂಕ್ಸ್" ಇಬ್ಬರೂ ಒಳ ಬಂದರು. ಪ್ರಭಾವತಿ ಇಬ್ಬರನ್ನೂ ಕೂರಿಸಿ ಬಡಿಸಿದಳು. ಊಟದ ನಂತರ ಒಂದು ಗಳಿಗೆ ಕುಳಿತಿದ್ದು ಬಳಿಕ ಹೊರಟ. ಅವನ ಹಿಂದೆಯೇ ಬಂದವಳು ಏನನ್ನೋ ಕೇಳಲು ತವಕಿಸುತ್ತಿರುವಂತೆ ತೋರಿತು.

ಅವಳ ಚಡಪಡಿಕೆಯನ್ನು ಕಡಿಮೆ ಮಾಡುವವನಂತೆ, "ನಾಳೆ ಸಾಯಂಕಾಲ ನಾನು ಇಲ್ಲಿಗೇ ಬಂದು ನಿಮ್ಮನ್ನು ಕರ್ಕೊಂಡು ಹೋಗ್ತೀನಿ" ಎಂದ.

"ಬೇಡ, ಬೇಡ...." ಎಂದಳು ಸರ್‍ರನೆ

"ಓ.ಕೇ ಹಾಗಾದ್ರೆ ನಮ್ಮ ಮನೆಗೆ ಬಂದ್ಬಿಡಿ.... ಅಲ್ಲಿಂದ ಹೋಗೋಣ"

"ನಿಮ್ಮನೆಗಾ....? ಬೇಡ...." ಅವಳ ಧ್ವನಿ ಬದಲಾಗಿತ್ತು.

"ಹಾಗಾದ್ರೆ ನ್ಯಾಷನಲ್ ಕಾಲೇಜ್ ಸರ್ಕಲ್ ಹತ್ರ ಕಾಯ್ತಾ ಇರ್ತೀನಿ ಬಂದ್ಬಿಡಿ"

"ಸರಿ ಬರ್ತೀನಿ.... ಗುಡ್ ನೈಟ್" ಎಂದು ಹೇಳಿ ಸ್ಕೂಟರನ್ನೇರಿದ.

* * *

ಕಾರಿನಲ್ಲಿ ಕುಳಿತು, ಸುಜಯಳಿಗಾಗಿ ಕಾಯುತ್ತಾ ಇದ್ದವನು, ಅವಳು ಆಟೋದಲ್ಲಿ ಬಂದು ಇಳಿದು, ಅತ್ತಿತ್ತ ನೋಡುತ್ತಿರುವುದನ್ನು ಗಮನಿಸಿ, ಅವಳ ಬಳಿಗೆ ಬಂದು ಕರೆದ.

"ಕಾರಿನಲ್ಲಿ ಬಂದಿದೀರಾ! ಅದಕ್ಕೇ ನಂಗೆ ಗೊತ್ತಾಗ್ಲಿಲ್ಲ."

"ಹೂಂ" ಎನ್ನುತ್ತಾ ಕಾರಿನ ಬಾಗಿಲನ್ನು ತೆಗೆದು ಮೊದಲು ಯಾವುದಾದರೂ ಕೆಫೆಗೆ ಹೋಗಿ ಕಾಫಿ ತಿಂಡಿ ತಗೋಳೋಣ್ವಾ!" ನಾನು ಆಫೀಸ್ನಿಂದ ಸೀದಾ ಇಲ್ಲಿಗೇ ಬಂದೆ"

"ಹೇಳಿದ್ರೆ ನಾನೇ ತಿಂಡಿ, ಕಾಫಿಯನ್ನು ಮನೆಯಿಂದ ತರ್ತಿದ್ದೆ" ಎಂದಳು. ಅವನು ಬಾಯ್ತುಂಬಾ ನಕ್ಕ.

"ಪರವಾಗಿಲ್ಲ ಬಿಡಿ.... ಈ ದಿನ ಟ್ರೀಟ್ ನನ್ನದಾಗಿರಲಿ" ಇಬ್ಬರೂ ಸಮೀಪದಲ್ಲಿದ್ದ ಕಾಮತ್ ಹೋಟೆಲ್ಲಿಗೆ ಬಂದರು

"ಒಂದಿನ ಲಾಲ್ ಬಾಗ್‌ಗೆ ಹೋಗೋಣ. ಎಷ್ಟೋ ವರ್ಷಗಳಾಯ್ತು ಹೋಗಿ" ಅಂದ

"ಹೌದು. ಅದಕ್ಕೆಲ್ಲ ಸಮಯವೇ ಸಿಗುವುದಿಲ್ಲ. ಚಿಕ್ಕವರಾಗಿದ್ದಾಗ ಹಠ ಮಾಡಿ, ಲಾಲ್‌ಬಾಗ್, ಕಬ್ಬನ್ ಪಾರ್ಕ್, ಸಿನಿಮಾ ಅದೂ ಇದೂ ಅಂತ ಶನಿವಾರ, ಭಾನುವಾರ ತಿರುಗುತ್ತಿದ್ದೆವು" ಅವಳೆಂದಳು.

"ಬಾಲ್ಯ ಎಷ್ಟು ಖುಷಿಯಾಗಿರುತ್ತೆ ಅಲ್ವಾ! ದೊಡ್ಡವರಾಗ್ತಾ ಏನೇನೋ ಸಮಸ್ಯೆ... ಜವಾಬ್ದಾರಿ... ಮತ್ತೆ ಬಾಲ್ಯಕ್ಕೆ ಹಿಂತಿರುಗಿ ಹೋದರೆ ಎಷ್ಟು ಚೆನ್ನಾಗಿರುತ್ತೆ ಅಲ್ವಾ?" ಅವನ ಮಾತಿಗೆ ಅವಳು ಮುಗುಳ್ನಕ್ಕಳು. ಅವಳ ನಗುಮುಖವನ್ನೇ ನೋಡಿದ. ತನ್ನ ಬಳಿ ಇರುವ ಅವಳ ಫೋಟೋ ನೆನಪಿಗೆ ಬಂತು. ತಾನು ಆ ವಿಷಯವನ್ನು ತಿಳಿಸಿದರೆ ಇವಳಿಗೇನನ್ನಿಸಬಹುದು?" ಅವಳು ನಾಚಿಕೊಂಡಂತೆ ಕಂಡಿತು.

ಸುಮ್ಮನೇ ಎಂಬಂತೆ, ತಾನು ಹಿಂದಿನ ದಿನ ಹೂವನ್ನು ಕೊಂಡು ತಂದು ಆ ಭಾವಚಿತ್ರಗಳಿಗೆ ಹಾಕಿದ ವಿಷಯವನ್ನು ತಿಳಿಸಿದ. ಅವಳ ಮುಖ ಬಿಗಿಯಾಯಿತು.

"ಎಷ್ಟೋ ವರ್ಷಗಳಿಂದ ಆ ಫೋಟೋಗಳು ಗೋಡೆಯ ಮೇಲಿದೆ. ಆದರೆ ಒಂದು ದಿನವಾದರೂ ಹತ್ತಿರದಿಂದ ನೋಡಿರಲಿಲ್ಲ. ಹೂಹಾರ ಹಾಕುವಾಗ, ಅವುಗಳನ್ನು ಹತ್ತಿರದಿಂದ ನೋಡಿದೆ. ಆದರೆ ಏನೂ ವಿಶೇಷ ಅನ್ನಿಸಲಿಲ್ಲ....." ಎಂದ. ಅವಳು ಗಂಭೀರಳಾದಳು.

"ಆ ಫೋಟೋದಲ್ಲಿರುವವರು, ನಮ್ಮ ಅಜ್ಜ ಅಜ್ಜಿಯರಂತೆ... ನನಗೆ ಅವರನ್ನು

ನೋಡಿದ ನೆನಪು ಸಹ ಇಲ್ಲ" ಅಷ್ಟರಲ್ಲಿ ವೈಟರ್ ಬಿಸಿ ಬಿಸಿ ಮಸಾಲೆ ದೋಸೆಯನ್ನು ತಂದಿಟ್ಟ. ಇಬ್ಬರ ಗಮನವೂ ಅತ್ತ ಸರಿತು. ಅವಳು ನಿರಾಳವಾದಳು.

"ಈಗ ದೋಸೆ ಯಾಕೆ? ಹೆವಿ ಆಗುಲ್ವಾ?"

"ರಾತ್ರಿ ಊಟ ಮಾಡದಿದ್ದರಾಯ್ತು...."

"ಹಾಗಾದ್ರೆ ರಾತ್ರಿಯ ಊಟವನ್ನು ತಪ್ಪಿಸಿಕೊಳ್ಳುವ ಉಪಾಯಾನಾ?"

"ಹಾಗೇನಿಲ್ಲ. ಆರಿ ಹೋಗುತ್ತೆ. ತಿನ್ನಿ" ಇಬ್ಬರೂ ದೋಸೆಗೆ ಕೈ ಹಾಕಿದರು. ವೈಟರ್ ಕಾಫಿಯನ್ನು ತಂದಿತ್ತ. "ಸಿಹಿ ಏನಾದ್ರೂ ತರಿಸೋಣ್ವಾ?"

"ಏನೂ ಬೇಡ. ಕಾಫಿ ಸಾಕು" ಕಾಫಿಯನ್ನು ಕುಡಿದು, ಇಬ್ಬರೂ ಹೊರಟರು.

"ದೋಸೆ ಕೊಡಿಸೋಕೆ ನನ್ನನ್ನು ಕರ್‍ಕೊಂಡು ಬಂದನೇ" ಎಂದುಕೊಂಡು, "ಮಸಾಲೆ ದೋಸೆ ತುಂಬಾ ಚೆನ್ನಾಗಿತ್ತು. ಮಹೇಶ್.... ಥ್ಯಾಂಕ್ಸ್" ಎಂದಳು. ಮಂದ ಹಾಸ ಬೀರಿ ಕಾರನ್ನು ಓಡಿಸಿದ. ಕ್ಲಿನಿಕ್ ಬಳಿ ಕಾರು ನಿಂತಿತು. ಅಲ್ಲಿಂದ ಕಾಣುತ್ತಿದ್ದ ಬೋರ್ಡನ್ನು ತೋರಿಸಿದ.

"ಅಲ್ಲಿ ಕಾಣುತ್ತಿಲ್ವ ಕ್ಲಿನಿಕ್.... ನಾವೀಗ ಅಲ್ಲಿಗೆ ಹೋಗಬೇಕು"

"ಯಾಕೆ? ಯಾರಿಗೆ?"

"ನಮ್ಮಿಬ್ಬರಿಗೆ.... ಅಪಾಯಿಂಟ್ಮೆಂಟ್ ಇದೆ...."

"ನಾನು ಬರುಲ್ಲ. ನೀವು ಮುಂಚೇನೇ ಯಾಕೆ ಹೇಳ್ಲಿಲ್ಲ?" ಕೋಪದಿಂದ ಕೇಳಿದಳು.

"ಪ್ಲೀಸ್, ಸಿಟ್ಟು ಮಾಡ್ಕೋಬೇಡಿ. ಹೇಳಿದ್ರೆ ನೀವು ಖಂಡಿತಾ ಬರ್ತಿರಲಿಲ್ಲ. ನಂಗೊತ್ತು, ನಂಗೋಸ್ಕರ ಬನ್ನಿ"

"ನಿಮಗೆ ಏನೂ ಪ್ರಾಬ್ಲಂ ಇರುವಂತಿಲ್ಲ. ನಿಜ ಹೇಳಿ. ನನ್ನನ್ನು ಕರ್‍ಕೊಂಡು ಬರುವ ಪ್ಲಾನ್ ಇತ್ತು, ಅಲ್ವಾ...! ನನ್ನ ಒಪ್ಪಿಗೆ ಇಲ್ಲದೇ ಸೈಕಿಯಾಟ್ರಿಸ್ಟ್ ಹತ್ರ ಕರ್‍ಕೊಂಡು ಬರುವ ಅಧಿಕಾರ ನಿಮಗಿಲ್ಲ" ಮತ್ತೆ ಸಿಟ್ಟಿನಿಂದ ನುಡಿದಳು.

"ಹೌದು ನನಗೆ ಯಾವ ಅಧಿಕಾರವೂ ಈಗ ಇಲ್ಲ. ಆದರೆ, ನೀವು ಒಪ್ಪಿದರೆ ನನಗೆ ಬೇಗ ಆ ಅಧಿಕಾರ ಸಿಗುತ್ತೆ...."

"ಅಂದ್ರೆ..."

"ನಾನು ನಿಮ್ಮನ್ನು ಪ್ರೀತಿಸ್ತಿದೀನಿ. ನೀವು ನನಗೆ ಮೆಚ್ಚುಗೆಯಾಗಿದ್ದೀರಿ. ನನಗೆ ನಿಮ್ಮನ್ನು ಮದುವೆಯಾಗುವ ಆಸೆ ಇದೆ...."

"ವಾಟ್ ಡೂ ಯೂ ಮೀನ್...." ಹೆಬ್ಬೆರಳನ್ನು ಎತ್ತಿ ಕೇಳಿದಳು.

"ಅರ್ಥವಾಗದ್ದು ಏನಿಲ್ಲ. ಎಲ್ಲಾ ಸಿಂಪಲ್.... ನಿಮಗೆ ನಾನು ಇಷ್ಟವಿಲ್ಲದಿದ್ರೆ ನಾನು ಖಂಡಿತಾ ಬಲವಂತ ಮಾಡುವುದಿಲ್ಲ. ನಾವಿಬ್ರೂ ಸ್ನೇಹಿತರಾಗಿರೋಣ... ಒಬ್ಬ ಸ್ನೇಹಿತನಾಗಿ ನಾನು ನಿಮ್ಮ ಒಳ್ಳೆಯದನ್ನು ಬಯಸುತ್ತೇನೆ....."

"ನನಗೆ ಈಗ ಏನಾಗಿದೆ?"

"ಏನಾಗಿದೆ ಅಂತ ತಿಳಕೊಳ್ಳೋಕೇ ಈಗ ಡಾಕ್ಟರ್ ಹತ್ರ ಹೋಗ್ಬೇಕು"

"ನಂಗೆ ಇದೆಲ್ಲ ಹಿಡಿಸೋಲ್ಲ.... ನಾನು ಬರುಲ್ಲ"

"ಓ.... ಕೇ ನಡೀರಿ. ನಾನು ನಿಮ್ಮನ್ನು ನಿಮ್ಮ ಮನೆಗೆ ಬಿಡ್ತೀನಿ.....ಇವತ್ತಿಂದ ನಾನೂ ನಿಮ್ಮ ಮನೆಗೆ ಊಟಕ್ಕೆ ಬರುಲ್ಲ"

"ಅದಕ್ಕೂ ಇದಕ್ಕೂ ಎಲ್ಲಿಯ ಸಂಬಂಧ?"

"ಸಂಬಂಧ ಮುಂದುವರೆದರೆ ಸಿಗುತ್ತೆ. ಇಲ್ಲದಿದ್ರೆ ಎಲ್ಲಾ ಇಲ್ಲಿಗೇ ಮುಗಿಯುತ್ತೆ"

"ನೀವು ಹೀಗೆ ಬ್ಲ್ಯಾಕ್ ಮೇಲ್ ಮಾಡ್ತೀರಿ ಅಂತ ಎಂದುಕೊಂಡಿರಲಿಲ್ಲ ನಾನು."

"ಇದು ಬ್ಲ್ಯಾಕ್ ಮೇಲ್ ಅಲ್ಲ. ರಿಕ್ವೆಸ್ಟ್. ನಾನು ನಿಮಗೆ ಹತ್ತಿರದ ಸಂಬಂಧಿ ಅಲ್ಲ. ಆದ್ರೂ ನಾನು ನಿಮ್ಮ ಮನೆಗೆ ಊಟಕ್ಕೆ ಬರ್ತೀನಿ. ಕಾರಣ ಏನೂಂತ ಗೊತ್ತಾ? ಐ ಲೈಕ್ ಯೂ.... ಈ ನೆವದಲ್ಲಿ ನಾನು ದಿನಾ ನಿಮ್ಮನ್ನು ನೋಡಬಹುದು. ಮಾತಾಡಬಹುದು ಅಂತ ಬರ್ತೀನಿ... ಅದು ನಿಮಗೆ ಬೇಡವಾದ್ರೆ ಹೇಳ್ಬಿಡಿ... ಒಂದೆರಡು ದಿನ ಮನಸ್ಸಿಗೆ ತುಂಬಾ ಬೇಸರವಾಗಬಹುದು. ಕ್ರಮೇಣ ಸರಿ ಹೋಗಬಹುದು.... ಒಂದ್ವೇಳೆ ಸರಿ ಹೋಗದಿದ್ರೆ ಈ ಕ್ಲಿನಿಕ್ ಇದೆಯಲ್ಲ... ನನ್ನ ಪ್ರಾಬ್ಲಂಗೆ ನಾನು ಸಲಹೇನ ಪಡೀತೀನಿ."

ಸುಜಯ ತಲೆ ತಗ್ಗಿಸಿದ್ದಳು. ಅವನಿಗೂ ಕೆಡುಕೆನಿಸಿತು. ಕಾರನ್ನು ಸ್ಟಾರ್ಟ್ ಮಾಡಿ, ಸ್ಟಿಯರಿಂಗ್‌ನ್ನು ತಿರುಗಿಸುವುದರಲ್ಲಿದ್ದ....

"ಓಕೆ... ನಿಮ್ಮ ಮನಸ್ಸಂತೋಷಕ್ಕೋಸ್ಕರ ಬರ್ತೀನಿ ನಡೀರಿ"

"ನೋ... ನನ್ನ ಮನಸ್ಸು ಸಂತೋಷವಾಗಿರಬೇಕಾದ್ರೆ, ನಿಮ್ಮ ಮೈಂಡ್ ಕ್ಲಿಯರ್ ಆಗಿರ್ಬೇಕು... ಅಲ್ಲಿ ಯಾವುದೇ ಕನ್‌ಫ್ಯೂಷನ್ ಇರಬಾರದು...."

"ಸರಿ. ನಾನು ಸರಿಯಾಗಿದ್ದೀನಿ. ಏನೂ ಪ್ರಾಬ್ಲಂ ಇಲ್ಲ ಅಂತ ತಿಳಿಯಬೇಕಾಗಿದ್ರೆ ನಾನೀಗ ಡಾಕ್ಟರನ್ನು ನೋಡ್ಲೇಬೇಕು. ಓಕೆ ಅದೂ ಆಗಿ ಹೋಗ್ಲಿ...." ಸುಜಯ ಬೇಜಾರಿನಿಂದ ನುಡಿದಾಗ ಪಿಚ್ಚೆನ್ನಿಸಿತು.

"ಬೇಸರ ಪಟ್ಕೋಬೇಡಿ ಸುಜಯಾ.... ನನ್ನನ್ನು ನಿಮ್ಮ ಆಪ್ತಮಿತ್ರ ಅಂತ ತಿಳ್ಕೊಳ್ಳಿ.... ನಿಮ್ಮ ಒಳ್ಳೇದಕ್ಕೇ ನಾನು ಇದನ್ನು ಮಾಡ್ತಿರೋದು..." ಕಾರಿನ ಸ್ವಿಚ್ಚನ್ನು ಆಫ್ ಮಾಡಿದ. ಇಬ್ಬರೂ ಕೆಳಗಿಳಿದರು. ಕ್ಲಿನಿಕ್ ನ ಒಳಕ್ಕೆ ಬಂದರು.

ಮಹೇಶ, ಡಾಕ್ಟರಿಗೆ ಕೈ ಮುಗಿದು, ಪರಿಚಯದ ನಗೆಯನ್ನು ನಕ್ಕು, ಸುಜಯಳ ಪರಿಚಯವನ್ನು ಮಾಡಿಸಿದ. ಕೂತ್ಕೊಳ್ಳುವಂತೆ ಹೇಳಿ, ಡಾ. ಸತೀಶ, ಸುಜಯಳನ್ನೇ ದೀರ್ಘವಾಗಿ ನೋಡಿದ. ತನ್ನ ಮನದಲ್ಲಿ ನಡೆಯುವುದನ್ನೆಲ್ಲಾ ಬಗೆದು ಬಿಡುವ ನೇನೋ ಅನ್ನುವಂತಿತ್ತು ಅವನ ನೋಟ. ತನ್ನ ನೋಟವನ್ನು ಕೆಳಕ್ಕೆ ಇಳಿಸಿದಳು.

"ಎಸ್.... ನಿಮ್ಮ ಬಗ್ಗೆ ಹೇಳಿ...." ಡಾಕ್ಟರು ಬರೆದುಕೊಳ್ಳಲಾರಂಭಿಸಿದ.

ತನ್ನ ಹೆಸರು, ವಿದ್ಯಾಭ್ಯಾಸ, ಕೆಲಸ ಹಾಗೂ ತನ್ನ ಮನೆಯವರ ವಿಷಯಗಳನ್ನು ಹೇಳಿ, ಮಹೇಶನ ಕಡೆ ನೋಡಿದಳು.

"ಇವರೆದುರಿಗೆ ಹೇಳೋಕೆ ಮುಜುಗರವಾಗುತ್ತೆ ಅಂತ ಅನ್ನೋದಾದ್ರೆ, ಇವರನ್ನ ಹೊರಗೆ ಕಳಿಸೋಣ"

"ಪರವಾಗಿಲ್ಲ ಇವರೇ ನನ್ನನ್ನು ಇಲ್ಲಿಗೆ ಕರ್ಕೊಂಡು ಬಂದದ್ದು. ಇಲ್ದಿದ್ರೆ ನಾನು ಇಲ್ಲಿಗೆ ಬರ್ತಿರಲಿಲ್ಲ" ಒಪ್ಪಿಕೊಂಡಳು.

"ಅವರು ನಿಮ್ಮನ್ನು ಇಲ್ಲಿಗೆ ಕರ್ಕೊಂಡು ಬರೋಕೆ ಏನೋ ಕಾರಣ ಇದೆ ತಾನೇ. ಅದು ನಿಮಗೆ ಗೊತ್ತು ಅಲ್ವಾ! ಅದೇನೂಂತ ತಿಳಿಸ್ತೀರಾ?"

"ಹೂಂ ತಿಳಿಸ್ತೀನಿ. ಸುಮಾರು ಎರಡು ತಿಂಗಳ ಹಿಂದೆ, ನಮಗೆ ಇವರು ಯಾರು ಅಂತ ಪರಿಚಯವೇ ಇರಲಿಲ್ಲ. ಇವರ ಮನೇಲಿ ನನ್ನ ಇಂಟರ್ ವ್ಯೂ ಇತ್ತು. ಇವರ ಅಣ್ಣನಿಗೆ ನನ್ನನ್ನು ಪ್ರಪೋಸ್ ಮಾಡಿದ್ರು. ಆದರೆ ಅವರ ಮನೆಗೆ ಹೋಗುತ್ತಿದ್ದಂತೆ ನನಗೆ ವಿಚಿತ್ರವಾದ ಅನುಭವಗಳಾದವು...."

"ಅಂದ್ರೇ.... ಎನಿ ಎಕ್ಸೈಟ್‌ಮೆಂಟ್...."

"ಇಲ್ಲ. ನನ್ನ ಕಾಲುಗಳು ತಡವರಿಸಿದವು. ಮುಂದೆ ಹೆಜ್ಜೆ ಇಡಲು ಕಷ್ಟವೆನಿಸಿತು. ಗಂಟಲು ಒಣಗಿದಂತಾಯಿತು. ಮೈ ಬೆವರಿತು...."

"ಯಾಕೆ? ಭಯವಾಗುವಂಥಾದ್ದೇನಾದ್ರೂ ಕಾಣಿಸ್ತಾ?"

"ಗೋಡೆಯ ಮೇಲಿದ್ದ ಭಾವಚಿತ್ರಗಳು ನನ್ನನ್ನೇ ನೋಡುತ್ತಿವೆ ಅಂತನ್ನಿಸ್ತು. ಒಂಥರಾ ದಿಗಿಲಾಯ್ತು."

"ಆ ಭಾವಚಿತ್ರಗಳು ಯಾರದ್ದು? ಈ ಮುಂಚೆ ಎಂದಾದ್ರೂ ನೋಡಿದ್ರಾ?"

"ಯಾರೋ ನಂಗೊತ್ತಿಲ್ಲ... ನಾನೆಂದೂ ಅವರನ್ನು ನೋಡಿರಲಿಲ್ಲ"

"ಅವರು ನಮ್ಮ ಅಜ್ಜ ಅಜ್ಜಿಯರು. ಅವರನ್ನೆಂದೂ ನೋಡಿರಲು ಸಾಧ್ಯವೇ ಇಲ್ಲ" ಮಹೇಶನೆಂದ. ಡಾಕ್ಟರು ತಲೆಯಾಡಿಸಿದರು.

"ಎಸ್. ಆಮೇಲೇನಾಯ್ತು....?"

"ಆಮೇಲೆ ಅಲ್ಲಿ ಕೂತಿದಷ್ಟು ಹೊತ್ತೂ ನನ್ನ ಮನಸ್ಸು ಗೊಂದಲದಿಂದ ತುಂಬಿತ್ತು. ಯಾಕೆ ಹಾಗಾಯ್ತು ಅಂತ ನಂಗೆ ಅರ್ಥವಾಗಲಿಲ್ಲ. ಈ ಕಾರಣದಿಂದ ನಾನು ಇವರ ಅಣ್ಣನನ್ನು ಒಪ್ಪಲಿಲ್ಲ. ಆದರೆ ಏನಾಯ್ತು ಅಂತ ನಾನು ಯಾರಿಗೂ ತಿಳಿಸಲಿಲ್ಲ"

"ಅಲ್ಲಿಗೆ ಮುಗಿಯಿತಲ್ಲ. ಮತ್ತೆ ನಿಮಗೆ ಆ ಅನುಭವ ಆಗಲಿಲ್ಲ.... ಅಲ್ವಾ?" ಪ್ರಶ್ನಿಸಿದ.

"ಇಲ್ಲ. ಆ ನಂತರ ನಾನು ಮತ್ತೆ ಒಂದೆರಡು ಬಾರಿ ಆ ಮನೆಗೆ ಹೋಗ ಬೇಕಾಯ್ತು. ಆಗಲೂ ಹಾಗೇ ಅನುಭವಗಳಾದವು"

"ಮತ್ಯಾಕೆ ಆ ಮನೆಗೆ ಹೋದ್ರಿ....? ಕುತೂಹಲದಿಂದ ಹೋಗಿದ್ರಾ?"

"ಇಲ್ಲ. ನನ್ನ ಕಸಿನ್ ದೀಪಾ, ಈಗ ಇವರ ಅತ್ತಿಗೆ.... ಹಾಗಾಗಿ ಹೋಗಬೇಕಾಗಿ ಬಂತು. ಆದರೆ ಆ ನಂತರವೂ ನನಗೆ ಈ ವಿಚಿತ್ರ ಅನುಭವಗಳಾದವು. ಆಶ್ಚರ್ಯ ಏನಂದ್ರೆ, ನನಗೆ ಮಾತ್ರ ಹಾಗೆನ್ನಿಸಿದ್ದು, ದೀಪಳಿಗೆ ಏನೂ ಅನ್ನಿಸಲಿಲ್ಲ"

"ಐ.ಸೀ... ನೀವು ಅವರನ್ನು ಕೇಳಿದ್ರಾ?"

"ಇಲ್ಲ. ನಾನು ಯಾವ ವಿಷಯವನ್ನೂ ಅವಳಿಗೆ ತಿಳಿಸಲಿಲ್ಲ, ಕೇಳಲಿಲ್ಲ" ಆಗಿದ್ದರೆ ಅವಳು ಹೇಳಿರುತ್ತಿದ್ದಳು.

"ಗುಡ್, ಆದರೆ, ಇವರಿಗೆ ಹೇಗೆ ತಿಳಿಯಿತು?" ಮಹೇಶನ ಕಡೆ ನೋಡಿದಳು.

"ಈ ಸಂದರ್ಭದಲ್ಲಿ ನನ್ನ ಮಹೇಶನ ಸ್ನೇಹ ಬೆಳೆಯಿತು. ಎಷ್ಟೋ ವಿಷಯಗಳನ್ನು ಮಾತನಾಡುತ್ತಿದ್ದೆವು. ಅವರ ಮನೆಗೆ ಬರುವಂತೆ ನನ್ನನ್ನು ಕರೆಯುತ್ತಿದ್ದರು....."

"ಒಂದ್ನಿಮಿಷ.... ಮೊದಲ ಬಾರಿ ನೀವು ಇವರ ಮನೆಗೆ ಹೋದಾಗ, ಯಾರದ್ದಾದ್ರೂ ಬಲವಂತವಿತ್ತಾ? ನಿಮಗೆ ಬೇಸರವಿತ್ತಾ?"

"ಹಾಗೇನಿಲ್ಲ. ನಾನು ದಿನೇಶನ ವಿಷಯಗಳನ್ನು ತಿಳಿದುಕೊಂಡು ಅವರ ಫೋಟೋ ನೋಡಿಯೇ ಒಪ್ಪಿಗೆಯನ್ನು ಕೊಟ್ಟಿದ್ದೆ. ಆದರೆ, ಅಲ್ಲಿ ಯಾಕೆ ಹಾಗಾಯ್ತು ಅಂತ ಮಾತ್ರ ತಿಳೀಲಿಲ್ಲ"

"ನಿಮ್ಮ ಅಣ್ಣನ ಫೋಟೋ ತಂದಿದೀರಾ?"

"ಇಲ್ಲ, ಇದಕ್ಕೂ ನಮ್ಮ ಅಣ್ಣನಿಗೂ ಏನೂ ಸಂಬಂಧವಿಲ್ಲ. ಅವನಿಗೆ ಈ ವಿಷಯ ತಿಳಿಯದು"

"ಅಂದ್ರೇ ಇವರು ಒಪ್ಪಿಗೆ ಕೊಡದೇ ಇರುವ ವಿಷಯವೂ ತಿಳಿಯದಾ?"

"ಆ ವಿಷಯ ಗೊತ್ತಾದರೂ, ಅವನು ಇವರ ಮೇಲೆ ಬೇಸರಗೊಳ್ಳಲಿಲ್ಲ. ಗಂಡಿನಷ್ಟೇ ಹೆಣ್ಣಿಗೂ ಸ್ವಾತಂತ್ರ್ಯವಿರುತ್ತೆ ಅನ್ನೋ ಮನೋಭಾವದವನು"

"ನೀವು ಎಂದಾದ್ರೂ ದಿನೇಶನೊಂದಿಗೆ ಯಾವುದಾದ್ರೂ ವಿಷಯ ಮಾತಾಡಿದ್ರಾ?"

"ಇಲ್ಲ, ಅವರ ಪರಿಚಯವೇ ಇರಲಿಲ್ಲ....."

"ಅವರನ್ನು ನೋಡಿದರೆ, ನಿಮಗೆ ಏನನ್ನಿಸುತ್ತೆ...?' ಇದಕ್ಕೆ ಸುಜಯ ಉತ್ತರ ಹೇಳಲಿಲ್ಲ. ಮಹೇಶನ ಕಡೆ ನೋಡಿ ತಲೆಯಾಡಿಸಿದಳು.

"ಈಗ ಅವರು ನಿಮ್ಮ ಕಸಿನ್ ಗಂಡ. ಈಗ ಅವರ ಬಗ್ಗೆ ಏನನ್ನಿಸುತ್ತೆ? ಎನಿ ರಿಗ್ರೆಟ್ಸ್?"

"ಏನೂ ಇಲ್ಲ. ನಾನು ಅವರೊಂದಿಗೆ ಹೆಚ್ಚು ಮಾತನಾಡಿಲ್ಲ"

"ನಿಮಗೆ ಇನ್ಯಾರಾದ್ರೂ ಸ್ನೇಹಿತರಿದಾರಾ? ಐ ಮೀನ್.... ಎನಿ ಲವ್ ಅಫೇರ್" ಸುಜಯಳ ಮುಖ ಕೆಂಪಾಯಿತು. ಮಹೇಶನಿಗೆ ಆಗ ಡಾಕ್ಟರ್ ಮೇಲೆ ಸ್ವಲ್ಪ ಅಸಹನೆ

ಮೂಡಿತು.

"ಇಲ್ಲ ಅಂಥ ಯಾವ ವಿಷಯವೂ ಇಲ್ಲ."

"ಪರವಾಗಿಲ್ಲ. ನಿಜ ಏನೂಂತ ತಿಳಕೋಬೇಕು. ಇವರ ಎದುರಿಗೆ ಹೇಳುಕ್ಕೆ ಕಷ್ಟವೆನಿಸಿದರೆ ಬಿಡಿ. ಇನ್ಯಾವಾಗ್ಲಾದ್ರೂ ತಿಳಿಸಿ...." ಸಮಾಧಾನವಾಗಿ ಹೇಳಿದ.

"ಇಲ್ಲ ಹಾಗೇನೂ ಇಲ್ಲ.... ನಿಜ ಹೇಳಬೇಕೂಂತಂದ್ರೆ ಈಗ ನಾನು ಇವರನ್ನು ಪ್ರೀತಿಸ್ತಿದೀನಿ. ಇದೇ ನನ್ನ ಮೊದಲ ಪ್ರೀತಿ.... ಇವರೇ ನನ್ನ ಮೊದಲ ಪ್ರೇಮಿ" ಮಹೇಶ ಉಬ್ಬಿ ಹೋದ. ಒಲವಿನ ನೋಟ ಅವಳ ಮೇಲೆ ಹರಿಯಿತು. ಅವಳ ಅಂತರಂಗದಲ್ಲೇನಿದೆ ಎಂದು ತಿಳಿದಿತ್ತು. ಅವಳ ಕೆನ್ನೆಗಳು ಕೆಂಗುಲಾಬಿಯಾಗಿದ್ದವು.

ಡಾಕ್ಟರ್ ನಕ್ಕ. "ಈ ವಿಷಯವನ್ನು ಈಗ ನನ್ನೆದುರಿಗೇ ಮೊದಲು ಪ್ರಕಟಗೊಳಿಸ್ತಿದೀರೋ.... ಅಥವಾ ಈ ಮುಂಚೆ ಇವರಿಗೆ ತಿಳಿಸಿದೀರೋ?" ಸುಜಯ ಹೌದೆನ್ನುವಂತೆ ತಲೆಯಾಡಿಸಿದಳು.

"ಈಗ ಇವರನ್ನು ಪ್ರೀತಿಸ್ತಿದೀರಿ ಸರಿ.... ಇವರ ಪರಿಚಯವೂ ಇತ್ತೀಚೆಗೆ ಅಂತ ಹೇಳ್ತಿದೀರಿ.... ಆದರೆ ಈ ಮುಂಚೆ ಇವರನ್ನೆಲ್ಲಾದ್ರೂ ನೋಡಿರಬಹುದು ಅಂತ ಅನ್ನಿಸುತ್ತಾ? ಸ್ವಲ್ಪ ಸರಿಯಾಗಿ ನೆನೆಪಿಸಿಕೊಳ್ಳಿ.... ಯಾವ್ದಾದ್ರೂ ಆಫೀಸ್ನಲ್ಲಿ? ಸ್ಕೂಲ್ನಲ್ಲಿ? ಪಾರ್ಕಿನಲ್ಲಿ.....? ಥಿಯೇಟರಿನಲ್ಲಿ? ಎಲ್ಲಾದ್ರೂ ನೋಡಿರಬಹುದಾ?"

"ಏನೋ ನಂಗೆ ನೆನಪಿಲ್ಲ. ಬಹುಶಃ ನಾವು ಎರಡು ತಿಂಗಳಿಗೆ ಮುಂಚೆ ಎಂದೂ ಭೇಟಿಯಾಗಿರಲಿಲ್ಲ.... ನೋಡಿರಲಿಲ್ಲ...."

"ಅಂದ್ರೇ.... ಈಗ ಕೇವಲ ಎರಡು ತಿಂಗಳೊಳಗೆ ಪರಿಚಯ, ಸ್ನೇಹ, ಪ್ರೀತಿ ಎಲ್ಲಾ ವೆರಿ ಫಾಸ್ಟ್... ವೆರಿ ಫಾಸ್ಟ್... ಪ್ರತಿದಿನ ಮೀಟ್ ಮಾಡ್ತೀರಾ? ಎಲ್ಲೆಲ್ಲಿ ತಿರುಗಾಡ್ತೀರಿ....?" ಈ ಪ್ರಶ್ನೆ ಸುಜಯಳಿಗೆ ಇಷ್ಟವಾಗಲಿಲ್ಲ.

"ಇಲ್ಲ. ನಾವು ಹೆಚ್ಚಿಗೆ ಮೀಟ್ ಮಾಡಿಲ್ಲ. ಆಗ ಈಗ ಫೋನ್‌ನಲ್ಲಿ ಮಾತಾಡ್ತೀವಿ. ನಾವು ನಾವೇ ಎಲ್ಲಿಯೂ ಸುತ್ತಾಡಿಲ್ಲ. ತಿರುಗಾಡಿಲ್ಲ. ಇದೇ ಮೊದಲ ಸಾರಿ, ನಾನೊಬ್ಬಳೇ ಇವರ ಜೊತೆ ಬಂದಿರುವುದು" ಸ್ವಲ್ಪ ಗಡುಸಾಗಿ ನುಡಿದಳು.

"ಓಕೇ... ಓಕೇ ಸಿಟ್ಟಾಗಬೇಡಿ. ಪ್ರೀತಿಯೇನೋ ಸರಿ.... ಸಹಜವಾದದ್ದು. ಹೀಗೇ ಬರೀ ಪ್ರೀತಿಯಲ್ಲೇ ಮುಂದುವರೆಯುತ್ತೀರೋ? ಮದುವೆ ಮಾಡಿಕೊಂಡು ಗಂಡ ಹೆಂಡತಿಯರಾಗುವ ಐಡಿಯಾನೂ ಇದೆಯೋ?" ಮಹೇಶನಿಗೂ ಈ ಪ್ರಶ್ನೆ ಹಿಡಿಸಲಿಲ್ಲ. ತಾನು ಸುಜಯಳನ್ನು ಕರೆತಂದು ತಪ್ಪು ಮಾಡಿದೆನೇನೋ ಅಂತನ್ನಿಸಿತ್ತು.

"ಸದ್ಯಕ್ಕೆ ಮದುವೆ ಬಗ್ಗೆ ನಾನು ಯೋಚಿಸಿಲ್ಲ...."

"ಯಾವಾಗ ಯೋಚಿಸ್ತೀರಿ? ಲೈಫ್ ಲಾಂಗ್ ಹೀಗೇ ಇರೋಕಾಗುತ್ತಾ...?"

"ಮದುವೆ ಅಂದ್ರೆ ಬರೀ ನಮ್ಮಿಬ್ಬರ ಪ್ರಶ್ನೆ ಅಲ್ಲ...."

"ಅಂದ್ರೇ ಮನೆಯವರಿಗೆ ಈ ವಿಷಯ ತಿಳಿಸಿಲ್ಲ. ಯಾಕೆ ಭಯಾನ? ಪ್ರೀತಿಸು

ವವರು ಭಯ ಪಡಬಾರದು. ಆದಷ್ಟು ಬೇಗ ಮದುವೆಯಾಗಿ ಬಿಡಬೇಕು" ಉತ್ತಮ ಸಲಹೆಯನ್ನು ನೀಡಿದ.

"ಹಾಗಲ್ಲ... ಮದುವೆ ಆದರೆ, ನಾನು ಇವರ ಮನೆಗೆ ಹೋಗಬೇಕಲ್ಲ" ಅವಳು ಕಷ್ಟ ಪಟ್ಟು ಹೇಳಿದಳು.

"ಹೌದು, ಹೋಗಲೇಬೇಕು. ಅದನ್ನು ತಪ್ಪಿಸೋಕೆ ಸಾಧ್ಯವಿಲ್ಲ. ಧೈರ್ಯವಾಗಿ ಮದುವೆಯಾಗಿ, ಖಂಡಿತಾ ಎಲ್ಲಾ ಸರಿ ಹೋಗುತ್ತದೆ"

"ಒಂದು ವೇಳೆ ಆ ವಿಚಿತ್ರ ಅನುಭವಗಳು ಮತ್ತೆ ಮರುಕಳಿಸಿದರೆ?" ಅನುಮಾನ ವನ್ನು ವ್ಯಕ್ತ ಪಡಿಸಿದಳು.

"ನಿಮ್ಮನ್ನು ಪ್ರೀತಿಸುವ ಪತಿ ನಿಮ್ಮ ಜೊತೆಯಲ್ಲಿರುವಾಗ ನಿಮಗೆ ಯಾವ ಭಯ? ಯಾವ ಭಯವೂ ಇರಬಾರದು. ಧೈರ್ಯವಾಗಿರಿ. ನಿಮ್ಮನ್ನು ನೋಡಿದರೆ ನಿಮಗೆ ಯಾವ ತೊಂದರೆಯೂ ಇಲ್ಲ. ನಿಮ್ಮದೇ ಏನೋ ಕಲ್ಪನೆ ಅಂತ ಅನ್ನಿಸುತ್ತೆ.... ಅಥವಾ ನಿಮ್ಮ ತಂದೆ ತಾಯಿಯರ ಮನಸ್ಸಿಗೆ ನೋವಾಗದಿರಲಿ ಅಂತ ನಿಮಗೆ ನೀವು ಸುಳ್ಳು ಹೇಳಿಕೊಂಡಿರಬಹುದು ಅಂತ ಹೇಳ್ತೀನಿ. ಏನಂತೀರಿ?"

"ಖಂಡಿತಾ ಕಲ್ಪನೆ ಅಲ್ಲ ಅಥವಾ ಸುಳ್ಳು ಹೇಳುವ ಪ್ರಮೇಯವೇನೂ ನನಗಿಲ್ಲ. ಐದಾರು ಬಾರಿ ನನಗೆ ಆ ಅನುಭವಗಳಾಗಿವೆ. ಮನೆಯಿಂದ ಹೊರಗೆ ಇದ್ದಾಗ ನನಗೆ ಏನೂ ಅನ್ನಿಸುವುದಿಲ್ಲ. ಹೊಸ್ತಿಲು ದಾಟಿ ಒಳಗೆ ಹೋದಾಗ, ಆ ಭಾವಚಿತ್ರಗಳ ಕಡೆ ನೋಡಿದಾಗ....ಉಸಿರು ಕಟ್ಟಿದ ಅನುಭವವಾಗುತ್ತೆ. ಹೊರಕ್ಕೆ ಬಂದರೆ ಸಾಕೆನ್ನಿಸುತ್ತೆ"

"ಓಕೇ. ನಿಮಗೆ ಏನೇನು ಅನ್ನಿಸುತ್ತೋ ಅದನ್ನೆಲ್ಲ ಒಂದು ಹಾಳೆಯಲ್ಲಿ ವಿವರ ವಾಗಿ ಬರೆದುಕೊಡಿ. ಹಾಗೇ ನೀವು ಎಂಟರ್ ಆಗುವ ಸ್ಥಳದಲ್ಲಿ ಏನೇನು ವಸ್ತುಗಳಿವೆ. ಎಲ್ಲೆಲ್ಲಿ ಹೇಗಿವೆ ಅಂತಲೂ ವಿವರ ಬರೆದು ಕೊಡಿ. ನಾನು ಸ್ಟಡೀ ಮಾಡಿ, ನಂತರ ನಿಮಗೆ ಸೂಕ್ತ ಸಲಹೆಯನ್ನು ಕೊಡ್ತೀನಿ"

"ಈಗಲೆ ಬರೆದು ಕೊಡಬೇಕಾ?"

"ಪರವಾಗಿಲ್ಲ. ನಾಳೆ ನಾಡಿದ್ದರಲ್ಲಿ ಬರೆದು ತಂದು ಕೊಡಿ. ತಕ್ಷಣಕ್ಕೆ ಎಷ್ಟೋ ನೆನಪಿಗೆ ಬರುವುದಿಲ್ಲ. ಮತ್ತೆ ಮುಂದಿನ ಸಾರಿ ಇಷ್ಟು ಹೊತ್ತಿಗೇ ಬನ್ನಿ ಮತ್ತೆ ಮಾತನಾಡೋಣ" ಡಾಕ್ಟರು ಹೊರಡಿ ಎಂದು ಸೂಚನೆಯನ್ನು ನೀಡಿದರು. ಇಬ್ಬರೂ 'ಥ್ಯಾಂಕ್ಸ್' ಹೇಳಿ ಹೊರ ಬಂದರು. ಕಾರಿನಲ್ಲಿ ಕುಳಿತರು. ಕಾರು ಚಲಿಸಿತು.

"ನಾನು ಮತ್ತೆ ಇಲ್ಲಿಗೆ ಬರುಲ್ಲ. ಅವರು ಏನೇನೋ ಕೇಳ್ತಾರೆ. ಕೇಳಿದ್ದನ್ನೇ ಕೇಳ್ತಾರೆ. ಉತ್ತರ ಕೊಡೋಕ್ಕೆ ಕಷ್ಟವಾಗುತ್ತೆ" ಸುಜಯ ಎಂದಳು ಮುನಿಸಿನಿಂದ.

"ಹಾಗೆ ಮಾತ್ರ ಮಾಡ್ಬೇಡಿ. ಡಾಕ್ಟರುಗಳು ಪ್ರಶ್ನೆಗಳನ್ನು ಕೇಳದಿದ್ದರೆ, ಅವರಿಗೆ ಸಮಸ್ಯೆ ಅರ್ಥವಾಗುವುದು ಹೇಗೆ? ಅದು ಅವರ ಡ್ಯೂಟಿ. ಅದಕ್ಕೆಲ್ಲ ಬೇಸರ ಪಟ್ಕೊಂಡ್ರೆ ನಮ್ಮ ಪ್ರಾಬ್ಲಂ ಸಾಲ್ವ್ ಆಗುವುದು ಹೇಗೆ?"

"ನನಗೇನೂ ಪ್ರಾಬ್ಲಂ ಇಲ್ಲ. ಪ್ರಾಬ್ಲಂ ಎಲ್ಲಾ ನಿಮ್ಮದೇ...." ಆಕ್ಷೇಪಿಸಿದಳು.

"ಹೌದು ಈಗ ನಿಮ್ಮ ಪ್ರಾಬ್ಲಂ ನನ್ನದು. ಅದಕ್ಕೆ ಪರಿಹಾರ ಹುಡುಕುವ ಜವಾಬ್ದಾರಿಯೂ ನನ್ನದೇ..."

"ನಂಗೋಸ್ಕರ ಇಷ್ಟ್ಯಾಕೆ ಒದ್ದಾಡ್ತೀರಿ ಮಹೇಶ್..."

"ಬಿಕಾಸ್, ನೀವೂ ನನ್ನನ್ನು ಪ್ರೀತಿಸ್ತಿದೀರಲ್ಲ ಅದಕ್ಕೆ..."

"ಹಾಗೆಲ್ಲಿ ಹೇಳ್ದೆ ನಾನು?"

"ಡಾಕ್ಟ್ರ ಮುಂದೆ ಒಪ್ಪಿಕೊಂಡಿದ್ದೀರಲ್ಲ. ಆದ್ರೆ ಒಂದೇ ಬೇಜಾರು... ನಂಗೇ ನೇರವಾಗಿ ಹೇಳಬಹುದಾಗಿತ್ತಲ್ಲ. ನನಗೆಂದೂ ಹೇಳಲಿಲ್ಲ.... ಸರೀನಾ?"

"ನೀವು ಕೇಳಲಿಲ್ಲ; ನಾನು ಹೇಳಲಿಲ್ಲ. ಓಕೇ ಬಿಡಿ. ಹೇಳಿದ್ರೂ, ತೊಡಕುಗಳಿವೆಯಲ್ಲ... ನಾವು ಹೀಗೇ ಸ್ನೇಹಿತರಾಗಿಯೇ ಇದ್ದು ಬಿಡೋಣ ಬಹುಷಃ ಅದಕ್ಕೇ ಹೇಳಲಿಲ್ಲ."

"ನೋ. ಈ ಸ್ನೇಹವನ್ನು ಗಾಢವಾದ ಸಂಬಂಧಕ್ಕೆ ತಿರುಗಿಸುವ ಆಸೆ ನನ್ನದು. ಆದಷ್ಟು ಬೇಗ ನಾವು ಮದುವೆಯಾಗಿ ಬಿಡೋಣ... ನಿಮಗೆ ಏನೂ ತೊಂದರೆ ಆಗದಂತೆ ನಾನು ನಿಮ್ಮನ್ನು ಚೆನ್ನಾಗಿ ನೋಡಿಕೊಳ್ತೀನಿ. ಪ್ರಾಮಿಸ್"

"ಓಕೇ... ಸದ್ಯಕ್ಕೆ ಮದುವೆಯ ಮಾತು ಬೇಡ ಮಹೇಶ್... "

"ನಿಮಗೋಸ್ಕರ ನಾನು ಎಷ್ಟು ವರ್ಷಗಳು ಬೇಕಾದ್ರೂ ಕಾಯಬಲ್ಲೆ. ಆದರೆ ಕಾಲ ನಿಂತಿರಬೇಕಲ್ಲ. ನಾವು ಮುದುಕರಾಗಿ ಬಿಡ್ತೇವೆ" ಮಹೇಶ ನಕ್ಕ.

"ನೋಡೋಣ. ನಿಮ್ಮ ತಾಯಿಗೆ ನನ್ನ ಮೇಲೆ ಅಸಮಾಧಾನ ಇರಬಹುದು ಅಲ್ವಾ, ನಿಮ್ಮ ಬ್ರದರ್‌ಗೆ, ನಾನು ನಿಮ್ಮನ್ನು ಮದುವೆಯಾಗುವುದು ಇಷ್ಟವಾಗದೇ ಹೋಗಬಹುದು. ದೀಪಾಳಿಗೆ ನಾನು ಅವಳ ಮೈದುನನ ಹೆಂಡತಿಯಾಗಿ ಬರುವುದು ಸರಿ ಹೋಗದಿರಬಹುದು?"

"ಇದಕ್ಕೆ ನೀವ್ಯಾಕೆ ತಲೆ ಕೆಡಿಸಿಕೊಳ್ತೀರಿ. ಆಪ್ಟಿಮಿಸ್ಟಿಕ್ ಆಗಿರಬೇಕು... ಎಲ್ಲಾ ಸರಿ ಹೋಗುತ್ತೆ ಅಂತ ಚಿಂತಿಸಬೇಕು"

"ಯೋಚನೆ ಆಗದೇ ಇರುತ್ತಾ ಮಹೇಶ್. ಇವರುಗಳೆಲ್ಲರ ಜೊತೆ ಇರಬೇಕಾದವಳು ನಾನು. ಅವರುಗಳ ಆದರಣೆ, ಅನಾದರಣೆಗೆ ಗುರಿಯಾಗೋಳು ನಾನು ತಾನೇ. ನಮ್ಮಿಬ್ಬರ ಮದುವೆಗೆ ಅವರುಗಳ ಒಪ್ಪಿಗೆ ಇದೆಯಾ ಅಂತ ಮೊದಲು ತಿಳ್ಕೋಬೇಕು"

ಮಹೇಶನ ಎದೆ ಕುಗ್ಗಿತು. ಆದರೂ ನುಡಿದ. "ನಮ್ಮಿಬ್ಬರ ಪರಸ್ಪರ ಒಪ್ಪಿಗೆ ಸಾಕು... ನಿಮ್ಮ ಮಾತು ವಿಚಿತ್ರವಾಗಿ ತೋರ್ತಿದೆ. ಯಾರ ಒಪ್ಪಿಗೆಯೂ ಬೇಕಾಗಿಲ್ಲ."

"ವಿಚಿತ್ರ ಯಾಕೆ? ನನಗೆ ಅನ್ನಿಸಿದ್ದನ್ನು ಹೇಳಿದೆ. ಅದಕ್ಕೇ ಹೇಳಿದ್ದು ಮದುವೆಯಾಗುವ ಆಲೋಚನೆಯೇ ಬೇಡ. ಹಾಗೇ ಸ್ನೇಹಿತರಂತೆ ಇದ್ದು ಬಿಡೋಣ

ಅಂತ" ಮಹೇಶ ಗಂಭೀರನಾದ. ಈಗ ಈ ಮಾತುಗಳನ್ನು ಬೆಳೆಸಿದರೆ ಪ್ರಯೋಜನ ವಿಲ್ಲ. ನಿಧಾನವಾಗಿ ಮತ್ತೆಂದಾದ್ರೂ ಆಡಿದರಾಯ್ತು ಅಂತಂದುಕೊಂಡ. ಆದರೂ, ಮದುವೆಯಾಗುವ ಮನಸ್ಸು ಆಗದಂತೆ ಅದೇನು ಕೊರೀತಿದೆ ಇವಳಲ್ಲಿ?" ತನ್ನಲ್ಲೇ ಹೇಳಿಕೊಂಡ.

* * *

ಮಹೇಶ್, ಸುಜಯ ಒಟ್ಟಾಗಿ ಮನೆಗೆ ಬಂದುದನ್ನು ಪ್ರಭಾವತಿ ಗಮನಿಸಿದಳು. ಒಂದು ಗಳಿಗೆ ಅವಳ ಹೃದಯ ತಲ್ಲಣಗೊಂಡಿತು. ಇತ್ತೀಚೆಗಷ್ಟೇ ಪರಿಚಿತನಾದವನು. ಆದರೆ ಮನೆಯವನಂತೆ ಸಲುಗೆಯಿಂದ ಇದ್ದಾನೆ. ಇವರಿಬ್ಬರಲ್ಲೂ ಸ್ನೇಹ ಬೆಳೆದಿದೆ. ಅದು ಎಲ್ಲಿಯವರೆಗೆ ಮುಟ್ಟಿದೆಯೋ? ಇವನಿಗಿಂತ ಒಂದು ಕೈ ಮೇಲಾಗಿದ್ದ ದಿನೇಶನನ್ನು ಇವಳು ಒಪ್ಪಲಿಲ್ಲ. ಇವನನ್ನು ಮೆಚ್ಚಿದ್ದಾಳೆ. ಹಾಗಾದರೆ ಮುಂಚೆನಿಂದಲೂ ಇವರಿಬ್ಬರೂ ಪರಿಚಿತರೇ...? ಆದರೂ ಇವನ ಬಗ್ಗೆ ತನಗೆಂದೂ ತನ್ನೊಡನೆ ಬಳಿ ಹೇಳಿಲ್ಲ. ಇವನನ್ನು ಮದುವೆಯಾಗ್ತೀನಿ ಅಂತ ಹೇಳಿದರೆ ಅದು ಎಷ್ಟು ಸಮಂಜಸ? ವನಜಮ್ಮ ಏನನ್ನಬಹುದು? ದಿನೇಶನಿಗೆ ಏನನ್ನಿಸಬಹುದು? ಮಹೇಶ ಒಳ್ಳೆಯವನು ನಿಜ. ಆದರೆ, ದಿನೇಶನಷ್ಟು ಸುಂದರನಲ್ಲ, ವಿದ್ಯಾವಂತನೂ ಅಲ್ಲ, ಅವನಷ್ಟು ಸಂಪಾದಿಸುವುದಿಲ್ಲ. ಪೆದ್ದು ಹುಡುಗಿ, ದಿನೇಶನ್ನ ಒಪ್ಪಿ ಮದುವೆಯಾಗಿದ್ದರೆ ಡೆಲ್ಲಿಗೆ ಹಾರಿ ಹೋಗಿ ಹಾಯಾಗಿರಬಹುದಾಗಿತ್ತು. ಅದನ್ನೆಲ್ಲ ಬಿಟ್ಟು ಇವನೊಡನೆ ಸಲುಗೆ ಯಿಂದ ಇದ್ದಾಳೆ. ಸ್ವಲ್ಪವೂ ತಿಳುವಳಿಕೆ ಬೇಡವೇ? ಹೇಳಿದರೆ ಕೋಪಿಸಿಕೊಳ್ಳ ಬಹುದು. ಗಂಡನಿಗೆ ತಿಳಿದರೆ ಮತ್ತೆ ಒಂದು ದೊಡ್ಡ ರಾದ್ಧಾಂತವೇ ಆಗಬಹುದು. ಏನಪ್ಪಾ ಮಾಡೋದು? ಪ್ರಭಾವತಿ ಆತಂಕದಿಂದ ಚಡಪಡಿಸಿದಳು.

ಮಹೇಶ ಹತ್ತಿರದ ನೆಂಟನಲ್ಲ. ದೀಪಾ ಹೇಳಿದಳು ಎನ್ನುವ ಒಂದೇ ಕಾರಣ ದಿಂದ ದಿನವೂ ಊಟಕ್ಕೆ ಬಾ ಅಂತ ಹೇಳಿದ್ದಾಯ್ತು. ಅಡಿಗೆ ಮಾಡಿ ಬಡಿಸೋಕ್ಕೆ ಯಾವ ಕಷ್ಟವೂ ಇಲ್ಲ. ಆದರೆ.... ಈ ಆತಂಕ ಒಂದು ಸೇರಿತಲ್ಲ... ವನಜಮ್ಮ ಬೇಗ ಊರಿಗೆ ವಾಪಸ್ಸು ಬಂದರೆ, ಇದಕ್ಕೆ ಒಂದು ಅಂತ್ಯ ಸಿಗಬಹುದು ಎಂದು ಕೊಂಡಳು. ಇವರಿಬ್ಬರ ಈ ಸ್ನೇಹ, ಸಲುಗೆ ಯಾವ ಹಂತವನ್ನು ಮುಟ್ಟಿರಬಹುದು ಎಂದು ತಿಳಿದುಕೊಳ್ಳುವಂತೆ ಅವರಿಬ್ಬರನ್ನೇ ಆಳವಾಗಿ ಗಮನಿಸಿದಳು. ಆದರೆ ಯಾವುದೇ ಆಕ್ಷೇಪಣೆ, ಆರೋಪವನ್ನು ಹೊರಿಸುವಂತೆ ಕಾಣಿಸಲಿಲ್ಲ. ಆಮೇಲೆ ಮಗಳ ಹತ್ತಿರ ಸಾವಕಾಶವಾಗಿ ಮಾತನಾಡಿದರಾಯ್ತು ಅಂತೆಂದುಕೊಂಡು, ಊಟಕ್ಕೆ ಎಲ್ಲಾ ಸಿದ್ಧತೆಗಳನ್ನು ಮಾಡಿದಳು.

ಊಟ ಮುಗಿಸಿ, ಮನೆಗೆ ಹೊರಟ ಮಹೇಶನನ್ನು ಕಾರಿನ ತನಕ ಬೀಳ್ಕೊಡ ಲೆಂದು ಸುಜಯ ಅವನ ಹಿಂದೆಯೇ ಬಂದಳು "ಬೈದವೇ.... ಡಾಕ್ಟರು ಹೇಳಿದ್ದನ್ನು ಬರೆದಿಡಲು ಮರೆಯಬೇಡಿ" ಮಹೇಶ ನೆನಪಿಸಿದ.

"ಬರೀಲೇ ಬೇಕಾ?" ಬೇಸರದಿಂದ ಕೇಳಿದಳು.

"ಹೂಂ. ಅದೇನು ಕಷ್ಟ! ಪಾಠ ಮಾಡ್ಕೋ ಮುಂಚೆ, ನೋಟ್ಸ್ ಪ್ರಿಪೇರ್ ಮಾಡಿಟ್ಟುಕೊಂಡಿರುಲ್ವಾ... ಹಾಗೇ. ನಿಮಗೇನೇನು ವಿಚಿತ್ರ ಅನುಭವಗಳಾಗುತ್ತವೋ ಅದನ್ನೆಲ್ಲ ಬರೆದಿಡುವಾಗ, ಅದರ ಕಾರಣವೂ ಸಿಗಬಹುದು.... ಒಂಥರಾ ಥ್ರಿಲ್ ಆಗಿರುತ್ತೆ."

" ಏನು ಥ್ರಿಲ್ಲೋ! ಅದ್ಸರಿ, ನಿಮ್ಮ ಮನೇಲಿ, ಎಲ್ಲೆಲ್ಲಿ ಏನೇನಿದೆ ಅಂತ ನಂಗೇನು ಗೊತ್ತು? ನಾನೆಂದೂ ಸರಿಯಾಗಿ ನೋಡಿಲ್ಲವಲ್ಲ."

"ಹಾಗಾದ್ರೆ ಒಂದ್ಕೆಲ್ಸ ಮಾಡಿ ನಾಳೆ ಬರ್ತೀರಾ? ಏನೇನಿದೆ ಅಂತ ನೋಡಿ, ಲಿಸ್ಟು ಬರೆದರಾಯ್ತು"

"ಅದಕ್ಕೋಸ್ಕರ ನಾನು ಬರ್ಬೇಕಾ? ನೀವೇ ನೋಡಿ ಬಿಟ್ಟು ಎಲ್ಲೆಲ್ಲಿ ಏನೇನಿದೆ ಅಂತ ಫೋನಿನಲ್ಲಿ ಹೇಳ್ತೀರಾ? ಬರೆದಿಟ್ಟುಕೊಳ್ತೀನಿ"

"ನಂಗೆ ಸರಿಯಾಗಿ ಗೊತ್ತಿದ್ರೆ ತಾನೇ? ಮಹೇಶ ನಕ್ಕ, "ನಾನು ಮೊದಲು ನೋಡಿ ನಿಮಗೆ ತಿಳಿಸಬೇಕು...." ಎಂದ

"ಅದರ ಬದಲು ನೀವೇ ಒಂದು ಲಿಸ್ಟು ಪ್ರಿಪೇರ್ ಮಾಡಬಹುದಲ್ಲ, ಥ್ರಿಲ್ ಆಗಿರುತ್ತೆ."

"ಗುಡ್ ಐಡಿಯಾ.... ಮಾಡ್ತೀನಿ ಅದಕ್ಕೇನು? ನನಗೂ ಟೈಮ್‌ಪಾಸ್ ಆಗುತ್ತೆ"

"ಹಾಗಾದರೆ ನನಗನ್ನಿಸಿದ್ದನ್ನು ನಾನು ಬರೆದಿಡ್ತೀನಿ.... ನಿಮಗೆ ಕಾಣೋದನ್ನ ನೀವು ಬರೆದಿಡಿ. ಅದೇನು ಅನಲೈಸ್ ಮಾಡ್ತಾನೋ ಮಾಡ್಴ಿ ಆ ಡಾಕ್ಟ್ರು"

"ಅವನು ಅನಲೈಸ್ ಮಾಡೋದು ನಿಮ್ಮ ಪ್ರಾಬ್ಲಂನ ಸಾಲ್ವ್ ಮಾಡೋಕೆ. ಅದು ನಿಮ್ಮ ಒಳ್ಳೇದಕ್ಕೆ. ನೀವು ತಾಳ್ಮೆ ಕಳೆದುಕೊಂಡರೆ ಹೇಗೆ? ಅವನ ಮೇಲ್ಯಾಕೆ ಕೋಪ?"

"ಮತ್ತಿನ್ನೇನು? ನನ್ನ ಪಾಡಿಗೆ ನಾನು ಹಾಯಾಗಿದ್ದೆ... ಬೇಜಾರಾಗಲ್ವಾ? ಈ ಪ್ರಾಬ್ಲಂಗೆ ಪರಿಹಾರ ಇದೆಯೋ ಇಲ್ವೋ ಯಾರಿ ಗೊತ್ತು? ಭಯ ಆಗುಲ್ವಾ ಮಹೇಶ್?"

"ಭಯ ಪಟ್ಕೊಂಡ್ರೆ ಏನು ಪ್ರಯೋಜನ?" ವಿಶ್ವಾಸದಿಂದ ಅವಳ ಕೈಗಳನ್ನು ಹಿಡಿದ. ಎಲ್ಲಾ ಸಮಸ್ಯೆಗಳಿಗೂ ಒಂದು ಪರಿಹಾರವಿರುತ್ತೆ. ಅದನ್ನು ನಾವುಗಳು ಕಂಡು ಹಿಡಿಯಬೇಕು. ನಾನು ನಿಮ್ಮ ಜೊತೆಗಿದ್ದೀನಿ ಧೈರ್ಯವಾಗಿರಿ" ಸುಜಯ ಮೆಲ್ಲನೆ ಕೈಗಳನ್ನು ಬಿಡಿಸಿಕೊಂಡಳು. ಅವಳು ಲಘುವಾಗಿ ಕಂಪಿಸಿದಳು.

"ಓಕೇ. ಗುಡ್ ನೈಟ್.... ಬೈ" ಎಂದು ಕೈಯಾಡಿಸಿ, ಮಹೇಶ ಕಾರನ್ನೇರಿದ. ಕಾರು ಅತ್ತ ಮರೆಯಾದರೂ, ಸುಜಯ ಹಾಗೇ ನಿಂತಿದ್ದಳು. ಮುಂಬಾಗಿಲಿನಲ್ಲಿ ನಿಂತು ಪ್ರಭಾವತಿ ಮಗಳನ್ನು ಕರೆದಳು.

"ಕತ್ತಲೇಲಿ ಒಬ್ಬಳೇ ಯಾಕೆ ನಿಂತಿದ್ದೀಯಾ? ಒಳಗೆ ಬಾ" ಧ್ವನಿ ಗಡುಸಾಗಿತ್ತು.

"ಗಾಳಿ ಹಿತವಾಗಿ ಬೀಸ್ತಿತ್ತು. ಹಾಗೇ ನಿಂತಿದ್ದೆ" ಎನ್ನುತ್ತಾ ಒಳ ಬಂದವಳನ್ನೇ ಆಳವಾಗಿ ನೋಡಿದಳು. ಆದರೆ ಅಲ್ಲಿ ಯಾವ ಭಾವೋದ್ವೇಗವೂ ಇಲ್ಲದುದನ್ನು ಗಮನಿಸಿದಳು. ಮನಸ್ಸು ನಿರಾಳಗೊಂಡಿತು. ಈಗಲೇ ಯಾವ ಮಾತೂ ಬೇಡವೆಂದು ಕೊಂಡಳು.

* * *

ಮನೆಯೊಳಗೆ ಬಂದೊಡನೆ, ಹೊಸ್ತಿಲ ಬಳಿಯೇ ನಿಂತು ಮನೆಯೊಳಗೊಮ್ಮೆ ಎಲ್ಲಾ ಕಡೆ ಅವಲೋಕಿಸಿದ. ವೆರಾಂಡಾದ ಗೋಡೆಯ ಮೇಲೆ ಹಾಕಿದ್ದ ಕ್ಯಾಲೆಂಡರು ಗಳು, ಯಾವುದೋ ಕಲಾಕೃತಿಯ ಫೋಟೋ, ಒಂದೆರಡು ವಾಲ್ ಪ್ಲೇಟ್‌ಗಳು, ಮೂಲೆಯ ಟೀಪಾಯ್ ಮೇಲಿದ್ದ ಹೂದಾನಿ, ಅದರಲ್ಲಿ ಒಣಗಿದ್ದ ಹೂಗೊಂಚಲು, ಟೀಪಾಯ್ ಮೇಲೆ ಹರಡಿದ್ದ ಹಳೆಯ ದಿನಪತ್ರಿಕೆಗಳು, ವಾರ ಪತ್ರಿಕೆಗಳು.... ಕಿಟಕಿಗೆ ಹಾಕಿದ್ದ ಕರ್ಟನ್, ಅದರ ಕಲರ್, ಅದರ ಡಿಸೈನ್ ಎಲ್ಲವೂ ಕಂಡು ಬಂತು. ವೆರಾಂಡಾದಿಂದ ಹಾಲಿಗೆ ಹೋಗುವ ಬಾಗಿಲಿನ ಎದುರಿಗೆ ಹಾಕಿದ್ದ ಅಜ್ಜ-ಅಜ್ಜಿಯರ ಫೋಟೋ.... ಗೋಡೆಯ ಮೇಲೆ ಅಲಂಕಾರ ಪ್ರಾಯರಾಗಿ ವಿಜೃಂಭಿಸುತ್ತಿದ್ದ ಅವರಿಬ್ಬರ ಮುಖವನ್ನು ವಿಶೇಷವಾಗಿ ನೋಡಿದ. ಮುಖದಲ್ಲಿ ಯಾವ ವಿಚಿತ್ರ ಕಳೆಯೂ ಇರಲಿಲ್ಲ. ಹೆದರಿಸುವಂತೆಯೂ ಇರಲಿಲ್ಲ. ಶಾಂತರೂಪ ದಲ್ಲಿ ಅಲ್ಲಿಂದಲೇ ಮನೆಯನ್ನೆಲ್ಲ ನೋಡುತ್ತಿರುವಂತೆ ಅನ್ನಿಸುತ್ತಿತ್ತು. ಅವರಿಬ್ಬರ ದೃಷ್ಟಿ ಮನೆಯನ್ನೆಲ್ಲಾ ಅಳೆಯುವಂತೆ ಇತ್ತು. ಇವನಿಗೆ ಏನೂ ಅನ್ನಿಸಲಿಲ್ಲ. ಆದರೆ ಈ ಮುಂಚೆ ಹೀಗೆ ಎಂದೂ ಇಷ್ಟು ಆಳವಾಗಿ ತಾನು ಆ ಫೋಟೋಗಳನ್ನು ನೋಡಿರಲಿಲ್ಲವೆಂದುಕೊಂಡ.

ಹಾಲಿನಲ್ಲಿ ಹಾಕಿದ್ದ ಸೋಫಾ ಸೆಟ್ಟು, ಟೇಬಲ್, ಟಿ.ವಿ ಸೆಟ್ಟು, ಫೋನು, ದಿವಾನ, ಅದರ ಮೇಲೆ ಹಾಸು, ಇತ್ಯಾದಿ ಇತ್ಯಾದಿ ಎಲ್ಲವನ್ನೂ ಒಂದೊಂದಾಗಿ ನೋಡಿದ. ವಿಶೇಷವಾಗಿ ಗಮನಿಸದಿದ್ದರೂ, ಪ್ರತಿನಿತ್ಯವೂ ತಾನು ಕಾಣುವ, ಉಪಯೋಗಿಸುವ ವಸ್ತುಗಳೇ. ಯಾವುದೂ ಎದ್ದು ಕುಣಿಯುತ್ತಿರಲಿಲ್ಲ. ಮಾಯವಾಗು ತ್ತಿರಲಿಲ್ಲ. ಡಾಕ್ಟರು ಕೇಳಿದ್ದ ಪ್ರಶ್ನೆಗಳ ಸರಮಾಲೆ ನೆನಪಿಗೆ ಬಂತು.

ತನಗಿಂತ ಸುಂದರ ಹಾಗೂ ವಿದ್ಯಾವಂತನಾಗಿರುವ ದಿನೇಶನನ್ನು ಸುಜಯ ಒಪ್ಪಲಿಲ್ಲ. ನನ್ನನ್ನು ಹೇಗೆ ಮೆಚ್ಚಿದಳು? ಡಾಕ್ಟರು ಕೇಳಿದಂತೆ, ಈ ಮುಂಚೆ ಸುಜಯ ನನ್ನನ್ನು ಎಲ್ಲಾದರೂ ನೋಡಿ, ನನ್ನ ಬಗ್ಗೆ ವಿಚಾರಿಸಿಕೊಂಡು, ಮನ ಸೋತಿರ ಬಹುದೇ.... ಗೋಡೆಯ ಮೇಲಿದ್ದ ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಂಡು ಗಲ್ಲವನ್ನು ಸವರಿಕೊಂಡ. ಮಂದಹಾಸ ಮಿನುಗಿತು. ಇರಬಹುದು ಅಂತೆನ್ನಿಸಿತು. ಎದೆಯೊಳಗೆ ಸಂತಸದ ಅಲೆಗಳು ಎದ್ದವು.

ನಿದ್ದೆ ಬರುವವರೆಗೂ, ವೆರಾಂಡ ಹಾಗೂ ಹಾಲಿನಲ್ಲಿದ್ದ ವಸ್ತುಗಳ ವಿವರ ಬರೆದಿಡಲಾರಂಭಿಸಿದ. ಪಟ್ಟಿ ಮಾರುದ್ದ ಬೆಳೆಯಿತು. ಇನ್ನು ಬಾಕಿ ಏನಿಲ್ಲ ಅಂತ ಅಂದುಕೊಂಡು, ಒಳಗಿನ ರೂಮಿಗೆ ಬಂದ. ಆಗ ಆ ದಿನ ತಾನು ಟಿ.ವಿಯನ್ನು ನೋಡಲೇ ಇಲ್ಲವೆನ್ನುವುದು ನೆನಪಿಗೆ ಬಂತು. ಆದರೆ ಈ ದಿನ ಮಹತ್ತರವಾದ ಕೆಲಸವನ್ನೊಂದು ಮಾಡಿದ್ದೇನೆಂಬ ಸಂತೃಪ್ತಿ ಮೂಡಿತು. ಈ ಪಟ್ಟಿಯನ್ನು ನೋಡಿದರೆ ನನ್ನ ಪ್ರೀತಿ ಎಷ್ಟು ಗಾಢವಾದುದೆಂದು ಅವಳಿಗೆ ಖಂಡಿತಾ ತಿಳಿಯುತ್ತದೆ ಎಂದು ತನಗೆ ತಾನೇ ಶಹಭಾಸ್ ಹೇಳಿಕೊಂಡು ಹಾಸಿಗೆಯ ಮೇಲೆ ಉರುಳಿದ. ಕೈಗಳು ಅಭ್ಯಾಸ ಬಲದಿಂದ ದಿಂಬಿನಡಿಗೆ ಸರಿದವು. ಸುಜಯಳ ಭಾವಚಿತ್ರವನ್ನು ಹೊರ ತೆಗೆದು ತನ್ನ ತುಟಿಗಳ ಬಳಿಗೆ ಒಯ್ದು...." ನನಗೆ ಹೊಟ್ಟೆ ತುಂಬಾ ಊಟವನ್ನು ಹಾಕುತ್ತಿದೀಯ.... ಹಾಗೇ ಕಣ್ತುಂಬಾ ನಿದ್ದೆಯನ್ನು ದಯಪಾಲಿಸು...." ರಾಗವಾಗಿ ಹೇಳಿಕೊಂಡು ನಿದ್ರಿಸಲು ಯತ್ನಿಸಿದ.

ಏನೋ ಧೊಪ್ಪನೆ ಬಿದ್ದ ಸದ್ದಿಗೆ ನಿದ್ದೆ ಹತ್ತಿದ್ದವನಿಗೆ ಕೂಡಲೇ ಎಚ್ಚರವಾಯಿತು. ತೆರೆದಿದ್ದ ಕಿಟಕಿಯಿಂದ ಒಳಗೆ ಹಾರಿದ ಬೆಕ್ಕೊಂದು, ಮಿಯಾಂ... ಎನ್ನುತ್ತಾ ರೂಮಿನಿಂದ ಒಳಗೆಲ್ಲೋ ಸೇರಿ ಮಾಯವಾಯಿತು. ತುಥ್ ಈ ಬೆಕ್ಕು... ನಿದ್ದೆಯನ್ನು ಕೆಡಿಸಿತು ಎಂದು ಬೈದುಕೊಳ್ಳುವಷ್ಟರಲ್ಲಿ ಉಗ್ರಾಣದಲ್ಲಿ ಡಬ್ಬಿಗಳು ಉರುಳಿದ ಸದ್ದು ಕೇಳಿಸಿತು.... ಬೆಕ್ಕು ಇಲಿಯ ಸರಸ ಪ್ರಾರಂಭವಾಯ್ತು, ಎಂದುಕೊಂಡು ಗೋಡೆಯ ಕಡೆಗೆ ತಿರುಗಿದ. ವನಜಮ್ಮ ಮನೇಲಿಲ್ಲ ಅಂತ ತಿಳಿದ ಕೂಡಲೇ ಇಲಿಗಳು ಎಲ್ಲೆಂದರಲ್ಲಿ ಓಡಾಡುತ್ತಿವೆ. ಅದನ್ನು ಹಿಡಿಯಲು ಈ ಬೆಕ್ಕು ಬಂದಿದೆ....ಇಲಿ ಸಿಕ್ಕದಿದ್ದರೆ, ಬೆಕ್ಕು ಅಡಿಗೆ ಮನೆಗೆ ಹೋಗಿ ಕಣ್ಣು ಮುಚ್ಚಿ ಹಾಲು ಕುಡಿಯುತ್ತದೆ. ಈ ಬೆಕ್ಕನ್ನು ಓಡಿಸಲು ನಾಯಿಯೊಂದನ್ನು ಸಾಕಬೇಕಾಗುತ್ತದೆ. ಆ ನಾಯಿಗೆ ಹಾಲು, ಬ್ರೆಡ್ಡು, ಬಿಸ್ಕತ್ತು... ಇದನ್ನೆಲ್ಲಾ ನೋಡಿಕೊಳ್ಳಲು ಒಬ್ಬಳು ಹೆಂಡತಿ... ಆಮೇಲೆ ಈ ಬ್ರಹ್ಮಚಾರಿಯ ಕತೆ, ಸನ್ಯಾಸಿಯ ಕತೆಯಂತಾಗುತ್ತದೆ.... ಈ ನೆವದಲ್ಲಿ ಮುದ್ದಿನ ಮಡದಿಯೊಬ್ಬಳು ಮನವನ್ನು, ಮನೆಯನ್ನು ತುಂಬುತ್ತಾಳೆ.... ಹ್ಞಾಂ. ಸುಜಯಾ ನಿದ್ದೆ ಬಂತಾ......? ಅಥವಾ ನನ್ನ ಹಾಗೆ ಎಚ್ಚರವಾಗಿದೀಯೋ? ಮತ್ತೆ ದಡಬಡ ಸದ್ದು ಕೇಳಿಸಿದಾಗ, ಗಡಿಯಾರದ ಕಡೆ ನೋಡಿದ. ಇನ್ನೂ ನಾಲ್ಕು ಗಂಟೆ.... ತನಗೆ ಬೆಳಗಾಗಲು ಇನ್ನೂ ಸಾಕಷ್ಟು ಸಮಯವಿದೆ.... ಎಂದುಕೊಂಡು ಮೈತುಂಬಾ ಹೊದ್ದುಕೊಂಡು ಮಲಗಿದ.

ಬೆಳಿಗ್ಗೆ ಎದ್ದ ಮೇಲೆ ಅಡಿಗೆ ಮನೆಯ ಕಡೆ ಬಂದಾಗ ಉಗ್ರಾಣದ ಬಾಗಿಲು ತೆಗೆದಿದ್ದು ಕಂಡು ಬೆಕ್ಕು ಇಲಿಗಳ ನೆನಪಾಯಿತು. ರಾತ್ರಿ ಮಲಗುವ ಮೊದಲು ಬಾಗಿಲನ್ನು ಹಾಕದೇ ಇದ್ದುದು ನನ್ನ ತಪ್ಪು.... ಎಷ್ಟು ಇಲಿಗಳು ಸೇರಿಕೊಂಡಿವೆಯೋ, ಎಷ್ಟು ಮರಿಗಳು ಸೃಷ್ಟಿಯಾಗಿವೆಯೋ? ಒಳಗೆ ಇಣುಕಿದ. ಅಡ್ಡಾದಿಡ್ಡಿಯಾಗಿ

ಖಾಲಿ ಡಬ್ಬಗಳು ಉರುಳಿ ಬಿದ್ದಿದ್ದವು.... ಹುಶ್.... ಹುಶ್... ಎಂದು ಇಲಿಗಳನ್ನು ಓಡಿಸಲು ನೋಡಿದ. ಸಂದಿಯಲ್ಲೆಲ್ಲೋ ಮಲಗಿದ್ದ ಬೆಕ್ಕು ಇತ್ತ ಜಿಗಿಯಿತು. ಇವನು ಹೆದರಿ ಎರಡು ಹೆಜ್ಜೆ ಹಿಂದಕ್ಕೆ ಹಾರಿದ. 'ಮಿಯಾವ್' ಎನ್ನುತ್ತಾ ಬೆಕ್ಕು ಇವನನ್ನು ದಾಟಿಕೊಂಡು ಎತ್ತಲೋ ಹೋಯಿತು. ಮತ್ತೆ ಬೆಕ್ಕು ಒಳಗೆ ಹೋಗದಿರಲಿ ಎಂದುಕೊಂಡು ಬಾಗಿಲನ್ನು ಎಳೆದು ಹೊರಗಿನಿಂದ ಚಿಲುಕ ಹಾಕಿ ಭದ್ರಪಡಿಸಿದ.

* * *

ಆಫೀಸಿಗೆ ಹೊರಡಲು ಸಿದ್ಧನಾಗುತ್ತಿದ್ದ ಫೋನು ರಿಂಗಾಯಿತು. ಸುಜಯ ಮಾತನಾಡಿದ್ದಳು. ಒಲುಮೆ ಚಿಮ್ಮಿತು. ಉತ್ಸಾಹದಿಂದ ಕೇಳಿದ.

"ಅರೇ! ನೀವಾ? ಯಾಕೆ ರಾತ್ರಿ ನಿದ್ದೆ ಬರ್ಲಿಲ್ವಾ...?"

"ಹೂಂ. ಚೆನ್ನಾಗಿ ನಿದ್ದೆ ಬಂತು. ಯಾಕೆ? ಯಾಕೆ ಹೀಗೆ ಕೇಳ್ತಿದೀರಿ?"

"ಅಥವಾ, ನೋಟ್ಸ್ ಪ್ರಿಪೇರ್ ಮಾಡೋ ಕೆಲಸದಲ್ಲಿ ಜಾಗರಣೆ ಮಾಡಿದ್ರೋ ಅಂತ ಕೇಳ್ದೆ."

"ಯಾವ ನೋಟ್ಸ್?"

"ಇದೇನ್ರೀ ಹೀಗೆ ಕೇಳ್ತೀರಿ? ನಾನು ನನ್ನ ಹೋಂವರ್ಕ್, ಮುಗಿಸಿದ್ದಾಯ್ತು. ಬೇಕಾದ್ರೆ ಓದ್ಲಾ? ಒಂದೂ ಬಿಟ್ಟಿಲ್ಲ, ಪರ್ಫೆಕ್ಟ್."

"ಓ.... ಅದಾ? ನಂಗೆ ಮರ್ತೇ ಹೋಗಿತ್ತು"

"ಸುಳ್ಳು ಹೇಳ್ಬೇಡಿ. ನಾನು ಬರೆದಿದೀನೋ ಇಲ್ವೋ ಅಂತ ತಿಳ್ಕೊಳ್ಳೇಕೆ ತಾನೇ ನೀವು ಫೋನು ಮಾಡಿರೋದು"

"ಅಲ್ಲ...." ಅವಳು ಸ್ವಲ್ಪ ಗಡುಸಾಗಿ ನುಡಿದಾಗ ಅವನು ಬೆಚ್ಚಿದ. ಇವತ್ತು ಸಾಯಂಕಾಲ ಸ್ಕೂಲ್ನಲ್ಲಿ ಏನೋ ಒಂದು ಮೀಟಿಂಗ್ ಇದೆ. ಬರೋದು ಸ್ವಲ್ಪ ಲೇಟಾಗಬಹುದು. ಅದನ್ನು ತಿಳಿಸೋಕೆ ಮಾಡಿದೆ"

"ಅಷ್ಟೇ ತಾನೇ ಪರವಾಗಿಲ್ಲ ಬಿಡಿ. ಇವತ್ತು ನಾನು ಬರುಲ್ಲ ಬಿಡಿ"

"ಹಾಗೆ ಮಾಡ್ಬೇಡಿ. ನಿಮ್ಮ ಪಾಡಿಗೆ ನೀವು ಬಂದು ಊಟ ಮಾಡಿ...."

"ನೀವೇ ಇಲ್ದಿದ್ರೆ ನಂಗೆ ಹೇಗೆ ಊಟ ಸೇರುತ್ತೆ ಮೇಡಂ. ಸಂಕೋಚ ಆಗುತ್ತೆ"

"ಅದೆಲ್ಲಾ ಏನೂ ಇಲ್ಲ. ನೀವು ಬರದಿದ್ರೆ ಅಮ್ಮಂಗೆ ಬೇಸರ ಆಗುತ್ತೆ"

"ನಿಮಗೆ?" ಅವಳು ಉತ್ತರಿಸಲಿಲ್ಲ. ಇವನು ನಕ್ಕ. ಅತ್ತಲಿಂದ ಫೋನನ್ನಿಟ್ಟ ಸದ್ದು ಕೇಳಿಸಿತು. ತಾನು ಬರೆದಿಟ್ಟುಕೊಂಡಿದ್ದನ್ನು ಮತ್ತೊಮ್ಮೆ ನೋಡಿ, ತಲೆದೂಗಿ, ತನ್ನ ಬ್ರೀಫ್ ಕೇಸ್‌ನೊಳಕ್ಕೆ ಸೇರಿಸಿದ. ಓದುತ್ತಿದ್ದ ಕಾಲದಲ್ಲಿ ಪರೀಕ್ಷೆಗೂ ಇಷ್ಟು ಸೀರಿಯಸ್ ಆಗಿ ಪ್ರಿಪೇರ್ ಆಗಿರಲಿಲ್ಲವೆನ್ನುವುದು ನೆನಪಿಗೆ ಬಂದು, ನಗುಬಂತು. ಆಗ ಅದೊಂದು ಕಾಲ, ಈಗ ಇದೊಂದು ಕಾಲ. ಆಗ ನನ್ನ ಪರೀಕ್ಷೆ. ಈಗ ಇವಳಿಗೆ ಪರೀಕ್ಷೆ. ಆದರೆ ಫಲಿತಾಂಶವನ್ನು ನಾನು ತಿಳಿದುಕೊಳ್ಳಬೇಕು. ಅದಕ್ಕೆ

ಶ್ರಮ ಪಡುತ್ತಿದ್ದೀನಿ ಎಂದು ತನಗೆ ತಾನೇ ಹೇಳಿಕೊಂಡು, ಮನೆಯಿಂದ ಹೊರಟ.

* * *

ಸಾಯಂಕಾಲ ಹೆಚ್ಚು ಹೊತ್ತು ಆಫೀಸ್ನಲ್ಲೇ ಕಳೆದು ನಿಧಾನವಾಗಿ ಹೊರಟ. ಈಗಲೇ ಅವಳ ಮನೆಗೆ ಹೋದರೆ, ಅವಳಿರುವುದಿಲ್ಲ. ಸ್ಕೂಲಿನ ಬಳಿಗೇ ಹೋದರೇ.... ಎಂದುಕೊಂಡ.... ಅಷ್ಟರಲ್ಲೇ ಒಬ್ಬ ಕಲೀಗ್ ಎದುರಾದ. ಹತ್ತು ನಿಮಿಷ ಮಾತನಾಡು ವಷ್ಟರಲ್ಲಿ ಆ ಸ್ನೇಹಿತ, "ನಾನಿನ್ನು ಬರ್ತೀನಿ ಮಹೇಶ್.... ಸ್ವಲ್ಪ ಮಾರ್ಕೆಟ್ಟಿಗೆ ಹೋಗ್ಬೇಕು. ನಾಳೆ ನನ್ನ ಹೆಂಡ್ತಿ ಏನೋ ಪೂಜೆ ಮಾಡ್ತಾಳೆ. ಹೂವು ಹಣ್ಣು ತಗೊಂಡು ಹೋಗ್ಬೇಕು" ಅವನು ನಕ್ಕಾಗ ಮಹೇಶ್ ಚುರುಕಾದ. ಅವನತ್ತ ಹೋದ ಮೇಲೆ ಇವನೂ ತನ್ನ ಕಾರನ್ನು ಮಾರ್ಕೆಟ್ಟಿನ ಕಡೆಗೆ ತಿರುಗಿಸಿದ.

"ದಿನಾ ರಾತ್ರಿ ಊಟಕ್ಕೆ, ಬರಿಗೈಯಲ್ಲಿ ಹೋಗ್ತೀನಿ. ಇವತ್ತು ಒಂದಿಷ್ಟು ಹೂವು ಹಣ್ಣು ಹಂಪಲನ್ನು ತಗೊಂಡು ಹೋಗ್ತೀನಿ. ಅವರುಗಳಿಗೆ ಸಂತೋಷವಾಗುತ್ತೆ" ಅಂತಂದುಕೊಂಡು, ಎರಡು ಮೂರು ಬಗೆಯ ಹಣ್ಣುಗಳನ್ನು ಖರೀದಿಸಿದ. ಎರಡು ಮೊಳ ಹೂವನ್ನು ಕೊಂಡ. ನೂರು ರೂಪಾಯಿ ಖರ್ಚಾಗಿತ್ತು. ಆದರೆ ಆಗಲಿ ದಿನವೂ ತಗೊಂಡು ಹೋಗ್ತಿಲ್ಲವಲ್ಲ" ಎಂದುಕೊಂಡು ಅವಳ ಮನೆಯ ಕಡೆಗೆ ಕಾರನ್ನು ಓಡಿಸಿದ.

ಇವನು ಕಾರನ್ನು ನಿಲ್ಲಿಸುವುದಕ್ಕೂ ಸುಜಯ ಆಟೋದಿಂದ ಇಳಿಯುವುದಕ್ಕೂ ಸರಿ ಹೋಯಿತು. ರಿಕ್ಷಾದವನಿಗೆ ಹಣವನ್ನು ಕೊಟ್ಟು ಕಾರಿನ ಬಳಿಗೆ ಬಂದಳು.

"ನೀವೂ ಈಗ ಬರ್ತಾ ಇದೀರಿ... ನಂಗೆ ಹೇಳಿದ್ರೆ, ಸ್ಕೂಲಿಗೆ ಬಂದು ನಿಮ್ಮನ್ನು ಕರ್ಕೊಂಡು ಬರ್ತಿದ್ದೆ" ನುಡಿದ.

"ಪರವಾಗಿಲ್ಲ. ಒಳ್ಳೇದೇ ಆಯ್ತು. ನೀವ್ಯಾಕೆ ಅಲ್ಲಿಗೆ ಬರ್ಬೇಕು?"

"ಯಾಕೆ? ನಾನು ಸ್ಕೂಲಿಗೆ ಬರಬಾರದು ಅಂತ ಏನಾದ್ರೂ ಕಂಡೀಷನ್ ಇದೆಯಾ?"

"ಹಾಗೇನಿಲ್ಲ. ನಿಮಗ್ಯಾಕೆ ತೊಂದ್ರೆ ಅಂತ"

"ನಿಮಗಾಗಿ ನಾನು ತಗೊಳ್ಳುವ ತೊಂದ್ರೆ, ತೊಂದ್ರೆಯೇ ಅಲ್ಲ. ಮೇಡಂ ಅದು ನನ್ನ ಪ್ಲೆಷರ್" ಅವಳು ಅವನ ಮಾತಿಗೆ ನಕ್ಕಂತೆ ಮಾಡಿದಳು.

"ಒಳಗೆ ಹೋಗೋಣ. ಈಗಾಗ್ಲೇ ಲೇಟಾಗಿದೆ"

"ಒಂದ್ನಿಮಿಷ.... ಇದು ನಾನು ಬರೆದು ರೆಡಿ ಮಾಡಿರುವ ಲಿಸ್ಟ್" ಎನ್ನುತ್ತಾ ಹಾಳೆಗಳನ್ನು ಅವಳ ಕೈಗಿತ್ತ.

"ಅಂತೂ, ನೀವು ನನ್ನನ್ನು ಹಾಯಾಗಿರುಕ್ಕೆ ಬಿಡುಲ್ಲ. ಆ ಸೈಕಿಯಾಟ್ರಿಸ್ಟ್ ಕೊಡುವ ಸರ್ಟಿಫಿಕೇಟ್ ಬೇಕೇ ಬೇಕು ಅಲ್ವಾ?" ಎನ್ನುತ್ತಾ ಅದರ ಮೇಲೆ ಕಣ್ಣಾಡಿಸಿ, "ಅದೇನಿದು ಇಷ್ಟೊಂದು ಹಾಳೆಗಳು? ಸಾಕಾ?" ಎನ್ನುತ್ತಾ ಹಾಳೆಗಳನ್ನು ತನ್ನ

ಹ್ಯಾಂಡ್ ಬ್ಯಾಗ್‌ನೊಳಗೆ ಇರಿಸಿಕೊಂಡಳು. ಅವರಿಬ್ಬರೂ ಒಟ್ಟಾಗಿ ಒಳಗೆ ಬಂದುದನ್ನು ಕಂಡು ಪ್ರಭಾವತಿ ಹುಬ್ಬೇರಿಸಿದಳು.

ಸ್ಕೂಲ್ನಲ್ಲಿ ಮೀಟಿಂಗ್ ಇದೆ ಅಂತ ನನ್ಹತ್ರ ಸುಳ್ಳು ಹೇಳಿ, ಇವನೊಡನೆ ತಿರುಗಾಡಲು ಹೋಗಿರಬಹುದೇ...? ಎಲ್ಲೆಲ್ಲಿ ತಿರುಗಾಡಿದರೋ... ಇದು ಬರೀ ಸ್ನೇಹವಲ್ಲ, ಇನ್ನೂ ಏನೋ ಇದೆ. ಏನಾದರೂ ಎಡವಟ್ಟಾಗುವ ಮೊದಲು ಇತ್ಯರ್ಥ ಮಾಡಬೇಕೆಂದುಕೊಂಡಳು. ಅಷ್ಟರಲ್ಲಿ ಮುಂಬಾಗಿಲ ಬೆಲ್ ಆಯಿತು.

ಬಾಗಿಲಲ್ಲಿ ನಿಂತಿದ್ದ ಆಟೋರಿಕ್ಷಾದ ಡ್ರೈವರ್ರು....ಮೇಡಂ ಇದನ್ನು ಆಟೋದಲ್ಲೇ ಬಿಟ್ಟು ಬಂದಿದ್ರು ಅಂತ ಹೇಳಿ, ಒಂದು ಲೇಡೀಸ್ ಛತ್ರಿಯನ್ನು ಹಾಗೂ ಒಂದು ದೊಡ್ಡ ಪಾಲಿಥಿನ್ ಚೀಲವನ್ನು ಆಕೆಯ ಎದುರಿಗೆ ಹಿಡಿದ.

"ಸುಜೀ.... ಬಾ ಇಲ್ಲಿ" ಸುಜಯಾ ಬಂದು ತಾಯಿಯ ಪಕ್ಕ ನಿಂತಳು.

"ಮೇಡಂ.... ಇದು ನಿಮ್ಮದೇ ತಾನೇ?"

"ಹ್ಞಾಂ.... ಹೌದು. ಆಟೋದಲ್ಲೇ ಬಿಟ್ಟು ಬಿಟ್ಟಿದ್ನಾ...? ಥ್ಯಾಂಕ್ಸಪ್ಪಾ"

"ಪರವಾಗಿಲ್ಲ. ನಾನು ಬರ್ತೀನಿ ಮೇಡಂ" ಡ್ರೈವರ್ರು ಹೊರಟು ಹೋದ. ಪ್ರಭಾವತಿ ಸ್ವಲ್ಪ ಮಟ್ಟಿಗೆ ಸಮಾಧಾನಗೊಂಡಳು. ತನ್ನ ಪಾಡಿಗೆ ತಾನು ಅಡುಗೆ ಮನೆಯ ಕಡೆಗೆ ನಡೆದಳು.

"ಎಂದೂ ಹೀಗಾಗಿರಲಿಲ್ಲ" ಸುಜಯ ಮಹೇಶನ ಕಡೆ ಬೆಪ್ಪು ನಗೆ ನಕ್ಕಳು.

"ನೀವ್ಯಾಕೆ ಒಂದು ಸ್ಕೂಟೀ ಓಡಿಸ್ಬಾರ್ದು?" ಸಲಹೆ ನೀಡಿದ.

"ನಾನು ತಗೊಂಡರೆ, ನನ್ನ ತಂಗೀಗೂ ಕೊಡಿಸಬೇಕಾಗುತ್ತದೆ" ನಕ್ಕಳು.

* * *

ಯಾವುದೋ ಇಂಗ್ಲಿಷ್ ಮೂವಿಯನ್ನು ನೋಡುತ್ತಾ ಕುಳಿತಿದ್ದ. ಬೆಕ್ಕು ಒಳಗೆ ಧುಮುಕಿದ ಸದ್ದು ಕೇಳಿಸಿ ಬೆಚ್ಚಿಬಿದ್ದ. ಬೆಕ್ಕು ಮಿಯಾಂ.... ಎನ್ನುತ್ತಾ ಉಗ್ರಾಣದ ಕಡೆಗೆ ನಡೆಯಿತು. ಒಳಗಿದ್ದ ಇಲಿಗಳಿಗೆ ಬೆಕ್ಕು ಬಂದಿದ್ದು ತಿಳಿಯಿತು. ಅವಿತಿಟ್ಟು ಕೊಳ್ಳುವ ಸಡಗರದಲ್ಲಿ ದಡ ಬಡ ಸದ್ದನ್ನು ಮಾಡಿದವು. ಬೆಕ್ಕು ಹಾಕಿದ್ದ ಬಾಗಿಲನ್ನು ಪರಪರನೆ ಕೆರೆದು ತನ್ನ ಅಸಹನೆಯನ್ನು ವ್ಯಕ್ತಪಡಿಸಿತು. ಎಷ್ಟೋ ಹೊತ್ತಿನ ನಂತರ ಕೆರೆಯುವ ಆ ಸದ್ದು ನಿಂತಿತು. "ಎಲಾ ಬೆಕ್ಕೇ ಎಷ್ಟು ಗಲಾಟೆ ಮಾಡ್ತೀಯ?" ತನ್ನಲ್ಲೇ ಬೈದುಕೊಂಡ. ಚಿಕ್ಕ ವಯಸ್ಸಿನಲ್ಲಿ ತಾನು ಓದಿದ್ದ ಪದ್ಯ ನೆನಪಿಗೆ ಬಂತು..... "ಬೆಕ್ಕೇ ಬೆಕ್ಕೇ ಮುದ್ದಿನ ಸೊಕ್ಕೇ ಇಲ್ಲಿಗೆ ಏಕೆ ಬಂದಿದ್ದೆ? ಕೆರೆದರೂ ಇಲ್ಲ ಮಿಯಾಂ ಎಂದರೂ ಇಲ್ಲ ನಾ ಬಾಗಿಲ ಹಾಕಿದ್ದೆ..." ಎಂದು ಪದ ಜೋಡಣೆ ಮಾಡಿ ಅದೇ ಧಾಟಿಯಲ್ಲಿ ಹಾಡಿಕೊಂಡ. ಅರೆ ವ್ಹಾ.... ಎಷ್ಟು ಚೆನ್ನಾಗಿ ಬಂತು ಸಾಲುಗಳು! ಸುಲಭವಾಗಿ ರಚಿಸಿ ಬಿಟ್ಟೆನಲ್ಲ ಎಂದು ತನಗೆ ತಾನೇ ಹೆಮ್ಮೆಯಿಂದ ಹೇಳಿಕೊಂಡು, ಮರೆತು ಹೋದೀತೆಂದು ಒಂದು ಖಾಲಿ ಹಾಳೆಯ ಮೇಲೆ ಗೀಚಿದ. ಈ ಪದ್ಯವನ್ನು

ಸುಜಯಳ ಎದುರಿಗೆ ಹಾಡಿ ತಾನೇ ರಚಿಸಿದ್ದೆಂದು ಹೇಳಬೇಕು.... ಅವಳು ನಕ್ಕು ಬಿಟ್ಟರೇ? ನಕ್ಕರೆ ನಗಲಿ.... ಈಗ ನನ್ನ ಮಾತುಗಳನ್ನು ಹಂಚಿಕೊಳ್ಳಲು ಇರುವವಳು ಅವಳೊಬ್ಬಳೇ.... ಮೂವಿ ಮುಗಿಯಿತು. ಹೇಗೂ ರಿಪೀಟ್ ಆಗ್ತಾನೆ ಇರುತ್ತಲ್ಲ ಮತ್ತೆ ನೋಡಿದ್ರಾಯ್ತು ಎಂದುಕೊಂಡು ಟಿ.ವಿಯನ್ನು ಆರಿಸಿದ.

* * *

ಸುಜಯಳಿಂದ ಫೋನಿನ ಕರೆ ಬರಬಹುದೆಂದು ನಿರೀಕ್ಷಿಸಿದ್ದ. ಬರದೇ ಇದ್ದುದಕ್ಕೆ ಚಡಪಡಿಸಿದ. ತಾನೇ ಅವಳ ಮನೆಗೆ ಮಾಡಿದರೆ ಅವಳ ತಾಯಿ ರಿಸೀವ್ ಮಾಡಿದಲ್ಲಿ ಅವರು ಏನಂದುಕೊಳ್ಳುವರೋ ಎಂದು ಅನುಮಾನಿಸಿದ. ಆಫೀಸಿಗೂ ಫೋನು ಮಾಡಲಿಲ್ಲ. ಕೋಪದಿಂದ ತನ್ನ ಅಸಹನೆಯನ್ನು ತನ್ನ ಕೈ ಕೆಳಗಿನವರ ಮೇಲೆ ತೋರಿಸಿದ.

ಆಫೀಸು ಬಿಡುವ ಸಮಯವಾಯಿತು. ಒಬ್ಬೊಬ್ಬರಾಗಿ ಎಲ್ಲರೂ ಹೊರಡುವ ತಯಾರಿಯಲ್ಲಿದ್ದರು. ಎದುರಿಗೆ ಸುಜಯ ಬಂದು ನಿಂತಾಗ ಅಚ್ಚರಿಯಿಂದ ಕಣ್ಣರಳಿಸಿದ. ಅವಳು ಅಲ್ಲಿಗೆ ಬಂದದ್ದು ಅವನಿಗೆ ಇಷ್ಟವಾಗಲಿಲ್ಲ. ಹುಬ್ಬುಗಳು ಹತ್ತಿರವಾದವು.

"ನಂಗೆ ಫೋನು ಮಾಡಿದ್ರೆ ನಾನೇ ಬರ್ತಿದ್ದೆ...." ಎಂದ ಅಕ್ಕ ಪಕ್ಕ ನೋಡಿ.

"ಯಾಕೆ? ನಾನು ಇಲ್ಲಿಗೆ ಬರಬಾರದಾ?"

"ಸುಮ್ಮನೇ ಇಲ್ಲಿ ಎಲ್ಲರ ಕುತೂಹಲಕ್ಕೆ ಆಹಾರವಾಗ್ತಾ ಇದೀವಿ. ಎಲ್ರೂ ನಮ್ಮನ್ನೇ ನೋಡ್ತಿದಾರೆ, ನಾವು ಕಳ್ಳರು ಅನ್ನೋ ಹಾಗೆ" ಸುಜಯ ನಕ್ಕಳು.

"ಯಾಕೆ? ಅವರ್‍ಯಾರಿಗೂ ಫ್ರೆಂಡ್ಸ್‌ಗಳೇ ಇಲ್ವಾ...? ನಾನು ಇದೇ ಮೊದಲ ಸಾರಿ ಬಂದಿರೋದು, ಅದಕ್ಕೇ ಬೆರಗಾಗಿ ನೋಡ್ತಿದಾರೆ.... ನಿಮಗೆ ಹಿಂಸೆ ಆಗ್ತಿದೆಯಾ?"

"ಹೂಂ. ಆಮೇಲೆ ಎಲ್ರೂ ಪ್ರಾಣ ತಿಂತಾರೆ. ಎಂಗೇಜ್‌ಮೆಂಟ್ ಒಂದು ಆಗಿ ಬಿಟ್ಟಿದ್ದರೆ, ನಾನೇ ಎಲ್ರಿಗೂ ಪರಿಚಯ ಮಾಡಿಕೊಡ್ತಿದ್ದೆ" ಸುಜಯ ನಾಚಿದಳೆನ್ನಿಸಿತು. ಇಬ್ಬರೂ ಹೊರ ಬಂದರು.

"ಇವತ್ತು ಕಾರು ತರ್ಲಿಲ್ವಾ?" ಅವನು ಸ್ಕೂಟರನ್ನ ಪಾರ್ಕಿಂಗ್‌ನಿಂದ ಹೊರ ತಂದಾಗ ಕೇಳಿದಳು.

"ನೀವು ಬರ್ತೀದೀರಿ ಅಂತ ಗೊತ್ತಿದ್ರೆ, ಕಾರು ತರ್ತಿದ್ದೆ.... ಯಾಕೆ ಸ್ಕೂಟರ್‌ನಲ್ಲಿ ನನ್ನ ಜೊತೆ ಬರೋಕೆ ಮುಜುಗರಾನಾ?"

"ನಂಗೊಂದು ಆಟೋನ ಗೊತ್ತು ಮಾಡಿಕೊಡಿ. ನೀವು ಸ್ಕೂಟರ್‌ನಲ್ಲಿ ಬನ್ನಿ"

"ಹಾಗೇಕೆ?"

"ಆಟೋದಲ್ಲಿ ಸಾಕಷ್ಟು ಪ್ಲೇಸ್ ಇರುತ್ತೆ. ಅಲ್ಲದೇ ನಾವೇನು ತೀರಾ ಅಷ್ಟು ಹಳೇ ಕಾಲದವರಲ್ಲ ಆದರೂ.." ಎಂದು ಹೇಳಿ ಸ್ಕೂಟರನ್ನು ಮತ್ತೆ ಹಿಂದಕ್ಕೆ ನಿಲ್ಲಿಸಿ, ವಾಚಮನ್‌ಗೆ ಹೇಳಿದ. ಇಬ್ಬರೂ ಬೀದಿಗಿಳಿದರು. ಆಟೋ ಹಿಡಿದು

ಸೀದಾ ಕ್ಲಿನಿಕ್‌ಗೆ ಬಂದರು. ಡಾಕ್ಟರು ಇನ್ನೂ ಬಂದಿರಲಿಲ್ಲವಾದ್ದರಿಂದ ಅಲ್ಲೇ ಮಾತನಾಡುತ್ತಾ ನಿಂತರು.

"ಅಬ್ಬಬ್ಬಾ ಅದೆಷ್ಟು ದೊಡ್ಡ ಲಿಸ್ಟು? ಏನೇನೋ ಬರೆದಿದ್ದೀರಿ. ಅವನ್ನೆಲ್ಲಾ ಯಾಕೆ ಬರ್ದಿದ್ದೀರಿ?"

"ಯಾಕೆ ಅಂದ್ರೆ? ಅಲ್ಲಿ ಅವೆಲ್ಲಾ ಇದ್ದವು ಅದಕ್ಕೆ"

"ಗೋಡೆಯ ಬಣ್ಣ, ಪರದೆಯ ಪ್ರಿಂಟ್ಸ್.... ಇವೆಲ್ಲಾ ಬೇಕಾ?"

"ಹೂಂ. ಒಂದು ವೇಳೆ ಅದೇ ಮುಖ್ಯವಾದ ಕ್ಲೂ ಆಗಿದ್ದರೇ... ?"

"ಇದೇನು ಪತ್ತೇದಾರಿ ವಿಷಯ ಅಲ್ಲ. ಗೋಡೆಯ ಬಣ್ಣದಿಂದ ನನ್ನ ಮನಸ್ಸು ಗಲಿಬಿಲಿಗೊಳ್ಳಲಿಲ್ಲ. ಸುಮ್ಮನೇ ನಿಮ್ಮ ಎಫರ್ಟ್ ವೇಸ್ಟ್ ಅಷ್ಟೇ"

"ಹಾಗಂತೀರಾ? ನೋಡೋಣ ಡಾಕ್ಟ್ರು ಏನಂತಾರೆ ಅಂತ.... ಇದಕ್ಕೋಸ್ಕರ ಮೋರ್ ದ್ಯಾನ್ ಒನ್ ಅವರ್ ಖರ್ಚು ಆಯಿತು. ಎಲ್ಲೆಲ್ಲಿ ಏನೇನಿದೆ, ಹೇಗಿದೆ ಯಾಕೆ ಇದೆ ಒಂದೂ ನಂಗೆ ಗೊತ್ತಿರಲಿಲ್ಲ. ನಾನೂ ತಿಳ್ಕೊಂಡಂತಾಯ್ತು"

ಅಷ್ಟರಲ್ಲಿ ಡಾಕ್ಟರು ಬಂದರು. ಇಬ್ಬರೂ ಒಳ ಬಂದರು. ಸುಜಯ ಕೊಟ್ಟ ಹಾಳೆಗಳ ಮೇಲೆ ಡಾಕ್ಟರು ಕಣ್ಣಾಡಿಸಿದರು. ಕೆಲವು ಕಡೆ ಪೆನ್ಸಿಲಿನಿಂದ ಗುರುತು ಹಾಕಿಕೊಂಡರು. ಮುಖ್ಯವಾಗಿ ಗಮನ ಸೆಳೆದದ್ದು, ಭಾವಚಿತ್ರಗಳ ವಿವರ.

"ಫೋಟೋ ಏನಾದ್ರೂ ತಂದಿದೀರಾ?"

"ಇಲ್ಲ, ತುಂಬಾ ಹಳೆಯವು. ಬ್ಲ್ಯಾಕ್ ಅಂಡ್ ವೈಟ್‌ದು. ನಮ್ಮ ಅಜ್ಜ-ಅಜ್ಜಿಯರದು. ನಾನು ಅವರನ್ನು ನೋಡಿರಲಿಲ್ಲ."

"ಸುಮಾರು ಎಷ್ಟು ವಯಸ್ಸಿನವರಿರಬಹುದು!"

"ಅಜ್ಜಂಗೆ ಆಗ ಮೂವತ್ತೈದು, ಅಜ್ಜಿಗೆ ಮೂವತ್ತು ಇರಬಹುದು"

"ಭಾವಚಿತ್ರಗಳ ಕೆಳಗೆ ಏನಾದ್ರೂ ಬರೆದಿದೆಯಾ?"

"ಇಲ್ಲ ಏನೂ ಬರೆದಿಲ್ಲ"

"ನೋಡೋಕೆ ಹೇಗಿದಾರೆ?"

"ಇಬ್ಬರೂ ತುಂಬಾ ಲಕ್ಷಣವಾಗಿದ್ದಾರೆ. ಗೌರವ ಹುಟ್ಟುವಂತೆ ಇದಾರೆ"

"ನಿಮಗೆ ಏನನ್ನಿಸುತ್ತೆ ಸುಜಯಾರವರೇ...?"

"ಏನೋ ನಂಗೊತ್ತಿಲ್ಲ" ತೊದಲಿದಳು.

"ಓ.... ನೀವು ಸರಿಯಾಗಿ ಫೋಟೋಗಳನ್ನು ನೋಡಿಯೇ ಇಲ್ಲ ಅಂತಾಯ್ತು"

"ಹುಂ. ನೋಡೋಕೆ ಇಷ್ಟವಾಗಲಿಲ್ಲ. ಹಾಗೇ ಆ ಬಗ್ಗೆ ನಂಗೆ ಯೋಚಿಸಲೂ ಇಷ್ಟವಾಗುವುದಿಲ್ಲ"

"ಹೋಗಲಿ ಬಿಡಿ. ನಿಮ್ಮ ತಂದೆ-ತಾಯಿಯರ ಬಗ್ಗೆ ಹೇಳಿ. ನಿಮ್ಮ ಮನೆಯಲ್ಲಿ ನೀವು ಎಷ್ಟು ಮಂದಿ ಮಕ್ಕಳು?"

"ನಮ್ಮ ತಂದೆ ತಾಯಿಗೆ ನಾವು ಇಬ್ಬರೇ ಮಕ್ಕಳು. ನಾನು, ನನ್ನ ತಂಗಿ ಸುಮತಿ. ಅವಳು ಇಂಜಿನಿಯರಿಂಗ್ ಓದುತ್ತಿದ್ದಾಳೆ. ಹಾಸ್ಟೆಲಿನಲ್ಲಿದ್ದಾಳೆ"

"ನಿಮಗೂ ನಿಮ್ಮ ತಂಗಿಗೂ ಹೇಗೆ? ಎನಿ ಡಿಫರೆನ್ಸ್.....? ಅಂದರೇ ನಿಮ್ಮ ತಂಗಿ ನೀವು ಹೇಗಿದೀರಿ! ನಿಮ್ಮಿಬ್ಬರ ನಡುವೆ ಜಗಳ ಆಗುತ್ತಾ?"

"ಚಿಕ್ಕ ವಯಸ್ನಲ್ಲಿ ಜಗಳ ಆಡ್ತಿದ್ದೆವು. ಈಗ ಅಪರೂಪಕ್ಕೆ ಭೇಟಿಯಾಗ್ತೀವಿ. ಅವಳು ಓದಿನಲ್ಲಿ ಬಿಜಿ, ನಾನು ನನ್ನ ಕೆಲಸದಲ್ಲಿ ಬಿಜಿ. ಜಗಳ ಆಡುಕ್ಕೆ ಸಮಯವೂ ಇಲ್ಲ ಕಾರಣವೂ ಇಲ್ಲ"

"ನಿಮ್ಮ ಟೀಚಿಂಗ್ ಪ್ರೊಫೆಷನ್ ಇಷ್ಟವಾಗಿದೆಯಾ? ಅಲ್ಲಿಯ ವಾತಾವರಣ ಹೇಗಿದೆ. ಸಹೋದ್ಯೋಗಿಗಳ ಕಿರುಕುಳ ಏನಾದ್ರೂ ಇದೆಯಾ? ಕೆಲಸದ ಒತ್ತಡ ಜಾಸ್ತೀನಾ?"

"ಏನೂ ತೊಂದರೆ ಇಲ್ಲ. ನಾನು ಪಾರ್ಟ್ ಟೈಂ ಟೀಚರ್. ನನಗೆ ಹೆಚ್ಚಿನ ಜವಾಬ್ದಾರಿಗಳಿಲ್ಲ"

"ಎನಿ ಹಾಬೀಸ್? ಉಳಿದ ಸಮಯವನ್ನು ಹೇಗೆ ಕಳೆಯುತ್ತೀರಿ?"

"ಹೀಗೇ... " ಎಂದು ಬಿಟ್ಟಳು.

"ಹೀಗೇ ಅಂದರೆ ಹೇಗೆ? ಯಾವುದಾದ್ರೂ ಕ್ಲಾಸ್‌ಗೆ ಹೋಗ್ತೀರಾ? ಮನೆ ಕೆಲಸ ಮಾಡ್ತೀರಾ..."

"ಹೂಂ. ನಮ್ಮ ತಾಯಿಗೆ ಮನೆ ಕೆಲಸದಲ್ಲಿ ಸ್ವಲ್ಪ ಹೆಲ್ಪ್ ಮಾಡ್ತೀನಿ."

"ನಿಮ್ಮ ತಂದೆ ತಾಯಿ ಬಗ್ಗೆ ನಿಮಗೆ ಏನನ್ನಿಸುತ್ತೆ?"

"ಎಲ್ಲಾ ತಂದೆ ತಾಯಿಗಳಂತೆ ಅವರೂ ಒಳ್ಳೆಯವರು. ನಮ್ಮಿಬ್ಬರನ್ನು ಚೆನ್ನಾಗಿ ಮುದ್ದಾಗಿ ಬೆಳೆಸಿದಾರೆ. ನನಗೆ ಅವರ ಬಗ್ಗೆ ಗೌರವವಿದೆ" ಮಹೇಶ ಓರೆ ನೋಟದಿಂದ ಅವಳನ್ನು ನೋಡಿದ. ಇದು ಡಾಕ್ಟ್ರ ಗಮನಕ್ಕೆ ಬಂತು.

"ನಿಮ್ಮ ತಂಗಿ ಬಗ್ಗೆ ನಿಮಗೆ ಯಾವ ಭಾವನೆ ಇದೆ?"

"ನನಗೆ ಅವಳ ಬಗ್ಗೆ ಪ್ರೀತಿ ಇದೆ. ಅವಳಿಗೆ ನನ್ನ ಮೇಲೆ ಗೌರವವಿದೆ"

"ಚಿಕ್ಕ ವಯಸ್ಸಿನಲ್ಲಿ ನಿಮಗೆ ಆಗದ ನೆಂಟರಿಷ್ಟರು, ಸ್ನೇಹಿತರು ಯಾರಾದರೂ ನಿಮ್ಮ ಮನೆಗೆ ಬಂದು, ಮಾತಾಡಿ ಏನಾದರೂ ಅಹಿತಕರವಾದ ಘಟನೆಗಳು ನಡೆದಿತ್ತಾ?"

"ಏನೋ ನಂಗೆ ನೆನಪಿಲ್ಲ"

"ನಿಮ್ಮ ಬಾಲ್ಯದ ದಿನಗಳನ್ನು ಜ್ಞಾಪಿಸಿಕೊಳ್ಳಿ. ಹಿತಕರವಾದ, ಅಹಿತಕರವಾದ ಘಟನೆಗಳು ಯಾವುದೇ ಇರಲಿ, ಜ್ಞಾಪಕ ಬಂದಷ್ಟನ್ನು ಬರೆದಿಡಿ. ಹಾಗೇ ನಿಮಗೆ ಬೀಳುವ ಕನಸುಗಳನ್ನು ಒಂದು ಡೈರಿಯಲ್ಲಿ ಬರೆದಿಡುವ ಅಭ್ಯಾಸ ಒಳ್ಳೆಯದು. ಅರೆನಿದ್ರಾವಸ್ಥೆಯಲ್ಲಿರುವಾಗ, ಒಳಮನಸ್ಸು ಜಾಗೃತಗೊಳ್ಳುತ್ತೆ. ಅರ್ಥಹೀನ

ಗೊಂದಲಮಯ ಅಂತನ್ನಿಸಿದರೂ, ನಮ್ಮನ್ನು ನಾವು ವಿಶ್ಲೇಷಿಸಿಕೊಳ್ಳಲು ಕನಸುಗಳು ಸಹಾಯ ಮಾಡುತ್ತವೆ"

ಸುಜಯ ತಲೆಯಾಡಿಸಿದಳು. ಇಬ್ಬರೂ ಥ್ಯಾಂಕ್ಸ್ ಹೇಳಿ ಹೊರ ಬಂದರು.

"ನನ್ನ ಸ್ಟೂಡೆಂಟ್ಸ್‌ಗಳಿಗೆ ಕೊಡುವ ಹೋಂವರ್ಕ್ ಪ್ರಿಪೇರ್ ಮಾಡುಕ್ಕೇ ಒಂದೊಂದು ಸಲ ಬೇಸರ ಆಗುತ್ತೆ. ಅಂಥಾದ್ರಲ್ಲಿ, ಈ ಡಾಕ್ಟ್ರು ನಂಗೆ ಹೋಂವರ್ಕ್ ಕೊಡ್ತಾರೆ" ಬೇಸರದಿಂದ ನಕ್ಕಳು. "ಹೋಂ ವರ್ಕ್ ಎಂದರೇ ಬೋರ್....ಅಮ್ಮ ಕೂರಿಸಿಕೊಂಡು ಬಲವಂತದಿಂದ ಹೋಂ ವರ್ಕ್‌ಗಳನ್ನು ಮಾಡಿಸುತ್ತಿದ್ದಳು. ನನ್ನ ತಂಗಿ ಎಷ್ಟೇ ಕೇಳಿದರೂ, ನಾನು ಅವಳಿಗೆ ಹೋಂ ವರ್ಕ್‌ಗೆ ಸಹಾಯ ಮಾಡುತ್ತಿರಲಿಲ್ಲ. ಈಗ ನಾನು ಯಾರ ಸಹಾಯ ಕೇಳಲಿ?"

"ಮೈ ಹೂಂ ನ.... ನನ್ನನ್ನ ಕೇಳಿ.... ನಾನು ಮಾಡಿ ಕೊಡ್ತೀನಿ." ಇಬ್ಬರೂ ನಕ್ಕರು.

"ಈಗ ಸದ್ಯಕ್ಕೆ ತಲೆ ನೋಯ್ತಿದೆ. ಬೇಗ ಮನೆಗೆ ಹೋಗೋಣ"

"ಇಲ್ಲೇ ಹತ್ತಿರದಲ್ಲಿ ಒಂದು 'ದರ್ಶಿನಿ' ಇದೆ. ಬಿಸಿ ಬಿಸಿ ಕಾಫಿ ಕುಡಿಯೋಣ ಬನ್ನಿ" ಇಬ್ಬರೂ ದರ್ಶಿನಿಯ ಕಡೆ ನಡೆದರು. ಕಾಫಿ ಕುಡಿದು ಅಲ್ಲಿಂದ ಒಂದು ಆಟೋ ಹಿಡಿದು ಸುಜಯಳ ಮನೆಗೆ ಬಂದರು. ಈ ದಿನವೂ ಇಬ್ಬರೂ ಒಟ್ಟಾಗಿ ಬಂದುದು ಪ್ರಭಾವತಿಗೆ ಮುಜುಗರವನ್ನುಂಟುಮಾಡಿತು. ಇಬ್ಬರೂ ನಿತ್ಯವೂ ಭೇಟಿ ಯಾಗುತ್ತಾರೆ.... ಅವಳನ್ನು ಕೆಟ್ಟ ಆಲೋಚನೆಗಳು ಕಾಡಿದವು. ಕೇಳಬೇಕೋ ಕೇಳ ಬಾರದೋ.... ಹೊರಗೆ ಕೆಲಸಕ್ಕೆ ಹೋಗುತ್ತಾಳೆ. ಗಂಡಸರೊಂದಿಗೆ ಬೆರೆಯು ತ್ತಾಳೆ.... ಅದೆಲ್ಲಾ ತಿಳಿದಿದ್ದರೂ, ಈ ಹುಡುಗನೊಡನೆ ಇರುವ ಒಡನಾಟ ಆತಂಕ ತರುತ್ತಲ್ಲ.... ಒಬ್ಬರನ್ನೊಬ್ಬರು ಮೆಚ್ಚಿದ್ದರೆ, ಆದಷ್ಟು ಬೇಗ ಮದುವೆಯ ಮಾತುಗಳನ್ನಾಡುವುದು ಒಳ್ಳೆಯದು.... ಇದರಲ್ಲಿ ಮಹೇಶನಿಗಿಂತ ಸುಜಯಳದ್ದೇ ಹೆಚ್ಚು ತಪ್ಪು ಎಂದೆನಿಸಿತು. ಮೌನವಾಗಿ ಇಬ್ಬರಿಗೂ ಬಡಿಸಿದಳು.

ಗೇಟಿನ ತನಕ ಅವನನ್ನು ಬೀಳ್ಕೊಟ್ಟು ಸುಜಯ ಒಳಬಂದಳು. ಪ್ರಭಾವತಿ ಮಗಳ ಹಿಂದೆಯೇ ಒಳ ಬಂದಳು.

"ಮಹೇಶನ ತಾಯಿ ಯಾವಾಗ ಊರಿಗೆ ವಾಪಸ್ಸು ಬರ್ತಿದಾರೆ?"

"ಯಾಕೆ? ಅವನಿಗೆ ಊಟ ಬಡಿಸುವ ಕೆಲಸ ಬೇಜಾರಾಗ್ತಿದೆಯಾ?" ನಗುತ್ತಾ ಕೇಳಿದಳು.

"ಹಾಗಲ್ಲ. ಒಬ್ಬನಿಗೆ ಒಂದು ಹೊತ್ತು ಊಟ ಹಾಕಿದರೆ ನಮಗೆ ಬಡತನ ಬರುವುದಿಲ್ಲ"

"ಮತ್ತೇನು ನಿನ್ನ ಕಷ್ಟ ಹೇಳು"

"ಮೊದ್ಲು ಅವನ್ಯಾರೋ ನಮಗೆ ತಿಳಿದಿರಲಿಲ್ಲ. ಪ್ರತಿನಿತ್ಯ ಊಟಕ್ಕೆ ಬರುವಷ್ಟು

ಪರಿಚಯ ನಮಗಿಲ್ಲ. ಬರೀ ಅಷ್ಟಕ್ಕೋಸ್ಕರ ನಮ್ಮನೆಗೆ ಬರ್ತಾನೆ ಅಂತಂದ್ರೆ....." ಸಂಶಯದ ಧ್ವನಿ ಇತ್ತು.

"ನಿನ್ನ ಮಾತಿನ ಅರ್ಥ ನಿಂಗೇ ತಿಳೀಬೇಕು. ಬಾ.... ಅಂತ ಹೇಳಿದವರು ನಾವೇ. ಅವನಾಗೇ ನಂಗೆ ಊಟಕ್ಕೆ ತೊಂದರೆ, ಊಟ ಹಾಕಿ ಅಂತ ಹೇಳಿದ್ನಾ?"

"ಅದಲ್ಲ ಮಾತು...."

"ಹಾಗಾದ್ರೆ ಏನ್ಮಾತು? ನೇರವಾಗಿ ಹೇಳಿಬಿಡು. ನಂಗೆ, ಸುತ್ತಿ ಬಳಸಿ ಮಾತಾಡಿದರೆ ಅರ್ಥವಾಗುಲ್ಲ.... ಇಷ್ಟವೂ ಆಗುಲ್ಲ"

"ಹಾಗಲ್ಲ. ಹೊರಗ್ನೋರು ಏನಾದರೂ ಆಡಿಕೊಳ್ತಾರೇನೋ ಅಂತ...."

"ಯಾರೂ ಆಡಿಕೊಳ್ಳುವಂಥಾದ್ದು ಏನು ನಡೆದಿಲ್ಲ. ನಾನು ಕಾಲೇಜಿಗೆ ಹೋಗ್ತಿದ್ದೆ. ಕೆಲಸಕ್ಕೆ ಹೋಗ್ತೀನಿ. ಎಂದೂ ಇಲ್ಲದ ಅನುಮಾನ ಈಗ್ಯಾಕೆ?"

"ಕೋಪಿಸ್ಕೋಬೇಡ. ನಾವು ಮದುವೆ ಮಾತು ಆಡಿದ್ದು ಇವನ ಅಣ್ಣನೊಂದಿಗೆ.... ಅವನನ್ನು ನೀನು ಒಪ್ಪಲಿಲ್ಲ.... ಹೋಗಲಿ ಬಿಡು. ಇವನು ನಿನಗೆ ಇಷ್ಟವಾಗಿದ್ರೆ ತಿಳಿಸು ಮುಂದುವರೆಯೋಣ"

"ನಾನು ಮದುವೆ ಬಗ್ಗೆ ಯೋಚಿಸಿಲ್ಲ.... ಅವನು ಮನೆಗೆ ಬರುವುದು ನಿಂಗೆ ಸರಿ ಹೋಗ್ತಿಲ್ಲ ಅಂತಾದ್ರೆ ಹೇಳು. ನಾನು ದೀಪಂಗೆ ಫೋನು ಮಾಡಿ ಹೇಳ್ತೀನಿ"

"ಹಾಗಂತ ಹೇಳುಕ್ಕಾಗುತ್ತಾ ಸುಮ್ನಿರು"

"ಈ ಕಿತಾಪತಿಯೆಲ್ಲಾ ಅವಳಿಂದ್ಲೇ ಶುರುವಾದದ್ದು"

"ದಿನೇಶನ್ನ ನೀನು ಅವಳಿಗೆ ಬಿಟ್ಟು ಕೊಡಬಾರದಾಗಿತ್ತು"

"ಒಪ್ಪಿಗೆ ಇಲ್ಲದಿದ್ರೂ ಅವನನ್ನು ಮದುವೆಯಾಗಿ ನಾನು ಹಿಂಸೆ ಪಡಬೇಕಾಗಿತ್ತಾ?"

"ಹಾಗಾದ್ರೆ ದಿನೇಶ ಸರಿ ಇಲ್ವಾ? ದೀಪನ್ನ ಗೊತ್ತು ಮಾಡಿಕೊಟ್ಟೋರು ನಾವೇ.... ನಾಳೆ ನಮ್ಮನ್ನು ಆಕ್ಷೇಪಣೆ ಮಾಡಬಾರದು ಅವಳು. ಮಹೇಶ, ಅಣ್ಣನ ಬಗ್ಗೆ ಏನಾದ್ರೂ ಹೇಳಿದಾನಾ ನಿನ್ಹತ್ರ?"

"ಏನಿಲ್ಲಮ್ಮ. ಮಹೇಶ ಅಂಥೋನಲ್ಲ. ದಿನೇಶನು ಕೆಟ್ಟವನಲ್ಲ. ಏನೋ ನಂಗೆ ಅವನು ಇಷ್ಟ ಆಗಲಿಲ್ಲ. ಬಲವಂತವಾಗಿ ಅವನೊಡನೆ ಸಂಸಾರ ಮಾಡುಕ್ಕೆ ಆಗುತ್ತಾ? ನಾನು ಒಪ್ಪಲಿಲ್ಲ. ಪ್ಲೀಸ್, ಮತ್ತೆ ಮತ್ತೆ ಈ ಪ್ರಶ್ನೆಗಳನ್ನು ಕೇಳಬೇಡ...." ನಿನಗೆ ನನ್ನ ಮೇಲೆ ನಂಬಿಕೆ ಇಲ್ವಾ?"

"ನಂಬಿಕೆ ಪ್ರಶ್ನೆ ಅಲ್ಲ. ನಿಮ್ಮಪ್ಪನಿಗೆ ತಿಳಿದರೆ ಏನು ಹಗರಣವಾಗುತ್ತೋ ಅಂತ ಭಯವಾಗುತ್ತೆ. ಈಗ ಸ್ವಲ್ಪ ಸ್ವಲ್ಪ ಸುಧಾರಿಸಿಕೊಂಡಿದ್ದಾರೆ"

"ಅಪ್ಪನ ಆರೋಗ್ಯದ ಬಗ್ಗೆ ನನಗೂ ಆತಂಕವಿದೆ" ಸುಜಯಾ ಒರಟಾಗಿ ನುಡಿದು ಮಂಚದ ಮೇಲೆ ಉರುಳಿಕೊಂಡಳು. ಪ್ರಭಾವತಿ ಅಸಹನೆಯಿಂದ ಹೊರಗೆ

ಹೋದಳು.

ಈಗ, ಅಂಥಾದ್ದೇನಾಯ್ತು ಅಂತ ಅಮ್ಮ ಹೀಗಾಡ್ತಾಳೋ! ನಾನೇನು ಅವನ ಜೊತೆ ಬೀದಿ ಬೀದಿ ಸುತ್ತಲ್ಲ.... ಮಹೇಶನೇನೂ ಕೆಟ್ಟವನಲ್ಲ, ಅಸಭ್ಯನಾಗಿ ಎಂದೂ ನಡೆದುಕೊಂಡಿಲ್ಲ. ನನಗಾಗುವ ತೊಂದರೆಗೆ ಪರಿಹಾರ ಹುಡುಕುವ ಪ್ರಯತ್ನದಲ್ಲಿದಾನೆ. ಇಂಥವನು ನನ್ನ ಪತಿಯಾದರೆ, ಅದು ನನ್ನ ಪುಣ್ಯ. ಆದರೆ ಇವನ ಪತ್ನಿಯಾಗಿ ಆ ಮನೆಗೆ ಹೋಗುವುದು ಹೇಗೆ? ಡಾಕ್ಟರು ಹೇಳುವಂತೆ, ಮನಸಾರೆ ಪ್ರೀತಿಸುವ ಪತಿ ಬಳಿಯಲ್ಲಿದ್ದರೆ ಯಾವ ಭೀತಿಯೂ ಕಾಡಲಾರದು. ಅದರೂ ಸದ್ಯಕ್ಕೆ ಮದುವೆಯ ಯೋಚನೆ ಬೇಡವೇ ಬೇಡ. ತಕ್ಷಣಕ್ಕೆ ನಿದ್ದೆ ಹತ್ತಲಿಲ್ಲ. ಡಾಕ್ಟ್ರು ಹೇಳಿದ್ದು ನೆನಪಿಗೆ ಬಂತು. ತನಗೆ ಎಂಥ ಕನಸುಗಳು ಬೀಳುತ್ತವೆ ಎಂದು ಆಲೋಚಿಸತೊಡಗಿದಳು. ಆದಿ ಅಂತ್ಯವಿಲ್ಲದ, ಅರ್ಥವಿಲ್ಲದ ಹೆದರಿಸುವ, ಬೆದರಿಸುವ ಥಟ್ಟನೆ ಎಚ್ಚರವಾಗುವ ಕನಸುಗಳು.... ಆದರೆ ಯಾವುದೂ ಪೂರ್ಣ ನೆನಪಿಲ್ಲ.... ನಿಧಾನವಾಗಿ ನಿದ್ದೆ ಹತ್ತಿತ್ತು.

* * *

"ಇವತ್ತು ಭಾನುವಾರ, ನಿಧಾನವಾಗಿ ಎದ್ದರೂ ಆಯ್ತು" ಎಂದುಕೊಂಡು ನಿತ್ಯದಂತೆ ಎಚ್ಚರವಾದರೂ ಮಲಗೇ ಇದ್ದ ಮಹೇಶ. ಹೊರಳಾಡಿ ಹೊರಳಾಡಿ ಬೇಸರವೆನಿಸಿ ಕಡೆಗೆ ಎದ್ದ. ಅಡಿಗೆ ಮನೆಯ ಬಳಿಗೆ ಬಂದಾಗ, ಏನೋ ದುರ್ವಾಸನೆ ಬರುತ್ತಿದೆ ಎನಿಸಿತು. ಏನೋ ಸತ್ತು ಹೋಗಿದೆ, ಇಲಿಯೇ ಇರಬೇಕು......ಆಯ್ತು, ಭಾನುವಾರಕ್ಕೆ ಎಕ್ಸ್ಟ್ರಾ ಕೆಲಸ ಎಂದುಕೊಂಡು ಕಾಫಿ ಮಾಡಿ ಕುಡಿದು, ದಿನಪತ್ರಿಕೆಯನ್ನು ಹಿಡಿದು ಕುಳಿತ. ಕೆಲಸದವಳು ಬರದಿದ್ದರೇ ಏನು ಮಾಡುವುದು....? ಎಲ್ಲಾದರೂ ಹೊರಗೆ ಹೋಗಿ ರಾತ್ರಿಯ ಹೊತ್ತಿಗೆ ಮನೆಗೆ ವಾಪಸ್ಸು ಬಂದರಾಯ್ತು.... ಆದರೆ ಮೊದಲು ಈ ವಾಸನೆಯನ್ನು ಹೋಗಿಸಬೇಕು, ಇಲ್ಲದಿದ್ರೆ ಮನೆಯೆಲ್ಲಾ ಸುತ್ತಿಕೊಂಡುಬಿಡುತ್ತೆ. ಎಂದುಕೊಂಡು ಸರಸರನೆ ದಿನಪತ್ರಿಕೆಯ ಮೇಲೆ ಕಣ್ಣಾಡಿಸಿ ಎದ್ದ.

ಮೂಗಿಗೆ ಒಂದು ತೆಳ್ಳನೆಯ ಬಟ್ಟೆಯನ್ನು ಕಟ್ಟಿಕೊಂಡು, ಉಗ್ರಾಣದ ಬಾಗಿಲನ್ನು ತೆಗೆದ.... ಗೌವ್ ಎಂದು ಕೆಟ್ಟಗಾಳಿ ಮುಖಕ್ಕೆ ಬಡಿಯಿತು. ಒಂದು ಗಳಿಗೆ ಹಿಂದಕ್ಕೆ ಸರಿದು ಮುಖದ ಮುಂದೆ ಕೈಯಿಂದ ಗಾಳಿ ಬೀಸಿಕೊಂಡು ಸರಿಮಾಡಿಕೊಂಡು, ಉಗ್ರಾಣಕ್ಕೆ ಕಾಲಿಟ್ಟ, ಬಿದ್ದಿದ್ದ ಡಬ್ಬಿಗಳನ್ನು ಅತ್ತಿತ್ತ ಸರಿಸಿ, ಒಂದು ಕೋಲಿನಿಂದ ಕೆದಕಿ ನೋಡಿದ. ಎಲ್ಲಿಯೂ ಯಾವ ಇಲಿಯೂ ಬಿದ್ದಂತೆ ಕಾಣಲಿಲ್ಲ. ಹಳೆಯ ಪೆಟ್ಟಿಗೆ, ಪಾತ್ರೆಗಳನ್ನು, ಡಬ್ಬಗಳನ್ನು ಆಚೆಗೆ ಎಳೆದು ಹಾಕಿದ್ದ. ಸುತ್ತಿಟ್ಟಿದ್ದ ಚಾಪೆಯ ಬಳಿ ಸತ್ತು ಹೋಗಿದ್ದ ಇಲಿಯ ಅರ್ಧ ದೇಹವನ್ನು ಕಂಡ. ಇರುವೆಗಳು ಮುತ್ತಿಕೊಂಡು ನೋಡಲು ಅಸಹ್ಯವೆನಿಸಿತು. ಹೊಟ್ಟೆ ತೊಳಸಿ ಬರುವಂತಾಯ್ತು. ಹೊರ ಬಂದು

ಮುಂಬಾಗಿಲಿಗೆ ಬಂದು ನಿಂತು ಸ್ವಚ್ಛವಾದ ಗಾಳಿಯನ್ನು ಕುಡಿದ. ಥೂ ಈ ಇಲಿ ಬೆಕ್ಕಿನ ಚೆಲ್ಲಾಟದಲ್ಲಿ ನನಗೆ ಪ್ರಾಣ ಸಂಕಟ ಎಂದು ಬೈದುಕೊಂಡ. ಅಷ್ಟರಲ್ಲಿ ಫೋನು ರಿಂಗಾಗಿತ್ತು. ಸುಜಯಳ ಧ್ವನಿ ಕೇಳಿಸಿತು.

"ಬ್ರೇಕ್ ಫಾಸ್ಟ್‌ಗೆ ಬನ್ನಿ. ಅಮ್ಮ ಇಂದು ಒತ್ತು ಶಾವಿಗೆ ಮಾಡಿದಾಳೆ"

"ಸಾರಿ ಸುಜಯಾ.... ನಾನು ಇವತ್ತು ನಿಮ್ಮ ಮನೆ ಕಡೆಗೆ ಬರುಕ್ಕಾಗುಲ್ಲ"

"ಯಾಕೆ ಮಹೇಶ್? ಎನಿ ಪ್ರಾಬ್ಲಂ?"

"ಎಸ್ ಸೋಮೆನಿ ಪ್ರಾಬ್ಲಂಸ್.... ಇಲಿ, ಬೆಕ್ಕುಗಳ ಹಾವಳಿ ಹೆಚ್ಚಾಗಿದೆ. ಕ್ಲೀನಿಂಗ್ ಪ್ರೋಗ್ರಾಂ ಹಾಕ್ಕೊಂಡಿದೀನಿ"

"ಆಮೇಲೆ ಮಾಡಿದರಾಗುಲ್ವಾ?"

"ಇಲ್ಲ. ನಂಗೆ ಸಿಗೋದೊಂದು ಭಾನುವಾರ. ಅಲ್ದೇ ಕೆಲಸದೋಳೂ ಬರ್ಲಿಲ್ಲ.... ಮುಗಿಸ್ಲೇಬೇಕು"

"ಮತ್ತೆ ಊಟಕ್ಕೆ ಏನ್ಮಾಡ್ತೀರಿ?"

"ಕೈಲಾಸ ದರ್ಶಿನಿ'ಗೆ ಹೋದರಾಯ್ತು...."

"ಎಷ್ಟು ಲೇಟಾದ್ರೂ ಪರವಾಗಿಲ್ಲ ಬನ್ನಿ...."

"ಬೇಡ ಸುಜಯಾ.... ನಂಗೋಸ್ಕರ ಕಾಯ್ಬೇಡಿ" ಎಂದು ಹೇಳಿ ಮಾತು ಮುಗಿಸಿ, ಅಡಿಗೆ ಮನೆ ಕಡೆಗೆ ಬಂದ. ಮತ್ತೆ ಮೂಗಿಗೆ ಬಟ್ಟೆಯನ್ನು ಕಟ್ಟಿಕೊಂಡು ಕ್ಲೀನಿಂಗ್ ಕೆಲಸವನ್ನು ಮುಂದುವರೆಸಿದ. ಇಲಿಯ ಅಳಿದುಳಿದ ದೇಹವನ್ನು ಒಂದು ಪ್ಲಾಸ್ಟಿಕ್ ಕವರಿನೊಳಕ್ಕೆ ಸೇರಿಸಿ, ಬೀದಿಯಲ್ಲಿದ್ದ ಡಸ್ಟ್ ಬಿನ್‌ಗೆ ಎಸೆದು ಬಂದ. ಆ ಜಾಗವನ್ನು ಫಿನಾಯಿಲ್ ಹಾಕಿ ತೊಳೆದ. ದುರ್ವಾಸನೆ ಕಡಿಮೆ ಆಗಿದೆಯೆಂತೆನ್ನಿಸಿತ್ತು. ತಣ್ಣೀರಿನಲ್ಲೇ ಸ್ನಾನವನ್ನು ಮಾಡಿ ಬಂದು ಕಾಫಿಯನ್ನು ಬೆರೆಸಿಕೊಂಡು ಕುಡಿದು, ಟಿ.ವಿಯನ್ನು ಆನ್ ಮಾಡಿ ಅದರ ಎದುರು ಕುಳಿತ.

ಆಟೋ ನಿಂತ ಸದ್ದಾಯಿತು. ಎದ್ದು ಕಿಟಕಿಯಿಂದಾಚೆ ನೋಡಿದ. ಸುಜಯ ಆಟೋದಿಂದ ಇಳಿಯುತ್ತಿದ್ದಳು. ಅವಳ ಕೈಯಲ್ಲಿ ಒಂದು ಚೀಲವಿತ್ತು. ಅವಳು ಬಾಗಿಲನ್ನು ಸಮೀಪಿಸುವ ಮೊದಲೇ ಇವನು ಬಾಗಿಲನ್ನು ತೆಗೆದ.

"ಅರೇ! ಇದೇನಿದು ಸರ್ಪ್ರೈಸ್.... ಬನ್ನಿ....." ಸಂತಸದಿಂದ ಸ್ವಾಗತಿಸಿದ.

"ನಾನು ಒಳಕ್ಕೆ ಬರೋಲ್ಲ ಮಹೇಶ್.... ತಿಂಡಿ ತಂದಿದೀನಿ.... ನಿಮಗೋಸ್ಕರ.... ತಗೊಳ್ಳಿ"

"ಅದ್ಯಾಕೆ ತರೋಕೆ ಹೋದ್ರಿ"

"ನೀವು ಬರುಲ್ಲ ಅಂತ ಅಂದ್ರಲ್ಲ.... ಅಮ್ಮನೇ ಕೊಟ್ಟು ಬಾ ಅಂತಂದ್ಲು.... ತಗೊಳ್ಳಿ."

"ಥ್ಯಾಂಕ್ಸ್ ಇಷ್ಟು ದೂರ ಬಂದಿದೀರಿ.... ಖಂಡಿತಾ ಒಳಗೆ ಬರುಲ್ವಾ...?

ಕಾಫಿ ಕುಡಿಯೋರಂತೆ ಬನ್ನಿ" ಎನ್ನುತ್ತಾ ಚೀಲವನ್ನು ಕೈಗೆತ್ತಿಕೊಂಡ.

"ನಂದು ತಿಂಡಿ, ಕಾಫಿ ಎಲ್ಲಾ ಆಗಿದೆ. ಆಟೋನ ನಿಲ್ಲಿಸ್ಕೊಂಡಿದೀನಿ..... ಬರ್ತೀನಿ. ರಾತ್ರಿ ಊಟಕ್ಕೆ ಬರ್ತೀರಿ ತಾನೇ...?"

"ರಾತ್ರಿ, ನನ್ನ ಫ್ರೆಂಡ್ ಮನೇಗೆ ಕರೆದಿದ್ದಾನೆ. ಅಲ್ಲಿಗೆ ಹೋಗ್ತೀನಿ.... ನಾಳೆ ಬರುವಾಗ ಈ ಕ್ಯಾರಿಯರ್ ತರ್ತೀನಿ...." ಅಥವಾ ಈಗಲೇ ಖಾಲಿ ಮಾಡಿ ಕೊಡ್ಲೋ?"

"ಪರವಾಗಿಲ್ಲ ನಿಧಾನವಾಗಿ ಕೊಟ್ರಾಯ್ತು. ನಾನು ಬರ್ತೀನಿ" ಎನ್ನುತ್ತಾ ನಿಲ್ಲದೇ ಹೊರಟು ಹೋದಳು. ಅವಳ ಬೆನ್ನನ್ನೇ ನೋಡಿದ. ಅವಳು ಹಿಂತಿರುಗಿ ನೋಡಲಿಲ್ಲ. ಆಟೋ ಹತ್ತಿದ ಮೇಲೆ, ಇತ್ತ ತಿರುಗಿ ಕೈಯಾಡಿಸಿದಳು.

ಬಾಗಿಲನ್ನು ಹಾಕಿ ಬಂದು, ಕ್ಯಾರಿಯರ್ ಬಟ್ಟಲುಗಳನ್ನು ತೆರೆದ. ಎರಡು ಬಟ್ಟಲುಗಳಲ್ಲಿ ಎರಡು ಬಗೆಯ ಶ್ಯಾವಿಗೆ, ಹಾಗೂ ಚಟ್ನಿ ಇತ್ತು. ಹಸಿವಿಲ್ಲದಿದ್ದರೂ ಘಂ ಎನ್ನುವ ತಿಂಡಿಯನ್ನು ತಟ್ಟೆಗೆ ಹಾಕಿಕೊಂಡು ತಿನ್ನಲು ಕುಳಿತ. "ಇವಳ ತಾಯಿ ರುಚಿರುಚಿಯಾಗಿ ಅಡುಗೆ ಮಾಡುತ್ತಾರೆ. ಇವಳೂ ಕಲಿತಿದ್ದರೆ, ಒಳ್ಳೆಯದು" ಎಂದುಕೊಂಡು ನಿಧಾನವಾಗಿ ತಿನ್ನಲಾರಂಭಿಸಿದ. ಇನ್ನು ಯಾವ ಹೋಟೆಲ್ಲಿಗೂ ಲಂಚ್‌ಗೆ ಹೋಗದಿದ್ದರಾಯ್ತು ಎಂತಂದುಕೊಂಡು ಕೈತೊಳೆದು ಕ್ಯಾರಿಯರ್‌ಗಳನ್ನು ತೊಳೆದಿಟ್ಟ.

ಸುಜಯ ಕ್ಯಾರಿಯರ್ ತುಂಬಾ ತಿಂಡಿಯನ್ನು ತಂದುಕೊಟ್ಟಿದ್ದಾಳೆ. ತಾನು ಏನಾದರೂ ತುಂಬಿಸಿಕೊಡಬೇಕೆಂದುಕೊಂಡಾಗ ತಾನು ಆದಿನ ಕೊಂಡುಕೊಂಡ ಹೂವು ಹಣ್ಣುಗಳ ನೆನಪಾಯ್ತು. "ಅರೇ, ಎಂಥಾ ಕೆಲಸವಾಯ್ತು. ತಾನು ಅವಳ ಮನೆಗೆ ಕೊಡಲೇ ಇಲ್ಲ. ಕಾರಿನಲ್ಲೇ ಚೀಲವನ್ನು ಬಿಟ್ಟು ಬಿಟ್ಟಿದ್ದೇನೆ" ಎಂದುಕೊಂಡು ವ್ಯಥೆ ಪಟ್ಟು ಕಾರಿನ ಬಾಗಿಲನ್ನು ತೆಗೆದು ನೋಡಿದ. ಹಿಂದಿನ ಸೀಟಿನಲ್ಲಿದ್ದ ಚೀಲ ಹಾಗೇ ಇತ್ತು. ಅದನ್ನು ಒಳತಂದು ಚೆನ್ನಾಗಿರುವ ಹಣ್ಣುಗಳನ್ನು ಆರಿಸಿ ತೆಗೆದಿಟ್ಟು ಕೊಂಡ. ಬಾಡಿದ್ದ ಹೂವುಗಳನ್ನು ಗಿಡದ ಬುಡಕ್ಕೆ ಹಾಕಿದ. ನಾಳೆ ರಾತ್ರಿ ಮರೆಯದೇ ಹಣ್ಣುಗಳನ್ನು ತೆಗೆದುಕೊಂಡು ಹೋಗಿ ಕೊಡಬೇಕೆಂದು ಕೊಂಡ.

* * *

ವಿನೋದ್ ಮಹೇಶನ ಸಹೋದ್ಯೋಗಿ. ಮಹೇಶನ ತಾಯಿ ಊರಿನಲ್ಲಿಲ್ಲ ವೆನ್ನುವು ದನ್ನ ತಿಳಿದಿದ್ದ ಅವನು, ರಾತ್ರಿ ಊಟಕ್ಕೆ ಆಹ್ವಾನಿಸಿದ್ದ. ಈ ಹಿಂದೆ ಕೆಲವು ಸಲ ಅವರ ಮನೆಗೆ ಹೋಗಿದ್ದನಾದ್ದರಿಂದ ಸಂಕೋಚವೇನಿರಲಿಲ್ಲ. ಅವನ ಹೆಂಡತಿ ರಾಧಿಕಾ ಸಹ ಚೆನ್ನಾಗಿ ಪರಿಚಿತಳಾಗಿದ್ದಳು.

"ಬನ್ನಿ ಬನ್ನಿ" ಗಂಡ ಹೆಂಡತಿ ಇಬ್ಬರೂ ವಿಶ್ವಾಸದಿಂದ ಬರಮಾಡಿಕೊಂಡರು. ಸ್ನೇಹಿತರಿಬ್ಬರೂ, ಆಫೀಸಿನ ಬಗ್ಗೆ ಮಾತನಾಡಲು ಪ್ರಾರಂಭಿಸಿದಾಗ, ರಾಧಿಕಾ

ಅಡುಗೆ ಮನೆಗೆ ತೆರಳಿದಳು. ಟೇಬಲ್ ಮೇಲೆ ತಟ್ಟೆ, ಲೋಟಗಳನ್ನಿಟ್ಟು ಊಟಕ್ಕೆ ಕರೆದಳು. ಮೂವರೂ ಊಟಕ್ಕೆ ಕುಳಿತರು. ಲೋಕಾರೂಢಿಯಾಗಿ ಮಾತನ್ನಾಡುತ್ತಾ ಊಟವನ್ನು ಪ್ರಾರಂಭಿಸಿದರು.

"ನಿಮ್ಮ ಮದುವೆ ಊಟವನ್ನು ಯಾವಾಗ ಹಾಕಿಸ್ತೀರಿ ಮಹೇಶ್" ಎಂದು ರಾಧಿಕಾ ಕೇಳಿದಾಗ ಮಹೇಶ ಸ್ನೇಹಿತನತ್ತ ನೋಡಿದ.

"ಸದ್ಯಕ್ಕೆ ಆ ಆಲೋಚನೆ ಇಲ್ಲ"

"ಮತ್ತೆ.... ಆವತ್ತು.... ನಿನ್ನ ಜೊತೆ ನೋಡಿದ ಆ ಹುಡುಗಿ ಯಾರು?" ಸ್ನೇಹಿತ ಪ್ರಶ್ನಿಸಿದ.

"ಅವಳು ನನ್ನ ಸ್ನೇಹಿತೆ.... ಜಸ್ಟ್ ಎ ಫ್ರೆಂಡ್...."

"ಯಾವಾಗ್ನಿಂದ ಫ್ರೆಂಡ್‌ಷಿಪ್? ಲವ್ವು, ಪ್ರೀತಿ.... ಏನೂ ಇಲ್ವಾ?"

"ಇಲ್ಲ, ಏನಿಲ್ಲ...."

"ಸುಳ್ಳು ಹೇಳ್ಬೇಡ ಮಹೇಶ್.... ನೀನು ಸುಮ್ನೆ ಹುಡುಗೀರ ಜೊತೆ ಓಡಾಡೋ ನೇಚರ್‌ನವನಲ್ಲ"

"ಅವಳು ನನ್ನ ಅತ್ತಿಗೆಯ ಕಸಿನ್.... ಹಾಗೇ ಪರಿಚಯ ಅಷ್ಟೇ...."

"ನನ್ನ ಕಸಿನ್ ಒಬ್ಬಳು ಇದ್ದಾಳೆ. ಬಿ.ಎಸ್ಸಿ. ಓದಿದಾಳೆ. ಯಾವುದೋ ಒಂದು ಆಫೀಸ್ನಲ್ಲಿ ಕೆಲಸದಲ್ಲಿದ್ದಾಳೆ.... ನೀವು ನೋಡ್ತೀವಿ ಅನ್ನೋದಾದ್ರೆ ಅವಳನ್ನು ಕರೆಸ್ತೀನಿ"

"ಬೇಡ.... ಬೇಡ...." ಮಹೇಶ ಥಟ್ಟನೆ ನುಡಿದಾಗ ವಿನೋದ್ ನಕ್ಕ.

"ಯಾಕಯ್ಯಾ ಅಷ್ಟು ಗಾಬರಿ ಆಗ್ತೀಯಾ? ಹುಡುಗಿ ತುಂಬಾ ಚೆನ್ನಾಗಿದ್ದಾಳೆ. ಒಂದು ಸಾರಿ ನೋಡು...." ಮಹೇಶನಿಗೆ ಊಟ ಸೇರದಾಯಿತು. ಇವನೆಂಥ ಸ್ನೇಹಿತ ಊಟಕ್ಕೆ ಕರೆದು, ಮದುವೆ ಪ್ರಸ್ತಾಪ ಮಾಡ್ತಿದಾನಲ್ಲ ಅಂತಂದುಕೊಂಡ.

"ಬೇಡ, ವಿನೋದ್.... ನನಗೆ ಈಗ್ಲೇ ಮದುವೆಯಾಗುವ ಐಡಿಯಾ ಇಲ್ಲ"

"ಮನೇಲಿ ಹೆಂಡ್ತಿ ಇರಬೇಕಯ್ಯಾ. ಒಂಟಿತನ ನೀಗುತ್ತೆ. ರುಚಿರುಚಿಯಾದ ಊಟ, ತಿಂಡಿ ಸಿಗುತ್ತೆ...." ಹೆಂಡತಿಯ ಕಡೆ ನೋಡಿ ಕಿರುನಗೆ ನಕ್ಕ.

ಅವಳು ಸಹಜವಾಗಿಯೇ ನಾಚಿದಳು. ಮಹೇಶ ಮೌನಿಯಾದ. ಮತ್ತೆ ಅಲ್ಲಿ ಹೆಚ್ಚು ಹೊತ್ತು ಕುಳಿತಿರುವ ಮನಸ್ಸಾಗಲಿಲ್ಲ. ಊಟ ಚೆನ್ನಾಗಿತ್ತು. ಥ್ಯಾಂಕ್ಸ್ ಎಂದು ಹೇಳಿ ಹೊರಟ. ದಾರಿಯಲ್ಲಿ ನಾನಾ ಚಿಂತನೆಗಳು ಕಾಡಿದವು. ಸುಜಯ ಆ ದಿನ ಆಫೀಸಿಗೆ ಬರಬಾರದಾಗಿತ್ತೆನಿಸಿತು. ಅವಳ ಮೇಲೆ ತುಸು ಕೋಪವೂ ಬಂದಿತು. ಒಳಗೆ ಬರುತ್ತಿದ್ದಂತೆಯೇ ಫೋನು ರಿಂಗಾಗುತ್ತಿದ್ದುದು ಕೇಳಿಸಿತು. ಧಾವಿಸಿ ಬಂದು ಎತ್ತಿಕೊಂಡ.

ದಿನೇಶನ ಧ್ವನಿ ಕೇಳಿಸಿತು. "ಏನ್ಮಾಡ್ತಿದ್ಯೋ.... ಯಾಕೆ ಇಷ್ಟು ಹೊತ್ತಾಯ್ತು?"

"ಹೊರಗೆ ಹೋಗಿದ್ದೆ. ಈಗ್ತಾನೆ ಬರ್ತಿದ್ದೀನಿ.... ನೀವು ಎಲ್ಲಾ ಹೇಗಿದೀರಿ?"

"ಎಲ್ಲಾ ಚೆನ್ನಾಗಿದೀವಿ. ನೀನು ಹೇಗಿದೀಯಾ? ಅಮ್ಮಂಗೆ ನಿಂದೇ ಚಿಂತೆ"

"ನಿಜವಾಗ್ಲೂ...?"

"ಹೂಂ ಯಾಕೋ ಹಾಗೆ ಕೇಳ್ತಿದೀಯಾ? ಅವಳು ಮಾತಾಡ್ತಾಳಂತೆ ತಗೋ...."

"ಮಹೀ ಹೇಗಿದೀಯೋ? ಊಟಕ್ಕೆ ಏನು ಮಾಡ್ತಿದೀಯ?"

"ಇದೆಯಲ್ಲ ಮಾವನ ಮನೆ...."

"ದಿನಾ ಯಾಕೆ ಹೋಗ್ಬೇಕು? ಒಂದು ಅನ್ನ ಸಾರು, ಪಲ್ಯ ಮಾಡ್ಕೊಂಡು ತಿನ್ನಬಾರದಾ?"

"ಹೇಗೋ ನಡೆಯುತ್ತೆ ಬಿಡಮ್ಮ. ಹೇಗಿದೀಯಾ....? ಎಲ್ಲೆಲ್ಲಿ ಹೋಗಿದ್ದೆ?"

"ಇವತ್ತು ಇಲ್ಲೇ ಹತ್ತಿರದಲ್ಲಿ ಸುತ್ತಾಡುವುದಕ್ಕೆ ಹೋಗಿದ್ವು....ಇನ್ನು ಡೆಲ್ಲಿ ಪೂರ್ತಿ ಸುತ್ತಾಡುಕ್ಕೆ ಹೋಗಿಲ್ಲ. ನಿಂಗೆ ರಜ ಇದ್ರೆ ನೀನೂ ಇಲ್ಲಿಗೆ ಬಾ"

"ಇಲ್ಲಮ್ಮ ನಂಗೆ ರಜ ಇಲ್ಲ. ನೀನೇ ಆದಷ್ಟು ಬೇಗನೆ ಬಾ"

"ದೀಪಾ ಮಾತಾಡ್ತಾಳಂತೆ ಕೊಡ್ಲಾ...?"

"ಹಲೋ ಮಹೇಶ್ ಹೇಗಿದೀರಿ?"

"ಚೆನ್ನಾಗಿದೀನಿ ಅತ್ಗೆ, ನೀವು ಹೇಗಿದೀರಿ?"

"ನಿಮ್ಮ ದಯೆಯಿಂದ ಖುಷಿಯಾಗಿದೀನಿ ಮಹೇಶ್, ಥ್ಯಾಂಕ್ಸ್...."

"ನೀವು ಥ್ಯಾಂಕ್ಸ್‌ನ ಸುಜಯಂಗೆ ಹೇಳ್ಬೇಕು...."

"ಅವಳ ಜೊತೆ ಮಾತನಾಡಿ ತುಂಬಾ ವಿಷಯ ತಿಳಿಸ್ಬೇಕು. ಅವಳಿಗೆ ನಾನು ಕೇಳ್ದೆ ಅಂತ ಹೇಳಿ...."

"ಆಯ್ತು ಹೇಳ್ತೀನಿ" ಅಲ್ಲಿಗೆ ಮಾತು ಮುಗಿದಿತ್ತು. ಗುಡ್‌ನೈಟ್ ಹೇಳಿ ರಿಸೀವರ್‌ನ ಇಟ್ಟ. ಸುಜಯನ ಮನೆಗೆ ಊಟಕ್ಕೆ ಹೋಗ್ತಾ ಇದೀರ ಅಂತ ಅತ್ತಿಗೆ ಕೇಳಲೇ ಇಲ್ಲವಲ್ಲ.... ಯಾಕೆ...? ಒಂಟಿ ಬ್ರಹ್ಮಚಾರಿಯ ಬದುಕು ಬಹಳ ಕಷ್ಟ. ನಾಳೆಯಿಂದ ನಾನೇ ಅಡುಗೆ ಮಾಡ್ಕೋಬೇಕು ಎಂದು ನಿರ್ಧರಿಸಿದ. ಆದರೆ, ಏಕ್‌ದಂ ಸುಜಯಳ ಮನೆಗೆ ಊಟಕ್ಕೆ ಹೋಗುವುದನ್ನು ನಿಲ್ಲಿಸಿದರೆ ಅದೇ ಕಾರಣ ಮಾಡಿಕೊಂಡು, ಅವಳು ದೂರವಾಗಿ ಬಿಡುವಳೋ ಏನೋ ಎಂಬ ಆಲೋಚನೆಯೂ ಬಂದಾಗ, ಮೊದಲು ಅವಳೊಡನೆ ಮಾತನಾಡಬೇಕು ಎಂದುಕೊಂಡ.

* * *

ಆಫೀಸ್ನಿಂದ ಮನೆಗೆ ವಾಪಸ್ಸು ಬರುವ ವೇಳೆಗೆ ನಿತ್ಯಕ್ಕಿಂತ ಸ್ವಲ್ಪ ಹೊತ್ತಾಗಿತ್ತು. ಗೇಟಿನ ಬಳಿ ಕಾಯುತ್ತಾ ನಿಂತಿದ್ದ ಸುಜಯಳನ್ನು ಕಂಡು ಅವನ ಕಣ್ಣುಗಳು ಕಿರಿದಾದವು. ಸ್ಕೂಟರನ್ನು ನಿಲ್ಲಿಸಿ ಅವಳ ಕಡೆಗೆ ತಿರುಗಿ ಬಲವಂತವಾಗಿ ನಕ್ಕ.

"ಹಲೋ...! ಯಾರಿಗಾಗಿ ಕಾಯ್ತಾ ನಿಂತಿದೀರಿ ಇಲ್ಲಿ?" ಕೇಳಿದ.

"ನಿಮ್ಮ ಮನೆ ಬಾಗಿಲಿನಲ್ಲಿ ಬೇರೆ ಇನ್ಯಾರಿಗೆ ಕಾಯ್ತಾ ನಿಂತಿರ್ತಾರೆ. ನೀವೇ

ಹೇಳಿ" ಎಂದು ಮರು ಸವಾಲೆಸೆದಳು.

"ಎಸ್. ಎಂಥ ದಡ್ಡ ಪ್ರಶ್ನೆ ಅಲ್ವಾ...? ಬನ್ನಿ" ಎನ್ನುತ್ತಾ ಬಾಗಿಲನ್ನು ತೆರೆದ.

"ಪರವಾಗಿಲ್ಲ. ಹೊರಗೆ ನಿಂತಿರ್ತೀನಿ...." ಸಂಕೋಚದಿಂದ ನುಡಿದಳು.

"ನಂಗೆ ಮುಜುಗರವಾಗುತ್ತೆ. ಎನಿವೇ ನಿಮ್ಮಿಷ್ಟ...." ಎನ್ನುತ್ತಾ ಒಳಗಿನಿಂದ ಒಂದು ಕುರ್ಚಿಯನ್ನು ತಂದು ಹಾಕಿದ. "ಏನು ವಿಷಯ?" ಕೇಳಿದ.

"ಯಾಕೋ ಒಂಥರಾ ಇದೀರಲ್ಲ ಮಹೇಶ್.... ನನ್ನಿಂದ ಬೇಜಾರಾಯ್ತಾ?"

"ಏನಿಲ್ಲ ಹೇಳಿ...." ಎಂದ.

"ನೆನ್ನೆ ರಾತ್ರಿ ನೀವು ಊಟಕ್ಕೆ ಬರಲಿಲ್ಲ. ನಿಜವಾಗ್ಲೂ ನಿಮ್ಮ ಸ್ನೇಹಿತರ ಮನೆಗೆ ಊಟಕ್ಕೆ ಹೋಗಿದ್ರಾ? ಅಥವಾ ತಪ್ಪಿಸ್ಕೊಳ್ಳೋಕೆ ಸುಳ್ಳು ಹೇಳಿದ್ರಾ?"

"ಅದನ್ನು ಕೇಳೋಕೆ ಅಂತ ಇಲ್ಲೀತನಕ ಬಂದ್ರಾ? ಫೋನು ಮಾಡಿದ್ರೆ ವಿಷಯ ತಿಳೀತಿತ್ತು. ಖಂಡಿತಾ ಊಟಕ್ಕೆ ಹೋಗಿದ್ದೆ. ಬೇಕಾದ್ರೆ ಅವನ ಫೋನು ನಂಬರ್ ಕೊಡ್ತೀನಿ. ನೀವೇ ಮಾತ್ನಾಡಿ ತಿಳ್ಕೊಳ್ಳಿ...."

"ಹಾಗಲ್ಲ. ಯಾಕೋ ಅನುಮಾನ ಬಂತು"

"ಹೊಟ್ಟೆ ಹಸಿದ್ಕೊಂಡು ಇರೋ ಜಾಯಮಾನದವನಲ್ಲ ನಾನು.... ಈಗೇನು ತಗೋತೀರಿ? ಕಾಫಿ? ಟೀ...."

"ಏನೂ ಬೇಡ.... ನನ್ನ ಜೊತೆ ಕ್ಲಿನಿಕ್‌ಗೆ ಬರ್ತೀರಾ?"

"ಷ್ಯೂರ್...." ಎಂದು ಹೇಳಿ ಕಾರನ್ನು ಹೊರತಂದ.... ಅವಳಿಗೆ ಕಾರಿನಲ್ಲಿ ಕುಳಿತು ಕೊಳ್ಳುವಂತೆ ಹೇಳಿ, ಕುರ್ಚಿಯನ್ನು ಒಳಗಿಟ್ಟು ಬಾಗಿಲಿಗೆ ಬೀಗ ಹಾಕಿ ಬಂದು ಡ್ರೈವರ್ ಸೀಟನ್ನೇರಿದ....

"ನನ್ನಿಂದ ತೊಂದ್ರೆ ನಿಮಗೆ...."

"ತೊಂದ್ರೆ ಏನಿಲ್ಲ ಮೇಡಂ... ನಾವಿನ್ನು ಅದೇ ಸ್ಟೇಜ್‌ನಲ್ಲಿರುವುದು ಬೇಡ. ಮುಂದಿನ ಸ್ಟೇಜ್‌ಗೆ ಹೋಗೋಣ. ನನ್ನಿಂದ ನಿಮಗೆ ತೊಂದರೆ, ನಿಮ್ಮಿಂದ ನನಗೆ ತೊಂದರೆ, ಇದೆ ಆಲಾಪನೆ ಹಾಡ್ತಿದ್ದರೆ, ಪಲ್ಲವಿ ಹಾಡೋದು ಯಾವಾಗ? ಆಂ....?" ನಕ್ಕ

"ನೀವು ತುಂಬಾ ಚೆನ್ನಾಗಿ ಮಾತನಾಡ್ತೀರಿ...."

"ಅದಕ್ಕೆ ನಾನು ಎಲ್ರಿಗೂ ಇಷ್ಟವಾಗೋದು. ನೆನ್ನೆ ಏನಾಯ್ತು ಗೊತ್ತಾ...? ಎಂದು ಹೇಳಲಿದ್ದವನು ಅಷ್ಟಕ್ಕೆ ಮಾತು ನಿಲ್ಲಿಸಿದ. ಈಗ ಬೇಡ ಬಿಡಿ.....ಮುಂದೆ ಎಂದಾದರೂ ಹೇಳ್ತೀನಿ" ಎಂದ.... ಕಾರು ಕ್ಲಿನಿಕ್‌ನ ಬಳಿ ಬಂದು ನಿಂತಿತು.

* * *

"ಒಳಗೆ ನಾನೊಬ್ಬೇ ಹೋಗಿ ಮಾತನಾಡ್ತೀನಿ. ನೀವು ಹೊರಗೇ ಇರಿ.....ಪ್ಲೀಸ್" ಮಹೇಶ ಅಚ್ಚರಿಯಿಂದ ಅವಳನ್ನು ನೋಡಿ ತಲೆಯಾಡಿಸಿದ. ಹೊರಗೇ ನಿಂತು

ಅವಳು ಹೇಳುವುದನ್ನು ಕೇಳಿಸಿಕೊಂಡ.

"ಹೇಗಿದೀರಿ.....? ಏನಂತೀರಿ?" ಡಾಕ್ಟರು ಕೇಳಿದರು.

"ನನ್ನ ಕೈಯಲ್ಲಿ ನೀವು ಹೇಳಿದ್ದನ್ನು ಬರೆಯಕ್ಕಾಗಲಿಲ್ಲ ಡಾಕ್ಟ್ರೇ....ನನಗೆ ಏನೂ ನೆನಪಿಗೆ ಬರಲಿಲ್ಲ"

"ಸುಳ್ಳು, ನೀವು ಯಾವ ಪ್ರಯತ್ನವನ್ನೂ ಪಟ್ಟಿಲ್ಲ. ನಿಮ್ಮ ಮುಖವೇ ಅದನ್ನು ತಿಳಿಸುತ್ತಿದೆ. ಬಹುಶಃ ನಿಮಗೆ ಬರೆಯೋಕೆ ಇಷ್ಟವಿಲ್ಲ"

"ಹಾಗೇನಿಲ್ಲ ಡಾಕ್ಟ್ರೇ.... ಯಾವುದೂ ಪೂರ್ತಿ ನೆನಪಿಗೆ ಬರುತ್ತಿಲ್ಲ. ಎಲ್ಲಾ ಅರ್ಥಂಬರ್ಥ.... ಹೇಗೆ ಬರೆಯಲಿ?"

"ಪರವಾಗಿಲ್ಲ ಬಿಡಿ. ಇನ್ನು ಒಂದು ವಾರ ಸಮಯ ತೆಗೆದುಕೊಳ್ಳಿ. ಆದಾಗ ಸ್ವಲ್ಪ ಸ್ವಲ್ಪ ಎಷ್ಟೆಷ್ಟು ನೆನಪಿಗೆ ಬರುತ್ತೋ ಅದನ್ನೇ ಬರೆದಿಡಿ... ತೊಂದರೆ ಏನೂ ಇಲ್ಲ"

"ಬೇಡ ಡಾಕ್ಟ್ರೇ ನಾನೇ ಒಂದು ನಿರ್ಧಾರಕ್ಕೆ ಬಂದಿದೀನಿ. ನಾನು ಮಹೇಶನ್ನ ಮರೆಯಲು ಪ್ರಯತ್ನಿಸುತ್ತೇನೆ. ಅವರನ್ನು ಮದುವೆ ಆಗುವ ಆಸೆಯನ್ನೇ ಬಿಟ್ಟು ಬಿಡ್ತೀನಿ"

"ಇದು ನಿಮ್ಮ ಸಮಸ್ಯೆಗೆ ಪರಿಹಾರವಾಗುವುದಿಲ್ಲ"

"ಇರಬಹುದು, ಈ ಸಮಸ್ಯೆ ಬಂದಿದ್ದು ಇದ್ದಕ್ಕಿದ್ದಂತೆ.... ಅಲ್ಲಿಗೆ ಹೋಗದಿದ್ದರೆ ಆಗ ತಾನೇ ತಾನಾಗಿ ಎಲ್ಲ ಸಮಸ್ಯೆಗಳೂ ಬಗೆ ಹರಿಯುತ್ತದೆ ಅಂತ ನನಗನ್ನಿಸುತ್ತೆ"

"ಈ ವಿಷಯ ನಿಮ್ಮ ಸ್ನೇಹಿತ ಮಹೇಶ್‌ಗೆ ಗೊತ್ತಾ?"

"ಹುಂ ಗೊತ್ತಿದೆ, ಹೇಳಿದೀನಿ.... " ಎಂದು ಸುಳ್ಳು ಹೇಳಿದಳು.

"ಓ... ಅದಕ್ಕೇ ಅವರು ನಿಮ್ಮ ಜೊತೆಗೆ ಈ ದಿನ ಬಂದಿಲ್ಲ ಅಂತ ಕಾಣುತ್ತೆ. ಅವರು ನಿಮ್ಮ ನಿರ್ಧಾರಕ್ಕೆ ಒಪ್ಪಿಕೊಂಡ್ರಾ! ಪೂರ್ ಫೆಲೋ.... ನಿಮ್ಮ ಸಮಸ್ಯೆಯನ್ನು ದೂರ ಮಾಡೋಕೆ ಬಹಳ ಕಾತುರರಾಗಿದ್ದಾರೆ... ನೀವು ಯಾಕೆ ಈ ನಿರ್ಧಾರ ಮಾಡಿದಿರಿ?"

"ಇದೇ ಸರಿ ಅಂತ ನನಗೆ ಅನ್ನಿಸ್ತು"

"ಇದು ಸರಿ ಅಲ್ಲ ಸುಜಯಾರವರೇ, ನಿಮ್ಮ ಸಮಸ್ಯೆಗೆ ಇದು ಪರಿಹಾರವಲ್ಲ. ಇದಕ್ಕೆ ನನ್ನ ಸಮ್ಮತಿ ಇಲ್ಲ. ಇದನ್ನು ನಾನು ಪಲಾಯನವಾದ ಅಂತ ಹೇಳ್ತೀನಿ. ನಿಮ್ಮ ಮನದೊಳಗೆ ಅಡಗಿರುವ ಭೀತಿ, ಗೊಂದಲ ಯಾವುದೇ ಇರಲಿ. ಮತ್ತೆಂದೂ ಪ್ರಕಟವಾಗುವುದಿಲ್ಲ ಅಂತ ಹೇಗೆ ತಾನೇ ಹೇಳ್ತೀರಿ? ನೀವು ಬೇರೆ ಯಾರನ್ನೇ ಮದುವೆ ಆದರೂ ನಿಮ್ಮ ಸಮಸ್ಯೆ ಬೇರೆ ರೀತಿಯಲ್ಲಿ ಪ್ರಕಟವಾಗಬಹುದು.... ಅದರಿಂದ ನಿಮಗೇ ತೊಂದರೆ"

"ನಾನು ಮದುವೆಯನ್ನೇ ಆಗಬಾರದೆಂದು ನಿರ್ಧರಿಸಿದ್ದೇನೆ"

ಡಾಕ್ಟರ್ ಕಿರುನಗೆ ನಕ್ಕರು "ಒಂದು ಸಮಸ್ಯೆಗೆ ಹೆದರಿ, ಏನೋ ನಿರ್ಧಾರ ತಗೊಳುತ್ತಿದ್ದೀರಿ? ಇದರಿಂದ ನಿಮ್ಮ ಮನೋಬಲ ಹೆಚ್ಚುವುದಿಲ್ಲ. ಎನಿವೇ ನಿಮ್ಮ ನಿರ್ಧಾರಕ್ಕೆ ನಾನು ಏನನ್ನೂ ಹೇಳುವುದಿಲ್ಲ. ಆದರೆ ಮುಂದೆ ಎಂದಾದರೂ ನನ್ನ ಸಲಹೆಯ ಅಗತ್ಯವೇನಾದರೂ ಬಿದ್ದರೆ ಅನುಮಾನಿಸದೇ ಇಲ್ಲಿಗೆ ಖಂಡಿತಾ ಬನ್ನಿ. ನಾವು ಇರುವುದೇ ಸಮಸ್ಯೆಗಳಿಗೆ ಪರಿಹಾರವನ್ನು ಹೇಳುವುದಕ್ಕೆ.... ಆಲ್ ದಿ ಬೆಸ್ಟ್" ಡಾಕ್ಟರ್ ಹಾರೈಸಿದರು.

"ಡಾಕ್ಟರೇ.... ನಿಮ್ಮ ಫೀಸು ಎಷ್ಟಾಯಿತು?"

"ಮೂರು ವಿಸಿಟ್‌ಗೆ ನಾನೂರೈವತ್ತು ರೂಪಾಯಿ" ಸುಜಯ ಹಣವನ್ನು ಎಣಿಸಿಕೊಟ್ಟು ಥ್ಯಾಂಕ್ಸ್ ಹೇಳಿ ಹೊರ ಬಂದಳು. ಮಹೇಶ ಹೊರಗಡೆ ಅಲ್ಲಿಯೇ ನಿಂತಿದ್ದ. ಅವಳಿಗೆ ಅವನನ್ನು ನೋಡುವುದು ಕಷ್ಟವೆನಿಸಿತು. ತಗ್ಗಿದ ಧ್ವನಿಯಲ್ಲಿ "ಸಾರಿ" ಎಂದಳು.

"ಯಾವುದಕ್ಕೆ?"

"ನಮ್ಮಿಬ್ಬರ ಮಾತುಗಳನ್ನು ನೀವು ಕೇಳಿಸಿಕೊಂಡಿದ್ದೀರಿ.... ನಿಮಗೆ ಎಲ್ಲ ವಿಷಯ ಅರ್ಥವಾಗಿರಬೇಕಲ್ಲವೇ?"

"ಸ್ವಲ್ಪ ಸ್ವಲ್ಪ ಅರ್ಥವಾಗಿದೆ. ಇಲ್ಲಿ ಅದೆಲ್ಲದರ ಚರ್ಚೆ ಬೇಡ. ಬನ್ನಿ... ಹೋಗೋಣ"

"ನಾನು ಇಲ್ಲಿಂದ್ಲೇ ನೇರವಾಗಿ ಮನೆಗೆ ಹೋಗ್ತೀನಿ...."

"ಹೋಗುವಿರಂತೆ. ಮೊದಲು ಕಾರ್‌ನಲ್ಲಿ ಕುಳಿತುಕೊಳ್ಳೋಣ...." ಇಬ್ಬರೂ ಕುಳಿತರು.

"ಹುಂ. ಈಗ ಹೇಳಿ, ನಿಮ್ಮ ನಿಜವಾದ ಪ್ರಾಬ್ಲಂ ಏನೂಂತ...."

"ನಂಗೊತ್ತಿಲ್ಲ....."

"ನಂಗೊತ್ತು.... ಹೇಳ್ಲಾ? ನನ್ನನ್ನು ಫೂಲ್ ಮಾಡೋಕ್ಕೆ ಪ್ರಯತ್ನ ಮಾಡುತ್ತಿದ್ದೀರಿ. ನಿಮ್ಮ ಮನಸ್ಸಿಗೆ ಬಂದ ಹಾಗೇ ಬಿಹೇವ್ ಮಾಡ್ತೀರಿ. ದಿನೇಶನ್ನ ತಿರಸ್ಕರಿಸಿ, ಅವನಿಗೆ ಅವಮಾನ ಮಾಡಿ, ಅದಕ್ಕೆ ನಿಮ್ಮದೇ ಆದ ಏನೋ ಕಾರಣ ಹೇಳಿದಿರಿ.... ಈಗ ನನ್ನ ಸರದಿ.... ನಾನು ಸುಮ್ಮನೇ ಇರುವವನಲ್ಲ....."

"ಏನ್ಮಾಡ್ತೀರಿ? ಬ್ಲ್ಯಾಕ್‌ಮೇಲ್ ಮಾಡ್ತೀರಾ?"

"ನಾನು ಅಂಥ ಕಳಪೆ ಮನುಷ್ಯನಲ್ಲ. ನಾನು ಇದನ್ನು ಛಾಲೆಂಜ್ ಆಗಿ ತಗೊಳ್ತೀನಿ. ನಿಮ್ಮ ಇಷ್ಟಕ್ಕೆ ವಿರುದ್ಧವಾಗಿಯಾದರೂ ನಿಮ್ಮನ್ನೇ ಮದುವೆಯಾಗ್ತೀನಿ"

"ನಿಮ್ಮ ಬಲವಂತಕ್ಕೆ ನಾನು ನಿಮ್ಮನ್ನು ಮದುವೆಯಾಗಲು ಸಾಧ್ಯವಿಲ್ಲ"

"ಬಲವಂತ ಮಾಡುವುದಿಲ್ಲ... ಆದರೆ ನೀವಾಗಿಯೇ ನನ್ನನ್ನು ಮದುವೆಯಾಗುವುದಾಗಿ ತಿಳಿಸ್ತೀರಿ. ಇದು ಖಂಡಿತಾ.... ನಾನು ಆ ದಿನಕ್ಕಾಗಿ ಕಾಯ್ತೀನಿ"

"ಬೇಡ ಮಹೇಶ್... ನಿಮ್ಮ ನೆಮ್ಮದಿಯನ್ನು ನೀವಾಗಿಯೇ ಹಾಳು ಮಾಡಿಕೊಳ್ತೀರಿ.... ನನಗೆ ಅದು ಇಷ್ಟವಿಲ್ಲ"

"ಕೆಡೋದು ನನ್ನ ನೆಮ್ಮದಿ ತಾನೇ? ಇದಕ್ಕೆ ನಿಮಗ್ಯಾಕೆ ಚಿಂತೆ?" ಈಗ ಮೊದಲು ನಿಮ್ಮನ್ನು ನಿಮ್ಮ ಮನೆಗೆ ತಲುಪಿಸ್ತೀನಿ" ಅವನಿಗೆ ಕೋಪ ಬಂದಿದೆ ಎಂದರಿತಳು.

"ಸಾರಿ, ಮಹೇಶ್.... ನನ್ನನ್ನು ತಪ್ಪಾಗಿ ಭಾವಿಸಬೇಡಿ. ನಿಮಗೆ ನೋವನ್ನುಂಟು ಮಾಡುವ ಉದ್ದೇಶ ನನಗಿಲ್ಲ"

"ಪರವಾಗಿಲ್ಲ ಬಿಡಿ. ನಮಗೆ ಬೇಕಾದವರು ಕೊಡುವುದು ನೋವನ್ನೇ ಅಂತ ನನಗೀಗ ಅರ್ಥವಾಗಿದೆ" ಮುಂದೆ ಮಾತನಾಡದೇ ನೇರವಾಗಿ ಕಾರನ್ನು ಅವರ ಮನೆಯ ಮುಂದೆ ನಿಲ್ಲಿಸಿದ. ಅವನು ಇಳಿಯುವುದಿಲ್ಲವೇನೋ ಎಂಬ ಸಂಶಯ ಕಾಡಿತು. ಹಾಗೇ ಕುಳಿತಿದ್ದಳು.

"ನಿಮ್ಮ ಮನೆಯ ತನಕ ಬಂದು, ನಿಮ್ಮ ಮನೆಯ ಊಟವನ್ನು ತಿರಸ್ಕರಿಸುವಷ್ಟು ಕೃತಘ್ನ ನಾನಲ್ಲ. ನಿಮ್ಮ ತಂದೆ ತಾಯಿಗೆ ಅವಮಾನ ಮಾಡುವ ಮನಸ್ಸಿಲ್ಲ. ಆದರೆ ಬಹುಶಃ ಇವತ್ತೇ ಕಡೇ ದಿನ...." ಎಂದು ಹೇಳಿದ

"ಪ್ಲೀಸ್ ಹಾಗೆಲ್ಲ ಮಾಡಬೇಡಿ. ಇದಕ್ಕೂ ಊಟಕ್ಕೂ ಏನು ಸಂಬಂಧ?"

"ನಮ್ಮ ನಮ್ಮಲ್ಲಿ ಸಂಬಂಧ ಬೆಳೆಯದೇ ಇದ್ದರೆ ಕೇವಲ ಊಟಕ್ಕಾಗಿ ಬರುವುದು ಏನು ಚೆನ್ನ ಹೇಳಿ.....? ಕೇಳ್ದೋರ್ಗೆ ಜೋಕ್ ಅನ್ನುತ್ತೆ ಅಷ್ಟೇ"

"ಹಾಗಾದ್ರೆ, ನಂಗೆ ಯೋಚಿಸುವುದಕ್ಕೆ ಸ್ವಲ್ಪ ಸಮಯ ಬೇಕು...."

"ಸಮಯ ಯಾಕೆ? ಈಗಾಗ್ಲೇ ಸಾಕಷ್ಟು ಲೇಟ್ ಆಗಿದೆ. ಎಸ್. ಆರ್ ನೋ.... ಅಷ್ಟೇ"

"ನಂದೂ ಒಂದೆರಡು ಕಂಡೀಷನ್‌ಗಳಿವೆ.. , ನನ್ನ ಸಮಸ್ಯೆ ನನಗೇ ಇರಲಿ. ನೀವು ಮತ್ತೆ ಡಾಕ್ಟರರ ಹತ್ರ ಹೋಗೋ ವಿಷಯ ಹೇಳಕೂಡದು...." ಎನ್ನುತ್ತಾ ಕೆಳಗಿಳಿದಳು.

"ಒಂದೇ ಕಂಡೀಷನ್ ಹೇಳಿದ್ದು.... ಉಳಿದದ್ದು?"

"ಇನ್ನೆಂದಾದ್ರೂ ಹೇಳ್ತೀನಿ.... ಈಗ ಪ್ಲೀಸ್ ಇಳಿಯಿರಿ" ಅವನು ಇಳಿದ.

"ನೀವೇನೋ ಹೇಳ್ತೀನಿ ಅಂತ ಅಂದಿದ್ರಿ...."

"ಓ.... ಅದಾ! ಇನ್ನೆಂದಾದ್ರೂ ಹೇಳಿದ್ರಾಯ್ತು.... ಈಗ ಬೇಡ" ಇಬ್ಬರೂ ಮಾತನಾಡುತ್ತಾ ಸಾಗಿದ್ದರು. ಆದರೆ ರಾಜಿಯಾದರೆಂದು ಇಬ್ಬರಲ್ಲೂ ಯಾವ ಸಮಾಧಾನವಿರಲಿಲ್ಲ. ಒಬ್ಬೊಬ್ಬರ ಮನಸ್ಸು ಒಂದೊಂದು ತರಹ ತನ್ನದೇ ಆದ ರೀತಿಯಲ್ಲಿ ಚಿಂತಿಸುತ್ತಿತ್ತು.

*    *    *

ಈ ಹಿಂದೆ ಉಗ್ರಾಣದಿಂದ ಹೊರಕ್ಕೆ ಎಳೆದಿದ್ದ ಸಾಮಾನುಗಳು ಹಾಗೇ ಬಿದ್ದಿದ್ದವು. ವ್ಯಾಕ್ಯೂಂ ಕ್ಲೀನರ್‌ನಿಂದ ಪೆಟ್ಟಿಗೆಯ ಹಿಂದೆ ಇದ್ದ ಧೂಳನ್ನು ತೆಗೆದ. ಹಳೇ ಕಾಲದ ಕಬ್ಬಿಣದ ಪೆಟ್ಟಿಗೆ.... ಅದಕ್ಕೆ ಒಂದು ಬೀಗ ಹಾಕಿತ್ತು.... ಬೀಗ ಹಾಕಿ ಮುಚ್ಚಿಡುವಂಥ ಅಮೂಲ್ಯವಾದ ವಸ್ತು ಏನಿರಬಹುದು? ಎಷ್ಟು ವರ್ಷಗಳಿಂದ ಈ ಪೆಟ್ಟಿಗೆ ಹೀಗೇ ಈ ಉಗ್ರಾಣದಲ್ಲಿ ಬಿದ್ದದೆಯೋ. ಇಲಿಗಳ ಕಾಟದಿಂದಾಗಿ ಹೊರಬಂದಿದೆ. ಏನಿದೆ ಅಂತ ನೋಡೇ ಬಿಡ್ತೀನಿ.... ಬೀಗದ ಕೈಗಳ ಗೊಂಚಲನ್ನು ತಂದು ಬೀಗವನ್ನು ತೆಗೆದ. ಬಗಿಲ ಕೊರಕೊರ ಸದ್ದು ಮಾಡಿತು. ಅದರ ತುಂಬಾ ಎಂಥದೋ ಹಳೆಯ ಕಾಗದ ಪತ್ರಗಳು, ಫೋಟೋಗಳು.... ಈ ಫೋಟೋಗಳು ಯಾರದ್ದು? ಒಳಗೆ ಯಾಕೆ ಇಟ್ಟಿದೆಯೋ? ಒಂದೊಂದನ್ನೇ ಹೊರ ತೆಗೆದು ಧೂಳನ್ನು ಒರೆಸಿ ಸಮಾಧಾನವಾಗಿ ನೋಡಿದ. ಅವರೆಲ್ಲ ಯಾರೋ ಯಾವಾಗ ತೆಗೆಸಿದ್ದೋ ಒಂದೂ ತಿಳಿಯಲಿಲ್ಲ. ತನ್ನ ಬಾಲ್ಯದ ಫೋಟೋ ಯಾವುದಾದರೂ ಇರಬಹುದೇ ಎಂದುಕೊಂಡು ತೀವ್ರ ಗಮನವಿಟ್ಟು ನೋಡಿದ. ಯಾವುದೂ ಗೊತ್ತಾಗಲಿಲ್ಲ. ತಾನು, ದಿನೇಶ ಅಣ್ಣ ತಮ್ಮಂದಿರು, ಆದರೆ ಇಬ್ಬರೂ ಒಟ್ಟಿಗೆ ಇರುವ ಫೋಟೋ ಸಹ ಇರಲಿಲ್ಲ. ಒಂದೆರಡು ಗ್ರೂಪ್ ಫೋಟೋಗಳಿದ್ದವು. ಅದರಲ್ಲಿ ದಿನೇಶನಿದ್ದನೋ, ತಾನು ಇದ್ದೆನೋ ಅದೂ ಗೊತ್ತಾಗಲಿಲ್ಲ. ಮೈತುಂಬಾ ಸೆರಗು ಹೊದ್ದು, ಹಣೆಯಲ್ಲಿ ದೊಡ್ಡ ಕುಂಕುಮವನ್ನಿಟ್ಟುಕೊಂಡ ಹೆಂಗಸರು, ಕ್ಲೋಸ್ಡ್ ಕಾಲರಿನ ಕೋಟನ್ನು ತೊಟ್ಟು, ಪೇಟವನ್ನು ಸುತ್ತಿಕೊಂಡ ಗಂಡಸರು ಅವರೆಲ್ಲ ಯಾರ್‍ಯಾರೋ ಎಲ್ಲರೂ ಒಂದೇ ರೀತಿಯಾಗಿ ಕಾಣುತ್ತಿದ್ದರು. ಯಾರ ಮುಖವೂ ಪರಿಚಿತವೆನಿಸಲಿಲ್ಲ. ಒಂದೊಂದನ್ನೇ ಹಿಂದಕ್ಕೆ ತೆಗೆದಿಟ್ಟ. ಕಾಗದ ಪತ್ರಗಳನ್ನು ನೋಡಬೇಕೆನಿಸಲಿಲ್ಲ. ಪೆಟ್ಟಿಗೆಯನ್ನು ಮುಚ್ಚಿ ಮತ್ತೆ ಬೀಗ ಹಾಕಿ ಮತ್ತೆ ಎಲ್ಲವನ್ನೂ ಉಗ್ರಾಣಕ್ಕೆ ತಳ್ಳಿದ.

* * *

ವನಜಮ್ಮ ಡೆಲ್ಲಿಗೆ ಹೋಗಿ ಮೂರು ತಿಂಗಳುಗಳು ಕಳೆಯುತ್ತಾ ಬಂದಿದ್ದವು. ದಿನೇಶ ತನಗೆ ಬಿಡುವು ಸಿಕ್ಕಾಗ ಹೆಂಡತಿಯನ್ನು ತಾಯಿಯನ್ನು ಪ್ರೇಕ್ಷಣೀಯ ಸ್ಥಳಗಳಿಗೆ ಕರೆದುಕೊಂಡು ಹೋಗಿದ್ದ. ಆಗ್ರಾಕ್ಕೆ ಹೋಗಿ ಬಂದರು. ಹುಣ್ಣಿಮೆಯ ಬೆಳಕಿನಲ್ಲಿ 'ತಾಜ್‌ಮಹಲ್' ಅಮೋಘವಾಗಿ ಕಂಡಿತ್ತು.

"ಮೊಘಲರನ್ನು ನಿಜವಾಗಿಯೂ ಪ್ರಶಂಸೆ ಮಾಡಬೇಕು. ಅವರ ಆಳ್ವಿಕೆಯ ಕಾಲದಲ್ಲಿ ಅವರ ನೆನಪಿಗಾಗಿ ಎಂತೆಂಥ ಭವ್ಯವಾದ ಸ್ಮಾರಕಗಳನ್ನು ನಿರ್ಮಿಸಿದ್ದಾರೆ. ಇದನ್ನೆಲ್ಲ ಚರಿತ್ರೆಯಲ್ಲಿ ಓದಿದ್ದೆವು. ಇವತ್ತು ಕಣ್ಣಾರೆ ಕಂಡಿದ್ದಾಯಿತು" ವನಜಮ್ಮ ಮನತುಂಬಿ ನುಡಿದಳು.

"ಇನ್ನು 'ಕಾಶೀಯಾತ್ರೆ' ಒಂದು ಮಾಡಿಸಿಬಿಡು. ಅಲ್ಲಿಗೆ ನನ್ನ ಜೀವನ ಸಾರ್ಥಕ

ಆಗುತ್ತೆ..." ಬೆಂಗಳೂರಿಗೆ ಆದಷ್ಟು ಬೇಗ ವಾಪಸ್ಸು ಹೋಗ್ಬೇಕು. ಪಾಪ, ಅಲ್ಲಿ ಮಹೇಶ ಒಬ್ಬನೇ, ಎಷ್ಟು ದಿನಾಂತ ಫಜೀತಿ ಪಡ್ತಾನೆ?"

"ಅವನಿಗೂ ಬೇಗ ಮದುವೆ ಮಾಡಿಬಿಡು. ಅವನ ಒಂಟಿತನವೂ ಕಡಿಮೆ ಆಗುತ್ತೆ. ನಿನ್ನ ಚಿಂತೆಯೂ ಕಡಿಮೆ ಆಗುತ್ತೆ" ದಿನೇಶ ಹೆಂಡತಿಯ ಕಡೆ ನೋಡಿ ಕಣ್ಣು ಹೊಡೆದು ನಕ್ಕ. ದೀಪಾ ಮುಗುಳ್ನಕ್ಕಳು.

"ಹೌದು ಅತ್ತೇ. ಅವರು ಹೇಳೋದು ಸರಿ. ಆಗ ನೀವು ನಮ್ಮ ಜೊತೆ ಇಲ್ಲೇ ಇರಬಹುದು"

"ಇವನ ಮದುವೆಗೆ ಆತುರವಿತ್ತು. ಅವನ ಮದುವೆಗೆ ಆತುರವಿಲ್ಲ. ಅಲ್ಲದೇ ನಾನು ಹೀಗೆ ದಿಢೀರನೆ ಡೆಲ್ಲಿಗೆ ಬರ್ತೀನಿ ಅಂತ ಅಂದ್ಕೊಂಡೇ ಇರಲಿಲ್ಲ. ಅವನು ಖಿಲಾಡಿ, ಏನೋ ಒಂದು ಪ್ಲಾನು ಮಾಡಿ ನಿನ್ನ ಜೊತೆಗೆ ಅಂತ ನನ್ನನ್ನು ಕಳಿಸಿಕೊಟ್ಟ. ಇಲ್ದಿದ್ರೆ ಇಲ್ಲಿ ದಿನೇಶ ಒಂಟಿಯಾಗಿರ್ತಿದ್ದ. ನನಗೆ ಇವನ ಚಿಂತೆಯೂ ಕಾಡ್ತಿತ್ತು" ದಿನೇಶ ಕಳ್ಳ ನೋಟದಿಂದ ಹೆಂಡತಿಯ ಕಡೆ ನೋಡಿದ. ಅವಳೇನು ಹೇಳಿ ಬಿಡುವಳೋ ಎನ್ನುವಂತೆ 'ಶ್' ಎಂದು ಬಾಯಿ ಮೇಲೆ ಬೆರಳಿಟ್ಟು ತಲೆ ಅಡ್ಡಡ್ಡ ಆಡಿಸಿದ. ವನಜಮ್ಮನಿಗೆ ಅವರಿಬ್ಬರ ಮೇಲೆ ಗಮನವಿರಲಿಲ್ಲ. ಮಹೇಶನಿಗೆ ಎಂಥಾ ಹುಡುಗಿಯನ್ನು ಆಯ್ಕೆ ಮಾಡಬೇಕು ಎಂದು ಚಿಂತಿಸುತ್ತಿದ್ದಳು.

"ಮುಂದಿನವಾರ ನಮ್ಮ ಪರಿಚಯದವರೊಬ್ಬರು ಬೆಂಗಳೂರಿಗೆ ಹೋಗುತ್ತಿದ್ದಾರೆ. ಅವರ ಜೊತೆ ನಿನ್ನನ್ನು ಕಳಿಸಿಕೊಡ್ತೀನಿ. ಅದಕ್ಕೆ ಮುಂಚೆ ನಿನಗೆ 'ಕಾಶೀಯಾತ್ರೆ' ಮಾಡಿಸ್ತೀನಿ" ದಿನೇಶ ತಾಯಿಗೆ ಹೇಳಿದ. ಅದೇ ದಿನ ಮಹೇಶನಿಗೆ ಫೋನು ಮಾಡಿ ತಾಯಿಯನ್ನು ಬೆಂಗಳೂರಿಗೆ ರೈಲಿನಲ್ಲಿ ಕಳಿಸುತ್ತಿರುವುದಾಗಿ ತಿಳಿಸಿ ಫೋನು ಮಾಡಿದ. ವನಜಮ್ಮ ವಾಪಸ್ಸು ಬರಲು ಸಿದ್ಧತೆಗಳನ್ನು ಮಾಡಿಕೊಳ್ಳತೊಡಗಿದಳು.

* * *

"ಅಕ್ಕಾ, ನಂಗೆ ಸ್ವಲ್ಪ ದುಡ್ಡು ಬೇಕಾಗಿತ್ತು. ನನ್ನ ಅಕೌಂಟ್ ಖಾಲಿ" ಬರಿಗೈ ತೋರುತ್ತಾ ಪೆಚ್ಚುನಗೆ ನಗುತ್ತಾ ಹೇಳಿಕ ವಿವೇಕ.... ಲೀಲಾ ತಮ್ಮನನ್ನೇ ವಿಚಿತ್ರವಾಗಿ ನೋಡಿದಳು.

"ನಿನ್ನ ಪರದೇಶದ ಹುಚ್ಚು ನಿನ್ನನ್ನು ಇನ್ನೂ ಬಿಟ್ಟಿಲ್ವಾ..?"

"ಅದರಿಂದ ನಿಂಗೇನೂ ತೊಂದ್ರೆ ಇಲ್ವಲ್ಲಾ...."

"ತೊಂದ್ರೆ ಯಾಕಿಲ್ಲ? ನೀನೂ ಹೊರಟ್ಹೋದ್ರೆ ಇಲ್ಲಿ ನಾನು ಒಂಟಿಯಾಗಿ ಬಿಡ್ತೀನಲ್ಲೋ...."

"ನಿನ್ನನ್ನೂ ಅಲ್ಲಿಗೇ ಕರೆಸಿಕೊಳ್ತೀನಿ. ನೀನೇನೂ ವರಿ ಮಾಡ್ಕೋಬೇಡ...."

"ಇಲ್ಲಾ ವಿವೇಕ, ನಾನೂ ಇಲ್ದಿದ್ರೆ ಅಪ್ಪ ಒಂಟಿಯಾಗಿ ಬಿಡ್ತಾರೆ" ವಿವೇಕ ಗೊಳ್ ಅಂತ ನಕ್ಕ.

"ಅಪ್ಪನಿಗೆ ಅವರ ವಯಸ್ಸಿನ ಸ್ನೇಹಿತರಿದ್ದಾರೆ....ಅವರು ಒಂಟಿಯಲ್ಲ....ಒಂಟಿತನ ಕಾಡುತ್ತೆ ಅಂತಲೋ ಏನೋ ಅವರು ವೃದ್ಧಾಶ್ರಮದಲ್ಲೇ ಇರೋದು...."

"ನಾವು ಇರೋದು ನಾಲ್ಕು ಜನ.... ನಾಲ್ಕು ಜನವೂ ಒಂಟೊಂಟಿಯೇ.... ಇಲ್ಲಿ ಬೇಸರ ಅಂತ, ಉತ್ತರ ಭಾರತ ಪ್ರವಾಸ ಅಂತ ಹೋದ ಚಿಕ್ಕಮ್ಮ ಅಲ್ಲೇ ತಂಗಿ ಮಗಳ ಮನೇಲಿ ಸೆಟ್ಲ್ ಆದ ಹಾಗಿದೆ"

"ಅಪ್ಪನಿಗೆ, ಚಿಕ್ಕಮ್ಮನಿಗೆ ನಮ್ಮ ಚಿಂತೆ ಇಲ್ಲ. ನಂಗೆ ಮಾತ್ರ ನಿನ್ನದೇ ಚಿಂತೆ. ನೀನೂ ಬೇಗ ಸೆಟ್ಲ್ ಆಗ್ಲಿ ಅಂತ ಕಾಯ್ತಾ ಇದೀನಿ.... ಈಗ ದುಡ್ಡು ಎಷ್ಟು ಬೇಕಾಗಿತ್ತು ಹೇಳು....."

"ನನ್ನ ಚಿಂತೆ ಹಚ್ಚಿಸ್ಕೊಂಡು ಕೊರಗ್ಬೇಡಕ್ಕ. ನಿಂಗೇನು ವರೀಸ್ ಕಮ್ಮೀನಾ? ನಾನೊಂದು ಮಾತು ಹೇಳ್ಲಾ....? ನೀನು ಜವಾಬ್ದಾರಿಗಳನ್ನೆಲ್ಲ ಬೇರೆ ಯಾರಿಗಾದ್ರೂ ವಹಿಸಿಬಿಟ್ಟು ಹಾಯಾಗಿರು...."

"ಹುಂ ಹಾಯಾಗಿ ಹೇಗಿರಲಿ? ನಂಗೆ ಅಂತ ಬೇರೆ ಯಾವ ಕೆಲಸ ಇದೆ...? ಇವೆಲ್ಲಾ ಇರೋದ್ರಿಂದ ಕೈಗೆ ಕೆಲಸ ಮನಸ್ಸಿಗೆ ಕಸರತ್ತು....."

"ನೀನು ಮತ್ತೆ ಯಾಕೆ ಮದ್ವೆ ಆಗ್ಬಾರ್ದು....?" ಅಕ್ಕ ಏನಂದುಬಿಡುವಳೋ ಎಂಬ ಅನುಮಾನದಿಂದ ನೋಡಿದ.

"ಮದುವೆ ಆಗ್ಬಾರ್ದು ಅಂತೇನಿಲ್ಲ.... ನೀನು ಮೊದ್ಲು ಸೆಟ್ಲ್ ಆಗು. ನಿಂಗೊಂದು ಮದುವೆ ಮಾಡಿ, ನನ್ನ ಜವಾಬ್ದಾರಿ ಕಳಕೊಳ್ತೀನಿ... ಆಮೇಲೆ ನನ್ನ ಬಗ್ಗೆ ಯೋಚಿಸಿದ್ರಾಯ್ತು.... ತಗೋ, ಚೆಕ್‌ಗೆ ಸೈನ್ ಮಾಡಿಟ್ಟಿದೀನಿ ಆದರೆ ನಾನೊಂದು ಮಾತು ಹೇಳ್ತೀನಿ...."

"ನಂಗೊತ್ತು ನೀನು ಏನು ಹೇಳ್ತೀಯಾ ಅಂತ.... ನನ್ನ ಎಷ್ಟೋ ಜನ ಫ್ರೆಂಡ್ಸ್ ಫಾರಿನ್‌ನಲ್ಲಿ ಮಜವಾಗಿದಾರೆ. ನಾನು ಹಾಗೇ ಇರಬೇಕು ಅಂತ ಆಸೆ ಪಟ್ರೆ ಅದು ತಪ್ಪೇನಕ್ಕಾ?" ಅವನು ಚೆಕ್ ಹಾಳೆಯನ್ನು ಕೈಗೆತ್ತಿಕೊಂಡ. ಮುಖದಲ್ಲಿ ಅಸಹನೆ ಎದ್ದು ಕಾಣುತ್ತಿತ್ತು.

"ಹೋಗ್ಲಿ ಬಿಡು. ನನ್ಮಾತು ನಿನಗೆ ಇಷ್ಟವಾಗ್ತಿಲ್ಲ. ಪೇಪರ್‌ನಲ್ಲಿ ಆಡ್ ಕೊಡು ಅಂತ ಹೇಳಿದ್ನಲ್ಲ. ಯಾವತ್ತು ಬರುತ್ತೆ?"

"ನಾಳೆಯ ದಿನದ ಪೇಪರ್‌ನಲ್ಲಿ ಬರುತ್ತೆ.... ನನ್ನನ್ನು ಮಾತ್ರ ಯಾವುದಕ್ಕೂ ಕರೀಬೇಡ. ಏನನ್ನೂ ಕೇಳ್ಬೇಡ...."

"ಏನೋ ಹೀಗಂದ್ರೆ...? ಎಲ್ಲಾ ಕೆಲಸ ನಾನೊಬ್ಳೇ ಮಾಡ್ಬೇಕಾ?"

"ನಂಗೊತ್ತಿಲ್ಲ. ನೀನುಂಟು, ನಿನ್ನ ಸ್ಕೂಲುಂಟು.... ನಂಗೂ ನಿನ್ನ ಸ್ಕೂಲ್ಗೂ ಯಾವ ಸಂಬಂಧವೂ ಇಲ್ಲ.... ನಾನು ಬ್ಯಾಂಕಿಗೆ ಹೋಗ್ಬರ್ತೀನಿ...."

"ಬೇಗ ಬಾ ವಿವೇಕ. ಇವತ್ತು ಅಪ್ಪನ್ನ ನೋಡ್ಕೊಂಡು ಬರೋಣ. ಮಳೆ

ಮಳೆ ಅಂತ ಅತ್ಲಾಗೆ ಹೋಗಿಯೇ ಇಲ್ಲ. ಏನಂದುಕೊಂಡ್ರೋ ಏನೋ....?"

"ನಮ್ಮಪ್ಪನೂ ಅಷ್ಟೇ ತೀರಾ ವಿಚಿತ್ರ. ಇಲ್ಲಿ ಹಾಯಾಗಿ ನಮ್ಮ ಜೊತೇಲಿ ಇರಬಾರ್ದಾ... ವೃದ್ಧಾಶ್ರಮದಲ್ಯಾಕಿರಬೇಕು? ಎಲ್ರೂ ಆಡ್ಕೊಂಡು ನಗೋ ಥರಾ...?"

"ಅದು ಅವರದ್ದೇ ಆಶ್ರಮ, ಅವರು ಅಲ್ಲಿ ಇರುವುದಕ್ಕೆ ಇಷ್ಟ ಪಡ್ತಾರೆ. ನಾವೇನು ಅವರನ್ನು ಕಳಿಸಿಲ್ಲವಲ್ಲ.... ಸುಮಾರು ಇಪ್ಪತ್ತು ವರ್ಷದಿಂದ ಅಲ್ಲೇ ಇದಾರೆ. ಆ ಜೀವನ ಅವರಿಗೆ ಒಗ್ಗಿ ಹೋಗಿದೆ. ನೀನು ಬೇಗ ಸೆಟ್ಲ್ ಆಗು. ನಿನ್ನ ಮನೆಗೆ ಕರೆತಂದು ಇಟ್ಕೋ.... ಆಗ ನೋಡೋಣ. ಹೇಗ್ಹೇಗೆ ಇರುತ್ತೆ ಅಂತ...."

"ಓಕೇ.... ಅಪ್ಪನ್ನ ಒಪ್ಪಿಸಿ, ಅವರನ್ನು ಫಾರಿನ್ನಿಗೆ ಕರ್ಕೊಂಡು ಹೋಗ್ತೀನಿ. ನೋಡ್ತಿರು.... ಅಪ್ಪಂಗೆ ನೀನೂ ಹೇಳ್ಬೇಕು..."

"ಆ ಕಾಲ ಬಂದಾಗ ಮಾತಾಡೋಣ. ಈಗ ಬೇಗ ಹೋಗು ಹೊತ್ತಾಗುತ್ತೆ. ಬ್ಯಾಂಕ್ ಸಮಯ ಮುಗಿದರೆ...?!"

"ಎಸ್.... ನಾನು ಈಗ್ಲೇ ಹೊರಟೆ...." ಎಂದು ಹೇಳಿದ ಅವನು ಒಳಗಿನ ರೂಮಿಗೆ ಹೋಗಿ ಬಟ್ಟೆ ಬದಲಾಯಿಸಿಕೊಂಡು, ತಲೆ ಬಾಚಿಕೊಂಡು ಹೊರ ಬರುವವರೆಗೂ ಲೀಲಾ ಅಲ್ಲೇ ಕುಳಿತಿದ್ದಳು. ಗಾಢವಾಗಿ ಏನೋ ಯೋಚನೆಯಲ್ಲಿ ದ್ದವಳನ್ನು ಅವನ ಕರೆ ಎಚ್ಚರಿಸಿತು.

"ಬರ್ಲೇನೇ ಅಕ್ಕಾ?" ಎಂದಾಗ ಬೆಚ್ಚಿ, 'ಹೂಂ' ಎಂದಳು.

* * *

"ಇವತ್ತು ಇಂಟರ್‌ವ್ಯೂ ನಡೆಸ್ಬೇಕು. ನೆನಪಿದೆ ತಾನೇ? ಬೇಗ ಬೇಗ ರೆಡಿಯಾಗು" ಲೀಲಾ ಸಹೋದರ ವಿವೇಕನಿಗೆ ನೆನಪು ಮಾಡಿದಳು.

"ಇಲ್ಯಾಕೆ ಮಾಡ್ತಿದೀಯೋ ನಂಗೆ ಗೊತ್ತಾಗ್ತಿಲ್ಲ. ಸ್ಕೂಲ್ನಲ್ಲೇ ಮಾಡಿದ್ರೆ ಆಗ್ತಿತ್ತು ಅಲ್ವಾ?"

"ಸ್ಕೂಲು ತುಂಬಾ ದೂರ......ಅವರುಗಳಿಗೆ ಕಷ್ಟ ಆಗುತ್ತೆ....ಇಲ್ಲಿ ನಮ್ಮ ಮನೇಲಿ ಏನು ಕಷ್ಟ? ಮೊದಲಿಗೆ ನಾನು, ನೀನು ಇಬ್ಬರೇ ಇಂಟರ್‌ವ್ಯೂ ಮಾಡಿ, ಇಬ್ಬರನ್ನು ಸೆಲೆಕ್ಟ್ ಮಾಡೋಣ, ಆಮೇಲೆ ನೋಡೋಣ....."

"ಎಷ್ಟು ಅಪ್ಲಿಕೇಷನ್ ಬಂದಿವೆ......?" ಎನ್ನುತ್ತಾ ಫೈಲುಗಳನ್ನು ಪರಿಶೀಲಿಸಿದ.

"ಎಂಟು ಅರ್ಜಿಗಳು ಬಂದಿವೆ. ಅದರಲ್ಲಿ ಒಂದನ್ನು ನಾನೇ ಬಿಟ್ಟಿದೀನಿ. ಇವತ್ತು ಎಷ್ಟು ಜನ ಅಟೆಂಡ್ ಮಾಡ್ತಾರೋ...?"

"ನನ್ನನ್ನ ಇದಕ್ಕೆಲ್ಲ ಎಳೀಬೇಡ ಅಂತಂದ್ರೆ ನೀನು ಬಿಡೋಲ್ವಲ್ಲಾ?"

"ನಿಂಗೆ ಇಷ್ಟವಿಲ್ಲದಿದ್ರೆ ಬಿಡು.... ನಾನು ಮತ್ತೆ ಹೇಳುಲ್ಲ..." ಅವಳೂ ರೇಗಿದಾಗ ಅವನು ಸುಮ್ಮನಾದ.

"ಸಾರೀ.... ಇವತ್ತೊಂದು ದಿನ....ಅಷ್ಟೇ ಮುಂದಿನ ವಾರ, ನನಗೆ ಒಂದು

ಇಂಟರ್‌ವ್ಯೂ ಇದೆ. ಅದ್ರಲ್ಲಿ ಪಾಸಾದ್ರೆ.... ಜುಯ್...." ಕೈಯನ್ನೆತ್ತಿ ಹಾಗೇ ಹೋಗ್ತೀನಿ ಎನ್ನುವಂತೆ ನಕ್ಕ. ಅವಳು ನಗಲಿಲ್ಲ. ಟೈಂ ಆಯಿತು ಎಂದು ತನಗೆ ತಾನೇ ಹೇಳಿ ಕೊಂಡು, ಫೈಲುಗಳನ್ನೆತ್ತಿಕೊಂಡು, ಮುಂದಿನ ರೂಮಿಗೆ ಬಂದಳು. ವಿವೇಕ ಗೊಣಗಿ ಕೊಳ್ಳುತ್ತಾ ಸ್ನಾನದ ಮನೆಗೆ ನಡೆದ.

ಮೂವರು ಅಭ್ಯರ್ಥಿಗಳಿಗೆ ಇಂಟರ್‌ವ್ಯೂ ಮಾಡುವಷ್ಟರಲ್ಲಿ ವಿವೇಕ ಹಲವು ಬಾರಿ ಆಕಳಿಸಿದ್ದ. ಈ ಕೆಲಸ ಯಾವಾಗ ಮುಗಿಯುತ್ತದೆಯೋ ಎಂಬಂತೆ ಚಡಪಡಿಸು ತ್ತಿದ್ದ. ಲೀಲಾ ಓರೆಗಣ್ಣಿನಲ್ಲಿಯೇ ಅವನನ್ನು ಗಮನಿಸಿದ್ದಳು. ತೀರಾ ಬೇಜವಾಬ್ದಾರಿ, ಯಾಕೆ ಹೀಗಾಡ್ತಾನೋ ಎಂದು ಮನದಲ್ಲೇ ಬೈದುಕೊಳ್ಳುತ್ತಾ "ನೆಕ್ಸ್ಟ್" ಎಂದಳು. ಆ ಅಭ್ಯರ್ಥಿ ಬಂದು ಎದುರಿಗಿದ್ದ ಕುರ್ಚಿಯ ಮೇಲೆ ಕುಳಿತಳು. ವಿವೇಕನ ದೃಷ್ಟಿ ಇತ್ತ ಹರಿಯಿತು. ಸರಿಯಾಗಿ ಕುಳಿತು, ಕೈಯಿಂದ ಕ್ರಾಫನ್ನು ಸರಿ ಮಾಡಿಕೊಂಡ. ಕರ್ಚಿಫ್‌ನಿಂದ ಮುಖದಲ್ಲಿ ಇಲ್ಲದ ಬೆವರನ್ನು ಒರೆಸಿಕೊಂಡು ಎದುರಿಗಿದ್ದ ಯುವತಿಯ ಕಡೆಯೇ ನೋಡಿದ. ಮನಸ್ಸು ಮುದಗೊಂಡಿತು. ಅಷ್ಟರಲ್ಲಿ ಲೀಲಾ ಯುವತಿಯ ಕಡೆಯೇ ನೋಡುತ್ತಾ ಪ್ರಶ್ನಿಸಿದಳು.....

"ನಿಮ್ಮ ಹೆಸರು....?" ವಿವೇಕ ಅವಳನ್ನೇ ನೋಡುತ್ತಿದ್ದ.

"ಸುಜಯಾ...." ಅವಳು ಉಗುಳು ನುಂಗಿ ಮಾತನಾಡಿದಳು.

"ಸ್ವಲ್ಪ ಜೋರಾಗಿ ಮಾತಾಡಿ. ಸ್ಪಷ್ಟವಾಗಿ ಹೇಳಿ..." ಸುಜಯ ಕೆಂಪಾದಳು. ವಿವೇಕನ ಕಡೆ ನೋಡಿದಳು. ಅವನು ಕಿರುನಗೆ ನಕ್ಕಂತೆ ಅನ್ನಿಸಿತ್ತು.

"ಇದು ಟೆಂಪರರಿ ಜಾಬ್... ನೀವು ಅಲ್ಲೇ ಹಾಸ್ಟೆಲ್‌ನಲ್ಲಿರಬೇಕಾಗುತ್ತದೆ. ಮೊದಲು ಇದಕ್ಕೆ ನಿಮ್ಮ ಪೇರೆಂಟ್ಸ್ ಒಪ್ಪಿಗೆ ಬೇಕು.... ರೆಡೀನಾ?"

"ಯೋಚಿಸ್ಬಿಟ್ಟು ಹೇಳ್ತೀನಿ...."

"ಯೋಚಿಸುಕ್ಕೆ ಹೆಚ್ಚು ಸಮಯವಿಲ್ಲ. ಸಾಯಂಕಾಲದೊಳಗೆ ನಿರ್ಧಾರ ತಿಳಿಸ್ಬೇಕು. ನಿಮಗೆ ಒಪ್ಪಿಗೆ ಇದ್ರೆ ನಾಳೇನೇ ಆಶ್ರಮದ ಸ್ಕೂಲಿಗೆ ಹೋಗಿ ಬರುವ ವ್ಯವಸ್ಥೆ ಮಾಡ್ತೀನಿ.... ಓ..ಕೇ.... ನೀವಿನ್ನು ಹೋಗಬಹುದು" ಸುಜಯ ನೆಮ್ಮದಿಯ ಉಸಿರನ್ನು ಬಿಟ್ಟು ಇಬ್ಬರಿಗೂ ಕೈ ಮುಗಿದು ಹೊರಬಂದಳು. ವಿವೇಕನ ದೃಷ್ಟಿ ಅವಳ ಬೆನ್ನ ಮೇಲೆ ಇದ್ದುದನ್ನು ಲೀಲಾ ಗಮನಿಸಿ, ತನ್ನಲ್ಲೇ ನಕ್ಕಳು.

ಉಳಿದ ಅಭ್ಯರ್ಥಿಗಳ ಇಂಟರ್‌ವ್ಯೂ ನಡೆಯುವಾಗಲೂ, ವಿವೇಕನ ಮನಸ್ಸು ಸುಜಯಳನ್ನೇ ಕುರಿತು ಚಿಂತಿಸುತ್ತಿತ್ತು. ಎಲ್ಲರ ಸರದಿಯೂ ಮುಗಿದಿತ್ತು. ವಿವೇಕ ಮೈಮುರಿದು ಆಕಳಿಸಿದ.

"ನಾನು ಇನ್ನು ಹೋಗ್ಲಾ ಮೇಡಂ?" ಮುಗುಳ್ನಕ್ಕು ಕೇಳಿದ. ಲೀಲಾ ಗಡಿಯಾರದ ಕಡೆ ನೋಡಿ, ಕುರ್ಚಿಯ ಬೆನ್ನಿಗೆ ಒರಗಿದಳು.

"ನಾನು ಸ್ವಲ್ಪ ಡಿಸ್ಕಸ್ ಮಾಡ್ಬೇಕಾಗಿತ್ತು. ಮೊದಲು ಊಟ ಮಾಡೋಣ"

"ಇಂಪಾಸಿಬಲ್.... ಇನ್ನು ನೀನುಂಟು, ನಿನ್ನ ಕ್ಯಾಂಡಿಡೇಟ್ಸ್ ಉಂಟು.....ನಾನು ಇಷ್ಟು ಮಾಡಿದ್ದೇ ಹೆಚ್ಚು...." ಹಾಗೆ ಹೇಳಿದರೂ, ಏನೋ ಕುತೂಹಲವೂ ಇತ್ತು.

"ಆ ಬಗ್ಗೆ ಅಲ್ಲ. ನಾನಾಗ್ಲೇ ಒಬ್ಬಳನ್ನು ಆಯ್ಕೆ ಮಾಡಿದ್ದಾಗಿದೆ"

"ಹಾಗಾದ್ರೆ ನಾನ್ಯಾಕೆ ಬೇಕಾಗಿತ್ತು?" ಮೂತಿ ಉದ್ದ ಮಾಡಿದ.

"ಇಂಥದ್ದನ್ನೆಲ್ಲಾ ಮಾಡುವಾಗ ಇಬ್ಬರು ಅಥವಾ ಮೂರ ಜನ ಇದ್ರೆ ಅದಕ್ಕೊಂದು ಬೆಲೆ ಇರುತ್ತೆ.... ಆ ಹುಡುಗಿ ಯಾರು ಅಂತ ಕೇಳುಲ್ವಾ...?"

"ಇಲ್ಲ. ನಂಗೆ ಯಾವ ಕುತೂಹಲವೂ ಇಲ್ಲ. ನಂಗೆ ತಿಳಿಸಲೇ ಬೇಕು ಅಂತ ಇದ್ರೆ ಹೇಳಿಬಿಡು.... ಅದನ್ನು ಕೇಳ್ಬಿಟ್ಟೇ ಎದ್ದು ಹೋಗ್ತೀನಿ"

"ಬೇಡ ಬಿಡು. ನಿಂಗೆ ಆಸಕ್ತಿ ಇಲ್ದಿದ್ರೆ, ನಾನೇಕೆ ಹೇಳ್ಲಿ...." ಅವಳು ಮುಗುಳ್ನಕ್ಕು ಎದ್ದಳು. ಇಬ್ಬರೂ ಹೊರ ಬಂದರು. ಅಡಿಗೆಯವರು ಮಾಡಿಟ್ಟಿದ್ದ ಅಡಿಗೆಯನ್ನು ಊಟದ ಟೇಬಲ್ಲಿನ ಮೇಲಿಟ್ಟು ಹೊರಟು ಹೋಗಿದ್ದರು. ಇಬ್ಬರೂ ಬಡಿಸಿಕೊಂಡು ಊಟ ಮಾಡಿದರು.

"ವಿವೇಕ, ಸ್ವಲ್ಪ ಡ್ರೈವರ್‌ಗೆ ಫೋನು ಮಾಡ್ಬೇಕಲ್ಲಪ್ಪಾ...."

"ಈಗ ಆಶ್ರಮಕ್ಕೆ ಹೋಗ್ಬೇಕಾ? ನಾನು ಬರುಲ್ಲ. ನಾನು ಸಾಯಂಕಾಲ ಏಜೆಂಟ್ ಹತ್ರ ಹೋಗ್ಬೇಕು"

"ನಾಳೆ.... ನಾಳೆ ಸೆಲೆಕ್ಟ್ ಮಾಡಿಕೊಂಡಿರುವ ಹುಡುಗೀನ ಆಶ್ರಮಕ್ಕೆ ಕರ್‍ಕೊಂಡು ಹೋಗಿ ಬರಲಿ. ಅಲ್ಲಿ ಅವಳು ಡೆಮಾನ್‌ಸ್ಟ್ರೇಟ್ ಕ್ಲಾಸ್ ಮಾಡ್ಲಿ... ನಾನು ಸ್ಕೂಲಿಗೆ ಫೋನು ಮಾಡಿ ಹೇಳ್ತೀನಿ"

"ಆ ಕ್ಯಾಂಡಿಡೇಟ್‌ಗೆ ತಿಳಿಸಿದ್ದಾಯ್ತಾ?"

"ಇಲ್ಲ. ಮೊದಲು ಡ್ರೈವರ್ ಸಿಕ್ಕಲಿ. ಆಮೇಲೆ ಅವಳ್ಗೆ ತಿಳಿಸ್ತೀನಿ" ಅಷ್ಟರಲ್ಲಿ ವಿವೇಕ ತನ್ನ ಮೊಬೈಲ್‌ನಿಂದ ಡ್ರೈವರ್‌ಗೆ ಫೋನು ಮಾಡಿದ್ದ... ಅವನ ಹತ್ರ ಮಾತನಾಡಿ ಮುಗಿಸಿದ.

"ಅವನು ಬರುಕ್ಕಾಗುಲ್ಲವಂತೆ. ಹುಷಾರಿಲ್ಲವಂತೆ. ಪೋಸ್ಟ್‌ಫೋನ್ ಮಾಡು. ನನ್ನನ್ನ ಬಾ ಅಂತ ಮಾತ್ರ ಕರೆಯಬೇಡ ಪ್ಲೀಸ್...."

"ಸರಿ ಬಿಡು. ನಾನೇ ಡ್ರೈವ್ ಮಾಡ್ತೀನಿ. ತನ್ನ ಮೊಬೈಲ್‌ನಿಂದ ಆಶ್ರಮದ ಸ್ಕೂಲಿಗೆ ಫೋನು ಮಾಡಿ ಮಾತಾಡಿದಳು. ವಿವೇಕ, ಅವಳ ಮಾತುಗಳನ್ನು ಕೇಳಿಸಿಕೊಳ್ಳುತ್ತಿದ್ದವನು, ನೆಟ್ಟಗೆ ಕೂತ. ಆನಂತರ, ಅವಳು ಸುಜಯಳ ಮನೆಗೆ ಫೋನು ಮಾಡಿದಳು.

"ನಾಳೆ ಬೆಳಿಗ್ಗೆ ಒಂಭತ್ತು ಗಂಟೆಗೆ ಇಲ್ಲಿಗೇ ಬಂದು ಬಿಡಿ" ವಿವೇಕನ ತುಟಿಯಂಚಿನಲ್ಲಿ ಕಿರುನಗೆ ಮೂಡಿದ್ದನ್ನು ಗಮನಿಸಿದಳು. ಮಾತು ಮುಗಿದಿತ್ತು.

"ಅವಳೊಬ್ಬಳೇನಾ? ಬರದೇ ಇದ್ರೆ ಏನು ಮಾಡ್ತೀಯಾ?"

"ಬಂದೇ ಬರ್ತಾಳೆ.... ಇಲ್ದಿದ್ರೆ ಫೋನ್ನಲ್ಲೇ ಹೇಳ್ತಿದ್ಲು ಅಲ್ವಾ?"

"ಅವಳನ್ನೇ ಯಾಕೆ ಸೆಲೆಕ್ಟ್ ಮಾಡ್ದೆ?"

"ಅಲ್ಲಿ ಆಗ ನೀನೂ ಕೂತಿದ್ದೆಯಲ್ಲ... ಈಗ ಏನು ಅಬ್ಜೆಕ್ಷನ್?"

"ನಂದೇನು ಅಬ್ಜೆಕ್ಷನ್...? ನೀನುಂಟು, ನಿನ್ನ ಟೀಚರ್ಸ್ ಉಂಟು... ಸುಮ್ನೇ ಕೇಳ್ದೆ...." ಅವಳು ಕೈ ತೊಳೆದು ಬಂದಳು.

"ಹಾಗಾದ್ರೆ ತೆಪ್ಪಗಿರು" ಅವಳೂ ಅವನ ತಲೆಯ ಮೇಲೆ ಮೆಲ್ಲಗೆ ಮೊಟಕಿದಳು. ವಿವೇಕ ಮತ್ತೆ ಸುಜಯಳ ಕುರಿತು ಆಲೋಚನೆ ಮಾಡುತ್ತಾ ಕೂತ.

* * *

ಮರುದಿನ ಬೆಳಿಗ್ಗೆ, ತಾನೂ ಮುಂಚಿತವಾಗಿ ಎದ್ದು ಸಿದ್ಧನಾದ. ಆಗಾಗ, ಗೇಟಿನ ಕಡೆಗೆ ನೋಡುತ್ತಿದ್ದ. ಲೀಲಾ ತಡೆಯಲಾರದೇ ಕೇಳಿದಳು,

"ಯಾರ್ಗೆ ಕಾಯ್ತಾ ಇದೀಯೋ....? ನಿನ್ನ ಪ್ರೋಗ್ರಾಂ ಏನು?"

"ಏನೂ ಇಲ್ಲ. ಡ್ರೈವರ್ ಬಂದನಾ ಅಂತ ನೋಡ್ದೇ...."

"ಅವನು ಬರುಲ್ಲ ಅಂತ ನೀನೇ ಹೇಳ್ದೆಯಲ್ಲೋ..."

"ಹೇಳ್ದೆ ನಿಜ... ಆದರೆ ನನಗೀಗ ಟೆನ್ಷನ್ ಆಗ್ತಿದೆ.... ನೀನೇ ಡ್ರೈವ್ ಮಾಡ್ಬೇಕಾಯ್ತಲ್ಲ ಅಂತ"

"ನಾನೂ ಡ್ರೈವಿಂಗ್ ಕಲ್ತಿದೀನಿ. ನನ್ನ ಹತ್ರಾನೂ ಲೈಸೆನ್ಸ್ ಇದೆ....."

"ಅಲ್ಲ ಕಣಕ್ಕಾ.... ಪೀಕ್ ಅವರ್ಸ್..."

"ಅಷ್ಟು ಕನ್ಸರ್ನ್ ಇದ್ರೆ.... ನೀನೇ ಯಾಕೆ ಬರಬಾರದು....?" ಅಷ್ಟು ಹೇಳಿದ್ದೇ ಸಾಕು ಎನ್ನುವಂತೆ ಮುಗುಳ್ನಕ್ಕ.

"ಓ..ಕೇ... ನಾನು ಬರ್ತೀನಿ. ಆದರೆ ಇದೊಂದೇ ಸಲ....."

"ಸರಿ ತಿಂಡಿ ತಿನ್ನೋಣ ಬಾ. ಆ ಹುಡ್ಗಿ ಯಾಕೋ ಇನ್ನೂ ಬರಲೇ ಇಲ್ಲ ವಲ್ಲ" ಕೈ ಗಡಿಯಾರದ ಕಡೆ ನೋಡಿದಳು.

"ಇನ್ನೂ ಹತ್ತು ನಿಮಿಷ ಬಾಕಿ ಇದೆ. ಬೇಕಾದ್ರೆ ಇನ್ನೊಂದ್ಸಾರಿ ರಿಮೈಂಡ್ ಮಾಡಿದ್ರಾಯ್ತು"

"ಏನೂ ಬೇಡ. ಆ ಜವಾಬ್ದಾರಿ ಅವರಿಗಿರಬೇಕು. ಜಯಮ್ಮ ತಿಂಡಿ ಆಗಿದ್ರೆ ತಟ್ಟೆಗೆ ಹಾಕಿಕೊಡಿ..." ಅಡಿಗೆಯಾಕೆ ತಿಂಡಿಯ ತಟ್ಟೆಗಳನ್ನು ತಂಡಿಟ್ಟಳು.....ನೀವೂ ತಿಂಡಿ ತಿಂದು ಮನೆಗೆ ಹೋಗಿ. ಇವತ್ತು ನಾವು ಆಶ್ರಮದಲ್ಲೇ ಊಟ ಮಾಡ್ತೀವಿ"

"ಸರಿ" ಆಕೆ ಹೂಂಗುಟ್ಟಿ ಅತ್ತ ಸರಿದಳು. ವಿವೇಕ ಗೊಣಗಿದ.

"ಆಶ್ರಮದಲ್ಲಿ ಊಟಾನಾ....? ಅಷ್ಟು ಹೊತ್ತಾಗುತ್ತಾ?"

"ಇವತ್ತು ಅಪ್ಪನ ಜೊತೆ ಸ್ವಲ್ಪ ಸಮಯಾನ ಕಳೆಯೋಣ; ಇವತ್ತು ಅವರು ಹುಟ್ಟಿದ ಹಬ್ಬ...."

"ಹೌದಲ್ವಾ? ಮರೆತೇ ಹೋಗಿತ್ತು. ಅವರಿಗೆ ಏನು ಗಿಫ್ಟ್ ತಂದಿದೀಯಾ?"

"ಇವತ್ತು ಏನನ್ನೂ ತಂದಿಲ್ಲ. ಮುಂದಿನ ವಾರ ಹೋದಾಗ ಕೊಡೋಣ. ಅಲ್ಲದೇ ಅವರಿಗೆ ಏನು ಬೇಕು ಅಂತ ಕೇಳಿಯೇ ಇಲ್ಲವಲ್ಲ. ಕೇಳುಕ್ಕೆ ಬಿಡುವೇ ಆಗಲಿಲ್ಲ...."

"ಕೇಳಿದ್ರೆ, ಏನೂ ಹೇಳುಲ್ಲ. ಹೋಗ್ತಾ ಒಂದಿಷ್ಟು ಹಣ್ಣು, ಬಿಸ್ಕತ್ತು, ಸ್ವೀಟ್ಸ್ ತಗೊಂಡು ಹೋಗೋಣ...."

"ಹೌದು ಕಣೋ....ಹಾಗೇ ಮಾಡೋಣ....ಯಾರೋ ಗೇಟು ತೆಗೆದ ಹಾಗಾಯ್ತು....ಜಯಮ್ಮ ಸ್ವಲ್ಪ ನೋಡ್ತೀರಾ?"

"ನಾನೇ ನೋಡ್ತೀನಿ...." ವಿವೇಕ ತಾನೇ ಎದ್ದು ಹೊರಟ. ಅಷ್ಟರಲ್ಲಿ ಕಾಲಿಂಗ್ ಬೆಲ್ ಸದ್ದು ಮಾಡಿತ್ತು. ಮುಂಬಾಗಿಲನ್ನೂ ತೆರೆದ. ಎದುರಿಗೆ ಸುಜಯ ನಿಂತಿದ್ದಳು. ಕಣ್ಣುಗಳು ಹೊಳೆದವು. ಮುಖ ಅಗಲವಾಯಿತು. ತುಟಿಗಳು ಮುಗುಳ್ನಕ್ಕವು. ಅವಳು 'ನಮಸ್ಕಾರ' ಎಂದಳು ಪಿಸುದನಿಯಲ್ಲಿ. 'ಹಲೋ' ಎಂದವನು "ಕರೆಕ್ಟ್ ಟೈಂಗೆ ಬಂದಿದ್ದೀರಿ.... ಬನ್ನಿ ಕೂತ್ಕೊಳ್ಳಿ...." ಎಂದು ಒಳಕ್ಕೆ ಕರೆದ. ಅವಳು ಅನುಮಾನಿಸುತ್ತಾ ಒಳ ಬಂದಳು. ಅತ್ತಿತ್ತ ನೋಡಿದಳು.

"ತಿಂಡಿ ತಗೋತೀರಾ?" ಅವನು ಪ್ರಶ್ನಿಸಿದ.

"ಇಲ್ಲ, ನನ್ನ ತಿಂಡಿ ಆಗಿದೆ, ಥ್ಯಾಂಕ್ಸ್" ಎಂದಳು.

"ಓ.ಕೆ. ಸ್ವಲ್ಪ ಕಾಫೀನಾದ್ರೂ ತಗೊಳ್ಳಿ" ಎನ್ನುತ್ತಾ ಒಳ ಬಂದ. "ಅಕ್ಕಾ, ಆ ಹುಡುಗಿ ಬಂದಿದಾಳೆ. ನಾನು ರೆಡಿ; ನೀನು ರೆಡೀನಾ...? ಜಯಮ್ಮಾ ಒಂದು ಕಪ್ ಕಾಫೀ...."

ಲೀಲಾ ಅವನ ಕಡೆ ಹೆಚ್ಚು ಗಮನ ಕೊಡದೇ ತನಗೆ ಬೇಕಾಗಿದ್ದ ಪೇಪರ್ಸ್‌ಗಳನ್ನು ತೆಗೆದಿಟ್ಟುಕೊಳ್ಳುತ್ತಿದ್ದಳು. ಜಯಮ್ಮ ತಂದಿತ್ತ ಕಾಫಿಯನ್ನು ವಿವೇಕನೇ ಸುಜಯಳಿಗೆ ತಂದು ಕೊಟ್ಟ. ಅವಳು ಸಂಕೋಚದಿಂದ ಕಪ್‌ನ್ನೆತ್ತಿಕೊಂಡಳು. ಅವನು ಅಲ್ಲೇ ನಿಂತ. ಲೀಲಾ ಹೊರಬಂದಳು.

"ಪ್ರಿಪೇರ್ ಆಗಿ ಬಂದಿದೀರಾ ಸುಜಯಾರವರೇ....."

"ಹೂಂ...." ಅವಳು ಕಾಫಿಯನ್ನು ಕುಡಿದು ಮುಗಿಸಿದಳು.

"ಪ್ರಿಪರೇಷನ್ ಯಾಕೆ ಬೇಕು? ಎಕ್ಸ್‌ಪೀರಿಯನ್ಸ್ ಇದೆಯಲ್ಲ...." ವಿವೇಕ ಮುಗುಳ್ನಕ್ಕು ನುಡಿದ. ಲೀಲಾ ಅವನಿಗೆ ಕಣ್ಣಿನಲ್ಲೇ ಸುಮ್ಮನಿರುವಂತೆ ಹೇಳಿ, ಮತ್ತೆ ಒಳಗೆ ನಡೆದಳು. ಅಡಿಗೆಯವರು ಬಾಗಿಲು, ಕಿಟಕಿಗಳನ್ನು ಭದ್ರಪಡಿಸಿ ಹೊರಬರುವ ವರೆಗೂ ಕಾದಿದ್ದು ನಂತರ ಹೊರಟರು. ವಿವೇಕ ಸೀಟಿಯನ್ನು ಊದುತ್ತಾ ಡ್ರೈವರ್ ಸೀಟನ್ನೇರಿದ. ಲೀಲಾ ಅವನ ಪಕ್ಕದ ಸೀಟಿನಲ್ಲಿ ಕುಳಿತಳು. ಸುಜಯ ಹಾಗೂ ಅಡಿಗೆಯ ಜಯಮ್ಮ ಹಿಂದಿನ ಸೀಟನ್ನೇರಿದರು.

"ಜಯಮ್ಮಾ.... ನಿಮ್ಮನ್ನು ಎಲ್ಲಿ ಇಳಿಸ್ಬೇಕು?" ವಿವೇಕ ಕೇಳಿದ.

"ಅವರೂ ನಮ್ಮ ಜೊತೇಲಿ ಬರ್ತಿದಾರೆ...."

"ಆಹಾ.....!" ಎನ್ನುತ್ತಾ ವಿವೇಕ ಕಾರನ್ನು ಸ್ಟಾರ್ಟ್ ಮಾಡಿದ. ಕಾರು ಮಾರ್ಕೆಟ್ಟಿನ ಬಳಿಗೆ ಬಂದಾಗ, ಲೀಲಾ ನಿಲ್ಲಿಸುವಂತೆ ಹೇಳಿದಳು.

"ಸ್ವಲ್ಪ ಸೈಡ್‌ನಲ್ಲಿ ಕಾರನ್ನು ನಿಲ್ಸು.... ಹಣ್ಣುಗಳನ್ನು ತರೋಣ...." ವಿವೇಕ ಅಲ್ಲಿ ಸೂಕ್ತ ಜಾಗವನ್ನು ನೋಡಿ ಒಂದು ಕಡೆ ಕಾರನ್ನು ನಿಲ್ಲಿಸಿದ.

"ಪ್ಲೀಸ್.... ಸ್ವಲ್ಪ ಹೋಗ್ಬರ್ತೀಯಾ....?" ಲೀಲಾ ಕೇಳಿದಾಗ ಅವನು ತಲೆ ಆಡಿಸಿದ.

"ನಂಗೆ ಅದೆಲ್ಲ ಗೊತ್ತಾಗುಲ್ಲ. ನೀನೇ ಸರಿ ಅದಕ್ಕೆಲ್ಲ. ಜಯಮ್ಮನ್ನ ಕರ್ಕೊಂಡು ಹೋಗು. ಅವರಾದ್ರೆ ಚೆನ್ನಾಗಿ ಚೌಕಾಸಿ ಮಾಡ್ತಾರೆ...."

"ಬನ್ನಿ ಜಯಮ್ಮ...." ಲೀಲಾ ಕಾರಿನಿಂದ ಇಳಿದಳು. ಜಯಮ್ಮ ಅವಳನ್ನು ಅನುಸರಿಸಿದಳು. ವಿವೇಕ ಮುಂದಿನ ಕನ್ನಡಿಯನ್ನು ಅಡ್ಜಸ್ಟ್ ಮಾಡುವವನಂತೆ, ಹಿಂದೆ ಕುಳಿತಿದ್ದ ಸುಜಯಳ ಕಡೆ ಆಗಾಗ್ಗೆ ನೋಡಿದ. ಸುಜಯಳಿಗೆ ಆ ಅನುಭವ ವಾಗಿ, ಮುಖ ಕೆಂಪಾಗಿತ್ತು. ಗಲಿಬಿಲಿಗೊಂಡ ಅವಳ ಮುಖ ಇನ್ನೂ ಆಕರ್ಷಕವಾಗಿ ಕಂಡಿತ್ತು ಅವನಿಗೆ. "ಶ್ರೀಮಂತರ ಮನೆಯ ಹುಡುಗಿಯಂತೆ ಕಾಣ್ತಾಳೆ. ಇವಳಿಗ್ಯಾಕೆ ಈ ಟೀಚರ್ ಕೆಲಸ ಬೇಕೋ...." ಎಂದು ಕೊಂಡು ಮತ್ತೊಮ್ಮೆ ಅವಳನ್ನು ಕನ್ನಡಿ ಯೊಳಗೆ ದಿಟ್ಟಿಸಿದ. ಅವಳು ಕಿಟಕಿಯಿಂದಾಚೆ ನೋಡುತ್ತಿದ್ದಳು. ಹಣ್ಣುಗಳನ್ನು ತುಂಬಿರುವ ಚೀಲಗಳನ್ನು ಹಿಡಿದು ಅವರಿಬ್ಬರೂ ಬಂದು ಹತ್ತಿದರು. ಕಾರು ಚಲಿಸಿತು.

"ನಮ್ಮ ಆಶ್ರಮದ ಮರಗಳಲ್ಲೇ ಏನೇನೋ ಹಣ್ಣುಗಳು ಬಿಡುತ್ವಲ್ಲ.... ಇಷ್ಟೊಂದ ನ್ಯಾಕೆ ತಂದೆ?" ಕಾರನ್ನು ಓಡಿಸುತ್ತಾ ಕೇಳಿದ.

"ಅಲ್ಲಿ ಏನು ಬಿಡುತ್ತೋ, ಹೇಗೆ ಬಿಡುತ್ತೋ.... ಯಾವಾಗ ಕೊಯ್ತಾರೋ, ಯಾರ್‍ಯಾರು ತಿಂತಾರೋ.....ಅದೆಲ್ಲ ನಮಗೆ ಗೊತ್ತಿಲ್ಲವಲ್ಲ....ರೆಡಿಯಾಗಿ ಸಿಕ್ತು.... ಇನ್ನು ಮುಂದೆ ಅದನ್ನೆಲ್ಲ ನೀನೇ ನೋಡ್ಕೋ....."

"ನಾನಾ....? ಇಂಪಾಸಿಬಲ್.... ವೃದ್ಧಾಶ್ರಮದ ಜವಾಬ್ದಾರಿಯೇ ನಂಗೆ ಬೇಡ" ಹಾಗೆ ಹೇಳುತ್ತಾ ಮತ್ತೊಮ್ಮೆ ಸುಜಯಳ ಕಡೆ ನೋಡಿದ. ಅವಳು ಮುಗುಳ್ನಗುತ್ತಿರು ವಂತೆ ಅನ್ನಿಸಿತು... ಕಣ್ಣು ಕೋರೈಸಿತು... ಆಶ್ರಮದ ಸ್ಕೂಲಿನಲ್ಲಿ ಟೀಚರ್ ಆದರೆ, ಹತ್ತೇ ದಿನಗಳಲ್ಲಿ ಇವಳ ಮುಗುಳ್ನಗು ಮಾಸಿಹೋಗುತ್ತದೆ. ಅದನ್ನು ತಪ್ಪಿಸಿದರೇ... ಹೇಗೂ ಟೆಂಪರರಿ ಜಾಬ್ ಅವಳ್ಗೇ ಬೋರ್ ಆಗಿ ಕೆಲಸ ಬಿಟ್ಟು ಓಡಿ ಹೋಗ್ತಾಳೆ....." ತನ್ನಲ್ಲೇ ಹೇಳ್ಕೊಂಡು ನಗುತ್ತಾ ಅವಳ ಕಡೆ ನೋಡಿದ. ಅರ್ಧ ಗಂಟೆಯ ದಾರಿ ಸಾಗಿದ ನಂತರ ಕಾರು ಆಶ್ರಮದ ರಸ್ತೆಯ ಕಡೆಗೆ ತಿರುಗಿತು. "ಸಂಧ್ಯಾಶ್ರಮ"

ಎಂಬ ನಾಮಫಲಕವನ್ನು ಸುಜಯ ಮನದಲ್ಲೇ ಓದಿ ಕೊಂಡಳು. ಮನಸ್ಸಿಗೆ ಮುದವೆನಿಸಿತು. ಹಾಗೇ ಸುತ್ತಲೂ ನೋಡಿ ಕಣ್ಮನಗಳನ್ನು ತಣಿಸಿಕೊಂಡಳು. ಮುಖ ದಲ್ಲಿ ಮಂದಹಾಶ ಮಿನುಗಿತು. ಎಂಥಾ ಒಳ್ಳೆಯ ಸ್ಥಳ. ಸಿಟಿಯ ಗೋಜು ಗದ್ದಲ ಗಳಿಂದ ದೂರ, ಇದ್ದು ಹಾಯಾಗಿರಲು ಪ್ರಶಸ್ತವಾದ ಸ್ಥಳ ಎಂದುಕೊಂಡಳು.

ಕಾರು ಆಶ್ರಮದ ಮುಂಬಾಗಿಲಿನಲ್ಲಿ ಬಂದು ನಿಂತಿತು. ಎಲ್ಲರೂ ಇಳಿದರು. ವಿವೇಕ ಕಾರನ್ನು ಪಾರ್ಕ್ ಮಾಡಿ ಬರಲು ಹೋದ. ಅಷ್ಟರಲ್ಲಿ ಆಶ್ರಮದ ಕಾರ್ಯ ದರ್ಶಿಗಳು ಬಂದರು. ಲೀಲಾ ಅವರಿಗೆ ಸುಜಯಳನ್ನು ಪರಿಚಯಿಸಿದಳು.

"ಇವರು, ಸುಜಯ.... ನಿನ್ನೆ ಫೋನು ಮಾಡಿದ್ನಲ್ಲ.... ಎಲ್ಲಾ ಸಿದ್ಧವಾಗಿದಾರೆ ತಾನೇ....?"

"ಹುಂ ಮೇಡಂ...."

"ಸುಜಯ, ಇವರ ಜೊತೆ ನೀವು ಹೋಗಿ. ಇವರು ಸ್ಕೂಲಿನ ಬಳಿಗೆ ಕರ್ಕೊಂಡು ಹೋಗ್ತಾರೆ"

"ಎಸ್ ಮೇಡಂ" ಎಂದು ಹೇಳಿ ಸುಜಯ ಅವರ ಜೊತೆ ಹೊರಟಳು. ಕಾರನ್ನು ಪಾರ್ಕ್ ಮಾಡಿ ಬಂದ ವಿವೇಕ, ಸುಜಯ ಅಲ್ಲಿರದುದನ್ನು ಗಮನಿಸಿದ. ಮಂಕಾದ.

"ನಾವು ಮೊದಲು ಅಪ್ಪನ್ನ ನೋಡಿಕೊಂಡು ಮಾತನಾಡಿಸಿ ಬರೋಣ" ಲೀಲಾ ಜಯಮ್ಮನೊಂದಿಗೆ ಹೋದಾಗ ವಿವೇಕನೂ ಅತ್ತ ಹೊರಟ.

ಕಾರ್ಯದರ್ಶಿ ಪ್ರಸಾದ್‌ರವರು, ಸುಜಯಳಿಗೆ ಸ್ಕೂಲಿನ ಬಗ್ಗೆ ವಿವರವನ್ನು ಹೇಳುತ್ತಾ ಅವಳನ್ನು ಸ್ಕೂಲಿನ ಬಳಿಗೆ ಕರೆದೊಯ್ದರು. ಹೊರಗೆ ಆಟವಾಡುತ್ತಿದ್ದ ಹುಡುಗರು, ಅವರುಗಳನ್ನು ಕಂಡೊಡನೆ, ಕ್ಲಾಸಿನೊಳಗೆ ಹೋಗಿ ಮೌನವಾಗಿ ಕುಳಿತರು. ಪ್ರಸಾದ್‌ರವರು, ಮಕ್ಕಳಿಗೆ ಸುಜಯಳನ್ನು ಪರಿಚಯಿಸಿದರು. ಎಲ್ಲರೂ ಎದ್ದು ನಿಂತರು.

"ಇವರು ನಿಮ್ಮ ಹೊಸಾ ಮೇಡಂ.... ಎಲ್ಲರೂ ನಮಸ್ತೇ ಹೇಳಿ"

"ನಮಸ್ತೇ ಮೇಡಂ...." ಮಕ್ಕಳು ಒಕ್ಕೊರಲಿನಿಂದ ನುಡಿದರು.

"ಈಗ ನೀವುಗಳು ಒಬ್ಬೊಬ್ಬರಾಗಿ ನಿಮ್ಮ ಪರಿಚಯವನ್ನು ಹೇಳಿಕೊಳ್ಳಿ" ಪ್ರಸಾದ್‌ರು ಹೇಳಿದರು. ಮಕ್ಕಳು ಒಬ್ಬೊಬ್ಬರೇ ಎದ್ದು ನಿಂತು ತಮ್ಮ ತಮ್ಮ ಹೆಸರನ್ನು ಹೇಳಿ ಪರಿಚಯಿಸಿಕೊಂಡರು. ಅಷ್ಟರಲ್ಲಿ ವಿವೇಕ ಅಲ್ಲಿಗೆ ಬಂದ.

"ಅಕ್ಕ, ಅಪ್ಪನ ಹತ್ರ ಮಾತಾಡ್ತಿದಾಳೆ. ಇನ್ನೇನು ಬರ್ತಾಳೆ. ನೀವು ಪಾಠ ಮಾಡ್ಬೇಕಂತೆ ಮೇಡಂ" ಎಂದು ಹೇಳಿ ಕಾರ್‍ಯದರ್ಶಿಯವರನ್ನು ಕರೆದುಕೊಂಡು ಇಬ್ಬರೂ ಹಿಂದಿನ ಬೆಂಚಿನಲ್ಲಿ ಕುಳಿತರು. ಸುಜಯಳಿಗೆ ಮುಜುಗರವೆನಿಸಿತು. ಆದರೂ ಧೈರ್ಯದಿಂದ, ಮಕ್ಕಳಿಗೆ ಅರ್ಥವಾಗುವಂತೆ ಚೆನ್ನಾಗಿ ಪಾಠವನ್ನು ಮಾಡಿ

ದಳು. ವಿವೇಕ ಮೆಚ್ಚುಗೆಯಿಂದ ಚಪ್ಪಾಳೆ ತಟ್ಟಿದ. ಮಕ್ಕಳೂ ಖುಷಿಯಿಂದ ಚಪ್ಪಾಳೆ ತಟ್ಟಿದರು. ಸುಜಯಳ ಮುಖ ಕೆಂದಾವರೆಯಂತೆ ಆಗಿತ್ತು. ಬೆವರಿನಿಂದ ತೊಯ್ದ ಮುಖವನ್ನು ಕರವಸ್ತ್ರದಿಂದ ಒರೆಸಿಕೊಂಡಳು.

"ಕಂಗ್ರಾಟ್ಸ್ ಸುಜಯಾರವರೇ.... ತುಂಬಾ ಚೆನ್ನಾಗಿ ಪಾಠ ಮಾಡ್ತೀರಿ...." ಅವಳ ಬಳಿಗೆ ಬಂದು ನುಡಿದ.

"ಮಕ್ಕಳೇ ಯಾರೂ ಗಲಾಟೆ ಮಾಡಕೂಡದು. ನಾನು ನಿಮಗೆಲ್ಲಾ ಚಾಕ್ಲೇಟ್ ತಂದು ಕೊಡ್ತೀನಿ.... ಬನ್ನಿ ಸುಜಯಾ, ಆಫೀಸು ರೂಮಿನಲ್ಲಿ ಕುಳಿತು ಮಾತ ನಾಡೋಣ" ಎಲ್ಲರೂ ಆಫೀಸು ರೂಮಿಗೆ ಬಂದರು. ಅಲ್ಲಿ ಬೇರೆ ಯಾರೂ ಇರಲಿಲ್ಲ. ಅಲ್ಲಿ ಅವರಿಬ್ಬರನ್ನೇ ಬಿಟ್ಟು ಕಾರ್ಯದರ್ಶಿಯವರು ಹೊರಗೆಲ್ಲೋ ಹೊರಟು ಹೋದರು. ಸುಜಯ ಸಂಕೋಚದಿಂದ ಕುಳಿತಿದ್ದಳು.

"ನಿಮಗೆ ಎಷ್ಟು ವರ್ಷದ ಎಕ್ಸ್‌ಪೀರಿಯನ್ಸ್ ಇದೆ...." ಇದ್ದಕ್ಕಿದ್ದಂತೆ ವಿವೇಕ ಪ್ರಶ್ನಿಸಿದಾಗ ಅವಳು ತಬ್ಬಿಬ್ಬಾದಳು.

"ಮೂರು ವರ್ಷ, ಅಷ್ಟೇ. ನೆನ್ನೆ ಇಂಟರ್‌ವ್ಯೂನಲ್ಲಿ ಆ ವಿಷಯ ಹೇಳಿದ್ನಲ್ಲ...."

"ಎಸೆಸ್....ಮರತೇ ಬಿಟ್ಟಿದ್ದೆ....ನಿಮಗೆ ಈ ಪರಿಸರ ಹಿಡಿಸ್ತಾ ಮೇಡಂ?"

"ಹೂಂ. ತುಂಬಾ ಇಷ್ಟವಾಯ್ತು. ಎಷ್ಟು ಪ್ರಶಾಂತವಾಗಿದೆ. ಗಲಾಟೆ ಇಲ್ಲ, ಗೊಂದಲ ಇಲ್ಲ"

"ನಾಲ್ಕು ದಿನ ಚೆನ್ನಾಗಿರುತ್ತೆ ಅಷ್ಟೇ.... ಆಮೇಲೆ ಸಖತ್ ಬೋರ್ ಆಗುತ್ತೆ.... ಅಂತಹ ಬಿಜಿ ಏರಿಯಾದಲ್ಲಿದ್ದವರಿಗೆ ಈ ವಾತಾವರಣ ಅಡ್ಜಸ್ಟ್ ಆಗುವುದು ಬಹಳ ಕಷ್ಟವಾಗಬಹುದು"

"ಹಾಗೇನೂ ಆಗುಲ್ಲ. ಅಡ್ಜಸ್ಟ್ ಮಾಡ್ಕೊಳ್ತೀನಿ...."

"ಪರವಾಗಿಲ್ಲ ಬಿಡಿ. ಹೇಗೂ ಟೆಂಪರರಿ ತಾನೇ. ನೀವು ಅಡ್ಜಸ್ಟ್ ಮಾಡ್ಕೊಂಡ್ರೂ, ಕೆಲವೇ ತಿಂಗಳು ಅಷ್ಟೇ.... ಆಮೇಲೆ ಏನು ಮಾಡ್ತೀರಿ?"

"ನೋಡೋಣ ಈಗಲೇ ಆ ಮಾತು ಯಾಕೆ?"

"ಅದಕ್ಕೇ ನನ್ನದೊಂದು ಅಡ್ವೈಸ್.... ಈಗ್ಲೂ ನಿಮಗೆ ಇಷ್ಟವಾಗದಿದ್ರೆ.... ಅದು ನಿಮಗೇ ಒಳ್ಳೇದು...."

"ಅಂದ್ರೇ.... ನಾನು ಇಲ್ಲಿ ಟೀಚರ್ ಪೋಸ್ಟ್‌ಗೆ ಸೇರಬಾರ್ದು ಅಂತ ಹೇಳ್ತಿದೀರಾ...?"

"ನೀವು ಇಲ್ಲೇ ಆಶ್ರಮದ ಹಾಸ್ಟೆಲ್‌ನಲ್ಲಿರಬೇಕಾಗುತ್ತೆ.... ನಿಮಗೆ ಕಷ್ಟವಾಗಬಹುದು ಅಂತ.... ಅದಕ್ಕೇ...."

"ಥ್ಯಾಂಕ್ಸ್ ಫಾರ್ ಯುವರ್ ಕನ್ಸರ್ನ್.... ಆದ್ರೆ ನೆನ್ನೇನೇ ಈ ಮಾತನ್ನು ಹೇಳಬಹುದಾಗಿತ್ತಲ್ಲ. ಬೇರೆ ಎಲ್ಲಾ ಕ್ಯಾಂಡಿಡೇಟ್ಸ್‌ಗೂ ಹೀಗೇ ಹೇಳ್ತೀರಾ?"

"ಇಲ್ಲ ಇಲ್ಲ. ಇದೇ ಮೊದಲ ಬಾರಿ, ನಾನು ಇದಕ್ಕೆ ತಲೆ ಹಾಕಿರೋದು. ಈ ಸ್ಕೂಲು, ಇಂಟರ್‌ವ್ಯೂ ಯಾವುದಕ್ಕೂ ನಾನು ಇನ್ವಾಲ್ವ್ ಆಗುಲ್ಲ. ಅಕ್ಕನ ಬಲವಂತಕ್ಕೆ ಇದ್ನೆಲ್ಲಾ ಮಾಡ್ತಿದೀನಿ. ಹೇಗೂ ಇದು ಟೆಂಪರರಿ ಪೋಸ್ಟ್. ನಿಮಗೆ ಮತ್ತೆ ಕೆಲ್ಸ ಸಿಗೋದು ಕಷ್ಟವಾಗಬಹುದು. ಇರೋ ಕೆಲ್ಸಕ್ಕೆ ರಿಸೈನ್ ಮಾಡುವ ಮೊದ್ಲು ಯೋಚಿಸಿ... ಅಕ್ಕ ಬಂದ್ಲು... ನಾನು ಹೀಗೆಲ್ಲಾ ಮಾತಾಡ್ದೆ ಅಂತ ತಿಳಿದ್ರೆ ಬೈತಾಳೆ ಅಷ್ಟೇ...." ಲೀಲಾ ಒಳಗೆ ಬಂದೊಡನೆ ಅವನು ಹೊರಕ್ಕೆ ಹೋಗಿ ನಿಂತ.

"ತುಂಬಾ ಚೆನ್ನಾಗಿ ಪಾಠ ಮಾಡ್ತೀರಿ ಅಂತ ಪ್ರಸಾದ್‌ರವರು ಹೇಳಿದ್ರು.... ಕಂಗ್ರಾಟ್ಸ್.... ಏನು ಡಿಸೈಡ್ ಮಾಡಿದ್ರಿ? ಈ ಪರಿಸರ ಹೇಗನ್ನಿಸ್ತು?"

"ಎಲ್ಲಾ ತುಂಬಾ ಚೆನ್ನಾಗಿದೆ ಮೇಡಂ.... ನಾನು ಯಾವಾಗ ಡ್ಯೂಟಿಗೆ ಜಾಯಿನ್ ಆಗ್ಬೇಕು?"

"ನಿಮ್ಮ ಪೇರೆಂಟ್ಸ್‌ಗೆ ಒಪ್ಪಿಗೆ ಇದೆ ತಾನೇ... ನೀವು ಇಲ್ಲೆ ಇರಬೇಕಾಗುತ್ತೆ. ಮುಂದೆ ತಕರಾರು ಬರಬಾರದು"

"ಹಾಗೇನಿಲ್ಲ ಮೇಡಂ....ಅವರ್ಗೆಲ್ಲಾ ಒಪ್ಗೆ ಇದೆ"

"ಗುಡ್ ಹಾಗಾದ್ರೆ, ಇನ್ನು ಮೂರು ದಿನದೊಳಗೆ ಬಂದು ಜಾಯಿನ್ ಆಗಿ. ಸದ್ಯಕ್ಕೆ ನಿಮ್ಮನ್ನು ಇಲ್ಲಿಯ ಹೆಡ್ ಮೇಡಂ ಪೋಸ್ಟ್‌ಗೆ ತಗೋತಾ ಇದೀವಿ. ಮುಂದಿನ ಮೀಟಿಂಗ್ ಹೊತ್ಗೆ, ಕೆಲವು ಬದಲಾವಣೆಗಳು ಆಗುತ್ತೆ. ಇನ್ನೊಂದು ಗಂಟೆಯೊಳಗೆ ನಿಮಗೆ ಅಪಾಯಿಂಟ್‌ಮೆಂಟ್ ಆರ್ಡರ್ ಲೆಟರ್‌ನ ಕೊಡ್ತಾರೆ. ರಿಜಿಸ್ಟರ್‌ನಲ್ಲಿ ಸೈನ್ ಮಾಡಿ. ಎರಡು ದಿನಗಳನಂತರ ಇಲ್ಲಿಗೆ ಬನ್ನಿ....ನಿಮ್ಮ ಹಾಸ್ಟೆಲ್ ರೂಮನ್ನ ನೋಡಿದ್ರಾ?"

"ಇಲ್ಲ...."

"ಅದನ್ನೂ ನೋಡ್ಕೊಂಡು, ಹಾಗೇ ಆಶ್ರಮವನ್ನು ಸುತ್ತಾಡಿಕೊಂಡು ಊಟದ ಹಾಲ್‌ಗೆ ಬನ್ನಿ. ಇವತ್ತು ನಮ್ಮೆಲ್ಲರಿಗೂ ಇಲ್ಲಿಯೇ ಊಟ...."

"ಪರವಾಗಿಲ್ಲ ಮೇಡಂ...."

"ಏನು ಪರವಾಗಿಲ್ಲ? ಹೊಟ್ಟೆ ಹಸಿದುಕೊಂಡು ಇರ್ತೀರಾ? ಇನ್ನು ಮುಂದೆ ನಿಮಗೆ ಇಲ್ಲೇ ಊಟ, ರುಚಿ ಹೇಗಿರುತ್ತೆ ಅಂತ ನೋಡೋರಂತೆ" ಲೀಲಾ ಮೊದಲ ಬಾರಿಗೆ ಅವಳ ಕಡೆ ನೋಡಿ ಮುಗುಳ್ನಕ್ಕಾಗ, ಅವಳಿಗೆ ನಿರಾಳವೆನಿಸಿತ್ತು.

ಲೀಲಾ ಹೊರಗೆ ಹೋಗುವುದನ್ನೇ ಕಾದಿದ್ದ ವಿವೇಕ ಮತ್ತೆ ಒಳಗೆ ಬಂದ.

"ಏನು ಡಿಸೈಡ್ ಮಾಡಿದ್ರಿ.... ಒಪ್ಗೆ ಕೊಟ್ಟು ಬಿಟ್ರಾ...?"

"ಹೂಂ. ನಾನು ಬಂದಿರೋದೇ ಈ ಪೋಸ್ಟ್‌ಗಾಗಿ.... ಅಲ್ವಾ?"

"ಸರಿ. ನಿಮ್ಮ ಗ್ರಹಚಾರ.... ಮುಂದಿನ ಪ್ರೋಗ್ರಾಂ ಏನು?"

"ನನ್ನ ಹಾಸ್ಟೆಲ್‌ನ ರೂಮನ್ನ ನೋಡ್ಬೇಕು.... ಆಮೇಲೆ ಇಲ್ಲಿಯ ಊಟದ

ರುಚಿಯನ್ನು ನೋಡ್ಬೇಕು...." ಅವಳೂ ನಗುತ್ತಾ ನುಡಿದಾಗ ಅವನು ಬೆರಗಾದ.

"ಅಂದ್ರೆ ಈಗಾಗ್ಲೇ ಇಲ್ಲಿಯವರೇ ಆಗಿ ಬಿಟ್ಟಿದೀರಿ.... ಹಾಗಾದ್ರೆ ನನ್ನ ಅಡ್ವೈಸ್‌ಗೆ ಏನೂ ಬೆಲೆ ಇಲ್ವಾ?"

"ನೀವ್ಯಾಕೆ ಮಿಸ್ ಗೈಡ್ ಮಾಡಿದ್ರೋ, ಅದ್ರಿಂದ ನಿಮ್ಗೇನು ಲಾಭವೋ ನಂಗೊತ್ತಿಲ್ಲ. ನಾನು ಇಷ್ಟಪಟ್ಟು ಈ ಜಾಬ್‌ನ ಆರಿಸಿಕೊಂಡಿದೀನಿ.... ಇದರಿಂದ ನನಗೆ ಲಾಭವಿದೆ"

"ಸೋ ಯೂ ಆರ್ ಹ್ಯಾಪಿ, ಎನಿವೇ ಕಂಗ್ರಾಟ್ಸ್. ನನಗ್ಯಾಕೋ ನಿಮಗೆ ಈ ಆಶ್ರಮದ ಲೈಫ್ ಸರಿಯಲ್ಲ ಅಂತನ್ನಿಸ್ತು. ಹಾಗೆ ಹೇಳ್ದೆ. ಫರ್ಗೆಟಿಟ್. ಬನ್ನಿ ಡೈನಿಂಗ್ ಹಾಲ್‌ಗೆ ಹೋಗೋಣ"

"ಮೊದ್ಲು ರೂಮನ್ನ ನೋಡ್ಬೇಕು...."

"ನಿಮ್ಮ ರೂಮು ಎಲ್ಲಿಗೂ ಓಡಿ ಹೋಗುಲ್ಲ. ಅಲ್ಲೇ ಇರುತ್ತೆ. ನನ್ನ ಹೊಟ್ಟೆ ಹಸೀತಿದೆ. ಮೊದಲು ಊಟ..." ಇಬ್ಬರೂ ಡೈನಿಂಗ್ ಹಾಲ್ ಕಡೆಗೆ ನಡೆದರು. ವಿವೇಕ ಹಾಗೇ ಆಶ್ರಮದ ಪರಿಚಯವನ್ನು ಮಾಡಿಕೊಟ್ಟ. ಇಬ್ಬರೂ ಮಾತನಾಡುತ್ತಾ ಡೈನಿಂಗ್ ಹಾಲನ್ನು ಒಳಹೊಕ್ಕರು. ಅಲ್ಲಿ ಲೀಲಾ, ಜಯಮ್ಮ, ಪ್ರಸಾದ್‌ರಲ್ಲದೇ ಇನ್ನೂ ಇಬ್ಬರು ಕುಳಿತಿದ್ದರು. ಲೀಲಾ ಸುಜಯಳಿಗೆ ಅವರನ್ನು ಪರಿಚಯಿಸಿದಳು. ಇವರು ಡಾ. ಶಂಕರ್.... ಇಲ್ಲಿಯ ಡಿಸ್ಪೆನ್ಸರಿಯ ಇನ್ ಛಾರ್ಜ್.... ಇವರು ನಮ್ಮ ತಂದೆ ಸುಬ್ಬರಾಮಪ್ಪನವರು.... ಸುಜಯ ವಿನಯದಿಂದ ಅವರಿಬ್ಬರಿಗೂ ಕೈ ಮುಗಿದು ನಮಸ್ಕಾರ ಎಂದಳು. ಸುಬ್ಬರಾಮಪ್ಪ ದೀರ್ಘವಾಗಿ ಅವಳನ್ನೇ ನೋಡಿದರು. ಅವರ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಅವಳೂ ಭಾವುಕಳಾಗಿದ್ದಳು.

* * *

"ಇವತ್ತು ನಮ್ಮ ತಂದೆಯ ಹುಟ್ಟು ಹಬ್ಬ. ಇಲ್ಲದೇ ಇದ್ರೆ ಅವರು ಹೀಗೆ ಎಲ್ಲರೊಂದಿಗೆ ಊಟಕ್ಕೆ ಕುಳಿತು ಕೊಳ್ಳುವುದಿಲ್ಲ. ತಮ್ಮ ರೂಮಿಗೇ ಊಟವನ್ನು ತರಿಸಿಕೊಳ್ತಾರೆ...." ವಿವೇಕ ಸುಜಯಳಿಗೆ ಮಾತ್ರ ಕೇಳುವಂತೆ ಹೇಳಿದ. ಸುಜಯ ಆಗಾಗ್ಗೆ ಸುಬ್ಬರಾಮಪ್ಪನ ಕಡೆ ನೋಡುತ್ತಿದ್ದಳು. ಅವರೂ ಪದೇ ಪದೇ ನೋಡುತ್ತಿದ್ದರು.

ಊಟದ ಕಾರ್ಯಕ್ರಮ ಮುಗಿಯಿತು. ಅಡುಗೆ ತುಂಬಾ ರುಚಿಯಾಗಿತ್ತು. ದಿನವೂ ಇಂಥದೇ ಅಡುಗೆ ಮಾಡ್ತಾರೋ.... ಅಥವಾ ಇವತ್ತು ಸ್ಪೆಷಲ್ಲೋ ಎಂದು ಕೇಳಬೇಕೆನ್ನಿಸಿತು. ಆದರೆ ತಾನಿನ್ನೂ ಹೊಸಬಳು. ಈಗಲೆ ಅಷ್ಟು ಸಲುಗೆಯ ಮಾತು ಸರಿಯಲ್ಲ ಎಂದುಕೊಂಡು ಮೌನವಾಗಿ ಊಟ ಮಾಡಿದಳು.

ಎಲ್ಲರೂ ಎದ್ದು ಕೈ ತೊಳೆದರು. ಅಷ್ಟರಲ್ಲಿ ಯರೋ ಒಬ್ಬ ಹೆಂಗಸು ಬಂದು, "ಬನ್ನಿ ಮಿಸ್.... ನಿಮ್ಮ ರೂಮನ್ನು ತೋರಿಸ್ತೀನಿ" ಎಂದು ಸುಜಯಳನ್ನು ಕರೆದಳು. ಸುಜಯ ಅವಳೊಂದಿಗೆ ನಡೆದಳು. ಲೀಲಾ, ವಿವೇಕ ತಂದೆಯೊಡನೆ ಅವರ ರೂಮಿಗೆ ಹೋದರು.

"ಆ ಹುಡುಗಿ ಯಾರು? ಈ ಮುಂಚೆ ಅವಳನ್ನು ಎಲ್ಲೋ ನೋಡಿದೀನಿ ಅಂತ ಅನ್ನಿಸ್ತು. ಅವಳ ಹೆಸರೇನು? ಎಲ್ಲಿದ್ದಾಳೆ?"

"ನಿಮ್ಗೆ ಎಲ್ಲಾ ಹುಡ್ಗೀರ ಬಗ್ಗೇನೂ ಹೀಗೇ ಅನ್ಸುತ್ತೆ. ಅವಳು ಸುಜಯ ಅಂತ. ಇಲ್ಲಿಯ ಸ್ಕೂಲಿಗೆ ಹೆಡ್ ಮಿಸ್ ಆಗಿ ಸೇರಿಕೊಳ್ತಾ ಇದಾಳೆ" ವಿವೇಕ ಮೆಲ್ಲನೆ ಹೊರ ಬಂದ.

"ಏನೋ ಭ್ರಮೆ ಈ ಮುದುಕಂಗೆ. ಹೋಗ್ಲಿ ಬಿಡಿ ಇನ್ನು ನಿಮ್ಮ ಚಿಕ್ಕಮ್ಮ ವಾಪಸ್ಸು ಬಂದಿಲ್ವಾ? ಎಲ್ಲೆಲ್ಲಿ ಅಲೆಯುತ್ತಿದ್ದಾಳೋ ಪುಣ್ಯಾತ್ಗಿತ್ತಿ. ಹೋಗ್ಲೀ ಚಿಕ್ಕಮ್ಮ ಫೋನು ಮಾಡ್ತಾ ಇರ್ತಾಳಾ?"

"ಹುಂ ಮಾಡ್ತಾರಪ್ಪಾ. ನೀವು ಅವರ ಬಗ್ಗೆ ಚಿಂತೆ ಮಾಡ್ಬೇಡಿ. ಡಾಕ್ಟ್ರು ಹೇಳಿದ್ರು ನಿಮ್ಮ ಬಿ.ಪಿ. ಹೆಚ್ಚಾಗಿದೆಯಂತೆ. ಯಾಕಪ್ಪಾ ಏನು ತೊಂದರೆ? ನಮ್ಮ ಜೊತೇನೇ ಬಂದಿರಿ ಅಂತ ಹೇಳಿದ್ರೆ ನೀವು ಕೇಳೋದಿಲ್ಲ...."

"ಇಲ್ಲಿ ಇರೋದ್ರಿಂದ ನಾನು ಬದುಕಿದ್ದೀನಿ. ಇಲ್ದಿದ್ರೆ....."

"ಏನೇನೋ ಮಾತಾಡ್ಬೇಡಿ ಅಪ್ಪಾ..... ನೀವು ಇಲ್ಲಿ ಯಾಕೆ ಒಂಟಿಯಾಗಿ ಯಾರೂ ಇಲ್ಲದೋರ ಥರ ಇರ್ಬೇಕು ಅಂತ....."

"ಈ ಚರ್ಚೆಗಳೆಲ್ಲ ಈ ಮೊದಲು ಎಷ್ಟೋ ಸಾರಿ ಆಗಿದೆ ಲೀಲೂ.... ನನಗೆ ಇಲ್ಲೇ ಸರಿಯಾಗಿದೆ. ನನಗೆ ನಿಂದೇ ಚಿಂತೆ.... ನಿಮ್ಮ ಚಿಕ್ಕಮ್ಮ ಫೋನು ಮಾಡಿದ್ರೆ, ಆದಷ್ಟು ಬೇಗ ವಾಪಸ್ಸು ಬರೋಕೆ ಹೇಳು"

"ಆಗ್ಲಪ್ಪಾ ಹೇಳ್ತೀನಿ. ನನ್ನ ಬಗ್ಗೆ ನೀವು ಚಿಂತಿಸ್ಬೇಡಿ. ನಾನು ಹಾಯಾಗಿದೀನಿ. ಈ ಕೆಲಸಗಳನ್ನೆಲ್ಲಾ ಮಾಡೋದ್ರಿಂದ, ನನಗೆ ಯೋಚಿಸೋಕ್ಕೂ ಬಿಡುವಿಲ್ಲ. ನೀವು ವಿವೇಕಂಗೆ ಸ್ವಲ್ಪ ಬುದ್ಧಿ ಹೇಳೀಪ್ಪ.... ವಿದೇಶಕ್ಕೆ ಹೋಗಬೇಕೆಂಬ ಆಸೆ ಅವನಿಗೆ ಇನ್ನೂ ಕಡಿಮೆ ಆಗಿಲ್ಲ."

"ಹೋಗ್ಲಿ ಬಿಡು. ಅವನಿಗೆ ಆಸೆ ಇದ್ದರೆ, ಅವನ ಅನ್ನದ ಋಣ ಅಲ್ಲಿದ್ದರೆ ಅಲ್ಲಿ ಬದುಕ್ಕೋತಾನೆ.... ಅದನ್ನು ತಪ್ಪಿಸೋಕೆ ನಾವ್ಯಾರು? ಹೂಂ" ವೈರಾಗ್ಯದ ಧ್ವನಿಯಲ್ಲಿ ನುಡಿದಾಗ ಲೀಲಾ ಬೇಸರಗೊಂಡಳು.

"ನಾವಿನ್ನು ಹೊರಡ್ತೀವಪ್ಪ. ಡ್ರೈವರ್ರು ಸಿಗಲಿಲ್ಲ. ವಿವೇಕನೇ ಡ್ರೈವ್ ಮಾಡ್ಬೇಕು. ಹೊತ್ತಾದ್ರೆ ಟ್ರಾಫಿಕ್ ಜಾಸ್ತಿ ಆಗುತ್ತೆ"

"ಹೂಂ ಹೊರಡಿ ಕತ್ತಲಾಗುತ್ತೆ. ಈ ಹುಡ್ಗಿ ಇಲ್ಲೇ ಇರ್ತಾಳೋ.... ಹೇಗೆ?

ಎಲ್ಲಾ ಹೇಳಿದೀರಿ ತಾನೇ?"

"ಇಲ್ಲ, ಇನ್ನೆರಡು ದಿನ ಬಿಟ್ಟು ಬರ್ತಾಳೆ" ಎನ್ನುತ್ತಾ ಎದ್ದಳು. "ಅಪ್ಪಾ, ನೀವೇನೂ ಎದ್ದು ಬರ್ಬೇಡಿ. ರೆಸ್ಟ್ ತಗೊಳ್ಳಿ...." ಎನ್ನುತ್ತಾ ಹೊರಕ್ಕೆ ಬಂದಳು. ವಿವೇಕ, ಸುಜಯ ಅಲ್ಲಿ ಕಾಣಲಿಲ್ಲ. ಅವಳಿಗೆ ತಮ್ಮನ ಮೇಲೆ ಕೋಪ ಬಂತು. ಅಲ್ಲೇ ತಿರುಗಾಡುತ್ತಿದ್ದ ಕೆಲಸದವಳನ್ನು ಕೇಳಿದಳು.

"ನಿಮ್ಮ ತಮ್ಮ ಕಾರು ಬಿಟ್ಟ ಜಾಗಕ್ಕೆ ಹೋದ್ರು...." ಲೀಲಾ ಅಲ್ಲಿಗೇ ನಡೆದಳು. ಕಾರಿನ ಬಾಗಿಲಿಗೆ ಒರಗಿಕೊಂಡು ನಿಂತಿದ್ದ ವಿವೇಕ ನೆಟ್ಟಗೆ ನಿಂತ. ಸುಜಯ ಅಲ್ಲಿ ಎಲ್ಲಿಯೂ ಕಾಣಲಿಲ್ಲ.

"ಇಲ್ಲೇನು ಮಾಡ್ತಿದೀಯ? ಸುಜಯಾ ಎಲ್ಲಿ? ಇನ್ನು ಬಂದಿಲ್ವಾ?"

"ಪ್ರಸಾದ್ ಜೊತೆ, ಆಫೀಸು ರೂಂಗೆ ಹೋದ್ರು.... ನಾನು ಇಲ್ಲೇ ಕಾಯ್ತಾ ನಿಂತಿದ್ದೆ" ಲೀಲಾ ಸಮಾಧಾನದ ನಿಟ್ಟುಸಿರನ್ನು ಬಿಟ್ಟಳು. ಇದ್ದಕ್ಕಿದ್ದಂತೆ ಇವನಲ್ಲಿ ಯಾಕೆ ಈ ಬದಲಾವಣೆ? ಸುಜಯಳ ಮೇಲೆ ಯಾಕೆ ಆಸಕ್ತಿ? ಈ ಮುಂಚೆ ಹೀಗೆ ಆಡಿದಂತೆ ನೆನಪಿಲ್ಲ. ಅಥವಾ ತಾನೇ ಅವನನ್ನು ಗಮನಿಸಿರಲಿಲ್ಲವೋ ಎಂದುಕೊಂಡಳು. ಅತ್ತಲಿಂದ ಸುಜಯ, ಪ್ರಸಾದರೊಡನೆ ಬರುತ್ತಿದ್ದಳು. ವಿವೇಕನ ದೃಷ್ಟಿ ಅವಳ ಮೇಲೇ ಇದ್ದುದು ತಿಳಿಯಿತು. ಅವನನ್ನು ಎಚ್ಚರಿಸಿದಳು.

"ಕಾರನ್ನ ಇತ್ಲಾಗೆ ತಗೊಂಡು ಬಾ.... ನಾನು ಪ್ರಸಾದರ ಹತ್ರ ಮಾತ್ನಾಡಿ ಬರ್ತೀನಿ" ಎನ್ನುತ್ತಾ ಅತ್ಲಾಗೆ ಸರಿದಳು.

"ಸುಜಯಾ, ಇವರಿಗೆ ನಿಮ್ಮ ಮನೆಯ ವಿಳಾಸವನ್ನು ಸರಿಯಾಗಿ ತಿಳಿಸಿ. ನಾಡಿದ್ದು ಬೆಳಿಗ್ಗೆ ನಿಮ್ಮ ಮನೆಯ ಬಳಿಗೇ ಕಾರನ್ನು ಕಳಿಸ್ತಾರೆ. ಬಂದು ಡ್ಯೂಟಿಗೆ ಜಾಯಿನ್ ಆಗಿ ಬಿಡಿ. ನಾನಿನ್ನು ಬರಲಾ ಪ್ರಸಾದ್?"

"ಹೂಂ ಮೇಡಂ. ನಾನು ಅಡ್ರೆಸ್ ತಿಳಿದು ಕೊಂಡಿದ್ದೀನಿ. ಗೊತ್ತಾಗದಿದ್ರೆ ಡ್ರೈವರು ಫೋನು ಮಾಡಿ ತಿಳ್ಕೋತಾನೆ. ಡ್ರೈವರ್ರು.... ನೀವೇನೂ ಆತಂಕ ಪಟ್ಕೋಬೇಡಿ...."

"ಹಾಗೇ ನಮ್ಮ ತಂದೆಯ ಆರೋಗ್ಯದ ಕಡೆ ಸ್ವಲ್ಪ ಗಮನ ಇರಲಿ... ಡಾಕ್ಟ್ರು ದಿನಾ ಬಂದು ಚೆಕ್ ಮಾಡ್ಲೀ.... ಬನ್ನಿ ಸುಜಯಾ ಹೊತ್ತಾಯ್ತು.... ಜಯಮ್ಮ ಎಲ್ಲಿ? ಇಲ್ಲೇ ನಿಂತಿದ್ರಲ್ಲ?"

"ಅಲ್ಲೇ ಯಾರ ಹತ್ರಾನೋ ಮಾತಾಡ್ತಾ ಇದಾರೆ ನೋಡಿ...."

"ಎಲ್ರಿಗೂ ಅಷ್ಟೇ.... ಈ ಮಾತುಗಳೇ ಮುಗಿಯಲ್ಲ. ನಾವು ಕಾರ್‌ನಲ್ಲಿ ಕೂತಿ ರ್ತೀವಿ. ಜಯಮ್ಮನ್ನ ಕಳಿಸಿ...." ಲೀಲಾ ಮುಂದೆ ನಡೆದಳು. ಸುಜಯ ಅವಳ ಹಿಂದೆ ಹಿಂದೆ ಹೆಜ್ಜೆ ಹಾಕಿದಳು.

"ಮುಗೀತಾ ಜಯಮ್ಮ ಮಾತುಕತೆ?" ವಿವೇಕ ತಮಾಷೆ ಮಾಡಿದ.

"ಆಕೆ ನಮ್ಮೂರಿನವಳೇ... ಯಾವುದೋ ಬಾದರಾಯಣ ಸಂಬಂಧ.... ಕಷ್ಟ ಸುಖಾನ ವಿಚಾರಿಸುತ್ತಿದ್ದೆವು"

"ನಿಮಗೆ ಎಲ್ಲಿ ಹೋದ್ರೂ ಸಂಬಂಧಿಗಳೋ, ಸ್ನೇಹಿತರೋ ಸಿಗ್ತಾರೆ ಅಲ್ವಾ? ನಮಗೇ ಯಾರೂ ಇಲ್ಲ. ಸಂಬಂಧಿಗಳು ಎಲ್ಲಿದಾರೋ ತಿಳಿಯದು. ಸ್ನೇಹಿತರು ಇದ್ದರೆ ಇದ್ದರು, ಇಲ್ಲದಿದ್ರೆ ಇಲ್ಲ...."

"ನಮ್ಮ ಕಾಲಕ್ಕೂ ನಿಮ್ಮ ಕಾಲಕ್ಕೂ ಬಹಳ ಅಂತರ ಬಿಡಿ ಸಾರ್... ನಾವುಗಳು ಸಂಬಂಧಕ್ಕೆ, ಸ್ನೇಹಕ್ಕೆ ಬೆಲೆ ಕೊಡ್ತಿದ್ದೆವು. ಈಗ ಅದೆಲ್ಲ ಕಡಿಮೆ ಆಗ್ತಿದೆ ಅಲ್ವಾ! ಯಾರಿಗೆ ಯಾರೂ ಬೇಡ...."

"ಹಾಗೆನ್ನಬೇಡಿ ಜಯಮ್ಮ.... ಅಕ್ಕಂಗೆ ಬೇಜಾರಾಗುತ್ತೆ. ಅಪ್ಪ ನಮ್ಮ ಜೊತೆ ಇರದೇ, ಎಲ್ಲೆಲ್ಲೋ ವೃದ್ಧಾಶ್ರಮದಲ್ಲಿದ್ದರೆ, ಅದರಲ್ಲಿ ನಮ್ಮ ತಪ್ಪು ಏನೂ ಇಲ್ಲ.... ಅದು ಅವರದ್ದೇ ನಿರ್ಧಾರ. ನಂಗಂತೂ ಅರ್ಥವಾಗ್ತಿಲ್ಲ...."

"ವಿವೇಕ್, ಈಗ ಆ ಮಾತೆಲ್ಲಾ ಯಾಕೆ? ರಸ್ತೆ ಕಡೆ ನೋಡ್ಕೊಂಡು ಗಾಡಿ ಓಡಿಸು.... ನಮಗೂ ಸಂಬಂಧ, ಸ್ನೇಹ ಅಂತಂದ್ರೆ ಬೆಲೆ ಏನು ಅಂತ ಗೊತ್ತಿದೆ ಜಯಮ್ಮನವರೇ...ಆದರೆ ಅದನ್ನೆಲ್ಲ ನಿಭಾಯಿಸಕ್ಕೆ ಸಮಯ ಇಲ್ಲ ಅಷ್ಟೇ.... ನೋಡ್ತೀರೋ ಇಲ್ವೋ ನಂಗಂತೂ ಈ ಕೆಲಸಗಳ ನಡುವೆ ಬಿಡುವೇ ಇಲ್ಲ.."

"ಅಕ್ಕಂಗೆ ತುಂಬಾ ಬಿಡುವು ಇದ್ದಿದ್ರೆ, ಅವಳೇ ಅಡುಗೆ ಕೆಲಸ ಮಾಡುತ್ತಿದ್ದಳು... ನಿಮ್ಮ ಪರಿಚಯವೇ ನಮಗೆ ಆಗ್ತಿರಲಿಲ್ಲ" ವಿವೇಕ ನಕ್ಕ. ಉಳಿದವರೂ ನಕ್ಕರು. ವಿವೇಕ ಸುಜಯಳ ಮಂದಹಾಸಭರಿತ ಮುಖವನ್ನು ಕನ್ನಡಿಯಲ್ಲಿ ನೋಡಿ ಮುಗುಳ್ನಕ್ಕು, ಗಾಡಿಯನ್ನು ಓಡಿಸಿದ.

* * *

"ಎಲ್ಲಿ ಹೋಗಿದ್ಯೇ ಇಡೀ ದಿನ.... ಈಗ ಬರ್ತಾ ಇದೀಯ. ನಿಮ್ಮಪ್ಪಾಂತು ಹತ್ತಾರು ಬಾರಿ ಕೇಳಿದ್ರು...." ಪ್ರಭಾವತಿ ಮಗಳ ಮೇಲೆ ಸಿಡುಕಿದರು.

"ಹೌದೇನಮ್ಮ....ಅಪ್ಪಂಗೆ ನನ್ನ ಬಗ್ಗೆ ಅಷ್ಟೊಂದು ಚಿಂತೇನಾ?"

"ತಮಾಷೆಯಲ್ಲ ಸುಜೀ.... ನೀನು ಸರಿಯಾಗಿ ಹೇಳ್ತಿಲ್ಲ.... ನಾನು ನಿನ್ನ ಫ್ರೆಂಡ್ಸ್‌ಗೆ ಫೋನು ಮಾಡಿದ್ರೆ, ನಮಗೇನೂ ಗೊತ್ತಿಲ್ಲ ಅಂತಂದ್ರು!.... ಎಲ್ಲಿಗೆ ಟ್ರಿಪ್ ಹೋಗಿದ್ದೆ! ಯಾರ್‍ಯಾರು ಬಂದಿದ್ರು?"

"ಯಾವ ಟ್ರಿಪ್‌ಗೂ ಹೋಗಿರ್‍ಲಿಲ್ಲ. ನಾನು ಬೇರೆ ಕಡೆ ಟೀಚರ್ ಕೆಲ್ಸಕ್ಕೆ ಅಪ್ಲೈ ಮಾಡಿದ್ದೆ. ಇಂಟರ್‌ವ್ಯೂ ಇತ್ತು.... ಹೋಗಿದ್ದೆ"

"ನಮ್ಗೆ ಹೇಳ್ಲೇ ಇಲ್ಲವಲ್ಲೇ ಸುಜೀ...."

"ಕೈಗೆ ಆರ್ಡರ್ ಬಂದ್ಮೇಲೆ ಹೇಳೋಣ ಅಂತಿದ್ದೆ.... ನಾನು ಆಚೆ ನಾಡಿದ್ದು ಕೆಲಸಕ್ಕೆ ಜಾಯಿನ್ ಆಗ್ಬೇಕು.... ಅಷ್ಟೇ" ಸೋಫಾದ ಮೇಲೆ ಕುಳಿತಳು.

"ಈ ಸ್ಕೂಲು ಏನಾಗಿತ್ತು? ಯಾಕೆ ಬಿಟ್ಟೆ?"

"ಒಂದೇ ಸ್ಕೂಲಿನಲ್ಲಿ ಪಾಠ ಹೇಳೀ ಹೇಳೀ ಬೋರ್ ಆಗಿತ್ತಮ್ಮ. ಛೇಂಜ್ ಇರ್ಲಿ ಅಂತ ಈ ಪೋಸ್ಟ್‌ಗೆ ಅಪ್ಲೈ ಮಾಡ್ದೆ.... ಇನ್ನು ಮುಂದೆ ನಾನು ಹೆಡ್ ಮೇಡಂ...." ಎದೆಯ ಮೇಲೆ ಕೈಯಿಟ್ಟುಕೊಂಡು ಹೆಮ್ಮೆಯಿಂದ ನುಡಿದಳು.

"ಹೆಡ್ ಮೇಡಂ ಅಂತಾಂದ್ರೆ ಹೆಚ್ಚು ಜವಾಬ್ದಾರಿ ಅಲ್ವಾ ಸುಜೀ.... ಕೆಲಸದ ಒತ್ತಡ ಜಾಸ್ತಿ ಇರುತ್ತೆ. ಬೆಳಿಗ್ಗೆ ಮುಂಚಿತವಾಗಿ ಹೋಗ್ಬೇಕು.... ಸಾಯಂಕಾಲ ತಡವಾಗಿ ಮನೆಗೆ ಬರ್ಬೇಕು.... ಆಯಾಸ ಆಗುಲ್ವೇನೇ?"

"ಇಲ್ಲಮ್ಮ, ಹಾಗೇನೂ ಆಗುಲ್ಲ. ಅದು ಚಿಕ್ಕ ಸ್ಕೂಲು. ಹೆಚ್ಗೆ ಸ್ಟೂಡೆಂಟ್ಸ್‌ಗಳಿಲ್ಲ. ನಾಲ್ಕು ಜನ ಟೀಚರ್ಸ್ ಇದೀವಿ. ಅಲ್ಲದೇ.... ನನಗೇ ಅಲ್ಲೇ ರೂಮು ಕೊಡ್ತಾರೆ....ನಾನು ಅಲ್ಲೇ ಇರಬೇಕು...."

"ಅಂದ್ರೇ ಮನೆಯಿಂದ ಹೊರಗೆಲ್ಲೋ ಇರ್ತೀಯಾ! ಇದಕ್ಕೆ ನಾನು ಒಪ್ಪಲ್ಲ.... ಯಾವ ಸ್ಕೂಲೋ, ಎಂಥಾ ಜನವೋ.... ಈ ಫಜೀತಿಗಳೆಲ್ಲ ಬೇಡವೇ ಬೇಡ.... ಯಾವ ಸ್ಕೂಲೂ ಬೇಡ. ಸುಮ್ಮನೆ ಹಾಯಾಗಿ ಮನೇಲಿರು...."

"ಮನೇಲಿ ಹೇಗೆ ಕಾಲ ಕಳೀಲಮ್ಮ? ನೀನು ಸುಮ್ಮನಿರು"

"ಏನು ಸುಮ್ಮನಿರೋದು? ಗಂಡು ನೋಡಿ ಮದುವೆ ಮಾಡ್ತೀವಿ. ಗಂಡನ ಮನೆಗೆ ಹೋಗು. ಅಲ್ಲಿ ಏನು ಬೇಕಾದ್ರೂ ಮಾಡ್ಕೋ.... ಅಂದ್ಹಾಗೇ ವನಜಮ್ಮ ಯಾವಾಗ ಬರ್ತಾರೋ? ವಿಚಾರಿಸ್ಬೇಕು.... ಬಂದೇ ಇದಾರೋ ಏನೋ.... ಮಹೇಶನೂ ಊಟಕ್ಕೆ ಬರ್ತಿಲ್ಲವಲ್ಲ.... ನಿಂಗೇನಾದ್ರೂ ಹೇಳಿದ್ನಾ? ಮದುವೆ ವಿಷಯ."

"ಇಲ್ಲಮ್ಮ ನಂಗೇನೂ ಗೊತ್ತಿಲ್ಲ. ನೀನು ಯಾವ ವನಜಮ್ಮನ ಹತ್ರವೂ ಮಾತಾಡ್ಬೇಡ.....ನಾನು ಮಹೇಶನ್ನ ಮದುವೆಯಾಗುಲ್ಲ...."

"ಈಗ್ಯಾಕೆ ಹೀಗೆ ಹೇಳ್ತೀಯಾ? ಒಟ್ಟೊಟ್ಟಿಗೇ ಓಡಾಡ್ತಿದ್ರಿ.... ನೀನು ಅವನನ್ನು ಇಷ್ಟಪಟ್ಟಿರಬಹುದು ಅಂತ ಅಂದ್ಕೊಂಡಿದ್ದೆ.... ಪರವಾಯಿಲ್ಲ, ಹೆದರಬೇಡ ಹೇಳು."

"ಇಷ್ಟ ಪಟ್ಟ ಮಾತ್ರಕ್ಕೆ ಮದ್ವೇನೇ ಆಗ್ಬೇಕು ಅಂತೇನಿಲ್ಲ. ನಾವಿಬ್ರೂ ಒಳ್ಳೇ ಸ್ನೇಹಿತರು ಅಷ್ಟೇ...."

"ಒಂದು ಹುಡುಗಿ, ಒಬ್ಬ ಹುಡುಗ ಬರೀ ಸ್ನೇಹಿತರು ಅಂತಂದ್ರೆ ಸಮಾಜ ನಗುತ್ತೆ. ಜನ ಆಡ್ಕೋತಾರೆ...."

"ಆಡ್ಕೊಳ್ಳಲಿ ಬಿಡು.... ಇನ್ಮೇಲೆ ಆ ಸ್ನೇಹವೂ ಇಲ್ಲ. ನಾನು ಆಶ್ರಮಕ್ಕೆ ಹೊರಟು ಹೋಗ್ತೀನಿ. ಅವನೇನು ನನ್ನನ್ನು ಹುಡ್ಕೊಂಡು ಅಲ್ಲಿಗೆ ಬರುಲ್ಲ"

"ಅವನು, ಒಂದ್ವೇಳೆ ಅಲ್ಲಿಗೆ ಬಂದ್ರೂ ನಮಗೆ ಹೇಗೆ ತಿಳಿಯುತ್ತೆ? ಅಲ್ವೇ ಅದೇನೋ ಆಶ್ರಮದ ವಿಷಯ ಹೇಳಿದ್ಯಲ್ಲ.... ಅದೇನದು? ಅಲ್ಲಿ ಇರ್ತೀಯಾ?"

"ಹೂಂನಮ್ಮ. ಆಶ್ರಮದ್ದೇ ಸ್ಕೂಲು.... ಅನಾಥ ಮಕ್ಕಳಿಗಾಗಿ ನಡೆಸುವ ಸ್ಕೂಲು. ಆಶ್ರಮ ತುಂಬಾ ಪ್ರಶಾಂತವಾಗಿದೆ.... ಅಲ್ಲೇ ಇದ್ದು ಬಿಡೋಣ ಅಂತ ಅನ್ನಿಸುತ್ತೆ. ಅಲ್ಲಿ ವೃದ್ಧಾಶ್ರಮ ಸಹ ಇದೆ...."

"ಸರಿ. ಹಾಗಾದ್ರೆ ನಮಗೂ ಅಲ್ಲೇ ವ್ಯವಸ್ಥೆ ಮಾಡು.... ನಾವೂ ನಿನ್ನ ಜೊತೆಗೇ ಬಂದು ಬಿಡ್ತೀವಿ...."

"ಅಲ್ಲಿರೋರೆಲ್ಲಾ ಬರೀ ಗಂಡಸರು.....ಅಲ್ಲದೇ ನನ್ನ ಕೆಲಸ ಟೆಂಪರರಿ...."

"ಬರೀ ಗಂಡಸರ ಮಧ್ಯೆ ಅದೆಂಥಾ ಸ್ಕೂಲೇ...ನೀನು ಅಲ್ಲಿ ಹೋಗಕೂಡದು..."

"ಸುಮ್ಮನಿರಮ್ಮ.... ಅಲ್ಲಿ ಹೆಂಗಸ್ರೂ ಇದಾರೆ. ಇನ್ನು ಮೂರು ಜನ ಟೀಚರ್ಸ್ ಇದಾರೆ. ಡಿಸ್ಪೆನ್ಸರಿ ಇದೆ. ಅಲ್ಲಿ ನರ್ಸುಗಳಿದ್ದಾರೆ. ಅಡುಗೆ ಕೆಲಸಕ್ಕೆ ಹೆಂಗಸರಿದ್ದಾರೆ.... ಯಾಕೆ ಹೀಗೆಲ್ಲಾ ಮಾತಾಡ್ತೀಯಾ?"

"ನನ್ನ ಎದೆ ಹೊಡೆದುಕೊಳ್ಳುತ್ತೆ ಕಣೇ ಸುಜೀ.... ನಿನಗ್ಯಾಕೆ ಬೇಕೇ? ನಿಮ್ಮ ಅಪ್ಪ ಒಪ್ತಾರೇನೇ?"

"ಅವರನ್ನ ಒಪ್ಪಿಸೋ ಜವಾಬ್ದಾರಿ ನಿನ್ನದು.... ಟೆಂಪರರಿ ಅಂತ ಹೇಳು"

"ಹಾಗಾದ್ರೆ.... ಮತ್ತೆ ಅಲ್ಲಿ ಕಂಟಿನ್ಯೂ ಮಾಡಕೂಡದು.... ಈ ಅವಧಿ ಮುಗಿದ ಕೂಡ್ಲೇ ಬಿಟ್ಟು ಬಿಡ್ಬೇಕು.... ಆಮೇಲೆ...."

"ಆಮೇಲೆ ನನ್ನ ಮದುವೆ. ನೋಡೋಣ.... ಈಗ್ಲೇ ಷರತ್ತುಗಳನ್ನು ಹಾಕಿ ಗೊಂದಲ ಮಾಡ್ಬೇಡ.... ನಾನು ಬಟ್ಟೆಗಳನ್ನು ಪ್ಯಾಕ್ ಮಾಡ್ಕೋಬೇಕು. ನನಗೆ ಬೇಕಾದಷ್ಟು ಬೇರೆ ಕೆಲಸಗಳಿವೆ. ನಂಗೆ ಈಗ ನಿನ್ನ ಹೆಲ್ಪ್ ಬೇಕು....." ಸುಜಯ ತಾಯಿಯ ಕೆನ್ನೆಗಳನ್ನು ಸವರಿ, ತನ್ನ ರೂಮಿಗೆ ಹೋದಳು. ಅಲ್ಲಿದ್ದ ಹಾಸಿಗೆಯ ಮೇಲೆ ಕುಳಿತಳು. ತಾಯಿಯ ಮಾತುಗಳಿಂದ ಮನಸ್ಸು ಗೊಂದಲಕ್ಕೊಳಗಾಗಿತ್ತು. ಆತಂಕವೂ ಉಂಟಾಗಿತ್ತು. ತಾನೇಕೆ ಈ ಸ್ಕೂಲಿನ ಕೆಲಸಕ್ಕೆ ಒಪ್ಪಿಕೊಂಡೆ? ಮಹೇಶ ನಿಂದ ದೂರ ಇರಲೆಂದೇ? ಅಲ್ಲಿದ್ದು ಅವನನ್ನು ಮರೆಯಲು ಸಾಧ್ಯವೇ.... ಪ್ರಯತ್ನ ವನ್ನಂತೂ ಪಡಬೇಕು. ಇಲ್ಲದಿದ್ರೆ ತನಗೇ ಕಷ್ಟ ಅಂತಂದುಕೊಂಡಳು. ಹಾಗೇ ಹಾಸಿಗೆಯ ಮೇಲೆ ಒರಗಿದ್ದವಳಿಗೆ ಗಾಢ ನಿದ್ರೆ ಬಂದಿತು.

* * *

ಡೆಲ್ಲಿಯಿಂದ ಬರುವ ಎಕ್ಸ್‌ಪ್ರೆಸ್ ರೈಲಿಗಾಗಿ ಕಾಯುತ್ತಾ ನಿಂತಿದ್ದ ಮಹೇಶನಿಗೆ ರೈಲು ಬೇಗ ಬರಬಾರದೇ ಅಂತ ಗಳಿಗೆ ಗಳಿಗೆಗೂ ಅನ್ನಿಸುತ್ತಿತ್ತು. ಒಂದೆರಡು ಬಾರಿ ಸುಜಯಳೊಡನೆ ಮಾತನಾಡಿ ಬೇಸರ ಕಳೆದುಕೊಳ್ಳೋಣವೆಂದು ಅವರ ಮನೆಗೆ ಫೋನು ಮಾಡಿದ್ದ. ಫೋನು ರಿಂಗಾಗುತ್ತಿತ್ತು. ಯಾರೂ ಎತ್ತಿರಲಿಲ್ಲ. ಬಹುಶಃ ಕೆಟ್ಟು ಹೋಗಿರಬಹುದು ಎಂದುಕೊಂಡ. ಎಲ್ಲರು ಒಟ್ಟಿಗೆ ಮನೆಯಿಂದಾಚೆ ಹೋಗಿರಲು ಸಾಧ್ಯವಿಲ್ಲ ಎಂದೆನಿಸಿತ್ತು. ಸ್ಟೇಷನ್ನಿನಲ್ಲಿ ಜನಗಳ ಸಂದಣಿ ಹೆಚ್ಚಾಗಿತ್ತು.

ಪ್ಲಾಟ್‌ಫಾರಂನಲ್ಲಿ ಅತ್ತಿಂದಿತ್ತ ಅನೇಕ ಬಾರಿ ಓಡಾಡಿದ. ಕಡೆಗೂ ರೈಲು ನಿಲ್ದಾಣವನ್ನು ಸಮೀಪಿಸುತ್ತಿದೆ ಎಂಬ ಅನೌನ್ಸ್‌ಮೆಂಟ್ ಕೇಳಿದಾಗ, ಹಾಯೆನ್ನಿಸಿತ್ತು. ತಾಯಿಯಿದ್ದ ಬೋಗಿಯನ್ನು ಸಮೀಪಿಸಿದ. ಕೂಲಿಗಳು ಬೋಗಿಯ ಕಿಟಕಿಗಳಿಗೆ ಜೋತು ಬಿದ್ದಿದ್ದರು. ಆತಂಕದಿಂದ ಕಿಟಕಿಯಿಂದಾಚೆ ನೋಡುತ್ತಿದ್ದ ತಾಯಿಯ ಮುಖವನ್ನು ಕಂಡೊಡನೆ ಕೈಯಾಡಿಸಿದ. ರೈಲು ನಿಧಾನವಾಗಿ ನಿಂತಿತು. ಮಹೇಶ ಜನಗಳ ಮಧ್ಯೆ ತೂರಿ, ತಾಯಿಯನ್ನು ಸಮೀಪಿಸಿದ.

"ಹೇಗಿದೀಯೋ ಮಹೀ...." ತಾಯಿ ಪ್ರೀತಿಯಿಂದ ಕೇಳಿದಳು.

"ನಿನ್ನ ಲಗೇಜು ಯಾವುದು? ಮೊದ್ಲು ಇಳಿಯೋಣ...."

"ಬನ್ನಿ ಸಾವಿತ್ರಮ್ಮ...." ವನಜಮ್ಮ ತನ್ನೊಂದಿಗಿದ್ದಾಕೆಗೆ ಹೇಳಿದಾಗ ಮಹೇಶ ಆಕೆಯ ಕಡೆ ತಿರುಗಿದ. "ಇವರು ಸಾವಿತ್ರಮ್ಮ ಅಂತ. ನನ್ನ ಜೊತೆಗೇ ಬಂದ್ರು. ಇವರ ಮನೆಯ ಕಡೆಯವರು ಯಾರಾದ್ರೂ ಬಂದಿದಾರೋ ಇಲ್ಲವೋ ಕಾಣಲಿಲ್ಲ ವಂತೆ. ಅಷ್ಟರಲ್ಲಿ ಕೂಲಿಯವನು ಲಗೇಜಿಗೆ ಕೈ ಹಾಕಿದ್ದ. ಲಗೇಜನ್ನು ಅವನ ತಲೆಯ ಮೇಲೆ ಹೊರಿಸಿ ಅವನೊಂದಿಗೆ ಇಳಿದ.

"ಸ್ವಲ್ಪ ತಡಿಯಪ್ಪಾ.... ಇಳೀಲಿ....." ಕೂಲಿಯವನಿಗೆ ಹೇಳಿ, ಇಳಿಯಲು ತಾಯಿಗೆ ಸಹಾಯ ಮಾಡಿದ. ಸಾವಿತ್ರಮ್ಮನೂ ಇಳಿದರು. ಜನ ಜಂಗುಳಿಯನ್ನು ದಾಟಿ, ತನ್ನ ಕಾರನ್ನು ನಿಲ್ಲಿಸಿದ್ದ ಸ್ಥಳಕ್ಕೆ ಬಂದ. ಕೂಲಿಯವನಿಗೆ ಹಣ ಕೊಟ್ಟು ಕಳಿಸಿದ್ದಾಗಿತ್ತು.

"ನಿಮ್ಮೋರು ಯಾರೂ ಕಾಣ್ಲಿಲ್ವೇ ಸಾವಿತ್ರಮ್ಮ... ಯಾರೂ ಬಂದಂತಿಲ್ಲ...."

"ನೋಡಿ ವನಜಮ್ಮ.... ಫೋನು ಮಾಡಿದ್ರೂ ಯಾರೂ ಬಂದಿಲ್ಲ.... ನಾನು ಎಷ್ಟಾಗಲೀ ಚಿಕ್ಕಮ್ಮ. ಸ್ವಂತ ತಾಯಿ ಅಲ್ಲವಲ್ಲ."

"ಬೇಜಾರು ಮಾಡ್ಕೋಬೇಡಿ.... ಫೋನು ನಂಬರನ್ನು ಕೊಡಿ... ನನ್ನ ಮಗ ಮಾತಾಡ್ತಾನೆ. ಎಲ್ಲಿದ್ದಾನೋ ತಿಳಿಯುತ್ತೆ...." ಆಕೆ ಕೊಟ್ಟ ನಂಬರನ್ನು ಒತ್ತಿದ. ಲೈನು ಸಿಗಲಿಲ್ಲ. "ಸಿಗ್ತಿಲ್ಲ....." ಎಂದ.

"ಹೋಗ್ಲಿ ಬಿಡಪ್ಪಾ. ನಂಗೊಂದು ರಿಕ್ಷಾ ಗೊತ್ತು ಮಾಡಿಕೊಟ್ಟರೇ, ನಾನು ಹೋಗ್ತೀನಿ.... ನಂಗೆ ಒಬ್ಬಳೇ ಓಡಾಡಿ ಅಭ್ಯಾಸವಿದೆ...."

"ಬೇಡಿ ಸಾವಿತ್ರಮ್ಮ. ಇಷ್ಟು ಹೊತ್ನಲ್ಲಿ ಒಬ್ಬರೇ ಹೋಗ್ಬೇಡಿ.... ನಮ್ಮ ಕಾರಿನಲ್ಲಿ ನಿಮ್ಮನ್ನು ನಿಮ್ಮ ಮನೆ ತಲುಪಿಸ್ತೀವಿ" ಮಹೇಶ ತಲೆ ಕೆರೆದುಕೊಂಡ. ಅವರ ಲಗೇಜನ್ನು ಎತ್ತಿ ಢಿಕ್ಕಿಯಲ್ಲಿ ಹಾಕಿದ. ಅವರಿಬ್ಬರೂ ಹಿಂದಿನ ಸೀಟಿನಲ್ಲಿ ಕುಳಿತರು. ಆಕೆ ತನ್ನ ಮನೆಯ ವಿಳಾಸವನ್ನು ತಿಳಿಸಿದಳು. ಮಹೇಶನಿಗೆ ಮನೆಯನ್ನು ಹುಡುಕುವುದು ಕಷ್ಟವಾಗಲಿಲ್ಲ. ಆಕೆಯ ಮನೆಯ ಮುಂದೆ ಕಾರನ್ನು ನಿಲ್ಲಿಸಿದ. ಆಕೆ ಇಳಿದಳು. ಲಗೇಜನ್ನು ಇಳಿಸಿದ.

"ಹೋಗೋ ಮಹೇಶ, ಮನೇತನಕ ಲಗೇಜನ್ನು ಕೊಟ್ಟು ಬಾ."

"ಬನ್ನಿ" ಮಹೇಶ ಲಗೇಜನ್ನು ಎತ್ತಿಕೊಂಡು ಮನೆಯ ಬಾಗಿಲಿನ ತನಕ ಹೋಗಿ ಬೆಲ್ ಮಾಡಿದ. ಬಾಗಿಲನ್ನು ತೆಗೆದ ಯುವತಿ, ಎದುರಿಗೆ ನಿಂತ ಯುವಕನನ್ನೇ ನೋಡಿ, "ಯಾರು?" ಎಂದಳು. ಅಷ್ಟರಲ್ಲಿ ಸಾವಿತ್ರಮ್ಮ ಬಾಗಿಲನ್ನು ಸಮೀಪಿಸಿದಳು.

"ಅರೇ.... ಚಿಕ್ಕಮ್ಮ.... ಅದೇನು ಹೀಗೆ ದಿಢೀರನೇ.... ಫೋನು ಮಾಡಬಾರದಾಗಿತ್ತಾ?" ಮಹೇಶ ಲಗೇಜನ್ನು ವರಾಂಡದಲ್ಲಿಟ್ಟ. ಸಾವಿತ್ರಮ್ಮ ಹುಸಿ ಮುನಿಸಿನಿಂದ ನುಡಿದಳು.

"ವಿವೇಕ ಸ್ಟೇಷನ್‌ಗೆ ಬರ್ತಾನೆ ಅಂತ ಅಂದ್ಕೊಂಡಿದ್ದೆ. ಈ ಹುಡುಗ ಕರ್ಕೊಂಡು ಬಂದ. ಇಲ್ದಿದ್ರೆ ಆಟೋದಲ್ಲಿ ಇನ್ನೂ ಅರ್ಧ ಗಂಟೆ ಬಿಟ್ಟು ಬರ್ತಿದ್ದೆ"

"ಫೋನು ಯಾಕೆ ಮಾಡ್ಲಿಲ್ಲ ಚಿಕ್ಕಮ್ಮ?"

"ಮಾಡ್ದೆ ಏನು? ವಿವೇಕನ್ನ ಕೇಳು.... ಅವನ ಮೊಬೈಲ್‌ಗೆ ಮಾಡಿದ್ದೆ...."

"ಅಯ್ಯೋ ರಾಮಾ, ಅವನ ಮೊಬೈಲ್‌ಗೆ ಯಾಕೆ ಮಾಡಿದ್ರಿ! ಅದು ಕಳೆದು ಹೋಯ್ತು. ಅವನೀಗ ಹೊಸ ಮೊಬೈಲ್ ತಗೊಂಡಿದ್ದಾನೆ"

"ನಂಗೇನು ಗೊತ್ತು? ಮಾತಾಡ್ದೋನು ವಿವೇಕಾನೇ ಅಂತ ಅಂದ್ಕೊಂಡಿದ್ದೆ...."

"ನಾನು ಬರ್ಲಾ ಆಂಟಿ...." ಮಹೇಶ ಹಿಂದಕ್ಕೆ ಸರಿದ.

"ತುಂಬಾ ಥ್ಯಾಂಕ್ಸ್ ಕಣಪ್ಪಾ.... ನಿಮ್ಮ ತಾಯಿ ಕಾಯ್ತಾ ಇದಾರೆ. ಆಕೆಗೂ ಆಯಾಸ ಆಗಿದೆ.... ಮತ್ತೆಂದಾದ್ರೂ ಯೋಗ ಇದ್ದರೆ ಭೇಟಿಯಾಗೋಣ.... "

"ಸ್ವಲ್ಪ ಕಾಫೀನೋ ಟೀನೋ ಕುಡಿಯೋರಂತೆ.... ಒಳಗೆ ಬನ್ನಿ. ನಿಮ್ಮ ತಾಯೀನೂ ಕರ್ಕೊಂಡು ಬನ್ನಿ...." ಲೀಲಾ ನುಡಿದಾಗ ಮಹೇಶ ತಲೆಯಾಡಿಸಿದ.

"ಈಗಾಗ್ಲೇ ಹೊತ್ತಾಗಿದೆ. ನಾವಿನ್ನು ಹೊರಡ್ತೀವಿ...."

"ಹಾಗಂದ್ರೆ ಹೇಗೆ? ಎರಡು ರಾತ್ರಿಯಿಂದ ನಾವಿಬ್ಬರೂ ಒಟ್ಟಿಗೇ ಪ್ರಯಾಣ ಮಾಡಿ ಸ್ನೇಹಿತರಾಗಿದೀವಿ.... ನಾನು ಅವರನ್ನು ಕರ್ಕೊಂಡು ಬರ್ತೀನಿ. ನೀನು ಕಾಫಿ ಬೆರೆಸು ಲೀಲು.... ಅವನೆಲ್ಲಿ ನಿನ್ನ ತಮ್ಮ?"

"ಫ್ರೆಂಡ್ಸ್ ಜೊತೆ ಎಲ್ಲೋ ಹೋಗಿದಾನೆ" ಎನ್ನುತ್ತಾ ಲೀಲಾ ಅಡುಗೆಯ ಮನೆ ಕಡೆಗೆ ತೆರಳಿದಳು. ಮಹೇಶ ಅಲ್ಲಿಯೇ ನಿಂತ. ಸಾವಿತ್ರಮ್ಮ, ವನಜಮ್ಮನನ್ನು ಬಲವಂತವಾಗಿ ಇಳಿಸಿಕೊಂಡು ಕರೆತಂದಳು.

"ಇವಳು ನನ್ನ ಭಾವನವರ ಮಗಳು ಲೀಲಾ...." ಕಾಫಿಯನ್ನು ತಂದಿತ್ತವಳನ್ನು ಪರಿಚಯಿಸಿದಳು. ಲೀಲಾ ಇಬ್ಬರಿಗೂ ಕೈ ಮುಗಿದಳು. ಇವಳಿಗೊಬ್ಬ ತಮ್ಮ ಇದಾನೆ ವಿವೇಕ ಅಂತ.... ಶುದ್ಧ ಅವಿವೇಕಿ. ಹೆಸರು ಮಾತ್ರ ವಿವೇಕ. ಮೊಬೈಲ್ ಕಳೆದು ಹೋಗಿದೆಯಂತೆ, ಅದನ್ನು ನಂಗೆ ತಿಳಿಸಬಾರದಿತ್ತಾ? ಅವನ್ಯಾವನೋ ತಾನೇ ವಿವೇಕನಂತೆ ಮಾತಾಡಿದ.... ಇವತ್ತು ಅವನೇ ಬಂದು ಸ್ಟೇಷನ್‌ನಲ್ಲಿ ನನ್ನನ್ನು ಇಳಿಸಿಕೊಂಡು ಹೋಗಿದ್ದಿದ್ರೇ...?"

"ನೀವು ಕಂಪ್ಲೆಂಟ್ ಕೊಟ್ಟಿಲ್ವಾ?" ಮಹೇಶ ಪ್ರಶ್ನಿಸಿದ.

"ಕೊಟ್ಟಿದೀವಿ. ಆದರೆ ಇದುವರೆಗೂ ಪತ್ತೆಯಾಗಿಲ್ಲ." ಎಂದಳು ಲೀಲಾ

"ಒಂದ್ಸಾರಿ ಕಳೆದುಹೋದದ್ದು ಏನಾದ್ರೂ ಪತ್ತೆಯಾಗಿದೆಯೇನೇ ಈ ಮನೇಲಿ, ಬಿಟ್ಹಾಕು ಅತ್ಲಾಗೆ" ಸಾವಿತ್ರಮ್ಮ ಕಟುವಾಗಿ ನುಡಿದಾಗ ಲೀಲಾ ಪೆಚ್ಚಾದಳು.

"ಕಾಫೀ ತುಂಬಾ ಚೆನ್ನಾಗಿತ್ತಮ್ಮ. ಆಯಾಸವೆಲ್ಲಾ ಪರಿಹಾರವಾಯ್ತು. ನಾವಿನ್ನು ಹೊರಡ್ತೀವಿ. ಈಗಾಗ್ಲೇ ಹೊತ್ತಾಗಿದೆ" ವನಜಮ್ಮ ಎದ್ದಳು. ಮಹೇಶನೂ ತಲೆ ಆಡಿಸಿ, 'ಬರ್ತೀನಿ' ಎಂದು ಹೇಳಿ ಬಾಗಿಲನ್ನು ದಾಟಿದ. ಕಾರು ಅವರ ಮನೆಯ ಕಡೆಗೆ ತಿರುಗಿತು. "ಅಬ್ಬಾ.... ಎಂಥಾ ಜನ? ಚಿಕ್ಕಮ್ಮ ಆದ್ರೇನಂತೆ? ಚಿಕ್ಕ ವಯಸ್ನಿಂದ ಸಾಕಿ ಬೆಳೆಸಿರ್ತಾಳೆ ಅನ್ನೋ ಮಮಕಾರವಾದ್ರೂ ಬೇಡ್ವಾ?"

"ಹೋಗ್ಲಿ ಬಿಡಮ್ಮ. ಅದೆಲ್ಲ ನಮಗ್ಯಾಕೆ? ಡೆಲ್ಲಿ ಹೇಗಿತ್ತು? ಕಾಶೀಯಾತ್ರೆ ಚೆನ್ನಾಗಿ ಆಯ್ತಾ?"

"ಹೂಂ.... ಎಲ್ಲಾ ಚೆನ್ನಾಗಿತ್ತು.... ಆದ್ರೆ ಒಂದೇ ಒಂದು ಸಾಕಪ್ಪಾ ಸಾಕು ಅಂತನ್ನಿಸ್ತು. ಏನು ಶೆಕೆ ಅಂತೀಯ ಆ ಊರ್ನಲ್ಲಿ. ಏನೇ ಹೇಳು ಬೆಂಗಳೂರನ್ನ ಬಿಟ್ರೆ ಇನ್ನಿಲ್ಲ...."

"ಅದಕ್ಕೇ ಅಲ್ವಾ ಎಲ್ರೂ ಇಲ್ಲಿಗೆ ಬಂದು ಸೆಟ್ಲ್ ಆಗೋದು.... ಅದು ಬಿಡು. ಪ್ರಯಾಣದಲ್ಲಿ ಏನೂ ತೊಂದ್ರೆ ಆಗ್ಲಿಲ್ಲ ತಾನೇ......"

"ಏನೂ ಆಗ್ಲಿಲ್ಲ. ಆಕೆ ಜೊತೆಗಿದ್ರು.... ಭಯವೂ ಇರಲಿಲ್ಲ. ಆಕೆ ತುಂಬಾ ಜಾಣೆ.... ಅರಳು ಹುರಿದಂತೆ ಪಟಪಟ ಮಾತಾಡಿದ್ರು. ದಾರಿ ಸವೆದದ್ದೇ ಗೊತ್ತಾಗ್ತಿರ್ಲಿಲ್ಲ....."

"ಅವರ ಪರಿಚಯ ಹೇಗಾಯ್ತು?"

"ಹೀಗೇ ರೈಲು ಹತ್ತುವಾಗ.... ಅವರ ತಂಗಿ ಅಳಿಯ ದಿನೇಶನ ಆಫೀಸ್ನಲ್ಲಿ ಕೆಲ್ಸ ಮಾಡೋರಿಗೆ ಸಂಬಂಧಿ ಅಂತೆ. ದಿನೇಶ ಹೇಗೋ ಪತ್ತೆ ಹಚ್ಚಿದ. ಆಕೆಯ ಜೊತೆ ಇದೆ ಅಂತ ನನ್ನನ್ನು ಕಳಿಸಿಕೊಟ್ಟ.... ನಂಗೇ ಸ್ವಲ್ಪ ಆತಂಕ ಆಗ್ತಿತ್ತು.... ಆಕೆ ಧೈರ್ಯವಂತೆ.... ತಕ್ಕ ಮಟ್ಟಿಗೆ ಹಿಂದೀನೂ ಬರುತ್ತೆ.... ನಾನೇ ದಡ್ಡಿ." ಮಹೇಶ ಮನದಲ್ಲೇ ನಕ್ಕ. ಮನೆ ಸಮೀಪಿಸಿತು.... ಮಹೇಶ ಬಾಗಿಲನ್ನು ತೆಗೆದು ಲಗೇಜನ್ನು ಒಳಕ್ಕೆ ತಂದಿಟ್ಟ. ವನಜಮ್ಮ ನಿಂತಲ್ಲೇ ಮನೆಯನ್ನು ಅವಲೋಕಿಸಿದಳು.

"ಎಲ್ಲಾ ನೀನು ಹೇಗೆ ಬಿಟ್ಟು ಹೋಗಿದ್ಯೋ ಹಾಗೇ ಇದೆ. ಒಂದಿಂಚೂ ಬದಲಾಗಿಲ್ಲ." ಮಹೇಶ ನಗುತ್ತಾ ನುಡಿದ.

"ಸುಮ್ನೇ ನೋಡ್ದೆ ಕಣೋ.... ಒಂದ್ಕಡೆಯಿಂದ ಕ್ಲೀನ್ ಮಾಡ್ಬೇಕು.... ಜೇಡರ ಬಲೆ ತೂಗಾಡ್ತಿವೆ ನೋಡು.... ಧೂಳು ಉದುರುತ್ತಿದೆ"

"ನಂಗೆ ಬಿಡುವೇ ಆಗ್ಲಿಲ್ಲ.... ಇಲ್ದಿದ್ರೆ ಮಾಡ್ತಿದ್ದೆ...." ಸುಳ್ಳು ಹೇಳಿದ.

"ಟೂರ್ ಹೋಗಿದ್ಯಾ?"

"ಹೂಂ. ಒಂದೆರಡು ಸಾರಿ ಹೋಗ್ಲೇಬೇಕಾಗಿ ಬಂತು....."

"ಕೈಕಾಲು ಮುಖ ತೊಳೆದುಕೊಂಡು ಬರ್ತೀನಿ. ಅಡುಗೆ ಮನೆ ಕತೆ ಏನಾಗಿದೆಯೋ.... ನಾನು ನೋಡ್ಬೇಕು...."

"ಅಡುಗೆ ಮನೆಯ ಒಲೇಲಿ ಬೆಕ್ಕು ಕೂತಿದೆ....." ನಕ್ಕ.

"ಹೌದೇನೋ.... ಬೆಕ್ಕನ್ನು ಒಳಕ್ಕೆ ಯಾಕೆ ಬಿಟ್ಟೆ. ಓಡಿಸ್ಬಾರ್ದಾಗಿತ್ತಾ?"

"ಅದೇನು ನನ್ನನ್ನು ಕೇಳಿ ಬಂತಾ? ಉಗ್ರಾಣದಲ್ಲಿ ಇಲಿಗಳು ಓಡಾಡ್ತಿದ್ವು... ಅದನ್ನು ಹಿಡಿಯೋಕೆ ಬಂತು. ಇಲಿಗಳ ಕಾಟ ಕಡಿಮೆಯಾಗ್ಲೀ ಅಂತ ನಾನೂ ಸುಮ್ಮನಿದ್ದೆ.... ಒಂದಿನ ಏನಾಯ್ತು ಗೊತ್ತಾ" ಎನ್ನುತ್ತಾ ನಡೆದ ವಿಷಯವನ್ನು ತಿಳಿಸಿದ.

"ಸರಿ, ಉಗ್ರಾಣದ ಸಾಮಾನು ಚೆಲ್ಲಾಪಿಲ್ಲಿಯಾಗಿರುತ್ತೆ. ಅಂತೂ ಮೂರು ತಿಂಗಳು ಹಾಯಾಗಿ ಕಾಲ ಕಳೆದಿದ್ದಕ್ಕೆ, ಇಲ್ಲಿ ಕೈ ತುಂಬಾ ಕೆಲಸ...." ಸೆರಗನ್ನು ಸೊಂಟಕ್ಕೆ ಸಿಕ್ಕಿಸಿ ಬಚ್ಚಲು ಮನೆಯ ಕಡೆ ನಡೆದಳು. ಅವಳು ಕೈ ಕಾಲು ತೊಳೆದು ಬರುವಷ್ಟರಲ್ಲಿ, ಮೆಸ್‌ನಿಂದ ಊಟವನ್ನು ಕಳಿಸುವುದಕ್ಕೆ ಆರ್ಡರ್ ಮಾಡಿದ್ದ.

"ಬೇಗ ಏನಾದ್ರೂ ತಿಂಡಿ ಮಾಡಿಬಿಡ್ತೀನಿ. ನಿಂಗೂ ಹೊಟ್ಟೆ ಹಸೀತಿರಬಹುದು"

"ಬೇಡಮ್ಮ. ಜಾನಕಮ್ಮನ ಮನೆಗೆ ಫೋನು ಮಾಡಿದೀನಿ. ಎರಡು ಊಟ ಕಳಿಸ್ತಾರೆ...."

"ಸರಿ ಬಿಡು. ದೇವರಿಗೆ ದೀಪ ಹಚ್ಚಿ, ಕೈ ಕಾಲು ಚಾಚಿ, ಒಂದು ಗಳಿಗೆ ಕೂತ್ಕೊಳ್ತೀನಿ. ಅಂದ್ಹಾಗೇ ದಿನೂಗೆ ಫೋನು ಮಾಡಿ ಬಿಡು.... ಅವನಿಗೂ ಆತಂಕ ಇರುತ್ತೆ." ಕೂಡಲೇ ಮಹೇಶ ದಿನೇಶನಿಗೆ ಫೋನು ಮಾಡಿ, ಅಮ್ಮ ಕ್ಷೇಮವಾಗಿ ಊರನ್ನು ತಲುಪಿದ ವಿಷಯವನ್ನು ತಿಳಿಸಿದ.

"ಇಲ್ಲಿ ಕೊಡು, ನಾನು ಸ್ವಲ್ಪ ಮಾತಾಡ್ತೀನಿ....." ಎಂದು ಹೇಳಿ, ಸಾವಿತ್ರಮ್ಮನ್ನ ತಾವೇ ಮನೆ ತಲುಪಿಸಿದ ವಿಷಯವನ್ನು ತಿಳಿಸಿದಳು. ಅವರ ಮನೆಯವರಿಗೂ ತಿಳಿಸಿಬಿಡುವಂತೆ ಹೇಳಿದಳು. ಮಹೇಶನಿಗೆ ತಮಾಷೆ ಎನಿಸಿತ್ತು.

ಜಾನಕಮ್ಮನ ಮೆಸ್‌ನಿಂದ ಊಟದ ಕ್ಯಾರಿಯರ್ ಬಂದಿತ್ತು. ವನಜಮ್ಮ ದೇವರಿಗೆ ದೀಪವನ್ನು ಹಚ್ಚಿ ಬಂದಳು. ಇಬ್ಬರೂ ಊಟಕ್ಕೆ ಪ್ರಾರಂಭಿಸಿದರು. "ಅಡುಗೆ ಘಂ ಎನ್ನುತ್ತಿದೆ. ದಿನಾ ರಾತ್ರಿ ಇವರ ಮನೆಯಿಂದ್ಲೇ ಊಟ ತರಿಸ್ಕೋತಿದ್ಯಾ!" ಮಹೇಶ ಎತ್ತಿದ್ದ ತುತ್ತನ್ನು ಹಾಗೇ ಇಳಿಸಿದ. ಒಂದು ಗಳಿಗೆ ತಡೆದು ನುಡಿದ.

"ಇಲ್ಲಮ್ಮ..... ಆಗ ಈಗ ತರಿಸ್ಕೊಂಡೆ....."

ತಾನು ಪ್ರತಿ ರಾತ್ರಿ ಸುಜಯಳ ಮನೆಗೆ ಊಟಕ್ಕೆ ಹೋಗುತ್ತಿದ್ದ ವಿಷಯವನ್ನು ಹೇಳುವುದೋ ಬೇಡವೋ ಎಂದು ಚಿಂತಿಸಿದ. "ಬೇಗ ಬೇಗ ತಿನ್ನು ಅಡುಗೆ

ತಣ್ಣಗಾಗಿ ಹೋಗುತ್ತೆ. ಪರವಾಗಿಲ್ಲ ಊಟ ಚೆನ್ನಾಗಿದೆ" ವನಜಮ್ಮ ಜಾನಕಮ್ಮನನ್ನು ಹೊಗಳುತ್ತಾ ತಿಂದಳು. ಮಹೇಶ ಮೌನವಾಗಿ ಊಟವನ್ನು ಮುಂದುವರೆಸಿದ. ವನಜಮ್ಮ ಡೆಲ್ಲಿಯ ವಿಷಯಗಳನ್ನು ಮಧ್ಯೆ ಮಧ್ಯೆ ಹೇಳುತ್ತಿದ್ದಳು. ಮಹೇಶ ಅನೇಕ ಬಾರಿ ಸುಜಯಳನ್ನು ನೆನಪಿಸಿಕೊಂಡ.

* * *

ಫೋನು ರಿಂಗಾಯಿತು. ವನಜಮ್ಮ ರಿಸೀವರ್ ಎತ್ತಿದಳು. ಪ್ರಭಾವತಿ ಮಾತಾಡಿದ್ದಳು. ಕುಶಲವನ್ನು ವಿಚಾರಿಸಿದಳು. "ಅತ್ತಿಗೆ ಮನೆಯಿಂದ ತಿಳೀತು.... ನೀವು ವಾಪಸ್ಸು ಬಂದಿದೀರಿ ಅಂತ.... ಹೇಗಿದ್ದೀರಿ? ಅಲ್ಲಿ ಎಲ್ಲಾ ಹೇಗಿದಾರೆ? ಕಾಶೀಯಾತ್ರೆ ಹೇಗಿತ್ತು?" ಆ ಎಲ್ಲ ಪ್ರಶ್ನೆಗಳಿಗೆ ವನಜಮ್ಮ ಉತ್ಸಾಹದಿಂದಲೇ ಉತ್ತರಿಸಿದಳು.

"ನೀವುಗಳೆಲ್ಲ ಹೇಗಿದೀರಿ?" ವಿಚಾರಿಸಿದಳು.

"ಇದೀವಿ ಹೀಗೇ.... ಯಾವ ಹೆಚ್ಚು ವಿಷಯಗಳಿಲ್ಲ.... ಈಗ ನಮ್ಮ ಮನೇಲಿ ನಾವಿಬ್ರೇ.... ಹೆಚ್ಚು ಕೆಲಸವೂ ಇಲ್ಲ...."

"ಹೌದೇನು? ನಿಮ್ಮ ಮಗಳ ಮದುವೆ ಆಯಿತೇ? ದೀಪಾ ಏನನ್ನೂ ಹೇಳಲಿಲ್ಲವಲ್ಲ?"

"ಅಯ್ಯೋ ಇಲ್ಲಮ್ಮ.... ಅವಳಿಗೆ ಕಂಕಣ ಬಲ ಇನ್ನೂ ಕೂಡಿ ಬಂದಿಲ್ಲ ಅಂತ ಕಾಣುತ್ತೆ.... ಅವಳು ಆಶ್ರಮದ ಒಂದು ಸ್ಕೂಲಿಗೆ ಕೆಲಸಕ್ಕೆ ಸೇರಿಕೊಂಡಿದ್ದಾಳೆ. ಅಲ್ಲೇ ಹಾಸ್ಟೆಲ್ಲಿನಲ್ಲಿದ್ದಾಳೆ"

"ಏನು? ಅಲ್ಲಿ ಒಬ್ಬಳೇ ಇದ್ದಾಳ್ಯೇ?"

"ಆಶ್ರಮ ತುಂಬಾ ದೊಡ್ಡದಾಗಿದೆ. ಎಲ್ಲಾ ಅನುಕೂಲವೂ ಇದೆ. ಅವಳು ಅಲ್ಲಿಗೆ ಹೋಗೋದು ನಮಗೂ ಇಷ್ಟವಿರಲಿಲ್ಲ. ಮದುವೆ ಮಾಡಿ ಕಳಿಸಿ ಬಿಡೋಣ ಅಂತಲೇ ಆಸೆ ಇದ್ದದ್ದು.... ಆದರೆ ದಿಢೀರನೆ ನಮ್ಮ ಇಚ್ಛೆಗೆ ಸರಿಯಾಗಿ ಯಾವ ಸಂಬಂಧ ಸಿಗುತ್ತೆ ಹೇಳಿ...."

"ನನಗೆ ಗೊತ್ತಿರುವ ಯಾವ್ದಾದ್ರೂ ವರನನ್ನು ಹೇಳಬಹುದಾಗಿತ್ತು. ಆದರೆ ಪ್ರಸ್ತಾಪ ಮಾಡಲು ನನಗೆ ಹಿಂಜರಿಕೆ.... ನಿಮ್ಮ ಮಗಳಿಗೆ ಇಷ್ಟ ಆಗುತ್ತೋ ಇಲ್ವೋ.... ಯಾರು ಬಲ್ಲರು? ಧ್ವನಿಯಲ್ಲಿ ವ್ಯಂಗ್ಯ ತುಂಬಿತ್ತು.

"ನೀವು ಮನಸ್ಸು ಮಾಡಿದ್ರೆ ಎಲ್ಲವೂ ಸಾಧ್ಯ? ನಾನೇ ಬಿಡುವು ಮಾಡಿಕೊಂಡು ಒಂದು ಗಳಿಗೆ ಎಂದಾದ್ರೂ ಬರ್ತೀನಿ. ನಿಮ್ಮ ಮಕ್ಕಳು ಹೇಗಿದಾರೆ?"

"ಮಕ್ಕಳೆಲ್ಲ ಚೆನ್ನಾಗಿದ್ದಾರೆ. ಬಂದು ಮೂರು–ನಾಲ್ಕು ದಿನಗಳ ಮೇಲಾದ್ರೂ ಮನೆಯ ಕ್ಲೀನಿಂಗ್ ಮುಗಿದಿಲ್ಲ. ಅದೇ ಒಂದು ದೊಡ್ಡ ಕೆಲಸವಾಗಿ ಹೋಗಿದೆ...."

"ಯಾಕೆ? ಕೆಲಸದವಳು ಬರ್ತಿಲ್ವೇ?"

"ಬರ್ತಿದ್ದಾಳೆ. ಅವಳಿಲ್ಲದಿದ್ರೆ ಕೆಲಸ ನಡೆಯೋದು ಹೇಗೆ.... ಗಂಡು ಹುಡುಗ್ರು

ಮನೆ ಕೆಲಸ ಏನು ಬಲ್ಲರು! ಅದಕ್ಕೇ ಎಷ್ಟೋ ಸಲ, ನಂಗೂ ಒಂದು ಹೆಣ್ಣು ಇರ ಬಾರದಾಗಿತ್ತೇ ಅಂತ ಅಂದ್ಕೋತೀನಿ. ದೇವರು ಎರಡು ಗಂಡು ಮಕ್ಕಳನ್ನೇ ಕೊಟ್ಟ.... ಸೊಸೇರು, ಎಷ್ಟಿದ್ದರು ಸೊಸೇರೇ.... ಮಗಳಾಗುಕ್ಕೆ ಸಾಧ್ಯವೇ....?"

"ಈ ಕಾಲದ ಹೆಣ್ಣು ಮಕ್ಕಳು ಓದಿ ಗ್ರಾಜುಯೇಟ್ ಆಗ್ತಾರೆ. ಹೊರಗೆ ದುಡಿದು ಸಂಪಾದಿಸ್ತಾರೆ. ನಮ್ಮ ಕಾಲದೋರ ಥರ ಮನೇಲೇ ಮನೆಗೆಲಸ ಮಾಡ್ಕೊಂಡು ಎಲ್ಲಿರುತ್ತಾರೆ?"

"ಹಾಗೆ ಹೇಳ್ಬೇಡಿ. ಎಷ್ಟೋ ಜನ ಹೆಣ್ಣು ಮಕ್ಕಳು ಹೊರಗೂ ದುಡೀತಾರೆ, ಮನೇಲು ಸೈ ಅನ್ನಿಸ್ಕೋಳ್ತಾರೆ.....ಅದು ಅವರವರು ಪಡೆದುಕೊಂಡು ಬಂದದ್ದು.... ಫೋನ್ನಲ್ಲೇ ಎಷ್ಟು ಮಾತ್ನಾಡುಕ್ಕೆ ಆಗುತ್ತೆ.... ಮನೆಗೆ ಬನ್ನಿ... ಬರೋಕೆ ಮುಂಚೆ ಫೋನು ಮಾಡಿದ್ರೆ ಒಳ್ಳೇದು...."

"ಸರಿ ಹಾಗಾದ್ರೆ... ಇಡ್ಲಾ?" ಪ್ರಭಾವತಿ ಮಾತು ಮುಗಿಸಿದಳು. ವನಜಮ್ಮ ಹಾಯಾಗಿ ಉಸಿರಾಡಿದಳು.

"ಪುಣ್ಯಾತ್ಗಿತ್ತಿ, ಅದೆಷ್ಟು ಹೊತ್ತು ಫೋನ್ನಲ್ಲಿ ಮಾತಾಡೋದು?"

"ಯಾರದಮ್ಮ ಆ ಫೋನು! ನೀನೂ ಇಷ್ಟು ಹೊತ್ತು ಮಾತಾಡ್ತಿದ್ದೆ...." ರೂಮಿನಿಂದ ಮಹೇಶ ಎದ್ದು ಬಂದ.

"ಮತ್ತೇನ್ಮಾಡ್ಲೀ.... ಕೇಳಿದ್ದೇ ಕೇಳಿದ್ದು.... ಆಡಿದ್ದೇ ಆಡಿದ್ದು.... ಮನೇಲಿ ಹೊತ್ತು ಹೋಗುಲ್ಲ. ಇನ್ನೇನ್ಮಾಡ್ತಾಳೆ ಆಕೆ?"

"ಯಾರಮ್ಮ? ಸಾವಿತ್ರಮ್ಮನಾ? ಅದೇ ನಿನ್ನ ಜೊತೆ ರೈಲಿನಲ್ಲಿ ಬಂದಿದ್ರಲ್ಲ....."

"ಆಕೆ ಅಲ್ಲ ಕಣೋ. ಆಕೆ ಹತ್ರ ನನ್ನ ನಂಬರ್‍ರು ಎಲ್ಲಿದೆ? ಪ್ರಭಾವತಿ... ಅದೇ ನಮ್ಮ ದೀಪಾನ ಸೋದರ ಮಾವನ ಹೆಂಡತಿ....."

"ಯಾರು? ಸುಜಯನ ತಾಯೀನಾ... ಹಾಗೆ ಹೇಳ್ಬಾರ್ದಾ? ಏನಂತೆ ವಿಷಯ?" ಮಹೇಶ ತಾಯಿಯ ಪಕ್ಕದಲ್ಲಿ ಕುಳಿತ.

"ಅದೇ ಸುಜಯ.... ಯಾವುದೋ ಆಶ್ರಮಕ್ಕೆ ಸೇರಿಕೊಂಡಿದಾಳಂತೆ...." ಮಹೇಶ ನೆಟ್ಟಗೆ ಕೂತ.

"ಏನು? ಆಶ್ರಮಕ್ಕಾ? ಯಾವಾಗ? ಯಾಕಂತೆ?" ಮೇಲೆ ಮೇಲೆ ಪ್ರಶ್ನಿಸಿದ.

"ಅದಕ್ಕೆ ನೀನ್ಯಾಕೆ ಇಷ್ಟು ಎಗರಾಡ್ತೀ? ಅದೇನು ಆಸೆಯೋ? ಅವಳ ಹಣೆಬರಹ, ನಮಗ್ಯಾಕೆ!" ವನಜಮ್ಮ ಹಾಗೆ ನುಡಿದರೂ, ಮಹೇಶನ ಗಮನ ಆಕೆಯ ಮಾತಿನ ಮೇಲೆ ಇರಲಿಲ್ಲ.

ಸುಜಯ ಆಶ್ರಮಕ್ಕೆ ಸೇರಿಕೊಂಡಿದ್ದಾಳೆ. ತನಗೆ ಯಾವ ವಿಷಯವೂ ತಿಳಿಯದು. ಯಾಕೆ ಏನಾಯ್ತು? ಅಪ್ಪ ಏನಾದ್ರೂ ಅಂದರೆ.... ತಾನು ತಿಳಿದು ಕೊಳ್ಳಲೇಬೇಕು ಎನಿಸಿತ್ತು.....ಆದರೆ ತಾಯಿಗೆ ಮಾತ್ರ ಗೊತ್ತಾಗಬಾರದು ಎಂದುಕೊಂಡ.

"ಅಮ್ಮಾ ಇಲ್ಲೇ ಸ್ವಲ್ಪ ಸುತ್ತಾಡಿ ಬರ್ತೀನಿ" ಎಂದು ಹೇಳಿ, ಸಿದ್ಧನಾಗಿ ಬೈಕ್ ಏರಿದ. ಸೀದಾ ಸುಜಯಳ ಮನೆಗೆ ಬಂದ. ಬಾಗಿಲು ತೆಗೆದವರು ಪ್ರಭಾವತಿಯೇ....

"ಓ... ನೀವಾ? ಒಬ್ರೇ ಬಂದ್ರಾ? ಈಗ್ತಾನೇ ನಿಮ್ಮ ಮನೆಗೆ ಫೋನು ಮಾಡಿದ್ದೆ...."

"ಹೌದಾ? ನಾನು ಮನೇಲಿರ್ಲಿಲ್ಲ. ಇಲ್ಲೇ ನನ್ನ ಸ್ನೇಹಿತನೊಬ್ಬನ ಮನೆಗೆ ಬಂದಿದ್ದೆ.... ನಿಮ್ಮನ್ನೆಲ್ಲಾ ನೋಡ್ಕೊಂಡು ಹೋಗೋಣ ಅಂತ ಬಂದೆ.... ರಂಗನಾಥ ರಾಯರು ಹೇಗಿದ್ದಾರೆ?"

"ಚೆನ್ನಾಗಿದ್ದಾರೆ. ನೀವು ಒಳಕ್ಕೆ ಬನ್ನಿ. ವಿಶ್ವಾಸವಿಟ್ಟುಕೊಂಡು ಇಲ್ಲಿಗೆ ಬಂದಿದೀರಲ್ಲ. ಅದೇ ಸಂತೋಷ.... ಇದ್ದಕ್ಕಿದ್ದ ಹಾಗೇ ಊಟಕ್ಕೆ ಬರೋದನ್ನ ನಿಲ್ಲಿಸಿಬಿಟ್ರಿ.... ಮೂರು ನಾಲ್ಕು ದಿನಗಳ ಹಿಂದಷ್ಟೇ ನಿಮ್ಮ ತಾಯಿ ಬಂದ್ರಂತೆ...." ಮಹೇಶ ಸೋಫಾದ ಮೇಲೆ ಕುಳಿತು ಅತ್ತಿತ್ತ ಕಣ್ಣು ಹಾಯಿಸಿದ.

"ಟೂರ್ ಹೋಗ್ಬೇಕಾಗಿತ್ತು. ಬಂದ್ಮೇಲೆ ವಿಷಯ ತಿಳಿದ ಸ್ನೇಹಿತರು ಅವರ ಮನೆಗೆ ನನ್ನನ್ನು ಊಟಕ್ಕೆ ಕರೆದಿದ್ರು.... ಹೀಗೇ.... ಸುಜಯ ಇಲ್ವಾ ಮನೇಲಿ?" ತಡೆಯಲಾಗದೇ ಕೇಳಿದ....

"ಇಲ್ಲ. ಈಗ ಅವಳು ಇಲ್ಲಿಲ್ಲ" ಎನ್ನುತ್ತಾ ಆಶ್ರಮದ ಸ್ಕೂಲಿಗೆ ಸೇರಿಕೊಂಡಿರುವ ವಿಷಯವನ್ನು ತಿಳಿಸಿದಳು.

"ಹೌದಾ? ನನಗೆ ಗೊತ್ತಿರಲೇ ಇಲ್ಲ...."

"ನಿಮಗೆ ತಿಳಿಸಿರಬಹುದು ಅಂತ ಅಂದ್ಕೊಂಡೆ...."

"ಎಲ್ಲೋ ಮರೆತಿರಬಹುದು. ನನಗೆ ಅಲ್ಲಿಯ ಫೋನ್ ನಂಬರನ್ನು ಕೊಡಿ. ಬಿಡುವಾದಾಗ ನಾನೇ ಮಾತಾಡ್ತೀನಿ...."

"ಹಾಗೇ ಮಾಡಿ.... ನಮಗೂ ಆತಂಕ.... ನಮ್ಮ ಹತ್ತಿರದವರು ಅಂತ ಯಾರೂ ಇಲ್ಲ.... ನೀವಾದ್ರೂ ಅವಳಿಗೆ ಸ್ವಲ್ಪ ತಿಳುವಳಿಕೆ ಹೇಳಿ..... ಆಶ್ರಮ ಬಿಟ್ಟು ಮನೆಗೆ ಬರಲಿ.... ಹೆಣ್ಣು ಮಕ್ಕಳು ತಂದೆಯ ಮನೇಲಿರಬೇಕು. ಇಲ್ಲವೆ ಗಂಡನ ಮನೇಲಿರಬೇಕು. ಅದು ಬಿಟ್ಟು ಯಾವುದೋ ಆಶ್ರಮ ಅಂತಂದ್ರೆ, ಕೇಳಿದ ಜನ ವಿಚಿತ್ರವಾಗಿ ಮಾತಾಡಿಕೊಳ್ತಾರೆ?"

"ಹಾಗ್ಯಾಕೆ ನೊಂದ್ಕೋತೀರಿ? ನಾನು ಮಾತಾಡ್ತೀನಿ. ಆದರೆ, ನನಗೆ ವಿಷಯ ಏಕೆ ತಿಳಿಸಲಿಲ್ಲ. ಅದೇ ಆಶ್ಚರ್ಯ...."

"ನಮಗೇ ಹೇಳಿರ್ಲಿಲ್ಲಪ್ಪಾ. ಇಂಟರ್‌ವ್ಯೂ ಮುಗಿದು, ಸೇರಿಕೊಂಡಿದ್ದು ಸಹ ನಮಗೇ ತಿಳಿಯದು. ಇದೆಲ್ಲಾ ಏನು ಸರಿ ನೀವೇ ಹೇಳಿ.... ಇಲ್ಲಿ ಹಾಯಾಗಿದ್ಲು, ಅಲ್ಲಿ ಹೆಡ್ ಮಿಸ್ ಅಂತೆ.... ಜವಾಬ್ದಾರಿ ಹೆಚ್ಚು.... ನನಗೆ ಒಂದು ಛೇಂಜ್ ಬೇಕಾಗಿತ್ತು. ಇಲ್ಲಿ ಬೋರ್ ಆಗ್ತಿತ್ತು ಅಂದ್ಲು. ಇಲ್ಲಿ ಏನು ನಡೀತೋ... ಅಲ್ಲಿ ಏನು ಇಷ್ಟವಾಯಿತೋ, ಎಲ್ಲ ಅವಳಿಗೇ ಗೊತ್ತು...." ಮಹೇಶನಿಗೂ ಚಿಂತೆಯಾಗಿತ್ತು.

ಆಕೆ ಕೊಟ್ಟ ಫೋನು ನಂಬರನ್ನು ತೆಗೆದುಕೊಂಡು ಹೊರಡಲನುವಾದ.

"ನಾನು ಈ ವಿಷಯಾನ ನಿಮಗೆ ಹೇಳ್ದೆ ಅಂತ ತಿಳಿದ್ರೆ ಅವಳು ಏನಂದು ಕೊಳ್ತಾಳೋ...." ಅನುಮಾನವನ್ನು ವ್ಯಕ್ತಪಡಿಸಿದರು.

"ಇಲ್ಲ, ನಾನು ಹೇಳಲ್ಲ... ಇನ್ನು ನಾನು ಬರ್ತೀನಿ" ಎಂದು ಹೇಳಿ ಬೈಕ್ ಬಳಿ ಬಂದು, ಆಶ್ರಮದ ಆಫೀಸಿನ ಫೋನು ನಂಬರನ್ನು ತನ್ನ ಮೊಬೈಲ್‌ನಲ್ಲಿ ಒತ್ತಿದ. ಯಾರೋ ಎತ್ತಿದರು "ಸಂಧ್ಯಾಶ್ರಮ" ಎಂದು ಹೇಳಿದರು. ಅದರ ಬಗ್ಗೆ ಅದು ಎಲ್ಲಿದೆ, ಎಷ್ಟು ದೂರ ಎಂದೆಲ್ಲಾ ವಿಚಾರಿಸಿ ತಿಳಿದುಕೊಂಡ. "ಹೀಗೇ ಯಾರೋ ಒಬ್ಬ ವೃದ್ಧರನ್ನು ವೃದ್ಧಾಶ್ರಮಕ್ಕೆ ಸೇರಿಸಬೇಕಾಗಿತ್ತು ಅದಕ್ಕೆ ಕೇಳಿದೆ" ಎಂದು ನುಡಿದ. ಬೆಳಿಗ್ಗೆ ಬರುವುದಾಗಿ ಹೇಳಿದ. ಬೈಕ್ ಹತ್ತಿದ. ಮನದಲ್ಲಿ ನಾಳೆ ಅವಳನ್ನು ಭೇಟಿ ಯಾಗುತ್ತಿದ್ದೇನೆ ಎಂದು ಸಂತಸವಾದರೂ, ಅವಳೇಕೆ ತನಗೆ ಈ ಬಗ್ಗೆ ತಿಳಿಸಲಿಲ್ಲ ಎಂಬ ಅನುಮಾನವೂ ಇತ್ತು. ಅಸಮಾಧಾನವೂ ಇತ್ತು.

"ಎಲ್ಲಿಗೆ ಹೋಗಿದ್ಯೋ... ಯಾಕೆ ಇಷ್ಟು ಹೊತ್ತಾಯ್ತು!" ಎಂದು ಕೇಳಿದ ತಾಯಿಗೆ ಸರಿಯಾಗಿ ಉತ್ತರಿಸದೇ ಒಳಬಂದ.

"ಕಾಫಿ ಕೊಡ್ಲಾ?"

"ಬೇಡಮ್ಮ.... ನನ್ನ ಫ್ರೆಂಡ್ ಮನೇಲಿ ಕುಡಿದೆ"

"ಈಗಿನ್ನೂ ಏಳು ಗಂಟೆ.... ನಾನು ಇಲ್ಲೇ ಶಾಸ್ತ್ರಿಗಳ ಮನೆಗೆ ಹೋಗಿ ಬರ್ತೀನಿ"

"ನಾನು ಬಿಟ್ಟು ಬರ್ತೀನಿ ಬೇಕಾದ್ರೆ....ಇಷ್ಟು ಹೊತ್ನಲ್ಲಿ ಏನು ಕೆಲಸ? ಯಾವ ಮುಹೂರ್ತ ಇಡಿಸಬೇಕಾಗಿತ್ತು...." ತಾಯಿಗೆ ತಮಾಷೆ ಮಾಡಿದ.

"ನಿನ್ನ ಮದುವೆ ವಿಷಯ ಮಾತ್ನಾಡ್ಬೇಕಾಗಿತ್ತು...."

"ಇನ್ನೂ ನನ್ನ ಮದುವೆ ವಿಷಯಾನ ಮರೆತಿಲ್ವಾ ನೀನು?"

"ನಾನ್ಯಾಕೆ ಮರೆಯಬೇಕು! ನೀನು ನನ್ನ ಮಗ.... ನಿನ್ನ ಜವಾಬ್ದಾರಿ ನಂದು...."

"ಅರ್ಜೆಂಟೇನು ಅಂತ ಅಷ್ಟೇ.... ನನಗೀಗ್ಲೇ ಮದುವೆ ಬೇಡ"

"ದಿನೇಶನೂ ಮೊದಲು ಹೀಗೇ ಹೇಳಿದ್ದ. ಆದರೆ ಕಡೆಗೆ ಆತುರಾತುರವಾಗಿ ಮದುವೆಯಾದ. ನಿನಗೆ ನಿಧಾನವಾಗಿ, ಹತ್ತಾರು ಹೆಣ್ಣುಗಳನ್ನು ನೋಡಿ, ಯೋಗ್ಯ ಳಾದವಳನ್ನು ಆಯ್ದೆ ಮಾಡೋ ಆಸೆ ನಂದು" ಮಹೇಶ್ ಗೊಳ್ ಅಂತ ನಕ್ಕ.

"ಅದು ತುಂಬಾ ಕಷ್ಟ ಕಣಮ್ಮಾ..... ಹೋಗ್ಲಿ ಬಿಡು. ಬಿಟ್ಟು ಬರ್ತೀನಿ ಹೊರಡು"

"ಏನೂ ಬೇಡ. ಅವರೀಗ ಹಿಂದಿನ ರಸ್ತೆಗೇ ಬಂದಿದಾರಂತೆ. ಪಕ್ಕದ ಮನೆಯ ವರು ಹೇಳಿದ್ರು, ಅರ್ಧ ಮುಕ್ಕಾಲು ಗಂಟೆಯೊಳಗೇ ಬಂದುಬಿಡ್ತೀನಿ" ವನಜಮ್ಮ ಚಪ್ಪಲಿ ಮೆಟ್ಟಿ ಹೊರ ನಡೆದಳು. ಮಹೇಶ ತನ್ನ ರೂಮಿಗೆ ಬಂದ. ಸುಜಯಳ ಫೋಟೋವನ್ನು ಕೈಯಲ್ಲಿ ಹಿಡಿದು ಅವಳ ಮಂದಹಾಸವನ್ನೇ ವೀಕ್ಷಿಸಿದ. ಬರೀ ಮೋಸ, ಮುಖದಲ್ಲಿ ಮಾತ್ರ ಮಂದಹಾಸ.... ಬಹಳ ಕೆಟ್ಟವಳು ನೀನು... ಆದರೆ

ನೀನೇ ನನಗೆ ಇಷ್ಟ. ಇರಲಿ ನಾಳೆ ನೀನು ನಂಗೆ ಸಿಗ್ತೀಯಲ್ಲ ಆಗ ವಿಚಾರಿಸಿ ಕೊಳ್ತೀನಿ...." ಅವಳ ತುಟಿಗಳ ಮೇಲೆ ಬೆರಳನ್ನಾಡಿಸಿದ. ಆದರೂ ಅವನ ಆತಂಕ ಕಡಿಮೆ ಆಗಿರಲಿಲ್ಲ. ಅವಳ್ಯಾಕೆ ಆಶ್ರಮದಲ್ಲಿದ್ದಾಳೆ ಎಂಬ ಪ್ರಶ್ನೆ ಕಾಡಲಾರಂಭಿಸಿತು.

* * *

"ಮಲಗಿ ಬಿಟ್ಟೇನೋ ಮಹೀ.... ನಾನು ನಿನ್ನ ಹತ್ರ ಸ್ವಲ್ಪ ಮಾತಾಡ್ಬೇಕಾಗಿತ್ತು...." ಬಾಗಿಲ ಬಳಿ ನಿಂತು ಕೇಳಿದಳು ವನಜಮ್ಮ.

"ಇಲ್ಲಮ್ಮ. ಏನೋ ಓದ್ತಾ ಇದ್ದೆ. ಏನು ಬೇಕು ಹೇಳು...."

"ಈ ಫೋಟೋ ನೋಡು.... ಯಾರೂಂತ ಗೊತ್ತಾಯ್ತಾ?" ಅವನ ಮುಂದೆ ಫೋಟೋ ಹಿಡಿದಳು.

"ಯಾರಮ್ಮಾ ಅದು? ನಂಗ್ಯಾಕೆ ಅದನ್ನು ತೋರಿಸ್ತಾ ಇದೀಯ?"

"ಇವಳು ಲೀಲಾ ಅಲ್ವಾ? ಅದೇ ಸಾವಿತ್ರಮ್ಮ ಅಂತ ನನ್ನ ಜೊತೆ ಡೆಲ್ಲಿಯಿಂದ ಬಂದಿದ್ರಲ್ಲ..... ಅವರ ಮನೆಯವಳು."

"ಹೂಂ ಇರಬಹುದು. ಅವಳ ಫೋಟೋ ನಿನಗ್ಹೇಗೆ ಸಿಕ್ತು?" ತನ್ನ ಕೈಯಲ್ಲಿದ್ದ ಫೋಟೋ ಕಡೆ ನೋಡಿ ಕೇಳಿದ.

"ಇರಬಹುದು ಏನು? ಅವಳೇ... ಈ ಫೋಟೋ ಶಾಸ್ತ್ರಿಗಳ ಮನೇಲಿ ಇತ್ತು. ನಿಮ್ಮ ಮಗನಿಗಾಗುತ್ತೆ ವಿಚಾರಿಸಿ ಅಂತ ಹೇಳಿದ್ರು. ತಂದೆ.... ಆದರೆ ನೋಡೋಕೆ ಸುಮಾರು, ಭಾರೀ ಶ್ರೀಮಂತರಂತೆ.... ಅವರ ಅಪ್ಪ ಲಕ್ಷಾಧೀಶ್ವರರಂತೆ..... ಅಲ್ಲೂ ಒಂದು ಕತೆ. ಅವರು, ಮಕ್ಕಳ ಜೊತೆ ಇಲ್ಲದೆ ವೃದ್ಧಾಶ್ರಮದಲ್ಲಿದ್ದಾರಂತೆ. ಯಾಕೋ ಏನೋ...."

"ಬಿಡಮ್ಮ. ಈ ಪುರಾಣವೆಲ್ಲ ನಂಗ್ಯಾಕೆ ಹೇಳ್ತಿದೀಯ?"

"ನಿಂಗೆ ಹಾಗೇ ನಾನು ಹೇಳೋದೆಲ್ಲ ಪುರಾಣವಾಗುತ್ತೆ.... ನಿನಗೆ ಒಪ್ಗೆ ಇದ್ರೆ ಹೇಳು ನಾನು ಮಾತು ಮುಂದುವರೆಸ್ತೀನಿ"

"ಇಲ್ಲಮ್ಮ. ನಂಗೆ ಇಷ್ಟವಿಲ್ಲ. ಲಕ್ಷಾಧೀಶ್ವರರ ಸಹವಾಸವೇ ಬೇಡ ನಂಗೆ" ಬಲವಂತವಾಗಿ ನಕ್ಕ.

"ಈಗ್ಲೇ ನಿರ್ಧಾರಕ್ಕೆ ಬರಬೇಕಾಗಿಲ್ಲ. ನಿಧಾನಕ್ಕೆ ಯೋಚಿಸು. ಹುಡುಗಿ ಏನೂ ತೆಗೆದು ಹಾಕುವಂತಿಲ್ಲ" ಫೋಟೋವನ್ನು ಅಲ್ಲಿಯೇ ಇಟ್ಟು ಹೊರಗೆ ನಡೆದಳು. ಮಹೇಶ ಒಂದೆರಡು ಬಾರಿ ಸುಮ್ಮನೆ ಎಂಬಂತೆ, ಫೋಟೋ ಕಡೆ ನೋಡಿದ. ಕೈಯಲ್ಲಿ ಎತ್ತಿ ಹಿಂದೆ ಇದ್ದ ವಿಳಾಸ ಹಾಗೂ ಫೋನು ನಂಬರನ್ನು ಓದಿಕೊಂಡ...

* * *

'ಸಂಧ್ಯಾಶ್ರಮ'ಕ್ಕೆ ದಾರಿ ಎನ್ನುವ ಫಲಕ ಕಾಣಿಸಿದಾಗ ಮಹೇಶ ಕಾರನ್ನು ತಿರುಗಿಸಿದ. ಸುತ್ತ ಮುತ್ತ ನೋಡುತ್ತಾ ನಿಧಾನವಾಗಿ ಓಡಿಸಿದ. ದೊಡ್ಡ ಗೇಟಿನ

ಬಳಿ ನಿಂತೊಡನೆ, ಸೆಕ್ಯೂರಿಟಿಯವನು ಸೆಲ್ಯೂಟ್ ಹೊಡೆದು, "ನೀವು ಯಾರು? ಯಾರು ಬೇಕಾಗಿತ್ತು?" ಅಂತ ವಿಚಾರಿಸಿದ.

"ಇಲ್ಲಿಯ ಸ್ಕೂಲಲ್ಲಿ ಹೊಸ್ದಾಗಿ ಟೀಚರ್ ಆಗಿದಾರಲ್ಲ.... ಸುಜಯಾ ಮೇಡಂ... ಅವರನ್ನು ನಾನು ನೋಡ್ಬೇಕಾಗಿತ್ತು...."

"ನೀವು? ನೀವು ಯಾರು ಅಂತ ಹೇಳ್ಲೀ?"

"ಮಹೇಶ್ ಅಂತ ಹೇಳಿ. ಅವರಿಗೆ ಗೊತ್ತಾಗುತ್ತೆ" ಮುಗುಳ್ನಕ್ಕು ಕಾರಿನಿಂದ ಇಳಿದ.

"ನೀವು ಇಲ್ಲಿ ಕುಳಿತಿರಿ. ನಾನು ಅವರಿಗೆ ವಿಷಯ ತಿಳಿಸಿ ಬರ್ತೀನಿ" ಅವನು ಅಲ್ಲಿಯೇ ಅವನನ್ನು ಕಲ್ಲುಬೆಂಚಿನ ಮೇಲೆ ಕೂರುವಂತೆ ಹೇಳಿ, ಪಕ್ಕದಲ್ಲೇ ಇದ್ದ ಕೊಠಡಿಯೊಳಕ್ಕೆ ಹೋದ. ಅಲ್ಲಿ ಹಾಗೆ ಕಾಯುತ್ತಾ ಕೂತಿರುವುದು ಮುಜುಗರವೆನಿಸಿದರೂ, ಅದು ತಾನೇ ಆಯ್ಕೆ ಮಾಡಿಕೊಂಡ ಕೆಲಸ ಎಂದುಕೊಂಡು ಸಹನೆಯಿಂದ ಕುಳಿತಿದ್ದ.

"ನೀವು ಗೆಸ್ಟ್ ರೂಂನಲ್ಲಿರಬೇಕಂತೆ. ಅವರು ಅಲ್ಲಗೇ ಬರ್ತಾರೆ." ಎಂದು ಸೆಕ್ಯೂರಿಟಿಯವನು ಹೇಳಿದಾಗ, ಮಹೇಶನ ಆತಂಕ ಕಡಿಮೆ ಆಗಿತ್ತು. ಅಲ್ಲಿಯೇ ಓಡಾಡುತ್ತಿದ್ದ ಹುಡುಗನನ್ನು ಕರೆದು, ಇವರನ್ನು ಗೆಸ್ಟ್‌ರೂಂಗೆ ಕರೆದುಕೊಂಡು ಹೋಗು." ಅಂತ ಹೇಳಿದ.

"ಕಾರು? ಕಾರನ್ನು ಎಲ್ಲಿ ನಿಲ್ಲಿಸಲಿ?"

"ನಾನು ಒಳಗೆ ತಂದು ನಿಲ್ಲಿಸ್ತೀನಿ... ಕೀ ಕೊಡಿ" ಮಹೇಶ ಅವನ ಕೈಗೆ ಕೀ ಬಂಚನ್ನು ಇತ್ತು ಆ ಹುಡುಗನೊಡನೆ ಹೆಜ್ಜೆ ಹಾಕಿದ.

"ಪರವಾಗಿಲ್ಲ ಆಶ್ರಮದ ವಾತಾವರಣ ಹಿತವಾಗಿದೆ. ಎಲ್ಲಾ ಸುವ್ಯವಸ್ಥೆಯಿಂದ ಕೂಡಿರುವಂತಿದೆ" ಎಂದು ಪ್ರಶಂಸೆಯನ್ನು ತನ್ನೊಳಗೇ ಹೇಳಿಕೊಂಡ. ತನ್ನನ್ನು ಕೊರಗಲು ಬಿಟ್ಟು, ಈ ಪ್ರಶಾಂತವಾದ ವಾತಾವರಣದಲ್ಲಿ ನೆಮ್ಮದಿಯಿಂದ ಇರಲು ಸುಜಯ ಇಲ್ಲಿಗೆ ಬಂದಿದ್ದಾಳೆ.... ಎಂದು ಅಸೂಯೆಗೊಂಡ.

"ಇದೇ ಸಾರ್.... ಗೆಸ್ಟ್ ರೂಂ. ನೀವು ಯಾರನ್ನು ನೋಡ್ಬೇಕಾಗಿತ್ತು?"

"ಸುಜಯಾ ಟೀಚರ್ ಅಂತ.... ನಿನ್ನ ಹೆಸ್ರೇನು?"

"ಬಾಲು ಅಂತ.... ನಾನು ಬರಲಾ?" ಆ ಹುಡುಗ ಓಡಿದ. ಮಹೇಶ ಅಲ್ಲಿ ಸಾಲಾಗಿದ್ದ ಕುರ್ಚಿಯೊಂದರಲ್ಲಿ ಕುಳಿತ. ಸುಜಯಾ ಎದುರಿಗೆ ಬಂದು ನಿಲ್ಲುವವರೆಗೂ ಅವನಿಗೆ ಗೊತ್ತಾಗಲೇ ಇಲ್ಲ. ಅವಳು ಬಂದು ನಿಂತ ಅನುಭವ ವಾದಾಗ ಕತ್ತೆತ್ತಿ ನೋಡಿ ಎದ್ದು ನಿಂತ..... ಅವಳು ಮುಗುಳ್ನಕ್ಕು "ಹಲೋ" ಎಂದಾಗ, ಬೇಸರವೆಲ್ಲಾ ಒಮ್ಮೆಗೇ ಕಳೆದುಹೋಯಿತು.

"ಹೇಗಿದೀರಿ ಸುಜಯಾ ಇಲ್ಲಿ.... ಈ ಆಶ್ರಮದಲ್ಲಿ?" ವ್ಯಂಗ್ಯವಾಗಿ ಕೇಳಿದ.

"ಚೆನ್ನಾಗಿದೀನಿ. ಹಾಯಾಗಿದೀನಿ.... ನಿಮಗೆ ಹೇಗೆ ಗೊತ್ತಾಯ್ತು ನಾನು ಇಲ್ಲಿದೀನಿ ಅಂತ?"

"ನೀವು ನನಗೆ ತಿಳಿಸ್ದೇ ಇದ್ರೂ ನಾನು ವಿಳಾಸ ಪತ್ತೆ ಹಚ್ತೇನಿ ಮೇಡಂ.... ಅಲ್ಲಾ ಹೀಗ್ಯಾಕೆ ಮಾಡಿದ್ರಿ? ಅಲ್ಲಿ ಏನಾಗಿತ್ತು?"

"ಲೈಫ್‌ನಲ್ಲಿ ಛೇಂಜ್ ಬೇಕು ಅಂತ ಅನ್ನಿಸ್ತು.... ಅದೇ ರಸ್ತೆ.... ಅದೇ ಮುಖ ಗಳನ್ನು ನೋಡಿ ನೋಡಿ ಬೇಜಾರಾಗಿತ್ತು...." ಬೇಕೂಂತ ನಕ್ಕಳು.

"ಹಾಗಾದ್ರೆ ಹಳೇದನ್ನೆಲ್ಲಾ ಬದಿಗೊತ್ತಿ, ಈಗ ಹೊಸ ಜೀವನವನ್ನು ಹುಡುಕಿ ಕೊಂಡು ಬಂದಿದ್ದೀರಿ ಅನ್ನಿ..... ಆದ್ರೂ ಹಳೇದನ್ನು ಮರೆಯೋದು ಅಷ್ಟು ಸುಲಭ ಅಲ್ಲ ಮೇಡಂ...."

"ಕೂತ್ಕೊಳ್ಳಿ. ನಿಧಾನವಾಗಿ ಮಾತಾಡಿ. ಏನಾದ್ರೂ ಕುಡಿಯೋಕೆ ತರಿಸ್ಲಾ?"

"ಏನೂ ಬೇಡ" ಎನ್ನುತ್ತಾ ಕೂತ. ಅವಳೂ ಎದುರಿಗಿದ್ದ ಕುರ್ಚಿಯ ಮೇಲೆ ಕುಳಿತಳು.

"ಹೌದು ಮಹೇಶ್.... ಕೆಲವನ್ನೆಲ್ಲಾ ಹಿಂದಕ್ಕೇ ಬಿಟ್ಟು ಬಿಡೋದು ವಾಸಿ ಅಂತ ಅನ್ನಿಸ್ತು. ಅದಕ್ಕೆ ಬಂದು ಬಿಟ್ಟೆ. ಇದು ನನ್ನದೇ ನಿರ್ಧಾರ.... ಆದ್ರಿಂದ್ಲೇ ಯಾರೊಬ್ಬರಿಗೂ ಹೇಳ್ಲಿಲ್ಲ.... ಅಮ್ಮ ಅಪ್ಪಂಗೂ ಹೇಳಿರ್ಲಿಲ್ಲ. ಅಮ್ಮನೇ ಈ ಎಲ್ಲ ವಿಷಯ ನಿಮಗೆ ಹೇಳಿರಬೇಕು ಅಲ್ವಾ? ಮುಖದಲ್ಲಿ ಮಂದಹಾಸ ಕಾಣಿಸಲಿಲ್ಲ. ಅವನಿಗೆ ಬೇಸರವಾಯಿತು.

"ನಾನು ಇಲ್ಲಿಗೆ ಬಂದಿದ್ದು ನಿಮಗೆ ಇಷ್ಟ ಆಗ್ಲಿಲ್ಲ ಅಂತ ಕಾಣುತ್ತೆ"

"ಹಾಗೇನಿಲ್ಲ. ಆದರೆ ಆಶ್ಚರ್ಯ ಆದದ್ದಂತೂ ನಿಜ..." ಮೆಲುವಾಗಿ ನಕ್ಕಳು.

"ನಿಜ ಹೇಳ್ಲಾ ಸುಜಯಾ.... ನಿಮ್ಮ ಈ ಮಂದಹಾಸವನ್ನು ನೋಡಿ ಆನಂದವನ್ನು ಅನುಭವಿಸೋಣ ಅಂತ್ಲೇ ಇಲ್ಲಿಯವರೆಗೆ ಬಂದದ್ದು."

"ಷ್.... ಇದು ಆಶ್ರಮ.... ಇಲ್ಲಿ ಇಂಥಾ ಮಾತೆಲ್ಲಾ ಪ್ರಾಹಿಬಿಟೆಡ್....." ಬಾಯಿಯ ಮೇಲೆ ಬೆರಳನ್ನಿಟ್ಟಳು.

"ಯಾಕೆ? ಇಲ್ಲಿಯ ವೃದ್ಧಾಶ್ರಮದಲ್ಲಿರುವ ಮುದುಕರಿಗೆ, ಹಿಂದೆ ರಸಮಯ ಜೀವನ ಇರಲಿಲ್ವಾ? ಅದನ್ನು ನೆನೆಸಿಕೊಂಡು ಮೆಲುಕು ಹಾಕುವುದಿಲ್ಲವಾ? ಇಲ್ಲಿಯ ಅನಾಥಾಶ್ರಮದ ಮಕ್ಕಳಿಗೆ ಬರೀ ವೈರಾಗ್ಯ ಹೇಳಿಕೊಡ್ತೀರಾ? ಅವರಿಗೆ ಮುಂದೆ ರಸಮಯ ಜೀವನ ಇಲ್ವಾ?" ಕೆಣಕಿದ.

"ಷ್.... ಹಾಗಲ್ಲ. ನಾನು ಇಲ್ಲಿಗೆ ಹೊಸಬಳು. ಇನ್ನೂ ಹೊಂದಿಕೊಳ್ತಾ ಇದೀನಿ.... ಯಾಕೆ ಸುಮ್ನೆ ಅಂತ ಅಷ್ಟೇ...."

"ಓ.ಕೇ... ಇಲ್ಲಿ ಬೇಡಾಂತಾದ್ರೆ ಹೊರಗೆ ಬನ್ನಿ. ಎಲ್ಲಾದ್ರೂ ಕೂತು ನಮಗಿಷ್ಟ ಬಂದ ಹಾಗೆ ಮಾತ್ನಾಡೋಣ."

"ಹಾಗೆಲ್ಲಾ ನಾನು ಬರೋಕ್ಕಾಗುಲ್ಲ. ಪರ್ಮಿಷನ್ ಬೇಕಾಗುತ್ತೆ...." ಹಾಗೇ ಇನ್ನೊಂದ್ಮಾತು ಹೇಳ್ತೀನಿ ಮಹೇಶ್ ಬೇಸರ ಪಟ್ಕೋಬಾರ್ದು ನೀವು....."

"ನಾನು ಪದೇ ಪದೆ ಬರಬಾರ್ದು ಅಷ್ಟೇ ತಾನೇ.... ಅದು ನನ್ನ ಇಷ್ಟ. ಅದನ್ನು ಹೇಳುವ ರೈಟ್ ನಿಮಗಿಲ್ಲ...."

"ಸುಮ್ಮನೇ ಅಪಾರ್ಥ ಮಾಡ್ಕೋತಾರೇ ಅಷ್ಟೇ"

"ಯಾಕೆ ಮಾಡ್ಕೋತಾರೆ? ನಾವಿಬ್ರೂ ಫ್ರೆಂಡ್ಸ್.... ಸದ್ಯದಲ್ಲೇ ಮದುವೆ ಆಗ್ತಿರೋರು ಅಂತ ಹೇಳಿದ್ರಾಯ್ತು..." ಅವಳ ಮುಖವನ್ನೇ ಅವಲೋಕಿಸುತ್ತಾ ನುಡಿದ. ಅವಳ ಕೆನ್ನೆಗಳು, ಕಿವಿಗಳು ಕೆಂಪಾಗಿದ್ದವು. ಮನದಲ್ಲೇ ನಕ್ಕ.

"ಮದುವೆ ವಿಷಯ ಬಿಟ್ಟು ಬೇರೆ ಏನನ್ನಾದ್ರೂ ಮಾತನಾಡಿ. ನಾನು ಮದುವೇನೇ ಆಗ್ಬಾರ್ದು ಅಂತ ತೀರ್ಮಾನಿಸಿದೀನಿ"

"ಅದಕ್ಕೇನಾ ಈ ಆಶ್ರಮಕ್ಕೆ ಬಂದು ಸೇರಿಕೊಂಡಿದ್ದು. ಇಲ್ಲಿಂದ ನಿಮ್ಮನ್ನ ಹೊರಕ್ಕೆ ಹೇಗೆ ಕರ್ಕೊಂಡು ಹೋಗ್ಬೇಕು ಅಂತ ನನಗೆ ಚೆನ್ನಾಗಿ ಗೊತ್ತೂರಿ.....ಅದಕ್ಕೆ ರೆಡಿಯಾಗಿರಿ"

"ಏನು ಹೆದರಿಸ್ತಾ ಇದೀರಾ ಮಹೇಶ್.....ಇದು ನನ್ನ ಲೈಫು....."

"ಓಕೆ. ಹೆದರಿಸ್ತಾ ಇಲ್ಲ. ರಿಕ್ವೆಸ್ಟ್ ಮಾಡಿಕೊಳ್ತಾ ಇದೀನಿ......ರೈಟ್?" ಅವನು ನಕ್ಕ. ಆದರೆ ಅವಳು ನಗಲಿಲ್ಲ.

"ಹೊತ್ತಾಯ್ತು. ನಾನು ಕ್ಲಾಸ್‌ಗೆ ಹೋಗ್ಬೇಕು..." ಕೈ ಗಡಿಯಾರವನ್ನು ನೋಡಿ ಕೊಳ್ಳುತ್ತಾ ಎದ್ದಳು.

"ಹೊರಡೀ ಅಂತ ಸೂಚ್ಯವಾಗಿ ಹೇಳ್ತಿದೀರಾ?" ಮತ್ತೆ ನಕ್ಕ.

"ಇಲ್ಲ ಇರೋ ವಿಷಯ ಹೇಳ್ದೆ. ನೀವು ಬೇಕಾದ್ರೆ ಇಲ್ಲೇ ಕೂತಿರಿ. ನಾನು ಹೊರಟೆ"

"ಓಕೇ.... ಓಕೇ ಸುಮ್ಮನೆ ಯಾಕೆ ರೇಗ್ತೀರಿ? ನಾನು ಇಲ್ಲಿ ನಿಮ್ಮ ಕೆಲಸಕ್ಕೆ ಖಂಡಿತಾ ಅಡ್ಡಿ ಮಾಡಲ್ಲ. ನಾನಿನ್ನು ಬರ್ತೀನಿ" ಅವನು ಅವಳಿಗಿಂತ ಮುಂದಾಗಿ ಹೊರಟ. ಅವನನ್ನೇ ನೋಡುತ್ತಾ ನಿಂತಳು. ಅವನೊಮ್ಮೆ ತಿರುಗಿ ನೋಡಿ ಕೈಯಾಡಿಸಿ ದಾಗ, ಅವಳೂ ಕೈ ಎತ್ತಿ ಆಡಿಸಿದಳು. ಕಿರುನಗೆ ಮೂಡಿತ್ತು. ಅವನು ತನಗಾಗಿ ಬಂದಿದಾನೆ ಎನ್ನುವ ಸಂತಸದೊಂದಿಗೇ..... ಅವನು ಮತ್ತೆ ಮತ್ತೆ ಬರಲಿ ಎಂದು ಮನ ಬಯಸಿತ್ತು. ಅವನು ಸರ್ರನೇ ಹಿಂತಿರುಗಿ ಬಂದ. ಅವಳು ಗಾಬರಿಗೊಂಡಳು. "ಥ್ಯಾಂಕ್ಯೂ ನಿಮ್ಮ ಮನಸ್ನಲ್ಲಿ ಏನಿದೆ ಅಂತ ನನಗೆ ತಿಳಿದೇ ಹೋಯ್ತು....." ಅನಿರೀಕ್ಷಿತವಾಗಿ ಅವನು ನುಡಿದಾಗ ಅವಳು ಪೆಚ್ಚಾಗಿ ನಕ್ಕಳು. ಅವನೂ ಮುಗುಳ್ನಕ್ಕು ಅಲ್ಲಿಂದ ಕದಲಿದ. ಅವಳು ನಿಟ್ಟುಸಿರು ಬಿಟ್ಟು ಸ್ಕೂಲಿನ ಕಡೆಗೆ ತಿರುಗಿದಳು.

* * *

ಕಾಲಿಂಗ್ ಬೆಲ್ ಸದ್ದಾಯಿತು. ಅಡುಗೆ ಮನೆಯಲ್ಲಿದ್ದ ವನಜಮ್ಮ ಬಂದು ಬಗಿಲು ತೆಗೆಯುವಷ್ಟರಲ್ಲಿ ಮತ್ತೆ ಬೆಲ್ ಆಗಿತ್ತು. "ಬಂದೇ..." ವನಜಮ್ಮ ಸ್ವಲ್ಪ ಜೋರಾಗಿಯೇ ಹೇಳುತ್ತಾ ಬಾಗಿಲನ್ನು ತೆಗೆದಳು. ಆಕೆಯ ಎದುರಿಗೆ ನಿಂತಿದ್ದಾಕೆಯ ಗುರುತು ಸಿಕ್ಕಿತು.

"ಅರೇ! ಸಾವಿತ್ರಮ್ಮ! ನೀವು, ಬನ್ನಿ ಒಳಗೆ ಬನ್ನಿ..." ಅಚ್ಚರಿಗೊಂಡರೂ ಸ್ವಾಗತಿಸಿದಳು.

"ನೋಡಿ, ನಿಮ್ಮ ಮನೇನ ಪತ್ತೆ ಹಚ್ಚಿ ಬಂದೇ ಬಿಟ್ಟೆ.... ಬಾರೋ...." ಎಂದು ಹಿಂದೆ ಇದ್ದ ಯುವಕನೊಂದಿಗೆ ಮನೆಯೊಳಕ್ಕೆ ಬಂದಳು.

"ಇವನು ವಿವೇಕ, ನಮ್ಮ ಭಾವನ ಮಗ.... ನೀವು ಆ ದಿನ ನೋಡಿರ್ಲಿಲ್ಲ" ಅವನು 'ನಮಸ್ಕಾರ ಆಂಟೀ' ಎಂದ.

"ನಮಸ್ಕಾರ ಬಾಪ್ಪಾ.....ಕೂತ್ಕೊಳ್ಳಿ ಸಾವಿತ್ರಮ್ಮ. ನೀವು ಬಂದದ್ದು ತುಂಬಾ ಸಂತೋಷ ಆಯ್ತು. ನಾನೇ ಬರೋಣ ಅಂತ ಅಂದ್ಕೊಂಡೆ.... ವಿಪರೀತ ಕೆಲಸ, ಬಿಡುವೇ ಆಗ್ಲಿಲ್ಲ. ಮೂರು ತಿಂಗಳಿಂದ ಬಿಟ್ಟು ಹೋಗಿದ್ದ ಮನೆ.... ಸಾಕು ಸಾಕಾಯ್ತು."

"ಅದು ಹಾಗೇನೇ.... ಒಂದೇ ಸಮನೆ ಕೆಲಸ ಮಾಡ್ತಿದ್ರೆ ಎಲ್ಲಾ ಸರಿಯಾಗಿರುತ್ತೆ. ನಮ್ಮನೇಲೂ ಅಷ್ಟೇ.... ಎಷ್ಟು ಕೆಲ್ಸ ಅಂತೀರಿ."

"ನಿಮ್ಮ ಮನೇಲಿ ಅಡುಗೆಯೋರು, ಕೆಲಸ್ದೋರು ಎಲ್ಲಾ ಇದಾರೆ.....ಅಲ್ದೇ ಮನೇಲಿ ಒಬ್ಬಳು ಹುಡುಗಿಯೂ ಇದಾಳೆ.... ಆದ್ರೂ ಹೀಗಂತೀರಿ... ನಮ್ಮ ಮನೇಲಿ ಗಂಡು ಹುಡುಗನ ಸಂಸಾರ.... ಹೇಳೋರಿಲ್ಲ, ಕೇಳೋರಿಲ್ಲ. ಮನೆ ಹೇಗೆ ಬಿದ್ದಿತ್ತು ಅಂತೀರಿ.... ಈಗ ಒಂದು ಹದಕ್ಕೆ ಬಂದಿದೆ...." ಸಾವಿತ್ರಮ್ಮ ಕುಳಿತಲ್ಲಿಂದಲೇ ಸುತ್ತಲೂ ಕಣ್ಣು ಹಾಯಿಸಿದಳು.

"ನಿಮ್ಮ ಮಗ ಮನೇಲಿಲ್ಲ ಅಂತ ಕಾಣುತ್ತೆ.... ಮಹೇಶ ಅಂತಲ್ವೇ ಅವನ ಹೆಸರು.....?"

"ಹೌದು. ನಂಗೆ ಇಬ್ಬರು ಗಂಡು ಮಕ್ಕಳು. ಇವನು ಚಿಕ್ಕವನು, ದೊಡ್ಡವನು ದಿನೇಶ. ಡೆಲ್ಲೀಲಿದಾನೆ. ಅವತ್ತು ನೋಡಿದ್ರಲ್ಲ.... ಅವನಿಗೆ ಮದುವೆ ಆಗಿದೆ. ಇವನಿಗೆ ಮದುವೆ ಮಾಡಿಬಿಟ್ರೆ ನನ್ನ ಜವಾಬ್ದಾರಿ ತೀರಿತು...."

"ಅದೇ ವಿಷಯ ಮಾತನಾಡೋಣಾಂತ ಇಲ್ಲಿಗೆ ಬಂದಿದೀನಿ.... ಶಾಸ್ತ್ರಿಗಳು ನಮ್ಮ ಲೀಲಳ ಬಗ್ಗೆ ಹೇಳಿದಾರಂತಲ್ಲ. ನಿಮ್ಮ ಮಗನ ಹತ್ರ ಮಾತಾಡಿದ್ರಾ?"

"ಇಲ್ಲ ಸಾವಿತ್ರಮ್ಮ. ಮಾತಾಡುಕ್ಕೆ ಆಗಿಲ್ಲ. ನಾನು ಇವತ್ತೇ ಮಾತಾಡಿ ತಿಳಿಸ್ತೀನಿ...."

"ಜಾತಕ ಹೊಂದುತ್ತೆ ಅಂತ ಶಾಸ್ತ್ರಿಗಳು ಹೇಳಿದಾರೆ. ಅವಳ ಮದುವೆ ಆಗ್ತಿದ್ದ ಹಾಗೇ, ಇವನಿಗೂ ಮಾಡಿ ಬಿಡ್ತೀವಿ. ನಿಮ್ಮ ಕಡೆ ಚೆನ್ನಾಗಿರೋ ಹುಡುಗಿ ಯಾರಾದ್ರೂ ಇದ್ರೆ ಹೇಳಿ.... ನಮಗೇ ಬೇಕಾದಷ್ಟಿದೆ. ಯಾವುದಕ್ಕೂ ಕೊರತೆ ಇಲ್ಲ. ಹುಡುಗಿ

ಮಾತ್ರ ಇವನಿಗೆ ತಕ್ಕ ಹಾಗೆ ಚೆನ್ನಾಗಿರಬೇಕು...." ವಿವೇಕ ತಲೆ ತಗ್ಗಿಸಿ ಕುಳಿತಿದ್ದ.

"ಇವರು ಏನು ಮಾಡ್ತಿದಾರೆ?"

"ಓದು ಮುಗಿದಿದೆ. ಇಂಜಿನಿಯರ್ ಆಗಿ ಒಳ್ಳೆ ಕಂಪೆನೀಲಿ ಕೆಲಸದಲ್ಲಿದಾನೆ. ಕೈ ತುಂಬಾ ಸಂಬಳ ಬರುತ್ತೆ. ಆದರೆ, ಫಾರಿನ್ನಿಗೆ ಹೋಗಿ ಅಲ್ಲೊಂದಿಷ್ಟು ವರ್ಷ ಇರಬೇಕು ಅಂತ ಆಸೆ.... ಅದಕ್ಕೆ ಅವನಿಗೆ ಓದಿರುವ ಹುಡುಗಿಯಾಗಿರಬೇಕು"

"ಚಿಕ್ಕಮ್ಮ ನನ್ನ ಮದುವೆ ಮಾತ್ಯಾಕೆ ಈಗ?"

"ನೀನು ಸುಮ್ನಿರು. ನಿಮ್ಮಪ್ಪ ನಿಮ್ಮಿಬ್ಬರ ಜವಾಬ್ದಾರಿಯನ್ನು ನನಗೆ ಬಿಟ್ಟು ಹಾಯಾಗಿದಾರೆ.... ನನಗೆ ನೀವಿಬ್ಬರೂ ಒಂದೇ ಥರ.... ಒಂದು ವೇಳೆ ನಿನಗೇ ಮೊದಲು ಮದುವೆ ಆಗೋದಾದ್ರೆ ಆಗಲಿ...." ವಿವೇಕ ಚಿಕ್ಕಮ್ಮನನ್ನು ದುರುಗುಟ್ಟಿ ನೋಡಿ ಸುಮ್ಮನಾದ. ವನಜಮ್ಮನಿಗೆ ತಕ್ಷಣಕ್ಕೆ ನೆನಪಾದವಳು ಸುಜಯ.

"ನಮ್ಮ ಕಡೆಯ ಹುಡುಗಿ ಒಬ್ಬಳಿದ್ದಾಳೆ. ನೋಡೋಕೆ ಅವಳು ತುಂಬಾ ಚೆನ್ನಾಗಿಯೇ ಇದ್ದಾಳೆ. ನಾನು ವಿಚಾರಿಸಿಬಿಟ್ಟು ತಿಳಿಸ್ತೀನಿ....."

"ನನ್ನ ಮದುವೆಗೆ ಅರ್ಜೆಂಟಿಲ್ಲ ಆಂಟೀ. ಮೊದಲು ನಮ್ಮಕ್ಕ ಸೆಟ್ಲ್ ಆಗಬೇಕು. ನಮ್ಮ ಅಕ್ಕನ್ನ ನಿಮ್ಮ ಮಗ ನೋಡಿರಬಹುದು. ಮತ್ತೊಮ್ಮೆ ನೋಡಬೇಕು ಅಂತಿದ್ರೆ.... ತಿಳಿಸಿ. ನಿಮ್ಮ ಮನೆಗೇ ಕರ್ಕೊಂಡು ಬರ್ತೀನಿ.... ನಾವಿನ್ನು ಹೊರಡೋಣ್ವಾ ಚಿಕ್ಕಮ್ಮಾ...."

"ಹೋಗೋರಂತೆ ಕೂತ್ಕೊಳ್ಳಿ. ಸ್ವಲ್ಪ ಕಾಫಿ ಮಾಡ್ತೀನಿ. ಮಹೇಶನೂ ಬರೋ ಹೊತ್ತಾಯ್ತು. ಅಗೋ ಬಂದೇ ಬಿಟ್ಟ" ಬೈಕ್ ನಿಲ್ಲಿಸಿದ ಸದ್ದು ಕೇಳಿಸಿತ್ತು. ವನಜಮ್ಮ ನಗುಮುಖ ಮಾಡಿಕೊಂಡು ಮಗ ಒಳಕ್ಕೆ ಬರುವುದನ್ನೇ ಕಾದಳು.... ಮಹೇಶ ಕಾತುರ, ಅನುಮಾನಗಳಿಂದಲೇ ಒಳಗೆ ಅಡಿ ಇಟ್ಟ, ಮೊದಲಿಗೆ ಕಂಡವರು ಸಾವಿತ್ರಮ್ಮ. ತಾನೇ ಮುಗುಳ್ನಕ್ಕು 'ನಮಸ್ಕಾರ ಆಂಟೀ' ಎಂದ.

"ನೀನು ಹೇಗಿದೀಯಪ್ಪಾ...." ಆಕೆ ಅವನನ್ನು ಪರೀಕ್ಷಿಸುವವಳಂತೆ ಮೇಲಿನಿಂದ ಕೆಳಗೆ ನೋಡಿದಳು. ಮಹೇಶ ಮುಜುಗರಗೊಂಡ. ಆಕೆ ಬಂದಿರುವ ಉದ್ದೇಶ ಅವನಿಗೆ ಅರಿವಾಗಿತ್ತು. ವಿವೇಕ ಮುಂದೆ ಬಂದು, ಕೈಕುಲುಕಿ 'ಹಲೋ' ಎಂದು, ನಾನು ವಿವೇಕ್ ಎನ್ನುತ್ತಾ ತನ್ನ ಪರಿಚಯವನ್ನು ಹೇಳಿಕೊಂಡ.

"ಹಲೋ... ಗ್ಲಾಡ್ ಟು ಮೀಟ್ ಯೂ... ಕೂತ್ಕೊಳ್ಳಿ...." ಮಹೇಶನೂ ಕುಳಿತ.

"ನೀವುಗಳು ಮಾತಾಡ್ತಿರಿ. ನಾನು ಕಾಫಿ ತರ್ತೀನಿ" ವನಜಮ್ಮ ಒಳಗೆ ನಡೆದಳು. ಸಾವಿತ್ರಮ್ಮನೂ ಅವಳ ಹಿಂದೆ ಎದ್ದು ಹೋದಳು. "ಮನೆ ನೋಡಿ ನಗಬೇಡಿ ಸಾವಿತ್ರಮ್ಮ. ಇದು ಹಳೇ ಕಾಲದ ಮನೆ, ಅಂದ ಇಲ್ಲ, ಚೆಂದ ಇಲ್ಲ.....ನೋಡೋರು ಮಾಡೋರು ಯಾರೂ ಇಲ್ಲ. ಈ ಗಂಡು ಹುಡುಗರಿಗೆ ಯಾವುದೂ ಬೇಕಿಲ್ಲ"

"ಎಲ್ಲರ ಮನೆಯ ಕತೆಯೂ ಅಷ್ಟೇ. ಮೊದಲು ನಿಮ್ಮ ಮಗನ ಹತ್ರ ಮಾತ್ನಾಡಿ....

ನಮ್ಮಿಬ್ಬರ ಪರಿಚಯ, ಸಂಬಂಧದಲ್ಲಿ ಮುಂದುವರೆದರೆ ತುಂಬಾ ಚೆನ್ನಾಗಿರುತ್ತದೆ. ನಿಮ್ಮ ಹಿರಿ ಸೊಸೆಯಷ್ಟು ನಮ್ಮ ಲೀಲಾ ಸುಂದರವಾಗಿಲ್ಲ. ಆದರೆ ತುಂಬಾ ಒಳ್ಳೆಯ ಸ್ವಭಾವದ ಹುಡುಗಿ, ಓದಿದಾಳೆ. ವಿದ್ಯಾವಂತೆ. ಎಲ್ಲವನ್ನೂ ನಿಭಾಯಿಸಬಲ್ಲ ಧೈರ್ಯವಂತೆ.... ನಿಮ್ಮ ಮಗನಿಗೆ ತಕ್ಕ ಹೆಂಡತಿ ಆಗ್ತಾಳೆ, ನೋಡ್ತಿರಿ."

"ನನ್ನ ಆಸೆಯೂ ಅದೇ. ಗಂಡ ಹೆಂಡತಿ ಅನ್ಯೋನ್ಯವಾಗಿರಬೇಕು. ರೂಪ, ಯೌವನ, ಐಶ್ವರ್ಯ ಯಾವುದೂ ಶಾಶ್ವತವಲ್ಲ. ಅನ್ಯೋನ್ಯತೆ ಮುಖ್ಯ. ನಾನು ಸಮಯ ನೋಡಿ ನನ್ನ ಮಗನ ಹತ್ರ ಮಾತಾಡ್ತೀನಿ. ಕೆಲವು ಸಾರಿ, ಆಫೀಸಿನ ಟೆನ್ಷನ್‌ಗಳಿಂದ, ನಮ್ಮ ಮಾತುಗಳೇ ಅವನ ತಲೆಗೆ ಹೋಗಿರುಲ್ಲ...." ಮಾತನಾಡುತ್ತಾ ಕಾಫಿ ಬೆರೆಸಿ, ನಾಲ್ಕು ಕಪ್‌ಗಳಿಗೆ ಹಾಕಿಕೊಂಡು ಹೊರಕ್ಕೆ ತಂದಳು.

ವಿವೇಕ ತನ್ನ ವಿದ್ಯಾಭ್ಯಾಸದ ಬಗ್ಗೆ, ತನ್ನ ಆಶಯಗಳ ಬಗ್ಗೆ ಹೇಳಿಕೊಂಡ. ಮಹೇಶ ಕೇಳಿಸಿಕೊಂಡ. ಕಾಫಿ ಸೇವಿಸಿದ ನಂತರ ಇಬ್ಬರೂ ಹೊರಟರು.

ಅವರು ಆ ಕಡೆ ತೆರಳಿದ ಕೂಡಲೇ, ತಾಯಿ ಅವರು ಬಂದ ವಿಷಯದ ಬಗ್ಗೆ ಮಾತನಾಡದೇ ಇರುವವಳಲ್ಲ ಎಂದುಕೊಂಡು, ತಾನೂ ಹೊರ ಹೊರಟ.

"ಅದೇನೋ ಈಗ್ಬಂದೆ.... ಮತ್ತೆ ಹೊರಡ್ತಿದೀಯ.... ಯಾವ ಕಡೆಗೆ?"

"ನನ್ನ ಸ್ನೇಹಿತನ ಮನೆಗೆ.... ಯಾವುದೋ ವಿಷಯ ಕೇಳಬೇಕಾಗಿತ್ತು"

"ಫೋನಲ್ಲೇ ಮಾತಾಡಿದ್ರಾಗುಲ್ವಾ? ನಂಗೆಲ್ಲಾ ಗೊತ್ತು ನಿನ್ನ ಜಾಣತನ. ಅದಿರಲಿ, ಶಿವರಾಮಯ್ಯನ್ನ ನರ್ಸಿಂಗ್ ಹೋಂಗೆ ಸೇರಿಸಿದ್ದಾರಂತೆ.... ಶಕುಂತಲ ಫೋನು ಮಾಡಿದ್ದರು. ದೀಪಾಗೆ ತಿಳಿಸೋದೋ ಬೇಡ್ವೋ ಅಂತ ಕೇಳಿದ್ರು."

"ಅತ್ತಿಗೆಗೆ ತಿಳಿಸೋದು ಒಳ್ಳೇದಲ್ವೇನಮ್ಮ....."

"ತಿಳಿಸ್ಬೇಕು ನಿಜ... ಆದರೆ..."

"ಈಗ ಹೇಗಿದಾರೆ ಅಂತ ಏನಾದ್ರೂ ತಿಳೀತಾ? ಫೋನು ಮಾಡ್ಲಾ?"

"ಒಂದು ಘಳಿಗೆ ನಾವುಗಳೇ ಅಲ್ಲಿಗೆ ಹೋಗಿ ಬರೋಣ. ಆಕೆಗೂ ಸಮಾಧಾನ ಆಗುತ್ತೆ. ಮಿತ್ರಾ ನರ್ಸಿಂಗ್ ಹೋಂ ಅಂತ ಹೇಳಿದ್ರು. ಆಕೇನೂ ಅಷ್ಟೇ... ಮಗ ಎಲ್ಲೋ ದೂರದಲ್ಲಿದಾನೆ. ಅವನಿಗೂ ತಿಳಿಸಿದಾರೋ ಇಲ್ವೋ....?"

"ಸರಿ ರೆಡಿಯಾಗು. ಹೋಗ್ಬಿಟ್ಟೇ ಬರೋಣ. ನಮ್ಮ ಸಹಾಯ ಏನಾದ್ರೂ ಬೇಕಾಗ ಬಹುದು" ಕೆಲವೇ ನಿಮಿಷಗಳಲ್ಲಿ ಅವರಿಬ್ಬರೂ ಮನೆಯಿಂದ ಹೊರಟಿದ್ದರು. ಮಿತ್ರಾ ನರ್ಸಿಂಗ್ ಹೋಂ ತಲುಪಿ, ಶಿವರಾಮಯ್ಯನಿದ್ದ ಸ್ಪೆಷಲ್ ವಾರ್ಡ್‌ಗೆ ಬಂದರು. ಬೆಡ್ ಮೇಲೆ ಕುಳಿತಿದ್ದ ಶಿವರಾಮಯ್ಯನವರೇ ಸ್ವಾಗತಿಸಿದರು.

"ನೋಡು ಶಕ್ಕೂ.... ಬೀಗರು ಬಂದಿದಾರೆ....."

"ಈಗ ಹೇಗಿದೀರಿ? ಏನಾಯ್ತು?"

"ಏನಿಲ್ಲ. ಸ್ವಲ್ಪ ಸುಸ್ತಾಗಿದ್ದ ಹಾಗಿತ್ತು. ಎದೆ ನೋವು ಅಂತಂದೆ. ಇವಳು

ಹೆದರಿ ಡಾಕ್ಟರಿಗೆ ಫೋನು ಮಾಡಿದ್ಲು. ಅವರು ಹೇಳಿದ್ರು ಅಂತ ನರ್ಸಿಂಗ್ ಹೋಂಗೆ ಬಂದು ಸೇರಿದ್ದಾಯ್ತು. ಇಲ್ಲಿ ನಮ್ಮ ಪರಿಚಯದ ಡಾಕ್ಟ್ರು ಇದಾರೆ.... ಈಗ ಹುಶಾರಾಗಿದೀನಿ. ನಾಳೆ ಮನೆಗೆ ಹೋಗ್ತೀನಿ...."

"ಡಾಕ್ಟ್ರು ಏನಂತಾರೆ?"

"ಎಲ್ಲಾ ನಾರ್ಮಲ್ ಆಗಿದೆ ಅಂತ ಬರೆದುಕೊಟ್ಟಿದ್ದಾರೆ. ತಿಂದಿದ್ದು ಹೆಚ್ಚಾಗಿ ಸ್ವಲ್ಪ ವ್ಯತ್ಯಾಸ ಆಗಿದೆ ಅಷ್ಟೇ."

"ಆದ್ರೂ ನಮ್ಮ ಹುಶಾರಿನಲ್ಲಿ ನಾವಿರಬೇಕು. ಮಹೇಶ ಬೇಕಾದ್ರೆ ಡಾಕ್ಟ್ರ ಹತ್ರ ಮಾತಾಡ್ತಾನೆ.... ಏನಂತೀರಿ?"

"ಆಗ್ಲಿ... ಡಾಕ್ಟ್ರ ಹತ್ರ ಮಾತಾಡ್ಲೀ... ಅವರು ಹೇಗೆ ಹೇಳ್ತಾರೋ ಹಾಗೇ..."

ಮಹೇಶ ಸ್ಪೆಷಲಿಸ್ಟ್ ಇದ್ದ ಸ್ಥಳಕ್ಕೆ ಹೋದ. ಇವರಿಬ್ಬರೂ ಡೆಲ್ಲಿಯ ಬಗ್ಗೆ ಮಾತನ್ನಾಡುತ್ತಿದ್ದರು. ಶಿವರಾಮಯ್ಯ ಆಲಿಸುತ್ತಿದ್ದರು. ಮಹೇಶ ಬರುವಷ್ಟರಲ್ಲಿ ಇವರಿಬ್ಬರ ಮಾತುಕತೆ ಮುಗಿದಿತ್ತು.

"ಏನೂ ಭಯ ಇಲ್ಲ. ಎಲ್ಲಾ ನಾರ್ಮಲ್ ಆಗಿದೆ ಅಂತಂದ್ರು.... ಏನೋ ಮೆಡಿಸಿನ್ ಬರೆದುಕೊಟ್ಟಿದ್ದಾರಂತಲ್ಲ. ಅದನ್ನು ತಗೊಳ್ಳಲಿ ಅಂತಂದ್ರು. ಹೈ ಬಿ.ಪಿ ಇರೋದ್ರಿಂದ ಹೀಗಾಗಿರಬಹುದು. ಇಪ್ಪತ್ನಾಲ್ಕು ಗಂಟೆ ಅಬ್ಸರ್ವೇಷನ್‌ನಲ್ಲಿ ಎಲ್ಲಾ ಸರಿಯಾಗಿದೆ ಅಂತ ರಿಪೋರ್ಟ್ ಬಂದಿದೆ. ನಾಳೆ ಮನೆಗೆ ಹೋಗಬಹುದು ಅಂತಂದ್ರು...."

"ಹೌದಾ? ಸದ್ಯ, ಆಸ್ಪತ್ರೆ ಅಂತಂದ್ರೇ ಭಯ ಆಗುತ್ತೆ. ನಾಳೆ ಮಹೇಶ ಬರ್ತಾನೆ. ನಿಮಗೆ ಸಹಾಯ ಮಾಡ್ತಾನೆ"

"ಬೇಡ ಪರವಾಗಿಲ್ಲ. ತೊಂದರೆ ಯಾಕೆ? ನಮ್ಮ ಡಾಕ್ಟ್ರು ಎಲ್ಲಾ ರೆಡಿ ಮಾಡ್ತಾರೆ. ಸಿಟಿ ಟ್ಯಾಕ್ಸಿ ಕೂಡಾ ಮಾಡಿಕೊಡ್ತಾರೆ. ಮನೆಗೆ ಹೋದ್ಮೇಲೆ ನಾನೇ ಫೋನು ಮಾಡ್ತೀನಿ."

"ಹಾಗೇ ಮಾಡಿ.... ಯಾವುದಕ್ಕೂ ಸಂಕೋಚ ಪಟ್ಕೋಬೇಡಿ... ಮಹೇಶ ನಿಮ್ಮ ಮಗನಿದ್ದ ಹಾಗೇ.... ಅಂದ್ಹಾಗೇ ದಿಲೀಪಂಗೆ ಹೇಳಿದ್ರಾ?"

"ಇಲ್ಲ, ಹೇಳ್ಲಿಲ್ಲ. ಸುಮ್ನೆ ಗಾಬರಿ ಪಟ್ಕೋತಾನೆ....ತಕ್ಷಣಕ್ಕೆ ಬರೋದು ಕಷ್ಟವೇ. ಬಂದು ಹೋಗೋದು ಒಂದು ದೊಡ್ಡ ಸಮಸ್ಯೆ. ಸುಮ್ಮನೇ ಖರ್ಚು, ಶ್ರಮ....."

"ಹಾಗಂದ್ರೇ ಹೇಗೆ? ಅಪ್ಪ ಅಮ್ಮನಿಗೋಸ್ಕರ ಬರದೇ, ಮಕ್ಕಳು ಇನ್ನೆಲ್ಲಿಗೆ ಹೋಗ್ಬೇಕು? ಆಮೇಲೆ ಮಾತಾಡಿ.... ಬಂದು ಹೋಗಲಿ. ನಿಮಗೂ ಸಮಾಧಾನ ಎರುತ್ತೆ... ಹಾಗೇ ಒಂದು ಹೆಣ್ಣು ನೋಡಿ ಮದುವೆ ಮಾಡಿಬಿಡಿ... ನಿಮ್ಮ ಜವಾಬ್ದಾರಿಯೂ ಮುಗಿಯುತ್ತೆ."

"ನಮಗೂ ಅದೇ ಆಸೆ ವನಜಮ್ಮ.... ಆದ್ರೆ, ಅವನು ನಮ್ಮ ಮಾತುಗಳನ್ನೆಲ್ಲಿ

ಕೇಳ್ತಾನೆ! ಏನೋ ಅವರವರೇ ಲೆಕ್ಕ ಹಾಕಿರ್ತಾರೆ" ವನಜಮ್ಮ ಮಗನ ಕಡೆ ನೋಡಿದಳು. ಮಹೇಶ ಬೇರೆಡೆ ಮುಖ ಮಾಡಿದ.

"ನಾವಿನ್ನು ಹೊರಡ್ತೀವಿ. ನಿಮ್ಮ ಆರೋಗ್ಯ ಚೆನ್ನಾಗಿ ನೋಡ್ಕೊಳ್ಳಿ. ದೀಪಂಗೆ ತಿಳಿಸುವ ಅಗತ್ಯ ಇಲ್ಲ ಅಂತ ಕಾಣುತ್ತೆ. ಹೇಗೂ ಇನ್ನು ಮೂರು ತಿಂಗಳು ಕಳೆದ ಕೂಡಲೇ ಇಲ್ಲಿಗೆ ಬಂದು ಬಿಡ್ತಾರಲ್ಲ...."

"ದೀಪ ಫೋನು ಮಾಡಿದ್ಲಾ.... ನಮಗೆ ಅವಳ ಫೋನು ಬಂದು ಒಂದು ವಾರವೇ ಆಯ್ತು...."

"ನಮಗೂ ಅಷ್ಟೇ... ವಾರದ ಕೆಳಗೆ ಇಬ್ರೂ ಮಾತಾಡಿದ್ರು...ವನಜಮ್ಮನೆಂದಳು." ಇಬ್ಬರೂ ಅಲ್ಲಿಂದ ಹೊರಟರು. ಯಾಕೋ ಏನೋ ವನಜಮ್ಮ ಮೌನವಾಗಿದ್ದಳು. "ಒಳ್ಳೇದೇ ಆಯ್ತು" ಅಂತಂದುಕೊಂಡ ಮಹೇಶ.

ಮೊಬೈಲ್ ಫೋನು ಸಂಗೀತ ಹಾಡಿತು. ಮಹೇಶ ಬೇಸರದಿಂದ ಎತ್ತಿಕೊಂಡ. ಸುಜಯ ಫೋನು ಮಾಡಿದ್ದಳು. ಘಳಿಗೆಯಲ್ಲಿ ಬೇಸರ ಮಾಯವಾಗಿತ್ತು. ಸಂತಸದಿಂದ 'ಹಲೋ' ಎಂತಂದ.

"ಏನ್ಮಾಡ್ತಿದ್ರಿ ಮಹೇಶ್.... ಡಿಸ್ಟರ್ಬ್ ಆಯ್ತಾ?"

"ಇಲ್ಲ. ಖಂಡಿತಾ ಇಲ್ಲ. ಏನು ವಿಷಯ ಹೇಳಿ...." ಉತ್ಸಾಹದಿಂದಲೇ ಕೇಳಿದ.

"ನಮ್ಮ ಸೋದರಮಾವಂಗೆ ಹುಷಾರಿರಲಿಲ್ಲವಂತಲ್ಲ. ಈಗ ಹೇಗಿದಾರೆ! ನೀವು ನೋಡೋಕೆ ಹೋಗಿದ್ರಂತಲ್ಲ...."

"ಹುಶಾರಾಗಿದಾರೆ. ಮನೇಗೇ ವಾಪಸ್ ಹೋಗಿದಾರೆ.... ನೀವೇ ಯಾಕೆ ಬಂದು ನೋಡ್ಬಾರ್ದು?"

"ಹೌದು ಹೋಗಿ ನೋಡ್ಬೇಕು. ಏನೂ ಪ್ರಾಬ್ಲಂ ಇಲ್ಲ ತಾನೇ.... ನಿಜ ಹೇಳ್ತಿದೀರಿ ಅಲ್ವಾ?"

"ನನ್ಮೇಲೆ ನಿಮಗೆ ನಂಬ್ಕೆ ಇಲ್ವಾ ಸುಜಯಾ? ಇಂತಹ ವಿಷಯದಲ್ಲಿ ನಾನ್ಯಾಕೆ ಸುಳ್ಳು ಹೇಳ್ಲೀ....!" ಒರಟಾಗಿ ನುಡಿದ.

"ಈಗ ನಂಬ್ಕೆ ಬಂತು. ಓ.ಕೇ ಥ್ಯಾಂಕ್ಸ್...."

"ಬೈ ದ ಬೈ... ಎಲ್ಲಿಂದ ಮಾತಾಡ್ತಿದೀರಿ? ದೂರ ಎಲ್ಲೋ ಆಶ್ರಮದಲ್ಲಿ ಕೂತು ಆತಂಕ ಪಡುವ ಬದಲು ಹತ್ರ ಇದ್ದು ಸೇವೆ ಮಾಡಿದ್ರೆ ಆಗುಲ್ವಾ? ಈಗ ನಿಮ್ಮಪ್ಪ ಅಮ್ಮನ ಬಗ್ಗೆ ಚಿಂತೆ ಕಾಡ್ತಿರಬಹುದು ಅಲ್ವಾ?"

"ದೂರ ಎಲ್ಲಿಂದ್ಲೋ ಮಾತಾಡ್ತಿಲ್ಲ. ಅಮ್ಮನ ಮನೆಯಿಂದ್ಲೇ ಮಾತಾಡ್ತಿದೀನಿ. ಇಲ್ಲಿಂದ್ಲೇ ಅತ್ತೆಯ ಹತ್ರ ಮಾತಾಡ್ದೆ.... ಅವರು ನೀವು ಬಂದಿದ್ದ ವಿಷಯ ತಿಳಿಸಿದ್ರು.... ನಿಮ್ಮನ್ನ ಹೊಗಳಿದ್ರು...."

"ಬಹಳ ಸಂತೋಷವಾಯಿತು. ಅವರು ಹೊಗಳಲಿ ಅಂತಲೇ ನಾನು ಹೋಗಿದ್ದು. ಎನಿ ವೇ ನಾನು ಮಾಡಿದ್ದು ಸರಿಯೋ ತಪ್ಪೋ...."

"ವ್ಯಂಗ್ಯ ಸಾಕು ಮಹೇಶ್.... ನಾನೇನು ತಪ್ಪು ಮಾಡಿದೀನಿ?"

"ತಪ್ಪು ನಂದೇ.... ನಿಮ್ಮನ್ನು ಮೆಚ್ಚಿಕೊಂಡಿದೀನಲ್ಲ...."

"ಈಗ್ಲಾದ್ರೂ ತಿದ್ಕೊಳ್ಳಿ...." ಅವಳು ನಕ್ಕಂತೆ ಅನ್ನಿಸಿತು. ಫೋನನ್ನು ಅತ್ತ ಇಟ್ಟ. ಅವಳೂ ಮಾತನ್ನು ಮುಗಿಸಿದ್ದಳು.

"ಮಹೀ ಊಟಕ್ಕೆ ಬಾರೋ.... ಅಡುಗೆ ತಣ್ಣಗಾಗ್ತಿದೆ.... ಯಾರ ಹತ್ರ ಮಾತಾಡ್ತಿದ್ದೆ!"

"ಸುಜಯಾ ಫೋನು ಮಾಡಿದ್ಲು...." ವನಜಮ್ಮ ಹುಬ್ಬುಗಂಟಿಕ್ಕಿದಳು.

"ಈಗ ಏನಂತೆ?"

"ನಿನ್ನ ಬಗ್ಗೆ, ಅತ್ತಿಗೆ ಬಗ್ಗೆ ವಿಚಾರಿಸಿದಳಮ್ಮ.... ಹಾಗೇ ಅವರ ಅತ್ತೆ ಮಾವನ ಬಗೆಗೂ ಕೇಳಿದಳು....." ಕೈ ತೊಳೆದು ಬಂದು ಊಟಕ್ಕೆ ಕುಳಿತ.

"ಎಲ್ಲರ ಕ್ಷೇಮ ಸಮಾಚಾರ ಹೇಳೋಕೆ ನೀನೇ ಆಗ್ಬೇಕಾ? ಅದು ನೆವ ಅಷ್ಟೇ... ಇನ್ನೊಂದು ಸೌಟು ಸಾರು ಬಡಿಸ್ಲಾ?"

"ಬೇಡ ಸಾಕು"

"ಅವಳ ವಿಷಯ ಬಂದ ಕೂಡ್ಲೇ ಮುಖ ಉಪ್ ಆಗುತ್ತೆ. ಅದೇನು ಮೋಡಿ ಮಾಡ್ತಾಳೋ ಆ ಚದುರೆ"

"ಮೋಡಿ ಗೀಡಿ ಏನಿಲ್ಲ.... ಸ್ವಲ್ಪ ಪಲ್ಯ ಬಡಿಸು. ಪಲ್ಯ ಚೆನ್ನಾಗಿದೆ"

"ನಿಂಗೆ ಇಷ್ಟ ಅಂತ ಮಾಡ್ದೆ. ಚೆನ್ನಾಗಿ ಅಡುಗೆ ಮಾಡೋ ಸೊಸೇನೇ ತರಬೇಕು ಅಂತ ಆಸೆ. ಆದ್ರೆ ಏನು ಮಾಡ್ಲೀ.... ಈ ಕಾಲದ ಹುಡುಗಿಯರಿಗೆ ಅಡುಗೆ ಮನೆಯ ಕೆಲಸಕ್ಕಿಂತ ಆಫೀಸಿನ ಕೆಲಸವೇ ಹೆಚ್ಚು ಪ್ರೀತಿ. ಕೈತುಂಬಾ ಸಂಬಳ ಬೇಕಾದ್ರೆ ತರ್ತಾರೆ.... ಮೈಗೆ, ಮನಸ್ಸಿಗೆ ಹಿತವಲ್ಲದ, ತಂಗಳು ಬೆಂಗಳು, ಹೋಟೆಲ್ಲಿನದು, ಅದೂ ಇದೂ ತಿಂದು ಹೊಟ್ಟೆ ತುಂಬಿಸಿಕೊಳ್ತಾರೆ... ತಮ್ಮ ಆರೋಗ್ಯದ ಜೊತೆಗೆ ಮನೆ ಮಂದಿಯ ಆರೋಗ್ಯಾನೂ ಕೆಡಿಸ್ತಾರೆ"

"ಏನಮ್ಮಾ ಹೀಗೆ ಹೇಳ್ತೀಯ.... ಈ ಕಾಲದ ಹುಡುಗೀರ ಥರ ನಾನೂ ಓದಿದ್ದಿದ್ರೆ, ಕೆಲಸಕ್ಕೆ ಹೋಗಿ ಸಂಪಾದಿಸ್ತಿದ್ದೆ.... ನಮ್ಮಪ್ಪ ಓದಿಸ್ಲಿಲ್ಲ ಅಂತ ತಾತನ್ನ ಬೈಯೋಳು ನೀನೇ ಅಲ್ವಾ? ಈಗೇನಾಯ್ತು?"

"ಏನೋ ಒಂದೊಂದ್ಸಾರಿ ಹಾಗೆ ಅನ್ನಿಸಿದ್ದುಂಟು. ಆಗ ಹೇಳಿರಬಹುದು. ಹೆಂಗಸರಿಗೆ ಎರಡೆರಡು ಕಡೆ ದುಡಿಯೋದು ಕಷ್ಟ... ಮದುವೆಗೆ ಮುಂಚೆ ಏನಾದ್ರೂ ಮಾಡ್ಕೊಳ್ಳಲಿ. ಮದುವೆ ಆದ್ಮೇಲೆ ಮನೆ ಕಡೆ ನೋಡ್ಕೊಂಡ್ರೆ ಸಾಕು.... ದುಡಿದು ತರೋಕೆ ಗಂಡ ಇರ್ತಾನಲ್ಲ...."

"ಅವನು ತರೋದು ಸಾಕಾಗದಿದ್ರೇ....?"

"ಸಾಕಾಗ್ದೆ ಏನು? ಹಾಸಿಗೆ ಇದ್ದಷ್ಟು ಕಾಲು ಚಾಚು ಅಂತ ಮಾತಿದೆ. ಸಂಪಾದಿಸೋಕೆ ಯೋಗ್ಯತೆ ಇಲ್ಲದವನು ಮದುವೇನೇ ಮಾಡ್ಕೋಬಾರ್ದು.... ಆಗ ಅವಳ ಗುಲಾಮನಾಗಿ ಬಿಡ್ತಾನೆ"

"ಬಿಡಮ್ಮ ಯಾವುದೋ ಕಾಲದ ಮಾತಾಡ್ಬೇಡ. ಈಗ ಕಾಲ ಬಹಳವೇ ಬದಲಾಗಿದೆ. ಈಗ ಇಬ್ಬರೂ ಸಮಾನರು.... ಇಲ್ಲಿ ಯಾರೂ ಯಾರ ಗುಲಾಮರಲ್ಲ" ಊಟ ಮುಗಿದಿತ್ತು.

ಕೈ ತೊಳೆಯಲೆಂದು ಎದ್ದ. "ಅಲ್ಲಿ ಬಾಳೆಹಣ್ಣು ಇದೆ. ಚೆನ್ನಾಗಿ ಹಣ್ಣಾಗಿರೋದನ್ನು ನೋಡಿಕೊಂಡು ತಿನ್ನು"

"ನಾಳೆ ತಿಂತೀನಿ. ಈಗ ಹೊಟ್ಟೆ ಭಾರ ಆಗಿದೆ. ನಾನು ಒಂದು ರೌಂಡ್ ತಿರುಗಾಡಿ ಬರ್ತೀನಿ. ನೀನು ಊಟ ಮಾಡು" ವನಜಮ್ಮ ಮಗನನ್ನೇ ಸಂಶಯದಿಂದ ನೋಡಿದಳು. ಅವನು ಮೊಬೈಲ್ ಫೋನನ್ನೆತ್ತಿಕೊಂಡು, ಚಪ್ಪಲಿ ಮೆಟ್ಟಿ ಹೊರನಡೆದ.

* * *

"ದಿನೇಶ ಫೋನು ಮಾಡಿದ್ದ. ಅತ್ತಿಗೇನ ಪ್ಲೇನ್‌ನಲ್ಲಿ ಕಳಿಸ್ತಿದಾನಂತೆ"

"ಏನು? ದೀಪಾ ಬರ್ತಿದಾಳಾ? ಅವರಮ್ಮ ಫೋನು ಮಾಡಿದ್ರು ಅಂತ ಕಾಣುತ್ತೆ. ಮಗಳ ಕರುಳು ಚುರುಕ್ ಅಂದಿರುತ್ತೆ.... ಈಗ ಹುಶಾರಾಗಿದಾರಲ್ಲ. ಇನ್ನೊಂದೆರಡು ತಿಂಗಳು ತಡೆದುಕೊಂಡಿದ್ರೆ ಆಗ್ತಿರಲಿಲ್ವಾ?"

"ಅದೆಲ್ಲಾ ನಂಗೊತ್ತಿಲ್ಲ. ಭಾನುವಾರ ಅತ್ತಿಗೆ ಬರ್ತಿದಾರೆ. ಅಂದು ನಾನು ಏರ್‌ಪೋರ್ಟ್‌ಗೆ ಹೋಗ್ಬೇಕು.... ಜ್ಞಾಪಿಸು"

"ಅದಕ್ಕೇ ನಿನಗೇ ಫೋನು ಮಾಡಿದಾನೆ.... ನನ್ನ ಹತ್ರ ಮಾತಾಡುಕ್ಕೆ ಹಿಂಜರಿಕೆ"

"ನಿನಗ್ಯಾಕಮ್ಮ ಬೇಸರ? ಅದು ಅವರಿಬ್ಬರಿಗೆ ಸಂಬಂಧಿಸಿದ ವಿಷಯ.... ಅವರು ತಮ್ಮ ಅಪ್ಪನ್ನ ನೋಡೋಕೆ ಬಂದ್ರೆ ಅದರಲ್ಲಿ ತಪ್ಪೇನಿದೆ?"

"ಇಲ್ಲ. ಯಾವುದ್ರಲ್ಲೂ ತಪ್ಪೇನಿಲ್ಲ. ನಾನು ಹೇಳೋದ್ರಲ್ಲೇ ತಪ್ಪಿದೆ. ಆತ ಆರೋಗ್ಯ ವಾಗಿಯೇ ಇದಾರಲ್ಲ. ಇವಳ್ಯಾಕೆ ಬರ್ಬೇಕು ಅಂತ.... ಅಲ್ಲಿ ದಿನೇಶ ಒಂಟಿಯಾಗ್ತಾ ನಲ್ಲ....."

"ಅದು ಅವನ ಹಣೇಬರಹ....." ನಕ್ಕ.

"ನೀನು ನಗ್ಬೇಡ. ಆಗ... ಎಲ್ರೂ ಸೇರಿ ನಾಟಕ ಆಡಿ ದೀಪನ್ನ ಡೆಲ್ಲಿಗೆ ಹೊರಡಿಸಿದ್ರಿ, ಆಗ ಅವಳಿಗೆ ಹೊಸದರಲ್ಲಿ ಗಂಡನ್ನ ಬಿಟ್ಟಿರುಕ್ಕೆ ಆಗ್ಲಿಲ್ಲ. ಈಗ ಮೂರು ತಿಂಗಳಿಗೇ ಗಂಡ ಹಳಬನಾಗಿಬಿಟ್ಟ.... ಅಲ್ಲಿ ಅವನಿಗೆ ಫಜೀತಿ ಆಗುತ್ತೆ ಅಂತ ಅವಳು ಯೋಚಿಸ್ಬೇಡ್ವಾ?"

"ಇದನ್ನೆಲ್ಲ ನನ್ನ ಹತ್ರ ಯಾಕೆ ಹೇಳ್ತಿದೀಯ? ಬೇಕಾದ್ರೆ ನೀನೇ ಅವನ ಹತ್ರ ಎಲ್ಲವನ್ನೂ ಮಾತಾಡು"

"ನಾನು ಆಡಲ್ಲಪ್ಪಾ.... ನನಗೆ ತಿಳಿಯದಿರಲಿ ಅಂತ ನಿನಗೇ ಹೇಳಿದಾನೆ. ಏನಾದ್ರೂ ಮಾಡ್ಕೊಳ್ಳಿ...." ವನಜಮ್ಮ ತನ್ನ ಮುನಿಸನ್ನು ಪಾತ್ರೆಗಳ ಮೇಲೆ ತೋರಿದಳು. ಮಹೇಶ ಮನದಲ್ಲೇ ನಕ್ಕ. ವನಜಮ್ಮ ತನ್ನಲ್ಲೇ ಏನೋ ಗೊಣಗುತ್ತಿದ್ದಳು. ಅಷ್ಟರಲ್ಲಿ ಫೋನು ರಿಂಗಾಗಿತ್ತು. ಮಹೇಶನೇ ಎತ್ತಿದ.

"ನಾನು ಶಕುಂತಲ.... ವನಜಮ್ಮ ಇದಾರಾ?"

"ಹೂಂ. ಇದಾರೆ. ಕರೀತೀನಿ.... ಅಮ್ಮಾ ನಿಂಗೆ ಫೋನು...." ವನಜಮ್ಮ ಸಿಡಿಮಿಡಿಗುಟ್ಟುತ್ತಾ ಬಂದು ರಿಸೀವರ್ ಎತ್ತಿದಳು. ಹತ್ತು ನಿಮಿಷ ಮಾತನಾಡಿದರು. ವನಜಮ್ಮ ಸ್ವಲ್ಪ ಸಮಾಧಾನಗೊಂಡಂತಿತ್ತು. ರಿಸೀವರನ್ನಿಟ್ಟು ಮಗನ ಕಡೆಗೆ ತಿರುಗಿದಳು.

"ಮಗಳು ಬರ್ತಾ ಇರೋ ವಿಷಯಾನ ಆಕೆ ಹೇಳಲೇ ಇಲ್ಲ.... ನಮ್ಮಿಂದಲೇ ಮುಚ್ಚಿಡ್ತಾ ಇದಾರೆ. ಅದಕ್ಕೇ ನಾನೂ ಹೇಳಲಿಲ್ಲ"

"ಅವರಿಗೆ ಗೊತ್ತಿಲ್ಲ ಅಂತ ಕಾಣುತ್ತೆ. ಗೊತ್ತಿದ್ದಿದ್ರೆ ಹೇಳ್ದೇ ಇರ್ತಿದ್ರಾ?"

"ಹಾಗಾದ್ರೆ ದೀಪ ಈಗ ಯಾಕೆ ಬರ್ತಿದಾಳೆ? ಅವಳ ಅಪ್ಪಂಗೆ ಹುಶಾರಿಲ್ಲದ ವಿಷಯವನ್ನು ಯಾರು ತಿಳಿಸಿರಬಹುದು.... ಹ್ಞಾಂ ಈಗ ಗೊತ್ತಾಯ್ತು. ಇದು ಸುಜಯಂದೇ ಕೆಲಸ. ಅವಳೇ ಈ ಕಿತಾಪತಿ ಮಾಡಿರೋದು...."

"ಸುಜಯಾನಾ? ಅವಳೇಕೆ ಈ ಕೆಲಸ ಮಾಡ್ತಾಳೆ? ಅಲ್ಲದೇ ಅವಳು ಇಲ್ಲಿ ಇಲ್ಲವಲ್ಲ"

"ಕಿತಾಪತಿ ಮಾಡೋರು ಎಲ್ಲಿದ್ರೂ ಮಾಡ್ತಾರೆ. ಅಲ್ಲಿಯೂ ಫೋನು ಇದೆಯಲ್ಲ"

"ಅವಳ ಮೇಲೆ ಹೀಗೆಲ್ಲಾ ಆರೋಪ ಹೊರಿಸಬೇಡ.... ಅವಳು ಅಂಥವಳಲ್ಲ"

"ಅವಳು ಎಂಥೋಳು ಅಂತ ನೀನು ನನಗೆ ಹೇಳಬೇಕಾಗಿಲ್ಲ. ಚೆನ್ನಾಗಿ ಬೆಳ್ಳಗೆ, ತೆಳ್ಳಗೆ ಸುಂದರವಾಗಿದ್ದ ಮಾತ್ರಕ್ಕೆ ಬುದ್ಧಿಯೂ ಚೆನ್ನಾಗಿರಬೇಕು ಅಂತೇನಿಲ್ಲ. ದೀಪಾ, ದಿನೇಶ ಹಾಯಾಗಿರುವುದು ಅವಳಿಗೆ ಸಹಿಸಿಲ್ಲ....."

"ಅಮ್ಮಾ ಪ್ಲೀಸ್.... ಎಲ್ಲಾ ಬಿಟ್ಟು ನಿನಗ್ಯಾಕೆ ಅವಳ ಮೇಲೆ ಅಂಥಾ ಕೋಪ...? ಅವಳು ಖಂಡಿತಾ ಇಂತಹ ಕೆಲಸ ಮಾಡಿರುಲ್ಲ. ನಾನು ಪ್ರಮಾಣ ಮಾಡಿ ಹೇಳ್ತೀನಿ"

"ಸರಿಯಪ್ಪಾ.... ನಾನೇ ಕೆಟ್ಟೋಳು. ಅವಳು ಅಪರಂಜಿ... ಎಲ್ಲೋ ಆಶ್ರಮದಲ್ಲಿ ಇದ್ದ ಮಾತ್ರಕ್ಕೆ ಅವಳು ಒಳ್ಳೆಯವಳು ಆಗೋಲ್ಲ. ನಿನಗ್ಯಾಕೋ ಅವಳ ಮೇಲಿನ ವ್ಯಾಮೋಹ ದಿನ ದಿನಕ್ಕೂ ಜಾಸ್ತಿ ಆಗ್ತಿದೆ.... ನಂಗೊತ್ತು...."

"ನೀನು ಏನು ಬೇಕಾದ್ರೂ ಅಂದ್ಕೋ...." ಮಹೇಶ ಟಿ.ವಿಯ ವಾಲ್ಯೂಮ್ ಜಾಸ್ತಿ ಮಾಡಿದ. ಅತ್ತಿಗೆ ಬರುತ್ತಿರುವ ವಿಷಯವನ್ನು ಸುಜಯಳಿಗೆ ತಿಳಿಸಲೇಬೇಕು. ಒಂದು ವೇಳೆ ಕಾರಣ ಅವಳಿಗೆ ತಿಳಿದಿದ್ದರೂ ತಿಳಿದಿರಬಹುದು ಎಂದುಕೊಂಡು ಫೋನು ಮಾಡಲು ಹೊರಟವನು ಕೂಡಲೇ ಮನಸ್ಸು ಬದಲಾಯಿಸಿದ. ನಾಳೆ ಈ ನೆವ ಮಾಡಿಕೊಂಡು ಆಶ್ರಮಕ್ಕೇ ಹೋಗಿ ಭೇಟಿಯಾದರೇ... ಎಂದುಕೊಂಡ.

ಅದೇ ಸರಿ ಎನಿಸಿತ್ತು. ಟಿ.ವಿಯನ್ನು ಆರಿಸಿ ಮಲಗಲು ಬಂದ. "ಗುಡ್ ನೈಟ್ ಸುಜೀ..." ಎಂದು ಹೇಳಿ ಫೋಟೋಕ್ಕೆ ಮುತ್ತಿಟ್ಟ..ಹಾಯಾಗಿ ಮಲಗಿ ನಿದ್ರಿಸಿದ.

* * *

ಆಶ್ರಮದ ಗೇಟಿನ ಬಳಿ ನಿಂತಿದ್ದ ಸೆಕ್ಯೂರಿಟಿಯವನು ಮಹೇಶನನ್ನು ಕಂಡು, "ಸಲಾಂ ಸಾಬ್" ಎಂದು ಸೆಲ್ಯೂಟ್ ಮಾಡಿ ಸ್ವಾಗತಿಸಿದ. ಮಹೇಶ ಆಶ್ಚರ್ಯದಿಂದ ಕಣ್ಣರಳಿಸಿದ. ಒಂದೇ ಸಲ ತಾನಿಲ್ಲಿಗೆ ಬಂದಿದ್ದು. ಇವನು ನನ್ನ ಪರಿಚಯ ಇಟ್ಟು ಕೊಂಡಿದ್ದಾನೆ ಎಂದು ಬೆರಗಾಗಿದ್ದ.

"ನೀವು ಗೆಸ್ಟ್ ರೂಂನಲ್ಲಿ ಕೂತಿರಿ. ಮೇಡಂ ಬರ್ತಾರೆ" ಮಹೇಶ ಸುಜಯಳಿಗಾಗಿ ಕಾಯುತ್ತಾ ನಿಂತ. ಕೆಲವೇ ನಿಮಿಷಗಳಲ್ಲಿ ಸುಜಯ ಅಲ್ಲಿಗೆ ಬಂದಳು. ಅವಳ ಮುಖ ಕಳಾಹೀನವಾಗಿರುವುದನ್ನು ಗಮನಿಸಿದ. ಮನಸ್ಸು ಕುಗ್ಗಿತು.

"ಯಾಕೆ ಒಂಥರಾ ಇದೀರಲ್ಲ ಸುಜಯಾ.... ಹುಶಾರಾಗಿದ್ದೀರಿ ತಾನೇ..."

"ಹ್ಞೂಂ ಹುಶಾರಾಗಿದೀನಿ. ನಿನ್ನೆ ರಾತ್ರಿ ಸ್ವಲ್ಪ ನಿದ್ದೆ ಸಾಲದು...." ನಗಲು ಯತ್ನಿಸಿದಳು.

"ನಾನು ನಿಮಗೆ ರಾತ್ರಿ ಗುಡ್ ನೈಟ್ ಹೇಳಿದ್ನಲ್ಲ...." ಅವನೂ ನಕ್ಕ.

"ಅದಕ್ಕೇ ನಂಗೆ ನಿದ್ದೆ ಬರ್ಲಿಲ್ಲ.... ಬರೀ ಕನಸುಗಳು."

"ಕನಸ್ನಲ್ಲಿ ನಾನು ಬಂದಿದ್ನಾ? ನೀವಂತೂ ಒಂದು ದಿನವೂ ನನ್ನ ಕನಸ್ನಲ್ಲಿ ಬಂದಿಲ್ಲ. ನಿಮಗೆ ನನ್ನ ನೆನಪೇ ಇರೋಲ್ಲ"

"ನಾನು ನೆನೆಸಿಕೊಳ್ಳದಿದ್ರೂ ನೀವು ಬರ್ತೀರಲ್ಲ. ಇನ್ನು ನೀವು ನನ್ನ ಕನಸ್ನಲ್ಲಿ ತಾನೆ ಯಾಕೆ ಬರ್ಬೇಕು?" ಅವಳೂ ಸವಾಲೆಸೆದಳು.

"ಇದು ಜಾಣತನದ ಮಾತು. ಇಲ್ಲಿಗೆ ನಾನೀಗ ಯಾಕೆ ಬಂದಿದೀನಿ ಗೊತ್ತಾ?"

"ನಾನು ಅಷ್ಟು ಜಾಣೆ ಅಲ್ಲ.... ನೀವೇ ಹೇಳ್ಬಿಡಿ...."

"ನಾಡಿದ್ದು ಅತ್ತಿಗೆ ಬರ್ತಿದಾರೆ.... ಆ ವಿಷಯ ನಿಮಗೆ ಗೊತ್ತಿತ್ತಾ?"

"ಹೌದಾ? ದೀಪಾ ಬರ್ತಿದಾಳಾ? ನಂಗೆ ಗೊತ್ತಿರಲಿಲ್ಲ. ಈಗ ಯಾಕೆ? ಅಪ್ಪನ್ನ ನೋಡೋಕೆ ಬರ್ತಿದಾಳೇನೋ?"

"ಅವರಿಗೆ ಹುಶಾರಿರಲಿಲ್ಲ ಅಂತ ಅತ್ತಿಗೆಗೆ ಹೇಗೆ ಗೊತ್ತಾಯಿತು? ತಿಳಿಸ್ದೋರು ಯಾರು?"

"ನಂಗೊತ್ತಿಲ್ಲ. ಅವಳಿಗೆ ಕನಸು ಬಿದ್ದಿರಬೇಕು"

"ಬಿದ್ದ ಕನಸೆಲ್ಲಾ ನಿಜವಾಗಿರೋಲ್ಲ..... ಯಾರೇ ಹೇಳಿದ್ರೂ, ಅವರು ಮಾಡಿದ್ದು ಸರಿಯಲ್ಲ. ಈಗ ಅವರು ಹುಶಾರಾಗಿದಾರಲ್ಲ. ಯಾಕೆ ತಿಳಿಸ್ಬೇಕಾಗಿತ್ತು?"

"ನಾನೇನು ಹೇಳ್ಲಿ..... ಅವಳು ಬಂದ್ಮೇಲೆ ಅವಳನ್ನೇ ಕೇಳಿದ್ರಾಯ್ತು.... ನಾನೂ ಏರ್‌ಪೋರ್ಟ್‌ಗೆ ಬರ್ತೀನಿ"

"ನೀವು.... ಬರ್ತೀರಾ?"

"ಯಾಕೆ? ಅವಳನ್ನು ಕಳಿಸಿಕೊಡುವಾಗ ಬಂದಿದ್ದೆ. ಈಗ ರಿಸೀವ್ ಮಾಡ್ತೀನಿ. ಗಂಡನ ಮನೆಗೆ ಹೋದ್ಮೇಲೆ ಅಲ್ಲಿಂದ ಮೊದಲ ಬಾರಿಗೆ ಇಲ್ಲಿಗೆ ಬರ್ತಿದಾಳೆ.... ಅತ್ತೆ ಮಾವ ಬರುವಂತೆ ಕಾಣ್ಲಿಲ್ಲ....."

"ಅತ್ಗೆ ಬರ್ತಾ ಇರೋ ವಿಷಯ ಅವರಿಗೆ ಗೊತ್ತಿದೆಯೋ ಇಲ್ಲವೋ ಅಂತ ಅನುಮಾನ.... ಅತ್ಗೆ ತಾಯಿ ಫೋನು ಮಾಡಿದ್ರು. ಆದರೆ ಆ ವಿಷಯವನ್ನು ಹೇಳ್ಲೇ ಇಲ್ಲವಂತೆ"

"ಸರಿ ಬಿಡಿ. ಸರ್ಪ್ರೈಸ್ ಆಗಿಯೇ ಇರಲಿ. ದೀಪ ಬೇಕೂಂತ ತಿಳಿಸಿಲ್ಲದೇ ಇರಬಹುದು.... ನಾನು ನಾಳೆ ಮಧ್ಯಾಹ್ನ ನಮ್ಮ ಮನೆಗೆ ಹೋಗ್ತೀನಿ... ನಾಡಿದ್ದು ಬೆಳಿಗ್ಗೆ ಸೀದಾ ಏರ್‌ಪೋರ್ಟ್‌ಗೆ ಬರ್ತೀನಿ....."

"ನಾನು ಬೆಳಿಗ್ಗೆ ಪಿಕ್ ಮಾಡ್ಲಾ ನಿಮ್ಮನ್ನ!"

"ಬೇಡ. ಅಮ್ಮ ಸುಮ್ಮನೇ ಕ್ವೆಶ್ಚನ್ ಮಾಡ್ತಾಳೆ.... ಅದಕ್ಕೆಲ್ಲ ಆಸ್ಪದ ಕೊಡೋದೇ ಬೇಡ.... ಬನ್ನಿ ಕಾಫಿ ಕುಡಿಯೋರಂತೆ.... ಕಾಫಿ ರೆಡಿಯಾಗಿರುತ್ತೆ"

"ನಿಮಗೆ ಇಲ್ಲಿನ ವಾತಾವರಣ ಅಡ್ಜಸ್ಟ್ ಆಯ್ತಾ ಸುಜಯಾ...?"

"ನಿಧಾನವಾಗಿ ಅಡ್ಜಸ್ಟ್ ಆಗ್ತಿದೆ... ಆದರೆ..." ಅವಳು ತನ್ನ ಮಾತನ್ನು ಅಷ್ಟಕ್ಕೆ ನಿಲ್ಲಿಸಿದಳು. ಇಬ್ಬರೂ ಡೈನಿಂಗ್ ಹಾಲ್‌ಗೆ ಬಂದು ಕಾಫಿ ಕುಡಿದರು.

"ನೀವು ಮಾತನ್ನು ಪೂರೈಸಲಿಲ್ಲ. ಏನೋ ವಿಷಯ ಇದೆ. ಅದೇನೂಂತ ನಂಗೆ ಹೇಳೋದಾದ್ರೆ ಹೇಳಿ. ನಾನು ನಿಮ್ಮ ಹಿತೈಷಿ"

"ಹೌದು ಮಹೇಶ್. ಈಗ ಅದೇ ದೊಡ್ಡ ಪ್ರಾಬ್ಲಂ.... ನೀವು ಹಿತೈಷಿಯಾಗಿಲ್ಲದಿದ್ರೆ, ನಿಮ್ಮನ್ನು ಮರೆಯೋದು ಸುಲಭ ಆಗ್ತಿತ್ತು" ಎಂದು ತನ್ನಲ್ಲೇ ಅಂದುಕೊಂಡಳು.

"ನೀವು ನನ್ನ ಮಾತಿಗೆ ಉತ್ತರ ಕೊಡಲಿಲ್ಲ" ಮತ್ತೆ ಹೇಳಿದ.

"ನೀವು ಇಲ್ಲೇ ಕೂತಿರಿ. ನಾನು ಈಗ ಬಂದೆ" ಎಂದು ಹೇಳಿ ತನ್ನ ರೂಮಿಗೆ ಹೋದಳು. ವಾಪಸ್ಸು ಬರುವಾಗ ಅವಳ ಕೈಲಿ ಒಂದು ಡೈರಿ ಇತ್ತು.

"ಇದರಲ್ಲಿ, ನಾನು ಇಲ್ಲಿಗೆ ಬಂದ ಮೇಲೆ ಆಗಾಗ ಬೀಳುವ ಕನಸುಗಳ ಬಗ್ಗೆ ಬರೆಧಿದೀನಿ. ಇದನ್ನು ಆ ಡಾಕ್ಟರಿಗೆ ತೋರಿಸಿ. ಇದರ ಅರ್ಥ ಏನು ಅಂತ ಕೇಳಿ ತಿಳ್ಕೊಂಡು ಹೇಳ್ತೀರಾ?"

"ಕನಸುಗಳಾ! ಎಂಥಾದ್ದು?"

"ಮರೆತು ಹೋಗುತ್ತೆ ಅಂತ ಜ್ಞಾಪಕ ಇದ್ದಷ್ಟನ್ನೂ ಬರೆದಿಟ್ಟಿದೀನಿ... ಬೇಕಾದ್ರೆ ನೀವೂ ಓದಿ...." ಅವನು ಡೈರಿಯ ಪುಟಗಳನ್ನು ತಿರುವಿದ.

"ಕನಸು ಬಿದ್ದ ಮೇಲೆ ಭಯ ಆಗುತ್ತಾ ಸುಜಯಾ?"

"ಭಯ ಏನೂ ಆಗುಲ್ಲ. ಆದರೆ ನಿದ್ದೆ ಹೊರಟು ಹೋಗುತ್ತೆ. ಬೆಳಗಿನ ತನಕ

ಹೊರಳಾಡ್ತಾ ಇರ್ತೀನಿ...."

"ಈಗ್ಲೇ ಈ ಸ್ಥಳವನ್ನು ಬಿಟ್ಟು ಹೊರಡಿ.... ಕನಸುಗಳೂ ಬೇಡ. ನಿದ್ದೆ ಹಾಳಾಗುವುದೂ ಬೇಡ. ಹೀಗೇ ಇದ್ದರೆ ನಿಮ್ಮ ಆರೋಗ್ಯ ಕೆಟ್ಟು ಹೋಗುತ್ತೆ ಅಷ್ಟೇ. ಈಗ್ಲೇ ಹೊರಡಿ"

"ನನ್ನ ಆರೋಗ್ಯ ಕೆಡುತ್ತೆ ಅನ್ನೋ ಚಿಂತೆ ನನಗಿಲ್ಲ ಮಹೇಶ್. ಅದೇನು ಆಗುತ್ತೋ ಆಗಲಿ. ಇಲ್ಲಿ ಎಲ್ಲಾ ಅನುಕೂಲಗಳಿವೆ. ಎಲ್ರೂ ಚೆನ್ನಾಗಿ ನೋಡ್ಕೋತಾರೆ. ನೋಡೋಣ, ಎಷ್ಟು ದಿನ ನಡೆಯುತ್ತೋ ನಡೆಯಲಿ"

"ನಿಮ್ಮ ನಿರಾಶಾವಾದ ನನಗೆ ಸರಿ ಹೋಗುಲ್ಲ ಸುಜಯಾ. ಎನಿವೇ ಎಲ್ಲಾ ಸರಿಯಾಗಿರಲಿ ಅಂತ ಹಾರೈಸ್ತೀನಿ. ನೀವು ಆದಷ್ಟು ಬೇಗ ಈ ಪರಿಸರದಿಂದ ಹೊರಬರುವಂತಾಗಲಿ ಎಂಬುದು ನನ್ನ ಆಶಯ. ನಾನು ನಿಮಗೋಸ್ಕರ ಕಾಯ್ತಾ ಇದೀನಿ"

ಸುಜಯ ಸುಮ್ಮನೇ ಅವನನ್ನು ನೋಡಿದಳು. ಅವನು ನಕ್ಕು ಅವಳ ಕೈಗಳನ್ನು ಒತ್ತಿ "ಓ.ಕೆ. ಹೀಗೆ ಮಂಕಾಗಬೇಡಿ. ಒಂದಲ್ಲ ಒಂದು ದಾರಿ ನಮಗಿದೆ. ನಾಡಿದ್ದು ಬೆಳಿಗ್ಗೆ ಏರ್‌ಪೋರ್ಟ್‌ನಲ್ಲಿ ಮೀಟ್ ಮಾಡೋಣ.... ಚೀರಪ್...." ಸುಜಯಾ ತಲೆಯಾಡಿಸಿ ಅವನನ್ನು ಬೀಳ್ಕೊಟ್ಟಳು.

ಅವನ ಕಾರು ಅತ್ತ ಹೋಯಿತು. ಸುಜಯಾ ಅಲ್ಲೇ ಕಲ್ಲು ಬೆಂಚಿನ ಮೇಲೆ ಕುಳಿತಿದ್ದಳು. ಮತ್ತೊಂದು ಕಾರು ಒಳಕ್ಕೆ ಬಂತು. ಲೀಲಾ ಹಾಗೂ ವಿವೇಕ ಇಳಿದರು. ಸುಜಯ ಎದ್ದು ನಿಂತಳು. ಅವರಿಬ್ಬರೂ ಒಳಗಿನ ರೂಮಿಗೆ ಹೋದರು. ಕೆಲವೇ ಕ್ಷಣಗಳಲ್ಲಿ ಅವಳಿಗೆ ಹೇಳಿ ಕಳಿಸಿದ್ದರು.... ಸುಜಯ ಒಳಗೆ ಬಂದಳು.

"ಕೂತ್ಕೊಳ್ಳಿ ಸುಜಯಾ.... ಯಾಕೆ ಒಂಥರಾ ಇದೀರಲ್ಲ... ಹುಶಾರಿಲ್ವಾ? ನಿಮ್ಮ ಪೇರೆಂಟ್ಸ್ ಹೇಗಿದಾರೆ?" ಲೀಲಾ ಪ್ರಶ್ನಿಸಿದಾಗ ಸುಜಯ ಮೆಲುನಗೆ ನಕ್ಕಳು. ವಿವೇಕ ಅವಳನ್ನೇ ನೋಡುತ್ತಿದ್ದ.

"ಏನೂ ಇಲ್ಲ.... ನನ್ನನ್ನು ಮೀಟ್ ಮಾಡೋಕೆ ನನ್ನ ಫ್ರೆಂಡ್ ಒಬ್ಬರು ಬಂದಿದ್ರು... ಅವರು ಈಗ್ತಾನೇ ಹೋದ್ರು... ಅದೇ ವಿಷಯ ಯೋಚಿಸ್ತಾ ಕೂತಿದ್ದೆ...."

"ಇದೇ ಮೊದಲ ಬಾರೀನ ಬಂದಿದ್ದು...." ವಿವೇಕ ಕೇಳಿದಾಗ, ಅವಳಿಗೆ ಸರಿಹೋಗಲಿಲ್ಲ.

"ಇಲ್ಲ. ಇದಕ್ಕೆ ಮೊದಲೂ ಬಂದಿದ್ರು.... ನಾನಿನ್ನು ಹೋಗ್ಲಾ?"

"ಅವರನ್ನು ಹಾಗೇ ಕಳಿಸಿದ್ರೋ.... ಏನಾದ್ರು ಕಾಫಿ ಗೀಫೀ ಕೊಡಿಸಿದ್ರೋ...." ಲೀಲಾ ಕೇಳಿದಾಗ ಮುಜುಗರ ಹೆಚ್ಚಾಗಿತ್ತು.

"ಕಾಫಿ ಕೊಡಿಸಿದೆ ಅಷ್ಟೇ"

"ಗುಡ್.... ಅತಿಥಿ ಸತ್ಕಾರ ನಮ್ಮ ಸಂಪ್ರದಾಯ.... ಆಶ್ರಮಕ್ಕೆ ಯಾರೇ ಬರಲಿ

ಅವರಿಗೆ ಆದರ ಆತಿಥ್ಯ ಮಾಡಲೇಬೇಕು" ಸುಜಯ ನಿರಾಳವಾದಳು. ಎದ್ದು ಹೊರಟವಳನ್ನು ವಿವೇಕ ಹಿಂಬಾಲಿಸಿದ. ಲೀಲಾ ತಡೆದಳು.

"ನೀನೆಲ್ಲಿಗೆ ಎದ್ದೆ? ಪ್ರಸಾದ್ ಬಂದರೆ, ತುಂಬಾ ಮಾತನಾಡೋದಿದೆ"

"ನೀನೇ ಮಾತಾಡಕ್ಕ... ನಾನು ತಂಗಾಳೀಲಿ ಸ್ವಲ್ಪ ತಿರುಗಾಡಿ ಬರ್ತೀನಿ"

"ತಂಗಾಳಿ! ಈ ಬಿಸಿಲ್ನಲ್ಲಿ.... ಏನಾದ್ರೂ ಮಾಡ್ಕೋ...." ಲೀಲಾ ಗೊಣಗಿದ್ದು ಸುಜಯಳಿಗೆ ಕೇಳಿಸಿತ್ತು. ಈ ವಿವೇಕ ಯಾಕೆ ಹೀಗೆ ನನ್ನ ಹಿಂದೆ ಮುಂದೆ ಸುತ್ತುತ್ತಾನೆ! ಇವತ್ತು ಕೇಳಿಯೇ ಬಿಡಬೇಕೆಂದುಕೊಂಡು ಹೊರ ಬಾಗಿಲಲ್ಲಿ ನಿಂತಳು.

"ಏನಾದ್ರೂ ಬೇಕಾಗಿತ್ತಾ ಸುಜಯಾ? ನಿಂತು ಬಿಟ್ರಲ್ಲಾ......"

"ನಿಮಗೋಸ್ಕರವೇ ನಿಂತಿದ್ದು.... ನನ್ನ ಹತ್ರ ಕೇಳೋದೇನಾದ್ರೂ ಇದೆಯಾ?"

"ನಿಮಗೆ ಇಲ್ಲಿನ ವಾತಾವರಣ ಒಗ್ಗಿತಾ ಸುಜಯಾ? ಐ ಮೀನ್... ಏನೂ ತೊಂದ್ರೆ ಇಲ್ಲ ಅಂತ ಭಾವಿಸ್ತೀನಿ"

"ಇಲ್ಲ. ಯಾವ ತೊಂದ್ರೆಯೂ ಇಲ್ಲ. ಎಲ್ಲಾ ಚೆನ್ನಾಗಿದೆ. ಕಂಫರ್ಟಬಲ್ ಆಗಿದೆ.... ಏನಾದ್ರೂ ಬೇಕಾದ್ರೆ ನಾನೇ ಹೇಳ್ತೀನಿ"

"ದಟ್ಸ್ ಗುಡ್.... ನಿಮ್ಮ ನೇಚರ್ ನನಗೆ ಹಿಡಿಸ್ತು....."

"ನಿಮ್ಮ ನೇಚರ್ ನನಗೆ ಹಿಡಿಸ್ಲಿಲ್ಲ ವಿವೇಕ್.... ಆಫ್ಟರಾಲ್ ನಾನು ಇಲ್ಲಿಯ ಸ್ಕೂಲಿನ ಟೀಚರ್ರು.... ನೀವು ಆಡಳಿತ ವರ್ಗದವರು.... ನಾನು ನಿಮ್ಮೊಡನೆ ಸಲುಗೆಯಿಂದ ಇರುಕ್ಕಾಗುಲ್ಲ. ಅದು ತಪ್ಪು...." ನನಗೆ ಇದೆಲ್ಲಾ ಸರಿ ಹೋಗುಲ್ಲ.

"ನೀವು ನನ್ನನ್ನು ತಪ್ಪಾಗಿ ತಿಳಿದಿದೀರಿ.... ನಾನು ಸ್ವಲ್ಪ ಫ್ರೆಂಡ್ಲೀ ನೇಚರ್‌ನವನು. ಅಲ್ಲದೇ ಈ ಆಡಳಿತಕ್ಕೂ ನನಗೂ ಯಾವ ಸಂಬಂಧವಿಲ್ಲ.... ಇದೆಲ್ಲಾ ಸಾಕಾಗಿ ಹೋಗಿದೆ. ಸದ್ಯದಲ್ಲೇ ಫಾರಿನ್ನಿಗೂ ಹೊರಟು ಹೋಗ್ತೀನಿ.... ಏನೋ ನಿಮ್ಮ ಯೋಗಕ್ಷೇಮವನ್ನು ವಿಚಾರಿಸೋಣಾಂತ ಅನ್ನಿಸ್ತು.... ಅದು ತಪ್ಪೇನಲ್ಲ ಅಲ್ವಾ?"

"ತಪ್ಪಿಲ್ಲದಿರಬಹುದು. ಆದರೆ ಬೇರೆಯವರು ತಪ್ಪಾಗಿ ತಿಳಿದರೇ.... ನನಗೇ ಕಷ್ಟ ಅಲ್ವಾ?"

"ಅಂದ್ರೇನು? ನನ್ನ ಸ್ನೇಹ ನಿಮಗೆ ಬೇಡ. ನಾನು ಜಂಟಲ್‌ಮನ್ ಕಣ್ರೀ ಅಲಾಲ್‌ಟೋಪಿ ಅಲ್ಲ... ಪರವಾಗಿಲ್ಲ ಬಿಡಿ. ಅರ್ಥವಾಯ್ತು. ನಿಮ್ಮಂಥ ಸುಂದರವಾಗಿರುವವರಿಗೆ ಸಂಕುಚಿತ ಮನೋಭಾವ ಇರುತ್ತೆ ಅಂತ... ನಾವು ಯಾವುದೋ ಗತಕಾಲದಲ್ಲಿ ಇಲ್ಲ. ಹುಡುಗ–ಹುಡುಗೀರು ಕೈ ಕೈ ಹಿಡಿದು ಸುತ್ತಾಡ್ತಾರೆ... ನಾನು ಬರೀ ಮಾತಾಡಿಸ್ದೇ... ನನ್ನ ಮನಸ್ನಲ್ಲಿ ಯಾವ ಕೆಟ್ಟ ಭಾವನೆಗಳೂ ಇಲ್ಲ. ತಿಳೀತಾ?" ವಿವೇಕ ಸ್ವಲ್ಪ ಜೋರಾಗಿಯೇ ನುಡಿದು, ಹಾಗೇ ಹಿಂದಕ್ಕೆ ಸರಿದು, ಎಲ್ಲೋ ಮರೆಯಾದ. ಸುಜಯ ಪೆಚ್ಚಾಗಿ ತನ್ನ ಸ್ಕೂಲಿನ ಕಡೆಗೆ ನಡೆದಳು. ಎಷ್ಟೋ ಹೊತ್ತಿನ ನಂತರ ಅಟೆಂಡರ್ ಬಂದು, "ವಿವೇಕ್ ಸಾರ್ ಇಲ್ಲಿದಾರಾ ಮೇಡಂ..."

ಅವನು ಕೇಳಿದಾಗ ಅವಳು ಮುಖ ಕೆಂಪಾಗಿತ್ತು.

"ಇಲ್ಲ ಇಲ್ಯಾರೂ ಇಲ್ಲ" ಗಡುಸಾಗಿ ಹೇಳಿ ಕಳಿಸಿದಳು. ಸ್ವಲ್ಪ ಹೊತ್ತಿನ ನಂತರ ಕೆಲಸದವಳು ಬಂದಳು.

"ದೊಡ್ಡ ಮೇಡಂ ಕರೀತಿದಾರೆ. ಈಗ್ಲೇ ಬರಬೇಕಂತೆ....." ಸುಜಯ ಟೈಂ ನೋಡಿದಳು. ಸಮಯ ಆರೂವರೆಯಾಗಿತ್ತು. ನಸುಗತ್ತಲಾಗಿತ್ತು. ಅತ್ತ ನಡೆದಳು.

ಲೀಲಾ ಒಬ್ಬಳೇ ಕುಳಿತಿದ್ದಳು. ಅವಳು ಮಂಕಾಗಿದ್ದಳು. "ಸುಜಯಾ.... ವಿವೇಕ್ ನಿಮ್ಮ ಜೊತೆ ಮಾತಾಡ್ತಾ ಇದ್ದ ಅಲ್ವಾ? ಆಮೇಲೆ ಎಲ್ಲಿ ಹೋದ ಅಂತ ನಿಮಗೇನಾದ್ರೂ ಗೊತ್ತಾ?" ಸುಜಯ ಗಲಿಬಿಲಿಗೊಂಡಳು. ಮಾತು ಹೊರಡಲಿಲ್ಲ.

"ಅವನು ಇಲ್ಲಿಗೆ ಬರಲಿಲ್ಲ.... ಅಪ್ಪನ ರೂಮಿಗೆ ಹೋಗಿಲ್ಲ. ಅವನ ಮೊಬೈಲ್ ಸ್ವಿಚ್ ಆಫ್ ಆಗಿದೆ.... ಎಲ್ಲಿಗೆ ಹೋದ ಅಂತ ತಿಳೀತಿಲ್ಲ.... ನಿಮಗೇನಾದ್ರೂ ಹೇಳಿದ್ನಾ? ಅಂತ.... ಅದಕ್ಕೆ ಕೇಳ್ದೆ"

"ಇಲ್ಲ. ನನಗೇನೂ ಹೇಳ್ಲಿಲ್ಲ. ನಾನು ಸ್ಕೂಲ್ಗೆ ಹೋಗಿ ತುಂಬಾ ಹೊತ್ತಾಯ್ತು...."

"ಸರಿ ಬಿಡಿ. ಯಾಕೆ ಹೀಗೆ ಮಾಡಿದ್ನೋ.... ಎಲ್ಲಿಗೆ ಹೋದ? ಕತ್ತಲಾಗ್ತಾ ಬಂದಿದೆ. ಅಪ್ಪಂಗೆ ತಿಳಿದ್ರೆ ಗಾಬರಿಯಾಗ್ತಾರೆ. ಈಗ ಏನು ಮಾಡ್ಲೀ...."

ಸುಜಯಳಿಗೆ ಭಯವಾಗತೊಡಗಿತು. ತನ್ನ ಒರಟು ಮಾತುಗಳಿಗೆ ಬೇಸರ ಗೊಂಡು.... ಏನಾದ್ರೂ ಮಾಡಿಕೊಂಡಿದ್ದರೇ.... ತಾನು ಹಾಗೆ ಮಾತನಾಡಬಾರ ದಾಗಿತ್ತು.... ಈಗೇನಪ್ಪಾ ಗತಿ, ದೇವರೇ.... ಮನದಲ್ಲೇ ದೇವರನ್ನು ಬೇಡಿದಳು.

"ಸರಿ ಬಿಡಿ.... ಇಲ್ಲೇ ಎಲ್ಲೋ ತಿರುಗಾಡ್ತಿರಬಹುದು.... ಅವನಿಗೆ ಸ್ವಲ್ಪ ಜವಾಬ್ದಾರಿ ಕಡಿಮೆ. ಬರ್ತಾನೆ ಬಿಡಿ" ಹಾಗೆ ನುಡಿದರೂ, ಅವಳಿಗೂ ಅಧೈರ್ಯವಾಗಿತ್ತು. ಸುಜಯ ತಾವಿಬ್ಬರೂ ಮಾತಾಡುತ್ತಾ ನಿಂತಿದ್ದ ಸ್ಥಳಕ್ಕೆ ಬಂದು ಅಲ್ಲಿದ್ದ ಕಲ್ಲು ಬೆಂಚಿನ ಮೇಲೆ ಕುಳಿತಿದ್ದಳು. ಅವನು ಇಲ್ಲೇ ಎಲ್ಲಾದ್ರೂ ಕುಳಿತಿರಬಹುದು ಎಂಬ ಅನುಮಾನ ವಿತ್ತು. ಕತ್ತಲು ಆವರಿಸುತ್ತಿತ್ತು. ಪರ ಪರ ಎಲೆಗಳ ಸದ್ದಾಯಿತು. ಬೆಚ್ಚಿ ಎದ್ದು ನಿಂತಳು. ಕತ್ತಲ ನಡುವೆ ಒಂದು ಆಕೃತಿ ಮುಂದೆ ಬರುತ್ತಿರುವಂತೆ ಅನ್ನಿಸಿ. ಹೃದಯ ಬಾಯಿಗೆ ಬಂದಂತಾಯಿತು. ಉಸಿರು ನಿಂತಂತಾಗಿತ್ತು. ಆಕೃತಿ ಮುಂದೆ ಮುಂದೆ ಬಂದು ಅವಳ ಕಡೆ ನೋಡದೇ ಮುಂದುವರೆಯಿತು... ವಿವೇಕ! ಅವಳಿಗೆ ಉಸಿರಾಡುವಂತಾಗಿತ್ತು... "ವಿವೇಕ್!" ಮೆಲ್ಲನೆ ಕರೆದಳು.

"ಆಂ.... ಯಾರು?" ವಿವೇಕ ಹತ್ತಿರಕ್ಕೆ ಬಂದ.

"ಓ... ಸುಜಯಾ.... ನೀವಿನ್ನೂ ಇಲ್ಲೇ ಇದೀರಾ?"

"ನೀವು ಎಲ್ಲಿ ಹೋಗಿದ್ರಿ? ನಿಮ್ಮನ್ನೇ ಎಲ್ಲಾ ಹುಡುಕ್ತಿದಾರೆ.... ಎಲ್ರೂ ಗಾಬರಿ ಯಾಗಿದಾರೆ...."

"ಓ..ಕೇ.... ಅಕ್ಕಾ ಎಲ್ಲಿ?"

"ಆಫೀಸು ರೂಂನಲ್ಲೇ ಇದಾರೆ. ನಿಮ್ಮ ಮೊಬೈಲ್ ಸ್ವಿಚ್ ಆಫ್ ಆಗಿದೆಯಾ?"

"ಹೂಂ. ಸ್ವಿಚ್ ಆಫ್ ಮಾಡಿ ಮರದ ಕೆಳಗೆ ಮಲಗಿದ್ದೆ. ಚೆನ್ನಾಗಿ ನಿದ್ದೆ ಬಂದು ಬಿಡ್ತು....." ಎನ್ನುತ್ತಾ ಅಲ್ಲಿ ನಿಲ್ಲದೇ ಆಫೀಸಿನ ಕಡೆಗೆ ನಡೆದ. ಸುಜಯಳೂ ಅವನನ್ನು ಹಿಂಬಾಲಿಸಿದಳು.

"ವೆರಿ ಸಾರಿ ಸಿಸ್ಟರ್....." ಲೀಲಾ ಮುಂದೆ ಬಂದು ಅವನ ಕೆನ್ನೆಗೆ ಬಾರಿಸಿದಳು.

"ಚಿಕ್ಕಮ್ಮ ಹೇಳೋದು ಸರಿ. ನೀನು ಅವಿವೇಕಿ... ಎಲ್ಲಿ ಹೋಗಿದ್ದೆ? ಜವಾಬ್ದಾರಿ ಬೇಡ್ವಾ ನಿಂಗೆ?" ಸುಜಯ ಹೊರಗೆ ಮರೆಯಲ್ಲೇ ನಿಂತಿದ್ದಳು. ಯಾಕೋ ಇದೆಲ್ಲ ಅತಿಯಾಯ್ತು ಎನಿಸಿತ್ತು. ತನಗಿಂತ ಎತ್ತರ ಬೆಳೆದಿರುವ ತಮ್ಮನ ಕೆನ್ನೆಗೆ ಹೊಡೆಯುವು ದೆಂದರೆ.... ಲೀಲಾ ಕ್ರೂರಿ ಎನಿಸಿತ್ತು.

"ಸಾರಿ.... ಅಂತ ಹೇಳಿದ್ನಲ್ಲ.... ಚೆನ್ನಾಗಿ ನಿದ್ದೆ ಬಂದು ಬಿಡ್ತು...."

"ನೀನು ಎಲ್ಲಿ ಅಂದ್ರೆ ಅಲ್ಲಿ ಮಲಗಿ ನಿದ್ದೆ ಮಾಡು.... ನನ್ನ ಪ್ರಾಣವೇ ಹೋಗುತ್ತೆ ಇಲ್ಲಿ. ನಿನಗೇನಾದ್ರೂ ಆದ್ರೆ, ಅಪ್ಪಂಗೆ ನಾನು ಏನು ಹೇಳ್ಲಿ...."

"ಅಪ್ಪಂಗೆ ನಮ್ಮ ಮೇಲೆ ಮಹಾ ಪ್ರೀತಿ ಇರೋದು? ನಿನಗೂ ನನ್ನ ಮೇಲೆ ಪ್ರೀತಿ ಇಲ್ಲ.... ನನಗೆ ಇಷ್ಟ ಇಲ್ಲದಿದ್ರೂ ಇಲ್ಲಿಗೆ ಕರ್‍ಕೊಂಡು ಬಂದು, ನನ್ನನ್ನ ಹೊಡೆಯೋಕೆ ಬೈಯೋಕೆ ನಿನಗೆ ಯಾವ ಹಕ್ಕೂ ಇಲ್ಲ" ಅವನೂ ಎತ್ತರದ ಧ್ವನಿಯಲ್ಲಿ ಹೇಳಿದ.

"ಸಾರಿ ಕಣೋ ವಿವೇಕ.... ನೋವಾಯ್ತಾ? ಇನ್ನೆಂದೂ ನಾನು ಕೈ ಮಾಡುಲ್ಲ. ನನ್ನ ಸಂಕಟ ನಿನಗೆ ಹೇಗೆ ಅರ್ಥ ಆಗುತ್ತೆ? ಗಂಡನ್ನ ಬಿಟ್ಟು ಇಲ್ಲಿ ಬಂದಿದೀನಿ. ನಂಗೆ ನಿನ್ನನ್ನ ಬಿಟ್ರೆ ಬೇರೆ ಯಾರೂ ಇಲ್ಲ ಕಣೋ....." ಅವಳ ಧ್ವನಿ ಗದ್ಗದವಾಗಿತ್ತು....

"ಅದಕ್ಕೆ.... ಹೀಗೆ ಹೊಡೆಯೋದಾ? ಯಾರಾದ್ರೂ ನೋಡಿದ್ರೆ ಏನಂದುಕೊಳ್ತಾರೆ! ನಾನು ಪೆದ್ದ ಎಂದುಕೊಂಡು ನಗ್ತಾರೆ ಅಷ್ಟೇ" ಕೆನ್ನೆಯ ಮೇಲೆ ಬೆರಳುಗಳನ್ನಾಡಿಸಿದ.

"ನೀನು ಪೆದ್ದ ಅಲ್ಲ ವಿವೇಕ. ನನ್ನ ಮುದ್ದಿನ ತಮ್ಮ.... ನನ್ನ ಮುದ್ದು ಹೆಚ್ಚಾಯಿತು. ಚಿಕ್ಕಮ್ಮಂಗೆ ಹೇಳ್ಬೇಡ.... ನಡೀ ಅಪ್ಪನ್ನ ನೋಡ್ಕೊಂಡು ಹಾಗೇ ಹೊರಡೋಣ. ಹೊಟ್ಟೆ ಹಸೀತಿದಿಯಾ, ಏನಾದ್ರೂ ತಿಂತೀಯ...."

"ಸಾಕು ನಿನ್ನ ಪ್ರೀತಿ. ನಂಗೇನೂ ಬೇಡ. ಇವತ್ತು ಅಪ್ಪನ್ನ ಮಾತನಾಡಿಸುವ ಮೂಡ್ ಇಲ್ಲ. ನಾನು ಇಲ್ಲೇ ಇರ್ತೀನಿ. ನೀನು ಹೋಗಿ ಬಾ... ಅಲ್ಲಿ ಹೊರಗೆ ಸುಜಯ ಇರ್ತಾಳೆ. ನಂಗೆ ನಾಚ್ಕೆ ಆಗುತ್ತೆ"

"ಸುಜಯ ಇನ್ನೂ ಇಲ್ಲೇ ಇದಾಳಾ! ಅವಳೇನು ಮಾಡ್ತಿದ್ದಾಳೆ?" ಲೀಲಾ ಇಣುಕಿದಳು. ಸುಜಯ ಕಾಣಲಿಲ್ಲ. ಸುಜಯನೂ ಇಲ್ಲ ವಿಜಯನೂ ಇಲ್ಲ.... ಅವಳಾಗ್ಲೇ ತನ್ನ ರೂಮಿಗೆ ಹೋದ್ಲು.... ನೀನ್ಯಾಕೆ ಆ ಹುಡುಗಿಯ ಬಗ್ಗೆ ತಲೆ ಕೆಡಿಸಿ ಕೊಳ್ತೀಯ! ನೀನಿನ್ನೂ ಚಿಕ್ಕವನು.... ಚೆನ್ನಾಗಿರುವ ಹುಡುಗೀರನ್ನ ಕಂಡ ಕೂಡ್ಲೇ

ನಿನಗೆ ಪ್ರೀತಿ ಹುಟ್ಟುತ್ತೆ.... ಅವಳ ಮನಸ್ನಲ್ಲಿ ಏನಿದೆ ಅಂತ ತಿಳಿದಿದೆಯಾ ನಿಂಗೆ?"

"ಅದೆಲ್ಲಾ ಕ್ರಮೇಣ ತಿಳಿಯುತ್ತೆ. ನಾನು ಪ್ರೀತಿಸಿದೀನಿ ಅಂತ ಗೊತ್ತಾದ್ರೆ, ಅವಳೂ ಪ್ರೀತಿಸಬಹುದು ಅಲ್ವಾ? ಪ್ರೀತಿಸೋದು ತಪ್ಪಾ? ಅಪ್ಪ ನಮ್ಮ ಜೊತೆಗೆ ಎಂದೂ ಇದ್ದವರೇ ಅಲ್ಲ. ಅಮ್ಮನ ಮುಖವನ್ನು ಕಂಡಿಲ್ಲ. ಚಿಕ್ಕಮ್ಮ ಅಮ್ಮನಲ್ಲ... ನೀನೂ ಮದುವೆಯಾಗಿ ಹೊರಟು ಹೋದ್ರೆ, ನಾನು ಒಂಟಿಯಾಗಿ ಬಿಡ್ತೀನಲ್ಲ.... ಅದೇ ಭಯ...."

"ಭಯ ಅಂತೆ ಭಯ. ಧೀರನಂತೆ ಫಾರಿನ್ನಿಗೆ ಹೋಗ್ತೀನಿ ಅಂತ ಹೇಳ್ತೀಯ, ಅಲ್ಲಿ ಒಂದು ದಿನ ಇರುಕ್ಕಾಗುಲ್ಲ ನಿನ್ನ ಕೈಯಲ್ಲಿ. ಇನ್ನು ನನ್ನ ಮದುವೆ ಆಗಲಿ ಬಿಡಲಿ.... ನಾನು ನಿನ್ನ ಜೊತೆಗೇ ಇರ್ತೀನಿ. ನಮ್ಮೊಂದಿಗೇ ಇರುವ ಗಂಡನ್ನು ಮದುವೆ ಆಗ್ತೀನಿ"

"ಮಹೇಶ ನಿನ್ನನ್ನು ಒಪ್ಕೊಂಡ್ರೆ... ಅವರು ನಮ್ಮ ಜೊತೆ ಬಂದಿರುಕ್ಕೆ ಒಪ್ಕೋತಾರೆ ಅಂತ ಅನ್ನಿಸುತ್ತಾ ನಿಂಗೆ?"

"ಮಹೇಶ! ಯಾವ ಮಹೇಶ....."

"ಅದೇ ನಾನು ಅವತ್ತು ಚಿಕ್ಕಮ್ಮನ ಜೊತೆ ಅವರ ಮನೆಗೆ ಹೋಗಿದ್ದೆ ಅಂತ ಹೇಳಿದ್ನಲ್ಲ...."

"ಓ.... ಅವರಾ? ಅವರು ಎಂತಹವರು ಅಂತ ನಾನು ಹೇಗೆ ಹೇಳ್ಲಿ? ನೀನು ಅವರ ಹತ್ರ ಮಾತಾಡಿದ್ಯಾ? ಅಲ್ದೇ ಅವರು ಒಪ್ಪಿದಾರೋ ಇಲ್ಲವೋ ಗೊತ್ತಿಲ್ಲವಲ್ಲ"

"ನಾನು ನಾಳೇನೇ ಹೋಗಿ ಅವರನ್ನು ಕೇಳ್ಕೊಂಡು ಬರಲಾ?"

"ಬೇಡ. ಈಗಲೇ ಬೇಡ. ಮೊದಲು ಆಶ್ರಮದ ವಾರ್ಷಿಕೋತ್ಸವ ಸಮಾರಂಭ ಮುಗಿಯಲಿ.... ಅವರನ್ನು ಫಂಕ್ಷನ್‌ಗೆ ಇನ್ವೈಟ್ ಮಾಡೋಣ.... ಆಮೇಲೆ ನೋಡಿ

ಮಾತಾಡಿದ್ರೆ ಆಯ್ತು.... ಸರಿ ಹಾಗಾದ್ರೆ ನಾನು ಅಪ್ಪನ್ನ ಮಾತಾಡಿಸ್ಕೊಂಡು ಬರ್ತೀನಿ." ನಿಂತಿದ್ದ ಸುಜಯ ಇತ್ತ ಬಂದಳು. ಅವರಿಬ್ಬರೂ ಆಡಿದ್ದ ಮಾತುಗಳು ಸ್ಪಷ್ಟವಾಗಿ ಕೇಳಿಸಿತ್ತು. ಮನದಲ್ಲಿ ಹತ್ತಾರು ಪ್ರಶ್ನೆಗಳು ಉದ್ಭವಿಸಿದವು. ತಾನೇಕೆ ಈ ವರ್ತುಲಕ್ಕೆ ಬಂದು ಸಿಕ್ಕಿ ಬಿದ್ದೆನೋ.... ಆದಷ್ಟು ಬೇಗ ಇಲ್ಲಿಂದ ಹೊರಕ್ಕೆ ಹೋಗಬೇಕೆಂದು ಕೊಂಡಳು. ಇದಕ್ಕೆ ಉಪಾಯವನ್ನು ಮಹೇಶನೇ ಹೇಳಬೇಕು. ನನ್ನ ಮಹೇಶ, ವಿವೇಕ ಹೇಳಿದ ಮಹೇಶ, ಇಬ್ಬರೂ ಒಬ್ಬನೇನಾ ಅಂತ ಮೊದಲು ತಿಳಿದುಕೊಳ್ಳ ಬೇಕು.... ಮಹೇಶನನ್ನೇ ಕೇಳಬೇಕು. ಹೇಗೂ ಏರ್‌ಪೋರ್ಟ್‌ನಲ್ಲಿ ಸಿಗ್ತಾನಲ್ಲ ಎಂದುಕೊಂಡು, ಕತ್ತಲಿನಲ್ಲೇ ತನ್ನ ರೂಮಿನ ಕಡೆಗೆ ನಡೆದಳು. ತಾನು ಕತ್ತಲಿನಲ್ಲಿ ಮರೆಯಲ್ಲಿ ನಿಂತು ಅವರಿಬ್ಬರ ಮಾತುಗಳನ್ನು ಕೇಳಿಸಿಕೊಂಡಿದ್ದು ತಪ್ಪು.... ಈ ವಿಷಯ ಮಹೇಶನಿಗೆ ತಿಳಿದರೆ ಖಂಡಿತಾ ತನ್ನ ಬಗ್ಗೆ ಅಸಹ್ಯಗೊಳ್ಳುತ್ತಾನೆ. ಅವನಿಗೆ ತಿಳಿಸಬಾರದು ಎಂದು ತನ್ನಲ್ಲೇ ನಿಶ್ಚಯಿಸಿದಳು.

* * *

"ಈಗ ಬರ್ತಾ ಇದೀರಾ? ಯಾಕೆ ಲೇಟು?" ಸುಜಯಳನ್ನು ಕಂಡೊಡನೆ ಗದರುವ ಧ್ವನಿಯಲ್ಲಿ ಮಹೇಶ ಕೇಳಿದ.

"ನನ್ನ ಹತ್ರ ಕಾರಿಲ್ಲವಲ್ಲ.... ಬುರ್ ಅಂತ ಬಂದು ಬಿಡೋಕೆ. ಆಟೋ ಹಿಡಿದು ಬರುವುದಕ್ಕೆ ತಡವಾಗುಲ್ವಾ?" ಅವಳೂ ಕುಹಕವಾಡಿದಳು.

"ಆಟೋದಲ್ಲಿ ಬಂದ್ರಾ? ಅದಕ್ಕೇ ಹೇಳಿದ್ದು, ನಾನು ಬಂದು ನಿಮ್ಮನ್ನು ಪಿಕ್ ಮಾಡ್ತೀನಿ ಅಂತ.... ಹೋಗಲಿ ಬಿಡಿ ನೆನ್ನೆ ರಾತ್ರಿ ಚೆನ್ನಾಗಿ ನಿದ್ದೆ ಬಂದಿರಬಹುದು. ಫ್ರೆಷ್ ಆಗಿ ಕಾಣ್ತಿದೀರಿ...." ಕಣ್ಣಲ್ಲೇ ಮೆಚ್ಚುಗೆಯನ್ನು ಸೂಸಿದ.

"ಹೂಂ.... ನಮ್ಮ ಮನೆ, ನನ್ನ ರೂಮು.... ನನ್ನ ಹಾಸಿಗೆ ದಿಂಬು... ಒಂದು ಸೊಳ್ಳೆ ಕೂಡಾ ಗುಂಯ್ ಅನ್ನಲಿಲ್ಲ. ಸುಖ ನಿದ್ದೆ...." ಮಂದಹಾಸ ಚೆಲ್ಲಿತು.

"ಎಲ್ಲಾ ಗೊತ್ತಿದ್ದೂ ಅಲ್ಲೆಲ್ಲೋ ಸಫರ್ ಮಾಡ್ತೀರಲ್ಲ.... ನಿಮಗೆ ನೀವೇ ಯಾಕೆ ಶಿಕ್ಷೆ ಅನುಭವಿಸ್ತೀರಿ?"

"ಶಿಕ್ಷೆ ಅಲ್ಲ. ಪಾಠ.... ನನಗೂ ಬೇರೆ ಬೇರೆ ಅನುಭವಗಳು ಬೇಕು. ಕೂಪ ಮಂಡೂಕದ ಥರ ಒಂದೇ ಕಡೆ ಇದ್ದೂ ಇದ್ದೂ.... ಸಾಕಾಗಿತ್ತು...."

"ನಮ್ಮ ಮನೆಗೆ ಬನ್ನಿ.... ನನ್ನ ರೂಮಿನಲ್ಲಿ, ನನ್ನ ಹಾಸಿಗೆ ದಿಂಬುಗಳಲ್ಲಿ ನಿಮಗೂ ಸಮಪಾಲು ಇದೆ" ಎಂದು ಹೇಳಬೇಕೆಂದುಕೊಂಡರೂ ಹೇಳಲಾಗದೇ ಅಕ್ಕಪಕ್ಕ ನೋಡಿದ. ಎಲ್ಲರೂ ತಮ್ಮ ತಮ್ಮ ಮಾತುಕತೆಗಳಲ್ಲಿ ಮುಳುಗಿ ಹೋಗಿದ್ದರೂ.... ಇವನು ಆಡಲಾಗದೇ ಸುಮ್ಮನೇ ನಕ್ಕ. "ಬನ್ನಿ ಆ ಕಡೆ ಕೂತು ಮಾತನಾಡೋಣ" ಇಬ್ಬರೂ ಖಾಲಿಯಿದ್ದ ಕುರ್ಚಿಗಳ ಮೇಲೆ ಅಕ್ಕ ಪಕ್ಕ ಕುಳಿತರು. ಅವನು ಉಲ್ಲಾಸ

ಗೊಂಡಿದ್ದ. ಅವಳು ಮುಜುಗರಗೊಂಡಿದ್ದಳು.

"ಹಾಯ್ ಸುಜೀ.... ಇದೇನೇ ಇಲ್ಲಿ...." ಅವಳ ಗೆಳತಿಯೊಬ್ಬಳು ಹತ್ತಿರ ಬಂದು ಬೆನ್ನ ಮೇಲೆ ಕೈ ಇಟ್ಟು ಕೇಳಿದಾಗ ಸುಜಯ ಬೆಚ್ಚಿದಳು.

"ಹಾಯ್ ಪಮ್ಮೀ.... ನೀನು ಯಾವಾಗ ಬಂದೇ? ಈಗ ಎಲ್ಲಿದೀಯ?"

"ನಾನೀಗ ಮೈಸೂರಿನಲ್ಲಿದೀನಿ. ನನ್ನ ವುಡ್‌ಬೀ ಬಾಂಬೆಯಿಂದ ಬರ್ತಾ ಇದ್ದಾರೆ. ಷಾಪಿಂಗ್ ಇತ್ತು.... ಮುಂದಿನ ತಿಂಗಳು ಮದುವೆ. ನೀನು ಸಿಕ್ಕಿದ್ದು ಒಳ್ಳೇದೇ ಆಯ್ತು. ನಿನ್ನ ಅಡ್ರೆಸ್ ಕೊಡು. ಖಂಡಿತಾ ಬರ್ಬೇಕು ತಪ್ಪಿಸ್ಬಾರ್ದು. ನಿನ್ನ ಹಸ್ಬೆಂಡ್‌ನೂ ಕರ್‍ಕೊಂಡು ಬಾ" ಅವಳು ಮಹೇಶನ ಕಡೆ ನೋಡುತ್ತಾ ಚಟಪಟನೆ ನುಡಿದಾಗ ಸುಜಯ ಅವಳ ಕೈ ತಟ್ಟಿದಳು.

"ಇವರು ನನ್ನ ಹಸ್ಬೆಂಡ್ ಅಲ್ಲ. ಬರೀ ಫ್ರೆಂಡ್ ಅಷ್ಟೇ. ನಾನಿನ್ನೂ ಮದುವೆ ಮಾಡಿಕೊಂಡಿಲ್ಲ."

"ಸಾರೀ ಸುಜೀ.... ಎನಿವೇ ಬೇಗ ಮದುವೆಯಾಗ್ಲೀ ಅಂತ ವಿಷ್ ಮಾಡ್ತೀನಿ.... ನೀನು ಇವರ ಪರಿಚಯವನ್ನೇ ಮಾಡಿಕೊಡಲಿಲ್ಲ."

"ಇವರು ಮಹೇಶ್ ಅಂತ.... ನಮ್ಮ ಫ್ಯಾಮಿಲಿ ಫ್ರೆಂಡ್...."

"ಇವಳು ನನ್ನ ಕ್ಲಾಸ್‌ಮೇಟ್ ಕಾಲೇಜಿನಲ್ಲಿ" ಪರಸ್ಪರ ಪರಿಚಯ ಮಾಡಿಸಿದಳು.

"ಕೂತ್ಕೊಳ್ಳಿ" ಅವಳಿಗೆ ಸ್ಥಳವನ್ನು ಬಿಟ್ಟುಕೊಟ್ಟು ತಾನು ನಿಂತ. ಸ್ನೇಹಿತೆಯರಿಬ್ಬರೂ ಮಾತನಾಡುತ್ತಿದ್ದರು. ಮಹೇಶ ದೂರ ಸರಿದ.

ಡೆಲ್ಲಿಯಿಂದ ಬರುವ ಪ್ಲೇನ್ ಸಮಯಕ್ಕೆ ಸರಿಯಾಗಿ ಬಂದು ಇಳಿಯಿತು. ಸ್ವಲ್ಪ ಹೊತ್ತಿನಲ್ಲೇ ದೀಪ, ಪ್ರಯಾಣಿಕರ ಸಾಲಿನಲ್ಲಿ ಹೊರಬಂದಳು. ಮಹೇಶ ಅವಳಿಗೆ ಕಾಣುವಂತೆ ನಿಂತ. ದೀಪ ಅವನನ್ನು ಗುರುತಿಸಿ ಕೈಯಾಡಿಸಿದಳು. ಸುಜಯಳೂ ಅವನ ಬದಿಗೆ ಬಂದು ನಿಂತಳು.

"ಹಾಯ್ ಮಹೇಶ್! ಹಾಯ್ ಸುಜೀ.... ಇಬ್ರೂ ಒಟ್ಗೇ ಬಂದ್ಬಿಟ್ಟಿದೀರಿ...."ಅಚ್ಚರಿ ತುಳುಕಿತ್ತು ಕಣ್ಣುಗಳಲ್ಲಿ.

"ನಿನ್ನನ್ನ ನೋಡ್ಬೇಕು ಅಂತ ಅನ್ನಿಸ್ತು.... ನೀನು ಹೇಗಿದೀಯಾ!"

"ಫೈನ್.... ಮನೇಲಿ ಎಲ್ರೂ ಹೇಗಿದಾರೆ?"

"ಎಲ್ಲರ ಮನೇಲೂ ಎಲ್ರೂ ಚೆನ್ನಾಗಿದಾರೆ. ಮನೆಗೆ ಹೋಗ್ತಾ ಮಾತನಾಡೋಣ ಬನ್ನಿ. ಲಗೇಜ್ ಇಷ್ಟೇನಾ ಅತ್ಗೇ" ಮಹೇಶ ಲಗೇಜಿನ ಟ್ರಾಲಿಯನ್ನು ತಳ್ಳಿಕೊಂಡು ಮುಂದೆ ಮುಂದೆ ನಡೆದ. ಪಿಸುದನಿಯಲ್ಲಿ ಮಾತನಾಡುತ್ತಾ ಇವರಿಬ್ಬರೂ ಹಿಂದೆ ನಡೆದರು. ಕಾರನ್ನೇರಿದ ನಂತರ ಮಹೇಶ ಕೇಳಿದ.

"ಈಗ ಮೊದಲು ಎಲ್ಲಿಗೆ? ನಮ್ಮ ಮನೆಗೋ ನಿಮ್ಮ ಮನೆಗೋ?"

"ಮೊದಲು ನಿಮ್ಮ ಮನೆಗೇ ಹೋಗ್ಗೋಣ... ಅತ್ತೆ ಹೇಗಿದಾರೆ? ಆಮೇಲೆ

ನಮ್ಮ ಮನೆಗೆ ಹೋದ್ರಾಯ್ತು...." ಮಹೇಶ ಕಾರನ್ನು ಓಡಿಸಿದ.

"ನಿಮ್ಮ ತಂದೆ ತಾಯಿಗೆ ನೀವು ಬರುವ ವಿಷಯ ತಿಳಿಸಿರಲಿಲ್ವಾ ಅತ್ಗೆ ನೀವು?"

"ಇಲ್ಲ. ಸರ್ಪ್ರೈಸ್ ಇರಲಿ ಅಂತ ಸುಮ್ಮನಿದ್ದೆ...." ಸಣ್ಣಗೆ ನಕ್ಕಳು.

"ನೀನು ಹಾಗೆ ಮಾಡಬಾರದಾಗಿತ್ತು ದೀಪಾ.... ನೀನು ಬರುತ್ತಿರುವ ವಿಷಯ ನಮ್ಮಿಬ್ಬರ ಹೊರತು ಬೇರೆ ಯಾರಿಗೂ ಗೊತ್ತಿಲ್ಲ. ನನ್ನ ಅಪ್ಪ ಅಮ್ಮಂಗೂ ಹೇಳಲಿಲ್ಲ"

"ಹೌದಾ ಮಹೇಶ್.... ಅತ್ತೆಗೂ ಗೊತ್ತಿಲ್ವಾ?"

"ಅಮ್ಮಂಗೆ ಗೊತ್ತಿದೆ.... ಆದರೆ ಅವಳಿಗೂ ಅಚ್ಚರಿ.... ಇದ್ದಕ್ಕಿದ್ದ ಹಾಗೇ ನಿಮ್ಮ ತಂದೆ ತಾಯೀನ ನೋಡೋಕೆ ಬರುತ್ತಿರಬಹುದು ಅಂತ ಅಂದ್ಕೊಂಡಿದಾಳೆ...."

"ಎಲ್ರನ್ನೂ ನೋಡ್ಬೇಕು ಅಂತ ಅನ್ನಿಸಿದ್ದು ನಿಜ... ನೀನ್ಯಾಕೆ ಅತ್ತೆ ಮಾವಂಗೆ ಹೇಳ್ಲಿಲ್ಲ"

"ಹೇಳ್ಬೇಕೋ ಹೇಳ್ಬಾರ್ದೋ.... ನಂಗೇನು ಗೊತ್ತು? ಈಗ ಬೈಯಿಸಿಕೊಳ್ಳೋಳು ನಾನು ಅಷ್ಟೇ....."

"ಕಮಾನ್ ಸುಜೀ.... ನಾನು ಅತ್ತೆಗೆ ಹೇಳ್ತೀನಿ ಬಿಡು..."

"ನಾನು ಏರ್‌ಪೋರ್ಟ್‌ಗೆ ಹೋಗ್ತೀನಿ ಅಂತ ಸಹ ಹೇಳಿರ್ಲಿಲ್ಲ. ಈಗೇನೇ ಮಾಡೋದು?"

"ಅಲ್ಲಾ ಮಹೇಶ್, ಈಗ ಏನು ಮಾಡೋಣ.... ನೀವೇ ಏನಾದ್ರೂ ಉಪಾಯ ಹೇಳ್ಬೇಕು"

"ಎಲ್ರೂ ನಮ್ಮ ಮನೆಗೆ ಬನ್ನಿ. ಅಲ್ಲಿಂದ ನಿಮ್ಮ ಮನೆಗೆ ಫೋನು ಮಾಡೋಣ"

"ನಾನು ಎಲ್ಲಿಗೂ ಬರಲ್ಲ. ನನ್ನನ್ನು ಯಾವುದಾದ್ರೂ ಆಟೋ ಸ್ಟಾಪ್ ಹತ್ರ ಇಳ್ಸಿ. ನಾನು ಆಟೋದಲ್ಲಿ ಮನೆಗೆ ಹೋಗ್ತೀನಿ" ಎಂದು ಸುಜಯ ಹೇಳಿದಾಗ ಮಹೇಶ ಮತ್ತೆ ಮಾತನಾಡಲಿಲ್ಲ.

ತನ್ನ ಮನೆಗೆ ತಿರುಗುವ ಕ್ರಾಸ್ ಹತ್ತಿರ ಕಾರನ್ನು ನಿಲ್ಲಿಸಿದ. "ಇಲ್ಲಿ ಆಟೋ ಸಿಗುತ್ತೆ...." ಸುಜಯಳ ಕಡೆ ತಿರುಗಿ ಹೇಳಿದ. ಅವಳು ಇಬ್ಬರಿಗೂ ಹೇಳಿ ಇಳಿದಳು. ಅವಳು ಆಟೋ ಹಿಡಿದು ಹತ್ತಿದ ಮೇಲೆ ಮಹೇಶ ಕಾರನ್ನು ತಿರುಗಿಸಿದ.

"ಅವಳ್ಯಾಕೆ ಹಾಗೇ ಹೊರಟು ಹೋದ್ಲು.... ನಮ್ಮ ಜತೆ ಬಂದಿದ್ರೆ ಏನಾಗ್ತಿತ್ತು?"

"ಏನೋ ನಂಗೊತ್ತಿಲ್ಲ. ನೀವು ಕೇಳಬೇಕಾಗಿತ್ತು"

"ಯಾಕೆ? ನೀವಿಬ್ರೂ ಜಗಳ ಆಡಿದೀರಾ? ಬನ್ನಿ ಅಂತ ನೀವ್ಯಾಕೆ ಕರೆಯಲಿಲ್ಲ?"

"ನೀವೇ ಕರೆಯಬಹುದಾಗಿತ್ತಲ್ಲ. ನಿಮ್ಮ ಮಾತನ್ನು ಮೀರಲಾಗದೇ ಬರ್ತಾ ಇದ್ರೋ ಏನೋ?"

"ಅವಳದ್ದು ಒಂಥರಾ ಮೊಂಡು ಸ್ವಭಾವ. ಬರುಲ್ಲ ಅಂತಾದ್ರೆ ಬರೋಲ್ಲ....

ಅವಳನ್ನು ಸೃಷ್ಟಿ ಮಾಡಿದ ಬ್ರಹ್ಮನೇ ಬಂದು ಕರೆದ್ರೂ ಬರಲ್ಲ." ಮಹೇಶ ಸುಮ್ಮನೇ ನಕ್ಕ.

ಕಾರು ನಿಲ್ಲಿಸಿದ ಸದ್ದು ಕೇಳಿದರೂ ವನಜಮ್ಮ ಹೊರಕ್ಕೆ ಬಂದಿರಲಿಲ್ಲ. "ಅತ್ತೇ ಹೇಗಿದೀರಿ?" ದೀಪಳೇ ವನಜಮ್ಮನನ್ನು ಹುಡುಕಿಕೊಂಡು ಒಳಬಂದಳು. ಮನೆಯ ಒಳ ಬಾಗಿಲಲ್ಲಿ ನಿಂತಿದ್ದವಳ ಪಾದಗಳನ್ನು ಮುಟ್ಟಿ ನಮಸ್ಕರಿಸಿದಳು. ಮಹೇಶ ಲಗೇಜುಗಳನ್ನು ಒಳಗೆ ತಂದಿಟ್ಟ. ವನಜಮ್ಮನ ಮುಖದಲ್ಲಿ ಅಸಹನೆ ತುಳುಕಿತ್ತು.

"ಅಮ್ಮಾ.....ನಂಗೆ, ಅತ್ಗೆಗೆ ಬಿಸಿ ಬಿಸಿ ಕಾಫೀ...." ವನಜಮ್ಮ ಒಳಕ್ಕೆ ಹೋದಳು.

"ಅತ್ತೆ ಯಾಕೆ ಒಂಥರಾ ಇದಾರೆ? ಅಪ್ಸೆಟ್ ಆಗಿರುವಂತಿದೆ....."

"ಏನೋ ನಂಗೊತ್ತಿಲ್ಲ. ನೀವೇ ಹೋಗಿ ಕೇಳಿ...." ದೀಪಾ ಚಪ್ಪಲಿಗಳನ್ನು ಹೊರಗೆ ಬಿಟ್ಟು ಅಡುಗೆ ಮನೆಯೊಳಕ್ಕೆ ನಡೆದಳು. ಅಮ್ಮ ಎತ್ತರದ ಧ್ವನಿಯಲ್ಲಿ ಮಾತನಾಡಬಹುದು, ಅತ್ತಿಗೆ ಅಳಬಹುದು ಅಂತ ನಿರೀಕ್ಷಿಸಿದ್ದವನಿಗೆ ಆಶ್ಚರ್ಯ ಕಾದಿತ್ತು. ಅಡುಗೆ ಮನೆಯಿಂದ ಹೊರಕ್ಕೆ ಒಟ್ಟಿಗೇ ಬಂದರು. ಅಮ್ಮನ ಮುಖದಲ್ಲಿ ಸಮಾಧಾನದ ಕಳೆ! ಅತ್ತಿಗೆಯ ಮುಖದಲ್ಲಿ ತುಂಟತನದ ನಗೆ! ಇದೇನು ಇದ್ದಕ್ಕಿದ್ದ ಹಾಗೇ ಮ್ಯಾಜಿಕ್!! ಏನು ಎನ್ನುವಂತೆ ಅತ್ತಿಗೆಯ ಕಡೆ ಸಂಜ್ಞೆ ಮಾಡಿ ಕೇಳಿದ. ಏನೂ ಇಲ್ಲ ಅಂತ ಅವಳು ತಲೆಯಾಡಿಸಿ ನಕ್ಕಳು. ಆದರೆ ಅವಳ ಮುಖ ಲಜ್ಜೆಯಿಂದ ಕೆಂಪಾಗಿತ್ತು. ಅರ್ಥವಾಗದವನಂತೆ ಮಹೇಶ ಬೆಪ್ಪು ಮುಖ ಮಾಡಿದ. ಅವನ ಮೊಬೈಲ್ ಫೋನು ರಿಂಗಾಗಿತ್ತು. ಸುಜಯ ಮಾಡಿದ್ದಳು. ಹೊರಕ್ಕೆ ಬಂದು ನಿಂತು, "ಹಲೋ...." ಎಂದ.

"ನನ್ನ ಪರ್ಸು ನಿಮ್ಮ ಕಾರ್‍ನಲ್ಲೇ ಉಳಿದು ಹೋಗಿದೆ ಮಹೇಶ್. ಅದು ನಿಮ್ಮ ಹತ್ರವೇ ಇರಲಿ. ಪರ್ಸು ಕಳೆದು ಹೋಯ್ತು ಅಂತ ಅಮ್ಮಂಗೆ ಹೇಳಿದೀನಿ."

"ಸುಳ್ಳು ಹೇಳುವ ಅವಶ್ಯಕತೆ ಇತ್ತಾ ಸುಜಯಾ? ಆಮೇಲೆ ಗೊತ್ತಾದ್ರೆ?"

"ಅದಕ್ಕೇ ನಿಮಗೆ ಫೋನು ಮಾಡಿದ್ದು. ದೀಪಂಗೆ ಹೇಳಬೇಡಿ.....ನೀವು ಆಶ್ರಮದ ಕಡೆಗೆ ಬಂದಾಗ ನನಗೆ ತಲುಪಿಸಿ ಬಿಡಿ ಪ್ಲೀಸ್.... ಬರೋಕೆ ಮುಂಚೆ ಫೋನು ಮಾಡಿ"

"ಓ..ಕೇ.... ಬೇಕಾದ್ರೆ ನಾಳೇನೇ ತಂದುಕೊಡ್ತೀನಿ"

"ಪರವಾಗಿಲ್ಲ. ನಿಧಾನವಾಗಿ ತಂದ್ಕೊಡಿ. ನಾನೊಂದು ವಿಷಯ ಕೇಳ್ಲಾ?"

"ಕೇಳಿ ಅನುಮಾನವೇಕೆ?"

"ಲೀಲಾ, ವಿವೇಕ ಅನ್ನೋರು ನಿಮಗೆ ಪರಿಚಯಾನಾ?"

"ಹೂಂ ಗೊತ್ತು. ಅದೇ ನಿಮ್ಮ ಆಡಳಿತ ವರ್ಗದವರು.... ಆಶ್ರಮದ ಮಾಲೀಕರು, ಶ್ರೀಮಂತರು...."

"ಅವರ ಪರಿಚಯ ಹೇಗಾಯ್ತು? ಮೊದಲ್ನಿಂದ ಅವರು ಗೊತ್ತಾ?"

"ಇಲ್ಲ. ನಮ್ಮ ಅಮ್ಮನ ಸ್ನೇಹಿತೆ, ಲೀಲನ ಚಿಕ್ಕಮ್ಮ.....ಹಾಗೆ ಪರಿಚಯ. ಈಗ್ಯಾಕೆ ಕೇಳ್ತಾ ಇದೀರಿ?"

"ಏನಿಲ್ಲ. ಸುಮ್ನೆ ಕೇಳ್ದೆ. ಭೇಟಿಯಾದಾಗ ಮಾತನಾಡೋಣ ಓ.ಕೆ"

"ನಾನು ಡೈರಿಯ ಪುಟಗಳನ್ನು ತಿರುವಿ ಹಾಕಿದೆ. ತಲೆ ಬುಡ ಒಂದೂ ಅರ್ಥವಾಗಲಿಲ್ಲ. ಡಾಕ್ಟ್ರು ಕೇಳಿದ್ರೆ ಏನು ಹೇಳ್ಲಿ...? ನೀವೇ ಮಾತಾಡಿದ್ರೆ ಒಳ್ಳೇದು"

"ಸದ್ಯಕ್ಕೆ ಡಾಕ್ಟರ್ ಬಳಿಗೆ ಹೋಗಲು ಬಿಡುವಿಲ್ಲ. ಸ್ಕೂಲಿನ ವಾರ್ಷಿಕೋತ್ಸವ ಇದೆ. ನಿಮಗೂ ಇನ್ವಿಟೇಷನ್ ಬರುತ್ತೆ. ಮರೆಯದೇ ಖಂಡಿತಾ ಬನ್ನಿ"

"ನೀವು ಪ್ರೀತಿಯಿಂದ ಕರೆದ್ರೆ ಬರ್ದೇ ಇರ್ತೀನಾ ಮೇಡಂ?"

"ಯಾವ ಕರೆ? ಯಾರ ಪ್ರೀತಿ ಅದೆಲ್ಲಾ ನಿಮಗೆ ನಿಧಾನವಾಗಿ ಅರ್ಥವಾಗುತ್ತೆ" ಅವಳು ನಕ್ಕಂತೆ ಅನ್ನಿಸಿತ್ತು. ಲೈನ್ ಕಟ್ ಆಗಿತ್ತು. "ಹಲೋ ಹಲೋ" ಎಂದರೂ ಅತ್ತಲಿಂದ ಧ್ವನಿ ಇರಲಿಲ್ಲ. ಏನಿದು ಸುಜಯ ಒಗಟಾಗಿ ಮಾತಾಡಿದಳಲ್ಲ.... ತಲೆ ಕೊಡವಿಕೊಂಡು ಒಳಬಂದ. ಅತ್ತೆ ಸೊಸೆಯರಿಬ್ಬರೂ, ತಾಯಿ ಮಗಳಂತೆ ವಿಶ್ವಾಸ ವಾಗಿ ಮಾತನ್ನಾಡುತ್ತಿದ್ದುದನ್ನು ಕಂಡು ಹುಬ್ಬೇರಿಸಿದ.

"ಸೊಸೆ ಮನೆಗೆ ಬಂದ ಸಂಭ್ರಮದಲ್ಲಿ ಅಮ್ಮ ನನ್ನನ್ನು ಮರೆತೇ ಬಿಟ್ಟಿರುವಂತಿದೆ. ಹೊಟ್ಟೆ ತಾಳ ಹಾಕ್ತಿದೆ. ಅತ್ಗೇ ನಿಮಗೆ ಹೊಟ್ಟೆ ಹಸೀತಿಲ್ವಾ?"

"ಅವಳ ಹೊಟ್ಟೆ ತುಂಬಿದೆ. ನೀನು ಫೋನಿನಲ್ಲಿ ಮಾತಾಡ್ತಾ ನಿಂತ್ರೆ, ನಿನಗೋಸ್ಕರ ಕಾಯೋರ್ಗೆ ಬುದ್ಧಿ ಇರುಲ್ಲ ಅಷ್ಟೇ.... ನಿಂಗೂ ತಿಂಡಿ ತರ್ತೀನಿ ತಡಿ. ಕಾಫೀನ ಕೇಳ್ದೆ ಆರಿ ತಣ್ಣಗಾಗಿದೆ. ಬಿಸಿ ಕಾಫಿ ತರ್ತೀನಿ" ತಾಯಿ ಒಳಗೆ ಹೋದಳು. ಮಹೇಶ ಎದುರಿಗಿದ್ದ ಸೋಫಾದ ಮೇಲೆ ಕುಳಿತ.

"ಏನತ್ಗೆ ಅಲ್ಲಿಯ ವಿಷಯ? ಸೆಕೆ ತುಂಬಾ ಅಲ್ವಾ? ದಿನೂ ಹೇಗಿದಾನೆ! ಯಾವಾಗ ಮುಗಿಯುತ್ತೆ ಅವನ ಕಾಂಟ್ರ್ಯಾಕ್ಟ್?" ದೀಪ ಅವನ ಪ್ರಶ್ನೆಗಳಿಗೆ ಉತ್ತರಿಸಿದಳು.

"ಊಟವಾದ ಮೇಲೆ, ನನ್ನನ್ನು ತಾಯಿಯ ಮನೆಗೆ ಕರ್ಕೊಂಡು ಹೋಗಿ ಮಹೇಶ್.... ಅಪ್ಪಂಗೆ ಹುಷಾರಿರಲಿಲ್ಲವಂತೆ. ನೀವ್ಯಾರೂ ತಿಳಿಸ್ಲೇ ಇಲ್ಲ"

"ಈಗ ಹುಷಾರಾಗಿದಾರಲ್ಲ. ಅದಕ್ಕೇ ತಿಳಿಸ್ಲಿಲ್ಲ. ನೀವು ನಿಮ್ಮ ತಾಯಿಯ ಹತ್ರ ಮಾತಾಡಿದ್ರಾ? ಮಾತಾಡಿ ಅಪ್ಪ ಹೇಗಿದಾರೆ ಅಂತ ಕೇಳಿ"

"ನಾನು ಸರ್ಪ್ರೈಸ್ ಆಗಿರಲಿ ಅಂತ ಅಂದ್ಕೊಂಡೆ.... ಈಗ ಅಪ್ಪನಿಗೆ ಶಾಕ್ ಆದರೇ.... ನಾನು ತಪ್ಪು ಮಾಡಿದೆ ಅಂತ ಅನ್ನಿಸ್ತಿದೆ"

"ನಿಮ್ಮ ತಾಯಿಯ ಹತ್ರ ಮಾತಾಡಿ.... ಎಲ್ಲಾ ಹೇಳಿ ಆತಂಕವಿಲ್ಲ"

"ನಿಜ ಹೇಳಿ ಮಹೇಶ್.... ದಿಲೀಪನ್ನ ಕರೆಸ್ಬೇಕಾ? ಅವನಿಗೂ ತಿಳಿಸಿಲ್ಲ ಅಂತ ಕಾಣ್ಸುತ್ತೆ"

"ಮೊದ್ಲು ಮಾತಾಡಿ..." ಡಯಲ್ ಮಾಡಿಕೊಟ್ಟ.... ದೀಪಾ ರಿಸೀವರನ್ನೆತ್ತಿಕೊಂಡಳು. "ಹಲೋ...." ಅವಳ ಧ್ವನಿ ಕಟ್ಟಿತ್ತು. ಮಹೇಶ ತಾಯಿ ಕೊಟ್ಟ ತಿಂಡಿಯ ತಟ್ಟೆಯನ್ನು ಹಿಡಿದು ತನ್ನ ರೂಮಿಗೆ ಹೋದ. ಡೈರಿಯನ್ನು ಹೊರ ತೆಗೆದ.

* * *

"ದೀಪಾ ನೀನಾದ್ರೂ ನಿನ್ನ ಮೈದುನಂಗೆ ತಿಳುವಳಿಕೆ ಹೇಳು. ಮದುವೆ ಮಾತನ್ನೆತ್ತಿದರೆ ಮುಂದುವರೆಸೋಕೆ ಅವನು ಬಿಡೋಲ್ಲ... ನಮ್ಮ ದಿನೇಶ ಹೀಗಾಡ್ತಿರ್ಲಿಲ್ಲ. ನಾನು ನೋಡಿದ ಹುಡುಗೀನೇ ಒಪ್ಪಿಕೊಂಡ.... ಈಗ ಸುಖವಾಗಿಲ್ವೇ...."

"ಮಹೇಶ್ ಯಾರನ್ನಾದ್ರೂ ಪ್ರೀತಿಸ್ತಿದಾರಾ ಅತ್ತೇ...."

"ಅದನ್ನು ಬಾಯಿಬಿಟ್ಟು ಸರಿಯಾಗಿ ಹೇಳಲ್ಲ. ಆದ್ರೂ ನನ್ನ ಮಾತಿಗೆ ಒಂದು ಬೆಲೆ ಇರಬೇಡ್ವೇ? ನೀನೇ ಹೇಳು"

"ನಾನು ಒಳ್ಳೆ ಸಮಯ ನೋಡಿ ಕೇಳ್ತೀನಿ. ನೀವು ಚಿಂತಿಸಬೇಡಿ"

"ನಾನೀಗ ಒಂದು ಸಂಬಂಧವನ್ನು ನೋಡಿದೀನಿ. ಹುಡುಗಿ ಚೆನ್ನಾಗಿದಾಳೆ. ಶ್ರೀಮಂತೆ.... ವಿದ್ಯಾವಂತೆ, ವಿನಯವಂತೆ ಇನ್ನೇನು ಬೇಕು ಹೇಳು"

"ಮಹೇಶ್ ಆ ಹುಡುಗೀನ ನೋಡಿದಾರಾ?"

"ಒಂದ್ಸಾರಿ ನೋಡಿದಾನೆ. ಮತ್ತೆ ಕರ್‍ಕೊಂಡು ಬನ್ನಿ ಅಂತಂದ್ರೆ ಕರ್‍ಕೊಂಡು ಬರ್ತಾರೆ.... ಹುಡುಗಿ ತೆಗೆದು ಹಾಕುವಂತೆ ಇಲ್ಲ. ಇವನ ಮನಸ್ನಲ್ಲಿ ಏನಿದೆಯೋ ಯಾರು ಬಲ್ಲರು?"

"ನಾನು ಈಗ್ಲೇ ಮಾತಾಡ್ತೀನಿ"

"ನಾನು ಹೇಳ್ದೆ ಅಂತ ಅವನಿಗೆ ಹೇಳ್ಬೇಡ. ಆಮೇಲೆ ಬೈತಾನೆ. ಹಾಗೇ ಊಟಕ್ಕೆ ಎಬ್ಬಿಸ್ಕೊಂಡು ಬಾ. ಅಡುಗೆ ಆಗಿದೆ" ದೀಪಾ ಮಹೇಶನ ರೂಮಿನ ಬಾಗಿಲಿಗೆ ಬಂದಳು.

"ಒಳಗೆ ಬರಬಹುದಾ ಮಹೇಶ್?" ಅವನು ಅವಸರದಿಂದ ಡೈರಿಯನ್ನು ಮುಚ್ಚಿದ. "ಏನೋ ಓದ್ತಾ ಇದೀರಾ?"

"ಹೂಂ.... ನನ್ನ ಸ್ನೇಹಿತನೊಬ್ಬ ತಮ್ಮ ಡೈರಿಯನ್ನು ನಂಗೆ ಕೊಟ್ಟಿದ್ದಾರೆ. ಅವರಿಗೆ ತಾನು ಕಂಡ ಕನಸುಗಳನ್ನೆಲ್ಲ ಬರೆದಿಡುವ ಹವ್ಯಾಸ. ಯದ್ವಾ ತದ್ವಾ ಗೀಚಿಟ್ಟಿದ್ದಾರೆ. ಓದಿ ಅರ್ಥ ಮಾಡ್ಕೊಳ್ಳೋಕೆ ಪ್ರಯತ್ನ ಪಡ್ತಿದ್ದೆ"

"ನಂಗೂ ಕೊಡಿ. ನಾನೂ ಓದಿ ನೋಡ್ತೀನಿ"

"ನಾನು ಮುಗಿಸಿದ್ಮೇಲೆ ಕೊಡ್ತೀನಿ. ನಿಮ್ಮ ತಾಯಿ ಹತ್ರ ಮಾತಾಡಿದ್ರಾ? ನಿಮ್ಮ ತಂದೆ ಹೇಗಿದಾರಂತೆ?"

"ಅವರ ಹತ್ರವೂ ಮಾತಾಡ್ದೆ. ಸರಿಯಾಗೇ ಇದಾರೆ ಅಂತ ಅನ್ನಿಸ್ತು. ಎನಿವೇ ಊಟ ಆದ್ಮೇಲೆ ಹೋಗ್ತೀನಲ್ಲ. ಊಟಕ್ಕೆ ಬನ್ನಿ ಅಡುಗೆ ಸಿದ್ಧವಾಗಿದೆಯಂತೆ"

"ನೀವು ಊಟ ಮಾಡಿ ಅತ್ಗೇ. ನಾನು ನಿಧಾನವಾಗಿ ಮಾಡ್ತೀನಿ. ನಂಗೋಸ್ಕರ ಕಾಯ್ಬೇಡಿ"

"ಇರೋರು ನಾವು ಇಬ್ರು.... ಅತ್ತೆ ಎಷ್ಟು ಸಾರಿ ಬಡಿಸ್ತಾರೆ? ಬನ್ನಿ..."

"ನಾನು ಒಂದು ಫೋನ್ ಕಾಲ್‌ಗೆ ಕಾಯ್ತಾ ಇದೀನಿ... ಊಟ ಮಾಡ್ತಾ ಮಾತನಾಡುಕ್ಕೆ ಆಗಲ್ಲ.... ಈಗ ಇನ್ನೇನು ಕಾಲ್ ಬರಬಹುದು"

"ಸರಿ, ನಾನೂ ಆಮೇಲೆ ಮಾಡ್ತೀನಿ.... ನನಗೆ ಕಂಪೆನಿ ಇದ್ದರೆ ಊಟ ಚೆನ್ನಾಗಿ ಸೇರುತ್ತೆ" ನಗುತ್ತಾ ನುಡಿದಳು.

"ದಿನೇಶನ್ನ ಮಿಸ್ ಮಾಡ್ಕೋತಿದೀರಾ ಅತ್ಗೆ.... ಪಾಪ ಅಲ್ಲಿ ಅವನಿಗೂ ಬೇಸರವಾಗ್ತಾ ಇರುಲ್ವಾ? ಅವನಿಗೆ ಫೋನು ಮಾಡಿದ್ರಾ?"

"ಅವರೇ ಮಾಡಿದ್ರು. ನಾನು, ಅತ್ತೆ ಇಬ್ರೂ ಮಾತಾಡಿದ್ವಿ..."

"ನನ್ನನ್ನ ಕರೆದಿದ್ರೇ, ನಾನೂ ಮಾತಾಡ್ತಿದ್ದೆ...."

"ಕರೆಯೋಣ ಅಂತ ಬಂದೆ. ನೀವು ಮೊಬೈಲ್‌ನಲ್ಲಿ ಬೇರೆ ಯಾರ ಹತ್ರವೋ ಮಾತಾಡ್ತಿದ್ರೀ.... ಸುಮ್ಮನಾದೆ.... ನೀವು ಬೇಗ ಮದುವೆಯಾಗಿ ಮಹೇಶ್.... ನನಗೂ ಒಂದು ಒಳ್ಳೇ ಕಂಪೆನಿ ಸಿಗುತ್ತೆ....." ಇದ್ದಕ್ಕಿದ್ದಂತೆ ಹೇಳಿದಳು.

"ಯಾವಾಗ? ಈಗ್ಲೋ ನಾಳೇನೋ?" ಮಹೇಶ ನಕ್ಕ.

"ಹಾಗಾದ್ರೆ ಹುಡ್ಗಿ ರೆಡಿ ಇದಾಳೆ ಅಂತ ಅನ್ನಿ...." ತಮಾಷೆ ಮಾಡಿ ಹುಬ್ಬೇರಿಸಿದಳು.

"ಹುಡ್ಗಿ ಏನೋ ರೆಡಿ ಇದಾಳೆ. ಆದರೆ ಅಮ್ಮಂಗೆ ಇಷ್ಟವಿಲ್ಲ ಅಂತ ಕಾಣುತ್ತೆ.... ಆ ಮಾತನ್ನು ಎತ್ತೋಕ್ಕೇ ಹಿಂಜರಿಕೆ ನನಗೆ"

"ಹಿಂಜರಿದರೆ ನೀವು ಮುದುಕರಾದ್ರೂ ನಿಮಗೆ ಮದುವೆಯಾಗಲ್ಲ. ಯಾರವಳು? ನಂಗೆ ಹೇಳಿ.... ನಾನು ನಿಮ್ಮ ಪರವಾಗಿ ಅತ್ತೆ ಹತ್ರ ಮಾತಾಡ್ತೀನಿ"

"ಆಗ್ಲೀ ಹೇಳ್ತೀನಿ.... ಆದರೆ ಇವತ್ತೇ ಬೇಡ. ಇವತ್ತು ನನ್ನ ಮೂಡ್ ಚೆನ್ನಾಗಿಲ್ಲ...."

"ಅಲ್ಲದೇ ಯಾರದ್ದೋ ಕಾಲ್.... ಬೇರೆ ಬರುತ್ತೆ. ಬಹುಶಃ ಆ ಹುಡ್ಗೀದೇ ಇರಬಹುದು ಅಲ್ವಾ? ಬೆಸ್ಟ್ ಆಫ್ ಲಕ್ ಮಹೇಶ್... ಅಂದ್ಹಾಗೇ ಅತ್ತೆ ಒಬ್ಬ ಹುಡುಗೀನ ನೋಡಿದಾರಂತೆ... ಅವಳು ಹೇಗೆ...? ನಮ್ಮ ದಿಲೀಪನಿಗೆ ವಿಚಾರಿಸಬಹುದಾ?"

"ಅಮ್ಮ ಎಷ್ಟೋ ಜನ ಹುಡುಗೀರನ್ನ ನೋಡಿರಬಹುದು.... ನಾನು ಇದುವರೆಗೂ ಸುಜಯನ್ನ ಬಿಟ್ಟು ಬೇರೆ ಯಾವ ಹುಡುಗಿಯನ್ನೂ...." ಮಹೇಶ ಮಾತನ್ನು ನಿಲ್ಲಿಸಿ, ನಾಲಿಗೆಯನ್ನು ಕಚ್ಚಿಕೊಂಡ. ದೀಪಾ ಗೆಲುವಿನ ನಗೆಯನ್ನು ನಕ್ಕಳು.

"ಸೋ.... ಸುಜಯಾ ಈಸ್ ಯುವರ್ ಗರ್ಲ್.... ನಾಟ್ ಬ್ಯಾಡ್.... ಇಂಟರೆಸ್ಟಿಂಗ್."

"ಷ್.... ಮೆಲ್ಲಗೇ ಅಮ್ಮಂಗೆ ಕೇಳ್ಸಿದ್ರೆ ರಂಪ ಮಾಡ್ತಾಳೆ...."

"ಅತ್ತೆ ರಂಪ ರಾದ್ಧಾಂತ ಮಾಡುವುದು ಏನೂ ಇಲ್ಲ. ನಾನು ಅವರ ಹತ್ರ ಮಾತಾಡ್ತೀನಿ. ಸುಜಯಳೇ ನನ್ನ ಓರಗಿತ್ತಿಯಾಗ್ತಾಳೆ ಅಂತಂದ್ರೆ, ಅದಕ್ಕಿಂತ ಬೇರೆ ಒಳ್ಳೆ ಮಾತು ಇದೆಯಾ?"

"ಇಲ್ಲ, ಆ ವಿಷಯ ಅಷ್ಟು ಸುಲಭವಲ್ಲ. ನಿಧಾನವಾಗಿ ಅದರ ಬಗ್ಗೆ ಮಾತನಾಡೋಣ. ಈಗ ಬೇಡ. ನಡೀರಿ ಊಟಕ್ಕೆ" ಅವನೇ ಡೈರಿಯನ್ನು ಅತ್ತ ತೆಗೆದಿಟ್ಟು ಎದ್ದು ಹೊರಬಂದ. ದೀಪಾ ಅವನನ್ನು ಹಿಂಬಾಲಿಸಿದಳು. ಅಮ್ಮಾ ತಟ್ಟೆ ಹಾಕ್ಲಾ? ಊಟ ಮಾಡಿ, ಅತ್ಗೇನ ಅವರ ಮನೆಗೆ ಬಿಟ್ಟು ಬರುವ ಪ್ರೋಗ್ರಾಂ ಬೇರೆ ಇದೆ.."

"ನಾನೂ ಬರೋಣ ಅಂತ ಅಂದ್ಕೊಂಡಿದೀನಿ. ಆತನ್ನ ಅವತ್ತು ನೋಡಿದ್ದು" ದೀಪಾ ಮಹೇಶನ ಕಡೆ ನೋಡಿ ನಸುನಕ್ಕಳು. ಅವನು ಭುಜ ಕುಣಿಸಿ ನಕ್ಕ.

* * *

ಮುಂಬಾಗಿಲಿನಲ್ಲಿ ನಿಂತಿದ್ದ ಸುಜಯ ಕಾರನ್ನು ಕಂಡ ಕೂಡಲೇ ಒಳಗೆ ಹೋಗಿ ಅತ್ತೆಗೆ ವರದಿ ಒಪ್ಪಿಸಿದಳು. ಶಕುಂತಲ ಹಾಗೂ ಶಿವರಾಮಯ್ಯ ಮುಂಬಾಗಿಲಿಗೆ ಬಂದು ನಿಂತರು. ದೀಪಾ ಇಳಿದು, ವೇಗವಾಗಿ ಬಂದು ತಾಯಿಯನ್ನು ತಬ್ಬಿಕೊಂಡಳು.

"ಅಮ್ಮಾ, ಹೇಗಿದೀಯಮ್ಮಾ.... ಅಪ್ಪ ಈಗ ಹೇಗಿದೀರಪ್ಪಾ....! ನನಗೆ ತಿಳಿಸಬಾರ್ದಾಗಿತ್ತಾ ನೀವು...."

"ನನಗೇನಾಗಿದೆ ದೀಪು. ಹುಶಾರಾಗಿದೀನಿ. ಅದೇನು ನೀನು ಹೀಗೆ ದಿಢೀರನೆ ಬಂದದ್ದು. ಇನ್ನು ಮೂರು ತಿಂಗಳು ಗಂಡನೊಟ್ಟಿಗೆ ಇದ್ದು ಒಟ್ಟಿಗೆ ಬರಬಹುದಾಗಿತ್ತಲ್ಲ...."

"ಇಲ್ಲೇ ಮುಂಬಾಗಿಲಿನಲ್ಲಿ ಮಾತು ಯಾಕೆ? ಒಳಗೆ ಕೂತು ಮಾತನಾಡೋಣ. ಬನ್ನಿ ವನಜಮ್ಮಾ.... ಬಾಪ್ಪಾ ಮಹೇಶ್...."

ಮಹೇಶ, ಬಾಗಿಲ ಬಳಿ ಇದ್ದ ಸುಜಯಳನ್ನು ಕಂಡು ಹುಬ್ಬೇರಿಸಿದ. ಅವಳು ಒಳಗೆಲ್ಲೋ ಮರೆಯಾದಳು. ಮಹೇಶನ ಫೋನು ಹಾಡಿತು. ಮಹೇಶ ನೋಡಿದ. ಸುಜಯ ಮಾಡಿದ್ದಳು.... ಹುಬ್ಬುಗಳನ್ನು ಕುಣಿಸಿ, ತುಟಿಯನ್ನು ಕೊಂಕಿಸಿ ಹೊರಬಾಗಿಲಿಗೆ ಬಂದು ಹಲೋ.... ಎಂದ.

"ನನ್ನ ಪರ್ಸನ್ನಾ ತಂದಿದೀರಾ?"

"ಎಲ್ಲಿಂದ ಮಾತಾಡ್ತಿದೀರಿ?"

"ಗೆಸ್ ಮಾಡಿ ನೋಡೋಣ...."

"ನಾನು ದಡ್ಡ.... ಎದುರಿಗೆ ಬಂದ್ರೇ ಗೊತ್ತಾಗೋದು. ಅದೇನು ನಮಗಿಂತ ಮುಂಚೆ ಅತ್ತೆ ಮನೆಗೆ ಬಂದು ಬಿಟ್ಟಿದೀರಿ....."

"ಅತ್ತೆ ಫೋನು ಮಾಡಿ, ದೀಪಾ ಮನೆಗೆ ಬರ್ತಾಳೆ. ನೀನೂ ಬಾ ಅಂತ ಹೇಳಿದ್ರು.... ಅಮ್ಮಂಗೆ ಹೇಳಿ ಬಂದ್ಬಿಟ್ಟೆ....."

"ಅಂತೂ ಕರೆಕ್ಷನ್ ಆಯ್ತು.... ಪರ್ಸು ಕಾರಿನಲ್ಲಿದೆ. ಬಂದು ತಗೊಂಡು ಹೋಗಬಹುದು...." ಅವನು ಮಾತನಾಡುತ್ತಾ ಕಾರಿನ ಬಳಿಗೆ ಬಂದ. ಸುಜಯ ಹಿಂಬಾಗಿಲಿನಿಂದ ಅವನಿದ್ದೆಡೆಗೆ ಬಂದಳು.

"ಮಹೇಶ್ ಎಲ್ಲಿ ಹೋದ್ರು?" ಎನ್ನುತ್ತಾ ಹೊರಬಂದ ದೀಪ ಅವರಿಬ್ಬರನ್ನೂ ನೋಡಿದಳು. ಒಳ ಬಂದು ಮಹೇಶ್ ಫೋನ್‌ಗೆ ಡಯಲ್ ಮಾಡಿದಳು.

"ಕದ್ದು ಮುಚ್ಚಿ ಮಾತಾಡ್ತಾ ನಿಲ್ಲಬೇಡಿ.... ನಿಮಗೆ ಪ್ರೈವೆಸಿ ಬೇಕೂಂತ ಇದ್ರೆ, ಕಾರ್‌ನಲ್ಲಿ ಒಂದು ರೌಂಡ್ ಎಲ್ಲಾದ್ರೂ ಹೋಗ್ಬನ್ನಿ. ನಾನು ಮ್ಯಾನೇಜ್ ಮಾಡ್ತೀನಿ"

"ಥ್ಯಾಂಕ್ಸ್ ಅತ್ಗೆ...." ಎಂದು ನುಡಿದು ಸುಜಯಳತ್ತ ತಿರುಗಿ ನಕ್ಕ.

"ಸೀತಾ ಮಾತೆಯವರ ಅಪ್ಪಣೆ ಆಗಿದೆ.... ನಾವಿಬ್ಬರೂ ವನವಿಹಾರಕ್ಕೆ ಹೋಗಿ ಬರಬೇಕಂತೆ.... "

"ಏನು.... ಏನು? ಇದು ಯಾವ ನಾಟಕದ ಡೈಲಾಗ್?" ನಕ್ಕಳು.

"ಈ ಡೈಲಾಗ್ ನಂದೇ.... ಇಲ್ಲೇ ಎಲ್ಲಾದ್ರೂ ಸುತ್ತಾಡಿ ಬರೋಣ ಹೊರಡಿ"

"ಯಾರಾದ್ರೂ ನೋಡಿದ್ರೆ?"

"ಅತ್ಗೆ ಮ್ಯಾನೇಜ್ ಮಾಡ್ತಾರಂತೆ...."

"ಅಂದ್ರೇ ಅವಳಿಗೆ ಅನುಮಾನ ಬಂದಿದೆಯಾ?"

"ಅನುಮಾನ ಅಲ್ಲ. ಡೆಫನೇಟ್ ಆಗಿದೆ....."

"ಅವಳಿಗೆ ಯಾರು ಹೇಳಿದ್ದು? ನೀವಾ?"

"ಯಾರ್‍ಯಾಕೆ ಹೇಳ್ಬೇಕು? ಅವರಿಗೆ ಅರ್ಥವಾಗುತ್ತೆ ಅಲ್ವಾ! ನೀವು ಫೋನು ಮಾಡಿ, ಮಾತಾಡಿದ್ದನ್ನು ಕೇಳಿಸಿಕೊಂಡಿರಬೇಕು.... ಆಮೇಲೆ ನೀವು ಇತ್ತ ಬಂದದ್ದನ್ನು ಕಂಡಿರಬೇಕು...."

"ಅವಳನ್ನು ಹೇಗೆ ನಂಬೋದು? ಮಾತಾಡ್ತಾ ಕೂತ್ರೆ ಎಲ್ಲಾ ಮರೆತು ಬಿಡ್ತಾಳೆ. ನನ್ನ ಪರ್ಸು ಕೊಡಿ... ನಾನು ಹೋಗ್ತೀನಿ"

"ಓಕೇ ನಿಮ್ಮಿಷ್ಟ..." ಎನ್ನುತ್ತಾ ತನ್ನ ಸೀಟಿನ ಬಳಿ ಇಟ್ಟುಕೊಂಡಿದ್ದ ಪರ್ಸನ್ನು ಅವಳಿಗೆ ತೆಗೆದು ಕೊಟ್ಟ. "ಎಲ್ಲಾ ಸರಿಯಾಗಿದೆಯಾ ಚೆಕ್ ಮಾಡ್ಕೊಳ್ಳಿ. ಆಮೇಲೆ ನನ್ನ ಮೇಲೆ ಅಪವಾದ ಹೊರಿಸ್ಬೇಡಿ" ಸುಜಯ ಕಿಲಕಿಲನೆ ನಕ್ಕು "ಥ್ಯಾಂಕ್ಸ್" ಎಂದು ಹೇಳಿ ಕ್ಷಣ ಮಾತ್ರದಲ್ಲಿ ಅಲ್ಲಿಂದ ಮಾಯವಾಗಿದ್ದಳು. ಗಂಭೀರನಾಗಿ ಒಳ ಬಂದ ಮಹೇಶನನ್ನು ದೀಪಾ ಕಣ್ಣು ಸಂಜ್ಞೆಯಲ್ಲಿ ಪ್ರಶ್ನಿಸಿದಳು. ಮಹೇಶ ಸುಮ್ಮನೆ ನಕ್ಕು ತಾಯಿಯ ಪಕ್ಕದಲ್ಲಿ ಕುಳಿತ.

* * *

ಮಹೇಶನ ಮೊಬೈಲ್ ಫೋನು ರಾಗ ಹಾಡಿತು. ಅವನು ಸ್ನಾನಕ್ಕೆ ಹೋಗಿದ್ದ. ವನಜಮ್ಮ ರೂಮಿಗೆ ಬಂದು, ಮೊಬೈಲ್ ಎಲ್ಲಿದೆ ಎಂದು ಹುಡುಕುವಷ್ಟರಲ್ಲಿ ಹಾಡು ನಿಂತಿತ್ತು. ಅಲ್ಲಿಯೇ ಕಣ್ಣಾಡಿಸುತ್ತಿದ್ದ ವನಜಮ್ಮನಿಗೆ ದಿಂಬಿನ ಬಳಿ ಇದ್ದ ಡೈರಿ ಕಣ್ಣಿಗೆ ಬಿತ್ತು. ಕುತೂಹಲದಿಂದ ಎತ್ತಿ ನೋಡಿದಳು. ಒಳಗಿನ ಪುಟದಲ್ಲಿ ಸುಜಯಳ ಹೆಸರಿತ್ತು. ಕುತೂಹಲ ಇನ್ನಷ್ಟು ಹೆಚ್ಚಿತ್ತು. ಅವಳ ಡೈರಿ ಇಲ್ಲೇಕೆ ಇದೆ? ಅದರಲ್ಲಿ ಏನು ಬರೆದಿರಬಹುದು? ಕುತೂಹಲ ತಡೆಯದಾಯಿತು. ಹೇಗೂ ಆಫೀಸಿಗೆ ಹೋಗಿರ್ತಾನೆ. ಬಿಡುವು ಮಾಡಿಕೊಂಡು ಓದಿದರಾಯಿತು ಎಂದುಕೊಂಡು, ತಾನು ಮಲಗಿಕೊಳ್ಳುವ ರೂಮಿಗೆ ಅದನ್ನು ತಂದು, ಯಾರಿಗೂ ಕಾಣದಂತೆ ತೆಗೆದಿಟ್ಟಳು.

ಸ್ನಾನ ಮುಗಿಸಿ ಮಹೇಶ ಬಂದ.... ಫೋನು ಮತ್ತೆ ಹಾಡಿತ್ತು. ಮಾತು ಮುಗಿಸಿ ಹೊರಬಂದು, "ನಾನು ಸ್ವಲ್ಪ ಬೇಗನೇ ಹೋಗ್ಬೇಕಮ್ಮಾ.... ಹೊರಗೇ ತಿಂಡಿ ತಿಂತೀನಿ. ಬರೀ ಕಾಫಿ ಕೊಡು" ಎಂದು ನುಡಿದು, ಬಟ್ಟೆ ಧರಿಸಿ, ಬ್ರೀಫ್‌ಕೇಸ್ ಹಿಡಿದು ಹೊರಬಂದು ತಾಯಿಗೆ ಹೇಳಿದ. ವನಜಮ್ಮ ಅನುಮಾನದಿಂದ ಅವನ ಕಡೆ ನೋಡಿದಳು. ಆದರೆ ಅದನ್ನು ಅವನು ಗಮನಿಸಲಿಲ್ಲ. ಕಾಫಿಯನ್ನು ಕುಡಿದು, ಕಾರಿನ ಕೀಯನ್ನು ತೆಗೆದುಕೊಂಡ. ಅವಳ ಸಂಶಯ ಮತ್ತೂ ಹೆಚ್ಚಿತ್ತು. ಎಲ್ಲೋ ಅವಳನ್ನೇ ಕಾಣಲು ಹೊರಟಿರಬೇಕು, ಈಗ ಅವನ ಮೇಲೆ ಕೋಪ ಬಂದಿತ್ತು. ನನಗೆ ತಿಳಿಯದಂತೆ, ಇವರಿಬ್ಬರ ಸ್ನೇಹ ದಿನದಿನಕ್ಕೂ ಹೆಚ್ಚಾಗುತ್ತಿದೆ. ಅದಕ್ಕೆ ಸರಿಯಾಗಿ ಮಟ್ಟಹಾಕಲೇಬೇಕು ಎಂದುಕೊಂಡು ಸಾವಿತ್ರಮ್ಮನಿಗೆ ಫೋನು ಮಾಡಿದಳು.

"ನನ್ನ ಸೊಸೆ ಊರಿಗೆ ಬಂದಿದಾಳೆ. ಇನ್ನು ಮೂರು ತಿಂಗಳಿಗೆ ನನ್ನ ಹಿರಿಯ ಮಗನೂ ಬರ್ತಾನೆ. ಅಷ್ಟರೊಳಗೆ ಮಾತುಕತೆ ಮುಗಿಸಿ ನಿಶ್ಚಯ ಅಂತ ಒಂದು ಮಾಡಿಕೊಂಡಿದ್ರೆ ಒಳ್ಳೇದು ಅಂತ ನನ್ನ ಭಾವನೆ" ಏನಂತೀರಿ ನೀವು.

"ಹಾಗಾದ್ರೆ ನಿಮ್ಮ ಮಗನ ಒಪ್ಪಿಗೆ ಇದೆ ಅಂತ ತಿಳಿಯಬಹುದೇ?"

"ಇವನು ಅತ್ತಿಗೆಯ ಮಾತಿಗೆ ಬೆಲೆ ಕೊಡ್ತಾನೆ... ನೀವು ಲೀಲನ್ನ ಕರ್ಕೊಂಡು ಒಮ್ಮೆ ನಮ್ಮ ಮನೆಗೆ ಬನ್ನಿ... ಮುಂದಿನದು ದೇವರಿಚ್ಛೆ..." ಆಕೆಯ ಹತ್ತಿರ ಮಾತು ಮುಗಿಸಿ, ದೀಪಳಿಗೂ ಫೋನು ಮಾಡಿ ವಿಷಯವನ್ನು ತಿಳಿಸಿದಳು.

"ನೀನು ಮಹೇಶನಿಗೆ ತಿಳುವಳಿಕೆ ಹೇಳು.... ಲೀಲಾ ಒಳ್ಳೆಯ ಹುಡುಗಿ. ಸಂಬಂಧ ಬೆಳೆಯಲಿ ಅಂತ ನನ್ನ ಆಸೆ" ಇದ್ದಕ್ಕಿದ್ದಂತೆ ಅತ್ತೆ ಫೋನು ಮಾಡಿದ್ದಾರೆ. ತಾಯಿ ಮಗನಲ್ಲಿ ಏನೋ ನಡೆದಿರಬೇಕು ಅಂತಂದುಕೊಂಡು ದೀಪ ಮಹೇಶನಿಗೆ ಫೋನು ಮಾಡಿದಳು.

"ಅತ್ಗೇ, ನಾನು ಎರಡು ಮೂರು ದಿನ ತುಂಬಾ ಬಿಸಿ. ಡಿಸ್ಟ್ರಿಬ್ಯೂಟರ್ಸ್ ಜೊತೆ

ಮೀಟಿಂಗ್ ಇದೆ. ಈಗ ನಾನು ಫ್ರೀಯಾಗಿ ಮಾತನಾಡುಕ್ಕೆ ಆಗುಲ್ಲ. ನಿಮಗೆ ಹೇಗೆ ತೋಚುತ್ತೋ ಹಾಗೆ ಮಾಡಿ...." ದೀಪ, ಅವನೊಡನೆ ಹೆಚ್ಚು ಮಾತನ್ನಾಡಲು ಆಗಿರಲಿಲ್ಲ. ಅತ್ತೆಯೊಡನೆಯೂ ಅವನ ಇಷ್ಟವನ್ನು ತಕ್ಷಣಕ್ಕೆ ತಿಳಿಸುವಂತಿರಲಿಲ್ಲ. ಈ ಬಗ್ಗೆ ಸುಜಯಳೊಡನೆ ಮಾತಾಡಿದರೆ ಅವಳ ರಿಯಾಕ್ಷನ್ ಹೇಗಿರುತ್ತದೆ ಅಂತ ತಿಳಿಯುತ್ತದೆ ಎಂದುಕೊಂಡು ಅವಳಿಗೆ ಫೋನು ಮಾಡಿದಳು.

"ಅವರು ಈಗ ಮಾತ್ನಾಡುಕ್ಕಾಗುಲ್ಲ. ಮೀಟಿಂಗ್‌ನಲ್ಲಿ ಬಿಜಿಯಾಗಿದ್ದಾರೆ" ಆಫೀಸಿನ ಅಟೆಂಡರ್ ಹೇಳಿದಾಗ ದೀಪಾ ನಿರಾಸೆಯಿಂದ ರಿಸೀವರ್‌ನ್ನು ಇಟ್ಟಳು. ತಾಯಿ ಇದ್ದಲ್ಲಿಗೆ ಬಂದಳು.

"ಅಮ್ಮಾ ನಂಗೆ ತುಂಬಾ ಬೋರ್ ಆಗ್ತಿದೆ. ಅತ್ತೆ ಮನೆಗೆ ಹೋಗಿ ಬರ್ತೀನಿ"

"ಈ ಬಿಸಿಲ್ನಲ್ಲಿ ಬೇಡ.... ನಿಮ್ಮತ್ತೆ ಏನಂದುಕೊಳ್ತಾರೆ? ನಿನ್ನ ಮೈದುನಂಗೆ ಫೋನು ಮಾಡು. ಸಾಯಂಕಾಲ ಬಂದು ಕರ್ಕೊಂಡು ಹೋಗ್ಲೀ"

"ಎಲ್ರೂ ಬಿಜಿ. ನಾನೊಬ್ಬೇ ಏನೂ ಕೆಲ್ಸ ಇಲ್ದೇ, ಬೋರ್ ಅಂತ ಕೂತಿರೋಳು. ತಿಂಡಿ ತೀರ್ಥ, ರೆಸ್ಟು ಇಷ್ಟೇ ಆಯ್ತು"

"ಬೇಸರ ಮಾಡ್ಕೊಂಡ್ರೇ ಆಗುತ್ತಾ ದೀಪು.... ಟಿ.ವಿ. ನೋಡು, ಪುಸ್ತಕ ಓದು, ನಿಟ್ಟಿಂಗ್ ಮಾಡು.... ಟೈಂ ತಾನಾಗೇ ಓಡಿ ಹೋಗುತ್ತೆ"

"ದಿಲೀಪನಾದ್ರೂ ಬಂದಿದ್ರೇ..... ಯಾವಾಗ ಬರ್ತಾನಂತೆ.... ಅವನಿಗೂ ಮದುವೆ ಮಾಡು.....ಹಾಗೇ ಎಷ್ಟು ವರ್ಷದಿಂದ ಒಂಟಿಯಾಗಿ ಹಾಯಾಗಿದ್ದಾನೆ....."

"ಅವನಿಗೆ ತಕ್ಕ ಹುಡುಗೀನೇ ಸಿಕ್ಕಿಲ್ಲವಲ್ಲೇ. ನಮ್ಮ ಸುಜಯಳನ್ನೇ ಕೇಳೋಣ ಅಂತ....ನಂಗಾಸೆ. ಪಾಪ, ಅವಳಿಗೂ ಯಾಕೋ ಮದುವೆ ನಿಧಾನವಾಗ್ತಿದೆ"

"ನಮ್ಮ ಸುಜೀನ....? ಬೇಡಮ್ಮ. ಹೊರಗಿನ ಹೊಸ ಪರಿಚಯದ ಹುಡ್ಗಿ ನನ್ನ ಅತ್ಗೆ ಆಗ್ಬೇಕು. ಮನೆ ಮನೇಲೇ ಈ ಸಂಬಂಧ ಏನು ಚೆನ್ನ?"

"ಅದರಲ್ಲೇನು? ಸುಜಯಳಂಥ ಹುಡ್ಗಿ ಕಂಡೋರ, ಯಾರೋ ಪರಿಚಯವಿಲ್ಲ ದವನ ಹೆಂಡ್ತಿಯಾಗಿ ಹೋಗೋ ಬದಲು, ನನ್ನ ಸೊಸೆಯಾಗಿರಲಿ ಅಂತ ನನ್ನಾಸೆ.... ಆದರೆ ದಿಲೀಪನ್ನ ಒಂದ್ಮಾತು ಕೇಳ್ಬೇಕು...."

"ಇಲ್ಲಮ್ಮ.... ಸುಜಯ, ದಿಲೀಪನ್ನ ಒಪ್ಪುಲ್ಲ... ಅವಳು ಬೇರೆ ಯಾರನ್ನೋ ಪ್ರೀತಿಸ್ತಿದಾಳೆ.... ಅಂತ ಕಾಣುತ್ತೆ...."

"ನಿಂಗೆ ಹೇಗೇ ಗೊತ್ತಾಯ್ತು?" ಅದಕ್ಕೇನಾ ಅವಳು ದಿನೇಶನ್ನ ಒಪ್ದೇ ಇದ್ದದ್ದು.... ಸುಜಯ ಇಂಥಾ ಹುಡ್ಗಿ ಅಂತ ನಂಗೆ ಗೊತ್ತಿರಲಿಲ್ಲ"

"ಪ್ರೀತಿಸೋದು ತಪ್ಪಾ! ಒಂದು ವೇಳೆ ನಾನೇ ಯಾರನ್ನಾದ್ರೂ ಪ್ರೀತಿಸಿದ್ರೆ?"

"ಸದ್ಯ ನನ್ನ ಪುಣ್ಯ. ನಿಂಗೆ ಅಂಥ ಬುದ್ಧಿ ಬರಲಿಲ್ಲ. ಪ್ರಭಾವತಿ ಅದಕ್ಕೇಯೋ ಏನೋ ತುಂಬಾ ಮೆತ್ತಗಾಗಿ ಹೋಗಿದ್ದಾಳೆ. ದಿನೇಶನ ವಿಷಯದಲ್ಲಿ ಭಾರೀ

ಗಲಾಟೆ ಆಗಿತ್ತು. ಈಗ ಇನ್ನೇನೋ.... ಮೊದ್ಲೇ ನಿನ್ನ ಮಾವಂಗೆ ಆರೋಗ್ಯ ಅಷ್ಟಕಷ್ಟೇ...."

"ಎಲ್ರೂ ಅತೀ ಅತೀ ಆಡ್ತಾರೆ. ಪ್ರೀತಿಸಿದೋರ್‍ಗೆ ಕೊಟ್ಟು ಮದುವೆ ಮಾಡಿದರೆ ಎಲ್ಲಾ ಸರಿಯಾಗಿರುತ್ತೆ. ದೊಡ್ಡವರು ಯಾಕೆ ಅಡ್ಡ ಬರ್ತಾರೋ?"

"ತಂದೆ ತಾಯಿಯರಿಗೆ, ತಮ್ಮ ಮಕ್ಕಳ ಜೀವನದ ಬಗ್ಗೆ ಆಸಕ್ತಿ ಇರುತ್ತೆ ದೀಪು. ಆತಂಕ ಇರುತ್ತೆ. ತಪ್ಪು ಯಾವುದು... ಸರಿ ಯಾವುದು ಅನ್ನೋ ತಿಳುವಳಿಕೆ ಇರುತ್ತೆ..."

"ಹಾಗಾದ್ರೆ ಸುಜಯಂಗೆ ತಿಳುವಳಿಕೆ ಸಾಲದು ಅಂತ ಅಂತೀಯಾ?"

"ಅದು ಅತೀ ಬುದ್ಧಿವಂತಿಕೆ.... ಏನೋ ಹಗರಣವಾಗಿರಲೇಬೇಕು. ಅದಕ್ಕೆ ಇಲ್ಲಿಯ ಸ್ಕೂಲನ್ನು ಬಿಟ್ಟು ಆಶ್ರಮದ ಸ್ಕೂಲಿಗೆ ಸೇರ್‍ಕೊಂಡಿದಾಳೆ... ಕ್ರಮೇಣ ಅದೇ ಆಶ್ರಮದವಳಾಗಿ ಬಿಡ್ತಾಳೋ ಏನೋ! ಇದು ತಪ್ಪಲ್ವಾ? ನಿನ್ನ ಅತ್ತೆ ಮಾವಂಗೆ ಎಷ್ಟು ಸಂಕಟವಾಗಿರುಲ್ಲ? ನೀನಾದ್ರೂ ಸುಜಯಂಗೆ ತಿಳುವಳಿಕೆ ಹೇಳು.... ಅತ್ತೆ ನೋಡಿದ ಗಂಡನ್ನು ಮದುವೆಯಾಗಿ ಜೀವನದಲ್ಲಿ ಹಾಯಾಗಿರಲಿ. ಇನ್ನು ಎಷ್ಟು ವರ್ಷ ಹೀಗೇ ಇರ್ತಾಳೆ! ನಿನಗಿಂತಲೂ ವಯಸ್ನಲ್ಲಿ ದೊಡ್ಡವಳು...."

"ಗಂಡಿಗಿಂತ ಹೆಣ್ಣು ವಯಸ್ನಲ್ಲಿ ಒಂದು ವೇಳೆ ದೊಡ್ಡವಳಾಗಿದ್ರೆ ಏನಾಗುತ್ತೆ?"

"ಹೆಂಡತಿಯಾಗುವವಳು ಗಂಡನಿಗಿಂತ ವಯಸ್ನಲ್ಲಿ ಚಿಕ್ಕವಳಾಗಿರಬೇಕು ಅಂತ ಮೊದಲ್ನಿಂದ ಒಂದು ಪದ್ಧತಿ ಬಂದು ಬಿಟ್ಟಿದೆ.... ಅದೇ ಮುಂದುವರೆಯುತ್ತಿದೆ ಅಷ್ಟೇ.... ನಿಮ್ಮಪ್ಪಂಗೆ ಹೊಟ್ಟೆ ಹಸೀತಿರಬಹುದು. ಊಟಕ್ಕೆ ಬನ್ನಿ ಅಂತ ಹೇಳಿ ಬಿಟ್ಟು ಬಾ.... ಇಬ್ಬರಿಗೂ ತಟ್ಟೆ ಹಾಕಿ ಬಡಿಸ್ತೀನಿ" ದೀಪಾ ತಂದೆಯನ್ನು ಕರೆಯಲೆಂದು ಹೋದಳು. ಫೋನು ರಿಂಗಣಿಸಿತು.

* * *

ಕರೆಗಂಟೆ ಸದ್ದು ಕೇಳಿ, ಓದುತ್ತಿದ್ದ ಡೈರಿಯನ್ನು ತೆಗೆದಿಟ್ಟು, ಮಹೇಶ ಹೊರಬಂದು ಮುಂಬಾಗಿಲನ್ನು ತೆರೆದ. ಹೊರಬಾಗಿಲಿನಲ್ಲಿ ವಿವೇಕ ನಿಂತಿದ್ದ. ಮನಸ್ಸು ಕಸಿವಿಸಿ ಗೊಂಡರೂ, ಬಾಯಿ ಮಾತಾಡಿತ್ತು.

"ಓ... ವಿವೇಕ್.... ಬನ್ನಿ.... ಬನ್ನಿ" ಆತ್ಮೀಯತೆಯನ್ನು ಬಲವಂತವಾಗಿ ತುಳುಕಿಸಿ ಒಳಕ್ಕೆ ಕರೆದ.

"ಒಬ್ಬರೇ ಇದ್ದ ಹಾಗಿದೆ. ನಿಮ್ಮ ಮದರ್ ಇಲ್ವಾ?" ಆ ಕಡೆ ಈ ಕಡೆ ನೋಡಿದ.

"ಇಲ್ಲ. ಅವರು ದೇವಸ್ಥಾನಕ್ಕೆ ಹೋಗಿದಾರೆ. ಇನ್ನೇನು ಬರಬಹುದು, ಒಳಗೆ ಬನ್ನಿ"

"ನಮ್ಮ ಅಕ್ಕ, ಚಿಕ್ಕಮ್ಮ ಕಾರಿನಲ್ಲಿ ಇದಾರೆ. ಕರೆದು ಬರ್ತೀನಿ" ಮಹೇಶನ ಕಸಿ ವಿಸಿ ಹೆಚ್ಚಾಗಿತ್ತು. ಆದರೂ ಅದನ್ನು ತೋರಗೊಡಲಿಲ್ಲ. ಎಲ್ಲರೂ ಒಳಬಂದರು.

ಹಲೋ ನಮಸ್ಕಾರಗಳ ವಿನಿಮಯವಾಯಿತು.

"ನಾವು ಫೋನು ಮಾಡಿ ಬಂದಿದ್ರಿದ್ದೆ ಚೆನ್ನಾಗಿತ್ತು. ವನಜಮ್ಮನೂ ಇರುತ್ತಿದ್ದರು. ಅವರ ಹತ್ರ ಮೊಬೈಲ್ ಇದೆಯಾ?" ಸಾವಿತ್ರಮ್ಮ ಕೇಳಿದಾಗ, ಲೀಲಾ ಆಕೆಯ ಮೊಣಕೈ ತಿವಿದಳು.

"ಇಲ್ಲ. ಅಮ್ಮ ಮೊಬೈಲ್ ಇಟ್ಟುಕೊಂಡಿಲ್ಲ. ಇನ್ನೇನು ಬರಬಹುದು" ಅವನು ಉತ್ತರಿಸಿದ. ಅಕ್ಕ ತಮ್ಮ ಕಣ್ಣು ಸಂಜ್ಞೆಯಲ್ಲೇ ಮಾತಾಡಿಕೊಂಡರು.

"ನಮ್ಮ ಆಶ್ರಮದ ಸ್ಕೂಲಿನ ವಾರ್ಷಿಕೋತ್ಸವ. ನೀವುಗಳು ಬಂದು ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಬೇಕು...." ಲೀಲಾ ವಾರ್ಷಿಕೋತ್ಸವದ ಆಹ್ವಾನ ಪತ್ರಿಕೆಯನ್ನು ಕೊಟ್ಟಳು.

"ಈ ಸಲದ ವಿಶೇಷ ಏನೆಂದರೆ, ನಮ್ಮ ಆಶ್ರಮ ಪ್ರಾರಂಭವಾಗಿ ಇಪ್ಪತ್ತೈದು ವರ್ಷಗಳಾಯಿತು. ಸಿಲ್ವರ್ ಜೂಬ್ಲಿ ಸೆಲೆಬ್ರೇಷನ್...." ವಿವೇಕನೆಂದ.

"ಓ.... ಐ.ಸೀ.... ಕಂಗ್ರಾಟ್ಸ್.... ಹೆ.... ಹೆ.... ಹೆ...." ಎಂದ.

"ನಿಮ್ಮ ತಾಯಿಯವರಿಗೂ ವಿಷಯ ಹೇಳಿಬಿಡಿ. ಹೊತ್ತಾಯ್ತು, ನಾವಿನ್ನು ಬರ್ತೀವಿ" ಲೀಲಾ ಎದ್ದಾಗ, ಸಾವಿತ್ರಮ್ಮನಿಗೆ ಬೇಸರವಾಗಿತ್ತು.

"ವನಜಮ್ಮ ಬರೋವರೆಗೂ ಇರಬಹುದಾಗಿತ್ತು. ಇನ್ನೆಲ್ಲಿಗಾದ್ರೂ ಹೋಗ್ಬೇಕಾಗಿತ್ತಾ?"

"ಹೂಂ. ಚಿಕ್ಕಮ್ಮ ಏಳಿ. ಮತ್ತೊಂದು ದಿನ ಬರೋರಂತೆ..."

"ಸರಿ. ನಿಮ್ಮ ತಾಯಿಗೆ ಹೇಳ್ಬಿಡಪ್ಪಾ...." ಅವರುಗಳು ಎದ್ದರು.

"ಕಾಫಿ, ಹಾಲು ಏನಾದ್ರೂ ತಗೋತೀರಾ?" ಬಾಯಿ ಮಾತಿಗೆ ಎಂಬಂತೆ ಕೇಳಿದ.

"ಇಲ್ಲ. ಏನೂ ಬೇಡ.... ಎಲ್ಲಾ ಆಗಿದೆ" ಲೀಲಾ ಮುಗುಳ್ನಕ್ಕು ಥ್ಯಾಂಕ್ಸ್ ಎಂದಳು. ಮಹೇಶನೂ ಕಿರುನಗೆ ಸೂಸಿದ. ಎಲ್ಲರೂ ಅಲ್ಲಿಂದ ಹೊರಟು ಬಿಟ್ಟರು. ಕಾರು ಅತ್ತ ಹೋಯಿತು. ಮಹೇಶನಿನ್ನೂ ಬಾಗಿಲಲ್ಲೇ ನಿಂತಿದ್ದ. ವನಜಮ್ಮ ಬಂದಳು. ಕೈಯಲ್ಲಿ ಪ್ರಸಾದದ ದೊನ್ನೆ ಇತ್ತು.

"ಇದೇನೋ ಬಾಗಿಲಲ್ಲಿ ಕಾಯ್ತಾ ನಿಂತಿದೀಯಾ... ಎಂದೂ ಇಲ್ಲದ್ದು? ತಗೋ ಪ್ರಸಾದ.... ಒಳಗೆ ಬಾ" ಇಬ್ಬರೂ ಒಳ ಬಂದರು.

"ಇನ್ನೊಂದು ಐದು ನಿಮಿಷ ಮುಂಚೆ ಬರಬಾರ್ದಾಗಿತ್ತಾ ನೀನು... ಸಾವಿತ್ರಮ್ಮ ಬಂದಿದ್ದರು...."

"ಹೌದೇನೋ! ಒಬ್ಬರೇ ಬಂದಿದ್ರಾ?"

"ಜತೇಲಿ, ಲೀಲಾ, ವಿವೇಕ್ ಸಹ ಬಂದಿದ್ರು"

"ಅಯ್ಯೋ ಎಂಥಾ ಕೆಲಸವಾಯ್ತು.... ಫೋನು ಮಾಡಿ ಬನ್ನಿ ಅಂತ ಎಷ್ಟು ಸಾರಿ ಹೇಳಿದ್ದೆ.... ಮರೆತೇ ಬಿಟ್ರೇನೋ.... ಆಕೆ ಒಂದು ತರಹ.... ಲೀಲಾ ಹೇಗಿದ್ದಳು!

ಎಂಥಾ ಸೀರೆ ಉಟ್ಕೊಂಡಿದ್ಲು...?"

"ನಂಗೊತ್ತಿಲ್ಲಮ್ಮ. ಅದನ್ನೆಲ್ಲ ನಾನ್ಯಾಕೆ ನೋಡ್ಲಿ?"

"ಅಯ್ಯೋ ಪೆದ್ದ. ಅವರುಗಳು ಬಂದದ್ದೇ ನಿನಗೋಸ್ಕರ. ಲೀಲನ್ನ ನಿಂಗೆ ತೋರಿಸುಕ್ಕೆ ಅಂತ ಕರ್ಕೊಂಡು ಬಂದಿದ್ರು.... ಆದರೆ ಎಂಥಾ ಪೆದ್ದು ಜನ?"

"ಇಲ್ಲಮ್ಮ. ನನಗೆ ಹಾಗೇನೂ ಹೇಳಲಿಲ್ಲ. ಅವರ ಆಶ್ರಮದ ವಾರ್ಷಿಕೋತ್ಸವ ಅಂತ ಕರೆಯೋಕೆ ಬಂದಿದ್ರು.... ಲೀಲಾನೇ ನನಗೆ ಪತ್ರಿಕೆಯನ್ನು ಕೊಟ್ಟು ಆಹ್ವಾನ ಕೊಟ್ಟಿದ್ದಾಳೆ....."

"ಏನೋ ಒಂದು. ಈ ನೆವ ಹಾಕ್ಕೊಂಡು ಬಂದಿದಾರೆ.....ಆದರೆ ಬರಿಗೈಯಲ್ಲಿ ಬಂದಿದ್ರಾ? ಹೂವು, ಹಣ್ಣು ಒಂದೂ ಕಾಣೇ.... ದೇವರ ಮುಂದೆ ಏನಾದ್ರೂ ಇಟ್ಟಿದ್ದಾರಾ?"

"ಇಲ್ಲ. ಏನನ್ನೂ ತಂದಿರಲಿಲ್ಲ. ಎದ್ದು ಒಳಗೆ ಹೋಗಿರಲಿಲ್ಲ. ಎಲ್ಲಿ ಕೂತಿದ್ರೂ ಹಾಗೇ ಎದ್ದು ಹೋದ್ರು...."

"ಕಾಫೀ, ಹಾಲೂ ಯಾವುದನ್ನೂ ಕೊಟ್ಟಿರುಲ್ಲ ನೀನು....."

"ನನಗೆ ನೀನು ಅದನ್ನೆಲ್ಲ ಹೇಳಿ ಹೋಗಿದ್ಯಾ? ನಿನ್ನ ಹತ್ರ ಮೊಬೈಲ್ ಇದೆಯಾ ಅಂತ ಕೇಳಿದ್ರು.... ನೀನೂ ಒಂದು ತಗೋ..."

"ತೆಗೆಸ್ಕೊಡು. ನನಗೂ ಸಮಯ ಅಂತಂದ್ರೆ ಉಪಯೋಗವಾಗುತ್ತೆ. ಅದೆಲ್ಲ ಹೋಗ್ಲೀ....ಲೀಲಾ ನಿನಗೆ ಒಪ್ಪಿಗೇನಾ ಹೇಳು. ನಾನೇ ಹೋಗಿ ಮಾತಾಡ್ತೀನಿ"

"ಏನೂ ಬೇಡ. ನನಗೆ ಯಾವ ಲೀಲಾನೂ ಇಷ್ಟವಿಲ್ಲ" ಎಂದು ಹೇಳಿ ಮಹೇಶ ಅಲ್ಲಿ ನಿಲ್ಲದೇ ತನ್ನ ರೂಮಿಗೆ ಹೊರಟು ಹೋದ. ವನಜಮ್ಮ ಅಲ್ಲಿಯೇ ಕುಳಿತಳು. ಮಹೇಶ ಹೊರಕ್ಕೆ ಬಂದಿರಲಿಲ್ಲ. ವನಜಮ್ಮ ಸಾವಿತ್ರಮ್ಮನಿಗೆ ಫೋನು ಮಾಡಿದಳು.

"ನೀವು ಫೋನು ಮಾಡಿ ಬರೋದಲ್ವೇ? ಸೀದಾ ಬಂದುಬಿಟ್ಟಿದೀರಿ......?"

"....."

"ಓ.... ಹೌದಾ? ಹೋಗಲಿ ಬಿಡಿ.... ಮತ್ತೆಂದಾದ್ರೂ ನೀವೆಲ್ಲಾ ಒಟ್ಟಿಗೇ ಬನ್ನಿ"

"........"

"ಸರಿ ಹಾಗಾದ್ರೆ..... ನಾನೂ ಬರುವುದಕ್ಕೆ ಪ್ರಯತ್ನ ಪಡ್ತೀನಿ."

"........"

"ಹಾಗಂತೀರಾ? ಅದೇ ಸರಿ. ನಾನೂ ನಿಮ್ಮ ಆಶ್ರಮವನ್ನು ನೋಡಿದ ಹಾಗಾಗುತ್ತೆ. ಖಂಡಿತಾ ಬರ್ತೀನಿ" ವನಜಮ್ಮನಾಡಿದ ಮಾತುಗಳನ್ನು ಮಹೇಶ ಕೇಳಿಸಿಕೊಂಡಿದ್ದ. ತಾಯಿ ವಾರ್ಷಿಕೋತ್ಸವಕ್ಕೆ ಹೋಗುವವಳಿದ್ದಾಳೆ ಎಂದು ತಿಳಿದಿತ್ತು. ತಾನಂತೂ ಹೋಗುಲ್ಲ. ಅಮ್ಮ ಏನಾದ್ರೂ ಮಾಡ್ಕೊಳ್ಳಲಿ ಎಂದು ನಿರ್ಧರಿಸಿದ. ವನಜಮ್ಮ ಏನೂ ನಡೆದಿಲ್ಲವೆಂಬಂತೆ ಸಹಜವಾಗಿದ್ದಳು. ಮಹೇಶ ಮೌನವಾಗಿದ್ದ.

* * *

ಮನೆ ಮುಂದೆ ಟ್ಯಾಕ್ಸಿ ಬಂದು ನಿಂತ ಸದ್ದು ಕೇಳಿ, ವನಜಮ್ಮ ಬಾಗಿಲಿಗೆ ಬಂದು ನಿಂತಳು. "ಮಹೀ ನೋಡೋ ಯಾರೋ ಟ್ಯಾಕ್ಸೀಲಿ ಬಂದಿದಾರೆ...." ಮಹೇಶ ಕೇಳಿಸದವನಂತೆ ಸುಮ್ಮನಿದ್ದ.

"ನಮ್ಮ ದೀಪಾ ಕಣೋ.... ಅವರ ಅಪ್ಪನೂ, ಅಮ್ಮನೂ ಬಂದಿದಾರೆ.." ಮಹೇಶ ಹೊರಬಂದ. ಎಲ್ಲರೂ ಒಳಗೆ ಬಂದರು.

"ಹಾಯ್ ಮಹೇಶ್.... ನಿಮ್ಮ ಮೀಟಿಂಗ್ಸ್ ಎಲ್ಲಾ ಮುಗೀತಾ? ಈಗ ಫ್ರೀಯಾಗಿದ್ದೀರಾ?" ದೀಪಾ ವಿಚಾರಿಸಿದಳು. ಎಲ್ಲರೂ ಆಸೀನರಾದರು.

"ಹೂಂ.... ಅದೇನು ಅತ್ಗೆ ಟ್ಯಾಕ್ಸೀಲಿ ಬಂದಿದೀರಿ. ನಂಗೆ ಫೋನು ಮಾಡಿದ್ದಿದ್ರೆ, ನಾನೇ ಕರ್ಕೊಂಡು ಬರ್ತಿದ್ದೆ....."

"ಡಾಕ್ಟ್ರ ಹತ್ರ ಚೆಕಪ್‌ಗೆ ಹೋಗ್ಬೇಕಾಗಿತ್ತು. ನಮಗೂ ಔಟಿಂಗ್ ಬೇಕಾಗಿತ್ತು. ನಾನು ಡ್ರೈವ್ ಮಾಡೊದು ಬೇಡಾಂತ, ಅಮ್ಮ ಮಗಳ ಹಠ.... ಅದಕ್ಕೇ ಟ್ಯಾಕ್ಸೀನ ಮಾಡ್ಕೊಂಡೆವು"

"ನಂಗೇ ಹೇಳಬಹುದಾಗಿತ್ತು....."

"ನಿಮ್ಮ ಕೆಲಸ, ಓಡಾಟವೇ ನಿಮಗೆ ಸಾಕಷ್ಟಿರುತ್ತೆ. ಇನ್ನು ನಮ್ಮ ಮನೆ ಕೆಲ್ಸಾನ ಮಾಡಿಸ್ಕೊಳ್ಳೋದೇ...." ರಾಗವಾಗಿ ನುಡಿದರು. ಶಕುಂತಲ ವನಜಮ್ಮನ ಕಡೆಗೆ ತಿರುಗಿದಳು.

"ನಮ್ಮ ದಿಲೀಪ ಮುಂದಿನ ವಾರ ಬರ್ತಾ ಇದಾನೆ. ಆಮೇಲೆ ಪರವಾಗಿಲ್ಲ. ಒಂದು ತಿಂಗಳು ರಜೆ ಅಂತೆ. ಅರ್ಜೆಂಟಾಗಿ ಹೆಣ್ಣು ಬೇಕಾಗಿದೆ. ನಿಮ್ಮ ಕಡೆ ಯಾವ್ದಾದ್ರೂ ಇದ್ರೆ.... ತಿಳಿಸಿ.... ಬೇಗ ಮದುವೆ ಮಾಡ್ತೀವಿ."

"ಸದ್ಯಕ್ಕೆ, ತಕ್ಷಣಕ್ಕೆ ಬೇರೆ ಯಾರೂ ನೆನಪಿಗೆ ಬರ್ತಾ ಇಲ್ಲ.... ನಿಮ್ಮ ನಾದಿನಿಯ ಮಗಳೇ ಇದ್ದಾಳಲ್ಲ.... ನೋಡೋಕೆ ಎಷ್ಟು ಚೆನ್ನಾಗಿದ್ದಾಳೆ. ನಮ್ಮ ದಿನೇಶ ಅಂತೂ ಮನಸಾರೆ ಮೆಚ್ಚಿದ್ದ.... ಆದರೆ ದೀಪಾ ನಮ್ಮ ಸೊಸೆಯಾಗಿ ಬರ್ಬೇಕಾಗಿತ್ತು. ಅದಕ್ಕೇ ಅದು ತಪ್ಪಿ ಹೋಯ್ತು.... "

"ನೀವು ಸುಜಯಳ ಬಗ್ಗೆ ಹೇಳ್ತಾ ಇದೀರಾ? ನನಗೇನೋ ಇಷ್ಟವೇ. ನಮ್ಮ ಪೈಕಿ, ಅವಳಷ್ಟು ಚೆನ್ನಾಗಿರೋ ಹುಡುಗೀರು ಬೇರೆ ಯಾರೂ ಇಲ್ಲ. ಆದರೆ ಹತ್ತಿರದ ಸಂಬಂಧದಲ್ಲಿ ಬೇಡಾಂತ...." ಮಹೇಶ ದೀಪಾಳ ಕಡೆ ನೋಡಿ ಕಣ್ಣು ಸಂಜ್ಞೆ ಮಾಡಿದ್ದನ್ನು ವನಜಮ್ಮ ಗಮನಿಸಿದಳು.

"ಈಗ ಯಾವುದೋ ಆಶ್ರಮಕ್ಕೆ ಬೇರೆ ಸೇರಿಕೊಂಡಿದ್ದಾಳಂತೆ. ಇನ್ನು ಅವಳು ಯಾರಿಗೂ ದಕ್ಕುವವಳಲ್ಲ.... ಮುಂದೆ ಅಲ್ಲೇ ಸನ್ಯಾಸಿನಿಯಾಗಿದ್ದು ಬಿಡ್ತಾಳೋ ಏನೋ?"

"ಛೇ.... ಛೇ... ನಮ್ಮ ಸುಜಯ ಅಂಥೋಳಲ್ಲ. ಅಲ್ಲಿ ಒಂದು ಸ್ಕೂಲಿನಲ್ಲಿ ಟೀಚರ್ ಆಗಿದ್ದಾಳೆ. ಏನೋ ಅವಳಿಗೂ ಬೇಸರವಿರಬಹುದು. ಇನ್ನೂ ಕಂಕಣ ಬಲ ಕೂಡಿ ಬಂದಿಲ್ಲ ಅಷ್ಟೇ......"

"ಬಿಡಿ ನನಗ್ಯಾಕೆ ಬೇರೆ ಮನೆಯವರ ಹುಡುಗಿಯ ವಿಷಯ? ಏನಮ್ಮಾ ದೀಪಾ.... ಏನು ತಿಂಡಿ ಮಾಡ್ಲೇ? ನಿಮ್ಮಮ್ಮ ಏನೇನು ತಿಂಡಿ ಮಾಡಿಕೊಟ್ರು?"

"ಯಾಕೋ ಏನೂ ಸೇರುಲ್ಲ ಅಂತಾಳೆ. ಆಸೆಯಿಂದ ಒಂದು ಚೂರೂ ತಿಂದ್ರೂ.... ಅದು ಸ್ವಲ್ಪ ಹೊತ್ತಲ್ಲೇ.... ಎಲ್ಲಾ ಹೊರಗೆ...."

"ಅದು ಹಾಗೇ ತಾನೇ.... ನಾನು ನಮ್ಮ ಮಹೇಶನ ಬಸಿರಿಯಾಗಿದ್ದಾಗ ಹೀಗೇ ಬಯಕೆ ಸಂಕಟ...." ಇದ್ದಕ್ಕಿದ್ದ ಹಾಗೆ ಮಾತಿನ ಧಾಟಿ ಬದಲಾಗಿತ್ತು. ಆದರೆ ಮಹೇಶನಿಗೆ ಏನೂ ಅರ್ಥವಾಗಲಿಲ್ಲ. ಏನು ಅನ್ನುವಂತೆ ದೀಪಳ ಕಡೆ ನೋಡಿದ. ಅವಳ ಮುಖ ರಾಗರಂಜಿತವಾಗಿತ್ತು. ನಾಚಿಕೆಯಿಂದ ತಲೆತಗ್ಗಿಸಿದಳು. ಅವನ ಮೊಬೈಲ್ ರಾಗ ಹಾಡಿತ್ತು. ಸುಜಯ ಫೋನು ಮಾಡಿದ್ದಳು. ಅವನು ಹೊರಗೆ ಗೇಟಿನ ಬಳಿಗೆ ಬಂದು ನಿಂತು 'ಹಲೋ' ಎಂದ.

"ದೀಪಾ ಇದಾಳಾ! ನಾನು ಸ್ವಲ್ಪ ಮಾತ್ನಾಡಬೇಕಾಗಿತ್ತು" ಎಂದಳು.

"ಹ್ಞೂಂ. ಅವರೆಲ್ಲರೂ ಬಂದಿದಾರೆ. ಏನು ವಿಷಯ?"

"ಹೂಂ. ದೀಪ ಹೇಳಿದ್ಲು. ಮಾವನ್ನ ಚೆಕಪ್‌ಗೆ ಕರ್ಕೊಂಡು ಹೋಗ್ತಾ ಇದೀವಿ ಅಂತ. ಈಗ ಹೇಗಿದಾರೆ? ಏನೂ ಪ್ರಾಬ್ಲಂ ಇಲ್ಲವಲ್ಲ"

"ಏನೂ ಇಲ್ಲ ಅಂತ ಕಾಣುತ್ತೆ. ಎಲ್ಲರೂ ಹಾಯಾಗಿ ಮಾತಾಡ್ತಿದಾರೆ. ಅತ್ಗೇನ ಕರೀಲಾ! ಏನಾದ್ರೂ ಪರ್ಸನಲ್ ವಿಷಯ ಮಾತಾಡ್ಬೇಕಾ?"

"ಹಾಗೇನಿಲ್ಲ. ಆಶ್ರಮದ ವಾರ್ಷಿಕೋತ್ಸವಕ್ಕೆ ಬಾ ಅಂತ ಹೇಳ್ಬೇಕಾಗಿತ್ತು. ನೀವೇ ಹೇಳಿಬಿಡಿ. ಅವಳನ್ನು ಕರ್ಕೊಂಡು ಬನ್ನಿ....."

"ನನ್ನನ್ನ ನೀವು ಇನ್ವೈಟ್ ಮಾಡ್ಲೇ ಇಲ್ಲ.....ನಾನು ಬರುಲ್ಲ"

"ಸಾರಿ.... ಸಾರಿ. ನೀವು ಖಂಡಿತಾ ಬರ್ಲೇಬೇಕು. ಹಾಗೇ ದೀಪಳನ್ನು ಕರ್ಕೊಂಡು ಬನ್ನಿ. ಅವಳಿಗೆ ಒಬ್ಬಳಿಗೇ ಬರೋಕೆ ತೊಂದರೆ ಆಗಬಹುದು"

"ತೊಂದ್ರೆ ಏನು? ಹುಶಾರಾಗಿದಾರಲ್ಲ....ಅದರ ಬಗ್ಗೇನೇ ಮಾತಾಡ್ತಿದ್ರು.... ನನಗೆ ಸರಿಯಾಗಿ ಅರ್ಥವಾಗಲಿಲ್ಲ"

"ನೀವು ಗಂಡಸ್ರು.... ನಿಮಗೆ ಅರ್ಥವಾಗಲ್ಲ ಬಿಡಿ... "

"ಹೆಂಗಸ್ರು ಸರಿಯಾಗಿ ವಿಷಯ ಏನೂಂತ ಹೇಳಿದ್ರೆ ಎಲ್ಲಾ ತಿಳಿಯುತ್ತೆ. ಕೋಡ್‌ನಲ್ಲಿ ಮಾತಾಡಿದ್ರೆ ಅದು ಹೇಗೆ ತಿಳಿಯುತ್ತೆ...?"

"ನಿಮ್ಮಮ್ಮನ್ನ ಕೇಳಿ ಹೇಳ್ತಾರೆ...."

"ನೀವೇ ಹೇಳಿದ್ರೆ ಅದರಿಂದ ನೀವೇನು ಕಳ್ಕೋತೀರಿ?"

"ಓ.ಕೇ. ನಾನೇ ಹೇಳ್ತೀನಿ. ನೀವು ಸದ್ಯದಲ್ಲೇ ಚಿಕ್ಕಪ್ಪ ಆಗ್ತಾ ಇದೀರಿ...." ಸಣ್ಣಗೆ ನಕ್ಕಳು.

"ವ್ಹಾಟ್! ನಾನು ಚಿಕ್ಕಪ್ಪ ಆಗ್ತೀನಾ.... ಅಂದ್ರೇ ಅತ್ಗೇ ಈಗ ಪ್ರೆಗ್ನೆಂಟ್.... ಆಮ್ ಐ ರೈಟ್?"

"ಎಸ್ ಯೂ ಆರ್ ರೈಟ್.... ಅದಕ್ಕಾಗಿಯೇ ರೆಸ್ಟ್‌ಗೆ ಅಂತ ಈಗ ಬಂದಿದ್ದಾಳೆ. ಯಾರ್ಗೂಗಿ ಗೊತ್ತಿರಲಿಲ್ಲ"

"ಥ್ಯಾಂಕ್ ಯೂ ಸುಜಯಾ.... ನೀವು ಸಿಹಿ ಸುದ್ದಿ ತಿಳಿಸಿದಿರಿ....."

"ಹಾಗಾದ್ರೆ, ಅತ್ಗೇನ ಫಂಕ್ಷನ್‌ಗೆ ಕರ್ಕೊಂಡು ಬರುವ ಕೆಲಸ ಲಕ್ಷ್ಮಣನದು" ಅವಳು ಕಿಲಕಿಲನೆ ನಕ್ಕಾಗ ಅವನಿಗೂ ನಗು ಬಂತು.

"ಇಲ್ಲ ಸುಜಯಾ.... ಆಶ್ರಮಕ್ಕೆ ಬರುವ ಮೂಡ್ ನನಗಿಲ್ಲ...."

"ಯಾಕೆ? ಸ್ಕೂಲು, ಮಕ್ಕಳ ಫಂಕ್ಷನ್ ಅಂತ್ಲಾ?"

"ಅಲ್ಲ. ನಿಮಗೆ ಹೇಗೆ ಹೇಳ್ಲಿ.... ನನಗೆ ಇದೆಲ್ಲಾ ಇಷ್ಟವಿಲ್ಲ...."

"ನಿಮಗೆ ಯಾಕೆ ಇಷ್ಟ ಇಲ್ಲ ಅಂತ ನಂಗೆ ಗೊತ್ತು. ನಿಮ್ಮ ಮನೆಗೆ ಲೀಲಾ, ವಿವೇಕ್ ಬಂದಿದ್ರಾ?"

"ಹೌದು. ನಿಮಗೆ ಹೇಗೆ ಗೊತ್ತಾಯ್ತು?"

"ಲೀಲಾ ಮೇಡಂ ಹೇಳಿದ್ರು.... ಬರದೇ ಇದ್ರೆ, ಏನೇನೋ ಊಹಾಪೋಹಗಳಿಗೆ ಅವಕಾಶ ಆಗುತ್ತೆ. ಬರದೇ ಇರಬೇಡಿ. ಪ್ಲೀಸ್ ಬನ್ನಿ....." ಅವಳು ಅನುರಾಗದಿಂದ ಕರೆಯುತ್ತಿದ್ದಾಳೆಂದೆನಿಸಿತ್ತು....

"ಓ.ಕೇ. ನಿಮಗೋಸ್ಕರ ಬರ್ತೀನಿ.... ಐ ಲವ್ ಯೂ ಸುಜಯಾ...." ಎಂತಂದ. ಅವಳು ನಕ್ಕಿದ್ದು ಅವನಿಗೆ ಕೇಳಿಸಿತ್ತು. ಲೈನ್ ಕಟ್ ಆಗಿತ್ತು. ಅವನು ಹಿಂದಕ್ಕೆ ತಿರುಗಿದ. ಅವನ ಹಿಂದೆ ದೀಪಾ ನಿಂತಿದ್ದಳು. ಅವನು ಕಸಿವಿಸಿಗೊಂಡು,

"ಅತ್ಗೇ ನೀವು?" ಎಂದ.

* * *

ವನಜಮ್ಮ ಬೇಗ ಬೇಗ ಅಡುಗೆ ಮಾಡಿದಳು. ಎಲ್ಲರಿಗೂ ಬಡಿಸಿದಳು.

"ಈಗಾಗ್ಲೇ ಹೊತ್ತಾಗಿದೆ. ನಾವು ಹೊರಡ್ತೀವಿ.... ಟ್ಯಾಕ್ಸಿಗೆ ಫೋನು ಮಾಡಿಬಿಡಿ" ಶಿವರಾಮಯ್ಯನವರು ಹೇಳಿದಾಗ, ಮಹೇಶ ನುಡಿದ,

"ನಾನೇ ಕರ್ಕೊಂಡು ಹೋಗಿ ಬಿಟ್ಟು ಬರ್ತೀನಿ. ಟ್ಯಾಕ್ಸಿ ಯಾಕೆ?"

"ಹಾಗಾದ್ರೆ ನಾನು ಇವತ್ತು ರಾತ್ರಿ ಇಲ್ಲೇ ಇರ್ತೀನಿ.... ಅತ್ತೆ ಹತ್ರ ಮಾತಾಡ್ದ ಹಾಗೇ ಆಗಿಲ್ಲ" ಮಹೇಶ ಕಣ್ಣರಳಿಸಿ ಏನು ಎಂಬಂತೆ ಕೇಳಿದ,

"ನಾಳೆಗೆ ಬಟ್ಟೆ ಗಿಟ್ಟೆ ಏನಿಲ್ಲವಲ್ಲೇ ದೀಪು...."

"ಹೇಗೂ ಮಹೇಶ್ ಬರ್ತಾರಲ್ಲ. ಅವರ ಜೊತೆ ಒಂದು ಸೆಟ್ ಬಟ್ಟೆ ಕಳಿಸು"

ದೀಪಾಳನ್ನು ಬಿಟ್ಟು ಅವರಿಬ್ಬರೂ ಮಹೇಶನೊಂದಿಗೆ ಹೊರಟರು.

ಮಹೇಶ ವಾಪಸ್ಸು ಬರುವಷ್ಟರಲ್ಲಿ ಅತ್ತೆ-ಸೊಸೆಯ ಮಾತುಕತೆ ಮುಗಿದಂತೆ ಅನ್ನಿಸಿತ್ತು. ದೀಪಾ ಒಳಗಿನ ರೂಮಿನಲ್ಲಿ ಮಲಗಿದ್ದಳು. ಕಾರು ಬಂದ ಸದ್ದಿಗೆ ಎದ್ದು ಹೊರಬಂದಳು.

"ಥ್ಯಾಂಕ್ಸ್ ಮಹೇಶ್.... ನಿಮಗೆ ತೊಂದರೆ ಏನೂ ಆಗಲಿಲ್ಲವಲ್ಲ...." ಮಹೇಶ ಮುಗುಳ್ನಕ್ಕ.

"ತೊಂದರೆ ಯಾಕೆ? ನೀವಿನ್ನೂ ಮಲಗಲಿಲ್ವಾ? ಮಾತುಕತೆ ಬಹಳ ಚೆನ್ನಾಗಿದ್ದಿರ ಬೇಕು. ಇಬ್ಬರೂ ಒಳ್ಳೆಯ ಮೂಡ್‌ನಲ್ಲಿರುವಂತಿದೆ...."

"ಇವರು ಡೆಲ್ಲಿಗೆ ಬಂದಿದ್ದಾಗಿನ ಘಟನೆಗಳನ್ನು ನೆನೆಸಿಕೊಂಡು ಮಾತನಾಡು ತ್ತಿದ್ದೆವು. ಇವರಿಗೆ ಹಿಂದಿ ಬರುತ್ತಿರಲಿಲ್ಲ. ಅಲ್ಲಿಯೋರಿಗೆ ಕನ್ನಡದ ಗಂಧ ಗೊತ್ತಿಲ್ಲ. ಕೈ ಸಂಜ್ಞೆ, ಬಾಯಿ ಸಂಜ್ಞೆಗಳಲ್ಲಿ ಮಾತನಾಡುತ್ತಿದ್ದರು. ಒಂಥರಾ ಫನ್ನಿಯಾಗಿರುತ್ತಿತ್ತು"

"ನಿಮಗೆ ಹಿಂದಿ ಬರುತ್ತಾ ಅತ್ಗೆ?"

"ನಂಗೂ ಬರುಲ್ಲ. ಆದರೆ ನಾನು ಮಾತನಾಡುಕ್ಕೇ ಪ್ರಯತ್ನ ಪಡ್ತಿರಲಿಲ್ಲ"

"ದೀಪಾ ಜಾಣೆ.... ಮಾತಾಡ್ದೇ ಇದ್ದರೂ, ಆಗೋ ಕೆಲಸ ಆಗ್ತಿತ್ತು. ನನ್ನ ಕೈಲಿ ಮಾತ್ರ ಸುಮ್ಮನಿರಕ್ಕೆ ಆಗ್ತಿರಲಿಲ್ಲ.... ಮಾತಾಡಿ ಕೆಟ್ಟೋಳು ಅಂತ ಅನ್ನಿಸ್ಕೊಳ್ಳೋಳು ನಾನೇ...."

"ಅದರಲ್ಲಿ ಕೆಟ್ತನ ಏನು ಬಂತು?" ಮಹೇಶ ತನ್ನ ರೂಮಿನ ಕಡೆ ಹೊರಟ. ದೀಪಾ ಅವನ ಹಿಂದೆಯೇ ಬಂದಳು.

"ನಿಮಗೆ ನಿದ್ದೆ ಬರುತ್ತಿಲ್ಲವಾದರೆ, ಒಂದು ಸ್ವಲ್ಪ ಹೊತ್ತು ವಾಕಿಂಗ್ ಹೋಗಿ ಬರೋಣ್ವಾ? ಬರ್ತೀರಾ?"

"ಇಷ್ಟು ಹೊತ್ನಲ್ಲಿ! ಅಮ್ಮ ಏನಂತಾಳೋ?"

"ನೀವು ಜತೆಗೆ ಇರ್ತೀರಲ್ಲ. ಸ್ವಲ್ಪ ದೂರ ಹೋಗೋಣ ಸಾಕು.... ಅತ್ತೇ ಸ್ವಲ್ಪ ತಿರುಗಾಡಿ ಬರ್ತೀನಿ. ಇವತ್ತು ವಾಕ್ ಮಾಡೇ ಇಲ್ಲ." ಅವಳೆಂದಳು.

"ಶಾನೆ ದೂರ ಹೋಗ್ಬೇಡಿ. ಬೀದಿ ನಾಯಿಗಳು ತಿರುಗ್ತಿರುತ್ವೆ ಜ್ವಾಪಾನ" ವನಜಮ್ಮ ಎಚ್ಚರಿಕೆ ನೀಡಿದಳು. ಮುಂಬಾಗಿಲನ್ನು ಹಾಕಿಕೊಂಡಳು. ಇವರಿಬ್ಬರೂ ರಸ್ತೆಯಲ್ಲಿ ಹೆಜ್ಜೆ ಹಾಕತೊಡಗಿದರು.

"ಸುಜಯ ಫೋನು ಮಾಡಿದ್ರು. ವಾರ್ಷಿಕೋತ್ಸವಕ್ಕೆ ನಿಮ್ಮನ್ನೂ ಕರ್‍ಕೊಂಡು ಬನ್ನಿ ಅಂತ ಹೇಳಿದ್ರು.... ನಿಮಗೆ ಇಷ್ಟ ಇದ್ರೆ ಕರ್‍ಕೊಂಡು ಹೋಗ್ತೀನಿ"

"ನಿಮಗೆ ಹೋಗೋಕೆ ಮನಸ್ಸಿಲ್ವಾ ಮಹೇಶ್? ಸ್ವತಃ ಲೀಲಾನೇ ಬಂದಿದ್ರಂತೆ ಕರೆಯೋಕೆ"

"ಓ.... ಅಮ್ಮ ಹೇಳಿದ್ದಾಗಿದೆ. ನಿಜ ಹೇಳಬೇಕೂಂತ ಅಂದ್ರೇ ಸುಜಯಂಗೋಸ್ಕರ

ಹೋಗ್ಬೇಕು ಅಷ್ಟೇ. ನನಗೆ ಇದರಲ್ಲೆಲ್ಲ ಆಸಕ್ತಿ ಇಲ್ಲ"

"ನನಗೂ ಔಟಿಂಗ್ ಇಲ್ಲ. ದಿನವೆಲ್ಲಾ ಮನೇಲೇ ಕೂತಿರ್ತೀನಿ. ಒಂದು ಛೇಂಜ್ ಇರುತ್ತೆ ಅಂತ.... ಎಷ್ಟು ಹೊತ್ತಿಗೆ ಹೋಗೋಣ? ನಾನು ರೆಡಿ"

"ಸಾಯಂಕಾಲ ನಾಲ್ಕೂವರೆಗೆ ಫಂಕ್ಷನ್ ಪ್ರಾರಂಭವಾಗುತ್ತಂತೆ" ಆಮೇಲೆ.

"ಅಧ್ಯಕ್ಷರ ಭಾಷಣ, ವಂದನಾರ್ಪಣೆ ಎಲ್ಲಾ ಮುಗಿಯೋ ಹೊತ್ತಿಗೆ ಒಂಭತ್ತು ಗಂಟೆ ಮೇಲಾಗುತ್ತೆ. ಆಮೇಲೆ ಡಿನ್ನರ್.... ನಿಮಗೆ ಆಯಾಸ ಆಗುಲ್ವಾ ಅತ್ಗೇ?"

"ಇದರಲ್ಲೇನು ಆಯಾಸ? ಯಾಕೆ ಹಾಗೆ ಕೇಳಿದ್ರಿ?"

"ನೀವು ಈಗ ಸ್ಪೆಷಲ್ ಅಂತ ತಿಳೀತು.... ಕಂಗ್ರಾಟ್ಸ್" ಅತಿ ಸಂಕೋಚದಿಂದ ಹೇಳಿದ.

"ಅತ್ತೆ ಹೇಳಿದ್ರಾ?" ನಾಚಿಕೆಯಿಂದ ಧ್ವನಿ ಮೆತ್ತಗಿತ್ತು.

"ಇಲ್ಲ. ಸುಜಯ ಹೇಳಿದ್ರು.... ಸ್ವಲ್ಪ ಹೆಮ್ಮೆ ಅಂತ ಅನ್ನಿಸ್ತು. ನಾನು ಚಿಕ್ಕಪ್ಪ ಆಗ್ತಿದೀನಿ ಅಲ್ವಾ? ದಿನೇಶನಿಗೂ ಕಂಗ್ರಾಟ್ಸ್ ಹೇಳ್ಬೇಕು.... ಅವನು ನಿಮಗೆ ದಿನಾ ಫೋನು ಮಾಡ್ತಾನೇನೋ.... ನನ್ನ ಪರವಾಗಿ ನೀವೇ ಅವನಿಗೆ ಹೇಳ್ಬಿಡಿ.... ನಾನು ನಿಧಾನವಾಗಿ ಎಂದಾದ್ರೂ ಮಾತಾಡ್ತೀನಿ"

"ಓ.ಕೇ. ಹೇಳ್ತೀನಿ. ಇನ್ನೊಂದು ವಿಷಯ...."

"ಬಂತು ನನ್ನ ಮದುವೆ ವಿಷಯ.... ನೀವು ವಾಕಿಂಗ್ ಅಂತ ಹೊರಟಾಗ್಩ಲೇ ನಂಗೆ ಅರ್ಥವಾಗಿತ್ತು...." ಪ್ರಶ್ನಾರ್ಥಕವಾಗಿ ನೋಡಿದ.

"ಲೀಲಾ ಹೇಗೆ? ಅವಳ ಬಗ್ಗೆ ನಿಮ್ಮ ಅಭಿಪ್ರಾಯ ಏನು?"

"ಏನೂ ಇಲ್ಲ.... ಆ ಆಂಗಲ್‌ನಿಂದ ನಾನು ಅವಳನ್ನು ನೋಡಿಲ್ಲ, ಮಾತನ್ನಾಡಿಸಿಲ್ಲ. ಅಮ್ಮ ಏನೋ ಆಸೆ ಇಟ್ಕೊಂಡಿದಾಳೆ. ಅದನ್ನೇ ನಿಮ್ಮ ತಲೆಗೂ ತುರುಕಿದ್ದಾಳೆ.... ನನಗೆ ಗೊತ್ತು"

"ನೀವ್ಯಾಕೆ ಅಪ್ಸೆಟ್ ಆಗ್ತೀರಿ?"

"ಅಪ್ಸೆಟ್ ಆಗ್ದೇ ಇರುತ್ತಾ ಅತ್ತಿಗೆ.... ನಾನು ಸುಜಯನ್ನ ಪ್ರೀತಿಸ್ತಿದೀನಿ ಅಂತ ಎಲ್ರಿಗೂ ಗೊತ್ತು. ಆದರೂ ಎಲ್ರೂ ಅದನ್ನು ಬಿಟ್ಟು ಲೀಲನ ಬಗ್ಗೆ ಮಾತಾಡ್ತೀರಲ್ಲ..... ಲೀಲ ನಂಗೆ ಇಷ್ಟವಿಲ್ಲ. ಅದನ್ನು ಅಮ್ಮನಿಗೆ ಹೇಳಿಬಿಡಿ"

"ಸುಜಯಳ ಬಗ್ಗೆ ನೀವೇ ನೇರವಾಗಿ ಹೇಳಿಬಿಡಿ.... ಮುಸುಕಿನೊಳಗಿನ ಗುದ್ದು ಅನ್ನೋ ಥರ ಸುಮ್ಮನಿದ್ದರೆ ಹೇಗೆ?"

"ಅಲ್ಲೊಂದು ತಕರಾರು ಇದೆ. ಸುಜಯಂಗೆ ಸ್ವಲ್ಪ ಪ್ರಾಬ್ಲಂ. ಅದು ಸಾಲ್ವ್ ಆಗದೇ ನಾವಿಬ್ಬರೂ ಮದುವೆ ಆಗುವಂತಿಲ್ಲ"

"ಪ್ರಾಬ್ಲಮ್ಮಾ.... ಏನದು? ನಂಗೆ ಗೊತ್ತಿಲ್ಲದ್ದು."

"ಯಾರಿಗೂ ತಿಳಿಯುವುದು ಅವಳಿಗಿಷ್ಟವಿಲ್ಲ.... ನನ್ನಿಂದ ದೂರ ಇದ್ದರೆ ಸರಿ

ಹೋಗುತ್ತೆ ಅಂತ ಆಶ್ರಮದ ಸ್ಕೂಲಿಗೆ ಸೇರ್ಕೊಂಡ್ಲು.... ಆದರೆ ಅಲ್ಲಿಯೂ ಅವಳಿಗೆ ನೆಮ್ಮದಿ ಇಲ್ಲ"

"ನೆಮ್ಮದಿ ಕೆಡುವಂಥದ್ದು ಏನಾಗಿದೆ ಮಹೇಶ್ ಅವಳಿಗೆ! ನಾನು ಅವಳ ಹತ್ರ ಮಾತಾಡ್ತೀನಿ. ಹೀಗೇ ಮುಂದುವರೆದರೆ, ಅವಳಿಗೂ ಮದುವೆ ಇಲ್ಲ. ನಿಮಗೂ ಮದುವೆ ಇಲ್ಲ. ಈ ಪ್ರಾಬ್ಲಂ ಸಾಲ್ವ್ ಆಗೋದೇ ಬೇಡ್ವಾ?"

"ಈ ವಿಷಯದಲ್ಲಿ ನಂಗೂ ಏನ್ಮಾಡ್ಬೇಕು ಅಂತ ಗೊತ್ತಾಗ್ತಿಲ್ಲ. ಆದರೆ ದಯವಿಟ್ಟು ಈ ಬಗ್ಗೆ ಅವರನ್ನು ಕೇಳ್ಬೇಡಿ.... ಅವರಿಗೆ ಹರ್ಟ್ ಆಗುತ್ತೆ."

"ಚೆನ್ನಾಗಿದೆ ನಿಮ್ಮಿಬ್ಬರ ಪ್ರೀತಿ. ಇದಕ್ಕೆ ನಾನು ಏನಾದ್ರೂ ಪರಿಹಾರವನ್ನು ಕಂಡು ಹಿಡಿಯಲೇಬೇಕು"

"ನೀವು ಸುಮ್ಮನೇ ಟೆನ್ಷನ್ ಮಾಡ್ಕೋಬೇಡಿ. ನಿಮ್ಮ ಹೆಲ್ತ್‌ಗೆ ಒಳ್ಳೇದಲ್ಲ. ನಡೀರಿ ವಾಪಸ್ಸು ಹೋಗೋಣ. ಚಳಿ ಆಗ್ತಿದೆ...."

"ಇದನ್ನು ಚಳಿ ಅಂತ ಅಂತೀರಾ? ಡೆಲ್ಲೀಲಿ ಹೀಗೆ ವೆದರ್ ಇದ್ದರೆ, ಜನ ಮನೆಯೊಳಕ್ಕೇ ಹೋಗಲ್ಲ. ಅಂಗಳದಲ್ಲಿ ಚಾರ್‌ಪಾಯಿ ಹಾಕೊಂಡು, ಅಲ್ಲೇ ಸಂಸಾರ ನಡೆಸ್ತಾರೆ"

"ಇದು ಡೆಲ್ಲಿಯಲ್ಲ, ಬೆಂಗಳೂರು.... ಕತ್ತಲಾದ ಮೇಲೆ ರಸ್ತೆಗಳಲ್ಲಿ ಓಡಾಡುವುದೂ ಒಮ್ಮೊಮ್ಮೆ ಅಪಾಯಕಾರಿ ಆಗಿರುತ್ತೆ...." ಅವನು ಮನೆಯ ಕಡೆಗೆ ತಿರುಗಿದ. ಮಾತಿಲ್ಲದೇ ವಾಪಸ್ಸು ಬಂದರು.

* * *

'ಸಂಧ್ಯಾಶ್ರಮ' ವಾರ್ಷಿಕೋತ್ಸವದ ಸಮಾರಂಭಕ್ಕೆ ಸಜ್ಜಾಗಿತ್ತು. ಹೆಬ್ಬಾಗಿಲಿಗೆ ಇಳಿ ಬಿದ್ದಿದ್ದ 'ಸುಸ್ವಾಗತ' ಫಲಕ ಬಣ್ಣಗಳಿಂದ ಕೂಡಿದ್ದು ಆಕರ್ಷಕವಾಗಿತ್ತು. ತಳಿರು ತೋರಣಗಳು ಆಶ್ರಮದ ಸೊಗಸನ್ನು ಹೆಚ್ಚಿಸಿದ್ದವು. ಬೆಳಗಿನ ಕಾರ್ಯಕ್ರಮದಲ್ಲಿ ಪ್ರಾರ್ಥನೆಯ ನಂತರ, ಆಶ್ರಮದ ವಾಸಿಗಳೆಲ್ಲರಿಗೂ, ಹೊಸ ಬಟ್ಟೆಯನ್ನು ಹಂಚ ಲಾಗಿತ್ತು. ಬೆಳಗಿನ ಉಪಾಹಾರದ ನಂತರ ಎಲ್ಲರೂ ಭಜನಾ ಮಂದಿರದಲ್ಲಿ ಕುಳಿತು ಸಾಮೂಹಿಕವಾಗಿ ಭಜನೆ ಮಾಡಿದ್ದರು. ಲೀಲಾ ತನ್ನ ತಂದೆಯ ಕೈಯಿಂದ, ಎಲ್ಲರಿಗೂ ನೆನಪಿನ ಕಾಣಿಕೆಯನ್ನು ಕೊಡಿಸಿದ್ದಳು. ಎಲ್ಲರೂ ಅವರಿಗೆ ನಮಸ್ಕರಿಸಿ ಆಶೀರ್ವಾದ ಪಡೆದಿದ್ದರು. ಸುಜಯಳ ಸರದಿ ಬಂದಾಗ, ಅವಳು ತುಂಬಾ ಭಾವುಕಳಾಗಿದ್ದಳು. ಆತ ಪ್ರೀತಿಯಿಂದ ಅವಳ ತಲೆ ಸವರಿ, "ಸುಖವಾಗಿರು ಮಗಳೇ" ಎಂದು ಹಾರೈಸಿದ್ದರು. ಅವರ ಕಣ್ಣುಗಳಲ್ಲಿ ನೀರು ತುಂಬಿತ್ತು. ಸುಜಯ ಕತ್ತೆತ್ತಿ ಅವರನ್ನೇ ನೋಡಿದಳು. ಮನದಲ್ಲಿ ಏನೋ ಇಬ್ಬಗೆ.... ಅದೇನೆಂದು ತಕ್ಷಣಕ್ಕೆ ಅರ್ಥವಾಗುವಂತಿರಲಿಲ್ಲ.... ಮತ್ತೊಮ್ಮೆ ಅವರ ಪಾದಗಳನ್ನು ಮುಟ್ಟಿ ಕಣ್ಣಿಗೊತ್ತಿ ಕೊಂಡು ಅವರು ಕೊಟ್ಟ "ನೆನಪಿನ ಕಾಣಿಕೆ"ಯನ್ನು ಒತ್ತಿ ಹಿಡಿದು, ಇತ್ತ ಬಂದಿದ್ದಳು.

ಅದರಲ್ಲಿ ಏನೋ ವಿಶೇಷ ಅಡಗಿದೆ ಎಂಬಂತೆ, ಅದನ್ನೇ ಮತ್ತೆ ಮತ್ತೆ ನೋಡಿದಳು.

ಅವಳ ಹಿಂದೆ ವಿವೇಕ್ ಬಂದು ನಿಂತಿದ್ದ. ಅವಳು ಬೆಚ್ಚಿ ತಿರುಗಿದಳು.

"ಓ... ನೀವಾ?" ಅವನು ನಕ್ಕ.

"ನಾನೇ.... ಅದೇನಿದು? ಅಷ್ಟು ಏಕಾಗ್ರತೆಯಿಂದ ಅದನ್ನೇ ನೋಡ್ತಿದೀರಲ್ಲ. ಎನಿ ಪ್ರಾಬ್ಲಂ ವಿತ್ ಇಟ್?"

"ಏನೋ ಸ್ಪೆಷಲ್ ಅಂತ ಅನ್ನಿಸ್ತು.... ಅದಕ್ಕೇ ನೋಡ್ತಾ ಇದ್ದೆ"

"ಹಾಗಾದ್ರೆ ನಿಮಗೆ ತುಂಬಾ ಇಷ್ಟವಾಯ್ತು.... ಮಾಡಿಸಿದ್ದಕ್ಕೂ ಸಾರ್ಥಕ. ಎಲ್ಲರಿಗೂ ಇಷ್ಟವಾಗಿರುತ್ತೆ"

"ಬೇರೆಯವರ ವಿಷಯ ನಂಗೊತ್ತಿಲ್ಲ. ನನಗೆ ತುಂಬಾ ಇಷ್ಟವಾಯ್ತು.... ಅಲ್ಲದೇ ಈ ಮುಂಚೆ ಎಲ್ಲೋ ನೋಡಿದೀನಿ ಅನ್ನೋ ಫೀಲಿಂಗ್ ಬರ್ತಿದೆ."

"ಕ್ವೈಟ್ ಪಾಸಿಬಲ್. ನಮ್ಮ ಮನೇಲೂ ಇಂಥದೇ ಒಂದು ಹಳೇ ಪೀಸು ಇದೆ. ಅದನ್ನು ಚಿಕ್ಕ ವಯಸ್ನಲ್ಲಿ ಎಷ್ಟೋ ಸಾರಿ ನೋಡಿದೀನಿ. ಆದರೆ ಅದರಲ್ಲಿ ಏನು ಸ್ಪೆಷಲ್ ಅಂತ ಮಾತ್ರ ತಿಳಿದಿಲ್ಲ...."

"ಅದು ಎಲ್ರಿಗೂ ತಿಳಿಯಲ್ಲ. ಅದರ ಬಗ್ಗೆ ಗೊತ್ತಿರುವವರಿಗೆ ಮಾತ್ರ ತಿಳಿದಿರುತ್ತೆ"

"ನಿಮಗೆ ತಿಳಿದಿದೆಯಾ?"

"ಓ.... ನಂಗೆ ನೋಡಿದ ಕೂಡಲೇ ಅರ್ಥವಾಯ್ತು...."

"ಅದನ್ನು ನಿಧಾನವಾಗಿ ನೋಡಿ.... ಆಮೇಲೆ ನಂಗೆ ಹೇಳಿ ಪರವಾಗಿಲ್ಲ...." ಅವನು ನಗುತ್ತಾ ಅಲ್ಲಿಂದ ದೂರ ಸರಿದು ಹೋದ. ಅವಳಿಗೆ ಕಸಿವಿಸಿಯಾಗಿತ್ತು. ಅಲ್ಲಿ ಭಜನಾ ಮಂದಿರದಲ್ಲಿ ಯಾರೂ ಇರಲಿಲ್ಲ. ಅದಾಗಲೇ ಎಲ್ಲರೂ ಹೊರಟು ಹೋಗಿದ್ದರು. ಮುಜುಗರವೆನಿಸಿತ್ತು. ತನ್ನ ರೂಮಿಗೆ ಬಂದು, ಕಬೋರ್ಡ್‌ನೊಳಗೆ, ನೆನಪಿನ ಕಾಣಿಕೆಯನ್ನು ಇಟ್ಟು, ಮತ್ತೆ ಹೊರಕ್ಕೆ ಬಂದಳು. ಊಟದ ಸಮಯವಾಗಿತ್ತು. .... ಊಟದ ಹಾಲ್‌ನ ಕಡೆಗೆ ನಡೆದಳು.

"ಚಿಕ್ಕಮ್ಮಾ....ಇವರೇ ಸುಜಯಾ ಅಂತ. ನಮ್ಮ ಆಶ್ರಮದ ಹೊಸಾ ಟೀಚರ್....." ವಿವೇಕ ಪರಿಚಯ ಮಾಡಿ ಕೊಟ್ಟ.

"ನಾನು ಆಗ್ಲೇ ಅಂದುಕೊಂಡೆ. ನೀನು ಈಗ ಪರಿಚಯ ಮಾಡಿಸಿಕೊಡ್ತಿದೀಯ.... ನಿಮ್ಮ ತಂದೆ ತಾಯೀನ ಕರೆದಿಲ್ವಾ?"

"ಸಾಯಂಕಾಲ ಬರಬಹುದು"

"ಸಾಯಂಕಾಲ ಮರೀದೇ ನನಗೆ ಪರಿಚಯ ಮಾಡಿಕೊಡು. ನಾನು ಅವರ ಹತ್ರ ಮುಖ್ಯವಾದ ವಿಷಯವನ್ನು ಮಾತಾಡ್ಬೇಕು"

"ಎಲ್ಲರ ಹತ್ರಾನೂ ಮುಖ್ಯವಾದ ವಿಷಯಾನ್ನ ಮಾತಾಡ್ಬೇಕೂಂತೀರಲ್ಲ ಚಿಕ್ಕಮ್ಮ.... ಅದ್ಯಾಕೆ?" ವಿವೇಕ ಕೆಣಕಿದ.

"ಅದೆಲ್ಲ ನಿಂಗ್ಯಾಕೆ? ನಾನು ಇರೋದೇ ಹಾಗೆ. ಊಟ ಮಾಡಿ ಒಂದು ಗಳಿಗೆ ಸುಧಾರಿಸ್ಕೋಬೇಕು.... ನಿಮ್ಮಪ್ಪಂಗೆ ಅಲ್ಲಿಗೇ ಊಟ ಕಳಿಸಿಕೊಡಿ... ಅವರು ಎದ್ದು ಬರೋದು ಬೇಡ. ಈಗಾಗ್ಲೇ ಅವರು ಸುಸ್ತಾಗಿರುವಂತಿದೆ"

"ಏನೂ ಇಲ್ಲ. ಇವತ್ತು ಅಪ್ಪ ಎಷ್ಟು ಖುಷಿಯಾಗಿದ್ರು ಗೊತ್ತಾ? ಭಜನಾ ಮಂದಿರದಲ್ಲಂತೂ ಹೆಚ್ಚಿನ ಖುಷಿಯಿಂದ ಇದ್ದರು."

"ನಾನು ಹೇಳಿದಷ್ಟು ಕೇಳು ವಿವೇಕ. ಅವಿವೇಕಿ ಥರ ಆಡಬೇಡ"

"ಸರಿ ಬಿಡಿ. ಅಪ್ಪ ಏನಾದ್ರೂ ಅಂದ್ರೆ ನಾನು ನಿಮ್ಮ ತಲೆ ಮೇಲೆ ಹಾಕ್ತೀನಿ"

"ಹಾಕೋ.... ಹಾಕು. ನಿಮ್ಮಗಳ ದೆಸೆಯಿಂದ, ನಾನೇನು ಕಮ್ಮಿ ಅನ್ನಿಸ್ಕೊಂಡಿದೀನಾ? ನಿಮ್ಮಪ್ಪಂಗೆ ವಯಸ್ಸಾಗಿದೆ. ಅರಳು ಮರುಳು... ಅದಕ್ಕೆ ಬೆಲೆಯೇ ಇಲ್ಲ"

"ನೋಡಿ ಸುಜಯ, ಚಿಕ್ಕಮ್ಮ ಹೇಗಾಡ್ತಾರೆ?" ಸುಜಯಳ ಕಡೆ ತಿರುಗಿದ. "ಬನ್ನಿ ಇಲ್ಲಿದ್ರೆ ಅವರ ಪುರಾಣ ಈ ದಿನವೆಲ್ಲಾ ಮುಗಿಯುಲ್ಲ" ಪಿಸುದನಿಯಲ್ಲಿ ಹೇಳಿ ಅವಳ ಕೈ ಎಳೆದ. ಅವಳು ಕೈ ಬಿಡಿಸಿಕೊಂಡಳು.

"ಹೋಗಮ್ಮಾ ಹೋಗು. ಕೈ ಹಿಡಿದುಕೊಂಡೇ ಹೋಗು ಪರವಾಗಿಲ್ಲ" ಸಾವಿತ್ರಮ್ಮ ತಮಾಷೆಯಾಗಿ ನುಡಿದಾಗ, ಅವಳ ಮುಖ ಕೆಂದಾವರೆಯಂತಾಗಿತ್ತು.

"ಚಿಕ್ಕಮ್ಮನ ಮಾತಿಗೆ ಗಮನ ಕೊಡಬೇಡಿ. ಅವರಿಗೆ ಸ್ವಲ್ಪ ಅರಳು ಮರಳು. ಬಾಯಿಗೆ ಬಂದ ಹಾಗೆ ಮಾತಾಡ್ತಾರೆ. ಆಮೇಲೆ ನಮ್ಮನ್ನೇ ಅಂತಾರೆ.... ಅದರಲ್ಲೂ ನನ್ನನ್ನಂತೂ..... ಅಬ್ಬಬ್ಬಾ, ಅದಕ್ಕೇ ಇವರಿಂದ ದೂರವಾಗಿ ಫಾರಿನ್ನಿಗೆ ಹೊರಟು ಹೋಗೋಣ ಅಂತ ಡಿಸೈಡ್ ಮಾಡಿದೀನಿ. ಯಾಕೋ ಏನೋ ಇನ್ನೂ ಸರಿಯಾಗಿ ಟೈಂ ಕೂಡಿ ಬಂದಿಲ್ಲ"

"ನಿಮ್ಮ ತಂದೆಗೆ ನಾನು ಊಟ ಕೊಟ್ಟು ಬರ್ಲಾ?"

"ನೀವಾ? ನೀವ್ಯಾಕೆ? ಅಡುಗೆಯೋರು ಇದಾರೆ. ನಿಮಗ್ಯಾಕೆ ಈ ತೊಂದರೆ...."

"ದಿನಾ ಅಡುಗೆಯವರು ನೋಡಿಕೊಳ್ತಾರೆ. ಇವತ್ತು ವಿಶೇಷ ಅಲ್ವಾ? ನಿಮಗೆ, ನಿಮ್ಮಕ್ಕಂಗೆ ಬಿಡುವಿಲ್ಲ. ನಾನು ಫ್ರೀಯಾಗಿದೀನಲ್ಲ. ಅದಕ್ಕೇ ಕೇಳ್ದೆ"

"ನಿಮ್ಮಿಷ್ಟ. ನಾನೇಕೆ ಬೇಡ ಅನ್ನಲಿ? ಚಿಕ್ಕಮ್ಮ ಹೇಳೋ ಹಾಗೆ ಅಪ್ಪನಿಗೂ ಅರಳು ಮರಳು ಇರಬಹುದು. ಏನಾದ್ರೂ ವಿಚಿತ್ರವಾಗಿ ಮಾತಾಡಿದರೆ ಬೇಸರ ಪಟ್ಕೋಬೇಡಿ" ಸುಜಯ ಸುಮ್ಮನೇ ನಕ್ಕು ಪಾಕಶಾಲೆಯ ಕಡೆಗೆ ನಡೆದಳು.

"ಯಾರು? ಚಂದ್ರಣ್ಣಾನಾ!" ಮಲಗಿದ್ದಲ್ಲಿಂದಲೇ ಆತ ಕೇಳಿದರು.

"ಅಲ್ಲ. ನಾನು...." ಎನ್ನುತ್ತಾ ಊಟದ ತಟ್ಟೆಯನ್ನು ಹಿಡಿದು ಒಳಗೆ ಬಂದಳು.

"ನೀನಾ? ಅದೇನದು ಕೈಯಲ್ಲಿ?" ಇದ್ದು ಕುಳಿತರು.

"ಊಟ.... ನಿಮಗೆ...."

"ನೀನ್ಯಾಕಮ್ಮಾ ತಂದೆ? ಅಡುಗೆಯವರು ತಂದು ಕೊಡುತ್ತಿದ್ರು. ನಿನ್ನ ಊಟ

ಆಯ್ತಾ?"

"ಇಲ್ಲ. ಆಮೇಲೆ ಮಾಡ್ತೀನಿ"

"ನಂಗೇನು ಅವಸರವಿತ್ತು? ಬೆಳಿಗ್ಗೆ ತಿಂದ ತಿಂಡಿಯೇ ಇನ್ನೂ ಅರಗಿಲ್ಲ" ಊಟದ ತಟ್ಟೆಯನ್ನು ಪಕ್ಕದ ಟೇಬಲ್ ಮೇಲೆ ಇಟ್ಟಳು.

"ನಾನು ನಿಮಗೆ ಥ್ಯಾಂಕ್ಸ್ ಹೇಳಬೇಕಾಗಿತ್ತು...."

"ಥ್ಯಾಂಕ್ಸಾ? ಯಾಕಮ್ಮಾ? ಅಂಥಾದ್ದೇನು ಮಾಡಿದೆ ನಾನು?"

"ಇವತ್ತು ನೀವು ಕೊಟ್ಟಿರಲ್ಲ 'ನೆನಪಿನ ಕಾಣಿಕೆ' ಅದು ತುಂಬಾ ಚೆನ್ನಾಗಿದೆ. ಬಹಳ ಅರ್ಥಪೂರ್ಣವಾಗಿದೆ"

"ಅಂದ್ರೇ, ಅದನ್ನು ನೀನು ಕಣ್ಣಲ್ಲಿ ಕಣ್ಣಿಟ್ಟು, ಮನಸ್ನಲ್ಲಿ ಮನಸ್ಸಿಟ್ಟು ನೋಡಿದೀಯ ಅಂತ ಅರ್ಥ ಆಯ್ತು. ತುಂಬಾ ಸಂತೋಷ ಆಯ್ತು.... ಊಟದಲ್ಲಿ ಏನೇನಿದೆ?"

"ಬಿಸಿಬೇಳೆಬಾತ್, ಪೊಂಗಲ್, ಮೊಸರನ್ನ, ಬೋಂಡಾ, ಪಾಯಸ..." ಆತ ಗೊಳ್ಳನೆ ನಕ್ಕರು.

"ಇಷ್ಟನ್ನೆಲ್ಲಾ ನಾನು ಈ ವಯಸ್ನಲ್ಲಿ ತಿಂದ್ರೆ ಮುಗೀತು ನನ್ನ ಕತೆ."

"ನನಗೆ ಸ್ವಲ್ಪ ಪೊಂಗಲು, ಪಾಯಸ, ಮೊಸರನ್ನ ಸಾಕು. ಅಲ್ಲಿ ಒಂದು ಚಿಕ್ಕ ತಟ್ಟೆಯಿದೆ. ಅದಕ್ಕೆ ಸ್ವಲ್ಪ ಸ್ವಲ್ಪ ಹಾಕಿ ಕೊಡು. ಉಳಿದದ್ದನ್ನು ನೀನೇ ತಿಂದು ಬಿಡು...." ಆತ ಹೇಳಿದಂತೆ ಸ್ವಲ್ಪ ಸ್ವಲ್ಪ ಬಡಿಸಿಕೊಟ್ಟಳು.

"ನಿನ್ನ ಹೆಸರು, ಸುಜಯಾ ಅಂತ ಅಲ್ವಾ? ದೇವರು ಒಳ್ಳೇದನ್ನ ಮಾಡ್ಲಿ ನಿಂಗೆ.... ಯಾವುದೋ ಕಾಲದ ದಿನಗಳು ನನಗೆ ನೆನಪಿಗೆ ಬರುತ್ತಿದೆ. ಅದ್ಯಾಕೆ ಇವತ್ತು ನಿಂಗೆ ನನ್ನ ಮೇಲೆ ಇಷ್ಟು ಪ್ರೀತಿ? ನೀನು ಬರೀ ಥ್ಯಾಂಕ್ಸ್ ಹೇಳೋಕೆ ಬಂದಿಲ್ಲ...." ಸುಜಯ ಉತ್ತರಿಸಲಿಲ್ಲ. ಏಕೋ ಏನೋ ಅವಳ ಕಣ್ಣುಗಳಿಂದ ನೀರು ಹರಿದಿತ್ತು. ಅದು ಆತನ ಗಮನಕ್ಕೆ ಬರಲಿಲ್ಲ. ಅವರ ಜೊತೆಯಲ್ಲಿ ಕೂತು ಸುಜಯಳೂ ತನ್ನ ಊಟವನ್ನು ಮುಗಿಸಿದಳು. ಅವರು ತಟ್ಟೆಯಲ್ಲೇ ಕೈ ತೊಳೆದು ಟವೆಲಲ್ಲಿ ಕೈ ಒರೆಸಿ ದಿಂಬಿಗೆ ಒರಗಿದರು. "ಇದೆಲ್ಲಾ ಹೀಗೇ ಇರಲಿ ಬಿಡು.... ನೀನು ತೆಗೆಯೋಕೆ ಹೋಗಬೇಡ. ಕೆಲಸದವಳು ಬಂದು ತೆಗೀತಾಳೆ"

"ನೀವು ರೆಸ್ಟ್ ತಗೊಳ್ಳಿ. ನನಗೆ ಇನ್ನು ಕೆಲಸಗಳು ಇವೆ. ಸಾಯಂಕಾಲದ ಕಾರ್ಯಕ್ರಮಕ್ಕೆ ಸಿದ್ಧವಾಗಬೇಕು" ಅಷ್ಟರಲ್ಲಿ ವಿವೇಕ ಅವಳನ್ನು ಹುಡುಕಿಕೊಂಡು ಅಲ್ಲಿಗೆ ಬಂದ.

"ಇನ್ನೂ ಇಲ್ಲೇ ಇದೀರಾ ನೀವು? ಎಲ್ಲೆಲ್ಲೋ ಹುಡುಕಿದ್ದಾಯ್ತು. ಬನ್ನಿ ಊಟ ಮಾಡೋರಂತೆ" ಅವಳು ಸುಮ್ಮನೇ ಅವನ ಹಿಂದೆ ಹೊರಟಳು.

"ಯಾಕ್ರೀ ಡಲ್ ಆಗಿದೀರಿ. ಅಪ್ಪ ಏನಾದ್ರೂ ಅಂದ್ರಾ?"

"ಇಲ್ಲ. ನನಗೆ ನನ್ನ ತಂದೆಯ ನೆನಪಾಯಿತು"

"ಸಾಯಂಕಾಲ ನಿಮ್ಮ ಪೇರೆಂಟ್ಸ್ ಬರ್ತಾರೆ ತಾನೇ...." ಊಟ ಮುಗಿಸಿದ ಸಾವಿತ್ರಮ್ಮ ಅತ್ತ ಬಂದಳು. ಒಟ್ಟಿಗೇ ಬರುತ್ತಿದ್ದ ವಿವೇಕ-ಸುಜಯರನ್ನು ಕಂಡು ಅವಳ ಕಣ್ಣುಗಳು ನಕ್ಕವು.

"ಅದೇನು ಗುಟ್ಟುಗುಟ್ಟಾಗಿ ಇಬ್ರೇ ತಿರುಗಾಡ್ತಿದೀರಿ.... ಊಟ ಗೀಟ ಬೇಡ್ವಾ ಇಬ್ರಿಗೂ"

"ಚಿಕ್ಕಮ್ಮಾ ನಾವು ಊಟಕ್ಕೇ ಹೋಗ್ತಾ ಇರೋದು. ನಿಮ್ಮ ಊಟ ಆಯ್ತೋ ಇಲ್ವೋ... ಸ್ವಲ್ಪ ಹೊತ್ತು ಮಲಕ್ಕೊಳ್ಳಿ. ನಾಲ್ಕು ಗಂಟೆಗೇ ಎಬ್ಬಿಸ್ತೀನಿ. ಎದ್ದು ಅಲಂಕಾರ ಮಾಡ್ಕೊಂಡು, ಒಳ್ಳೇ ಸೀರೆ ಉಟ್ಟುಕೊಂಡು. ಮುಂದಿನ ಸಾಲಿನಲ್ಲಿ ಕೂತ್ಕೋಳ್ಳೋ ರಂತೆ. ಬನ್ನೀ ಸುಜಯಾ...." ಅವಳ ಕೈ ಹಿಡಿದು, ನಿಲ್ಲಲು ಅವಕಾಶ ಕೊಡದಂತೆ ಎಳೆದುಕೊಂಡು ಹೋದ. ಸಾವಿತ್ರಮ್ಮ ಮೂಗಿನ ಮೇಲೆ ಬೆರಳನ್ನಿಟ್ಟುಕೊಂಡು ನಿಂತಳು.

* * *

ಸಾಯಂಕಾಲದ ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಎಲ್ಲರೂ ಸಿದ್ಧರಾಗಿದ್ದರು. ಆಹ್ವಾನಿತರು ಕೆಲವರು ಬರತೊಡಗಿದ್ದರು. ಸುಜಯ ಸಿದ್ಧಳಾಗಿ, ತನ್ನ ಕಡೆಯವರನ್ನು ನಿರೀಕ್ಷಿಸು ತ್ತಿದ್ದಳು. ಲೀಲಾ ಮಹೇಶನ ಬರುವನ್ನು ಎದುರು ನೋಡುತ್ತಿದ್ದಳು. ಮಹೇಶನ ಕಾರನ್ನು ಕಂಡ ಕೂಡಲೇ, ಸುಜಯ ಅತಿಥಿಗಳನ್ನು ಸ್ವಾಗತಿಸುವ ಸ್ಥಳಕ್ಕೆ ಬಂದು ನಿಂತಳು. ಮೊದಲಿಗೆ ಕಂಡವಳು ದೀಪಾ. ಅವಳ ಹಿಂದೆ ವನಜಮ್ಮ. ಎಲ್ಲರಿಗಿಂತ ಹಿಂದೆ ಮಹೇಶ.... ಸುಜಯ ಮುಂದೆ ಬಂದು ದೀಪಾಳ ಕೈ ಹಿಡಿದಳು.

"ಸಧ್ಯ ಬಂದೆಯಲ್ಲೇ, ನೀನೆಲ್ಲಿ ಬರುವುದಿಲ್ಲವೋ ಅಂತಂದುಕೊಂಡಿದ್ದೆ" ವನಜಮ್ಮ ನಕ್ಕಂತೆ ಮಾಡಿ, ಅತ್ತ ಇತ್ತ ನೋಡುತ್ತಿದ್ದಳು. ಸಾವಿತ್ರಮ್ಮ ಕಾಣಿಸಿಕೊಂಡಳು. ಆಕೆ ಇದ್ದೆಡೆಗೆ ಈಕೆಯೇ ನಡೆದಳು. ಮಹೇಶ ಸುಜಯಳನ್ನು ಮೆಚ್ಚುಗೆಯಿಂದ ನೋಡಿದ. ಕಾರ್ಯಕ್ರಮಕ್ಕಾಗಿ ಸುಜಯ ವಿಶೇಷವಾಗಿ ಅಲಂಕರಿಸಿಕೊಂಡಿದ್ದಳು.

"ನೀನು ತುಂಬಾ ಚೆನ್ನಾಗಿ ಕಾಣ್ತಿದೀಯ.... ಅಪರೂಪಕ್ಕೆ ಚೆನ್ನಾಗಿ ಡ್ರೆಸ್ ಮಾಡ್ಕೊಂಡು ಬಿಟ್ಟಿದೀಯ.... ಹೊಸ್ದಾ ಈ ಸೀರೆ?" ದೀಪಾ ಕೇಳಿದಳು.

"ಅಮ್ಮಂದು ಈ ಸೀರೆ, ಬ್ಲೌಸ್ ಮಾತ್ರ ನನ್ನದು" ನಕ್ಕಳು. ಮಹೇಶನೂ ತನ್ನ ನಗೆಯನ್ನು ಸೇರಿಸಿದ. "ಬನ್ನಿ ಎಲ್ಲಾ ಕೂತ್ಕೋಳ್ಳೋರಂತೆ" ಸುಜಯ ಅವರುಗಳನ್ನು ಕುರ್ಚಿಗಳನ್ನು ಹಾಕಿದ್ದೆಡೆಗೆ ಕರೆತಂದಳು. ಅಷ್ಟರಲ್ಲಿ ಅಲ್ಲಿಗೆ ಲೀಲಾ ಹಾಗೂ ವಿವೇಕ ಬಂಧರು. ಸುಜಯ ಪರಿಚಯ ಮಾಡಿಕೊಡುವ ಮೊದಲೇ ಲೀಲಾ ಮಹೇಶನಿಗೆ ಹಲೋ.... ಹೇಳಿದ್ದಳು.... ವಿವೇಕ ದೀಪಳನ್ನೇ ಮೇಲಿಂದ ಕೆಳಕ್ಕೆ ನೋಡುತ್ತಿದ್ದ. ಮಹೇಶ ಮುಜುಗರಗೊಂಡಿದ್ದ. ಸಾವಿತ್ರಮ್ಮನೊಂದಿಗೆ ವನಜಮ್ಮನೂ ಅತ್ತ ಬಂದಳು. ಎಲ್ಲರೂ ಕುಳಿತರು.

"ನಮಸ್ಕಾರ ಅಮ್ಮಾ...." ಲೀಲಾ ವಿನಯದಿಂದ ವನಜಮ್ಮನಿಗೆ ಕೈ ಮುಗಿದಳು...

"ಲೀಲು ನೀನು ಹೋಗು. ನಾನು ಇಲ್ಲೇ ಇವರ ಜೊತೆಗಿರ್ತೀನಿ" ಸಾವಿತ್ರಮ್ಮ ನುಡಿದಾಗ, ಲೀಲಾ ಸುಜಯಳ ಕಡೆ ತಿರುಗಿದಳು.

"ಬನ್ನಿ ಸುಜಯ... ವಿವೇಕ ಹೋಗಿ ಅಪ್ಪನ್ನ ಕರ್ಕೊಂಡು ಬಾ...." ಲೀಲಾ ವೇದಿಕೆಯ ಕಡೆ ನಡೆದಳು. ಸುಜಯ ಅವಳನ್ನು ಹಿಂಬಾಲಿಸಿದಳು. ವಿವೇಕ ತನ್ನ ತಂದೆಯನ್ನು ಕರೆತಂದು ಮುಂದಿನ ಸಾಲಿನ ಕುರ್ಚಿಯಲ್ಲಿ ಕೂರಿಸಿದ. ಕೆಲವೇ ನಿಮಿಷಗಳಲ್ಲಿ ಕಾರ್ಯಕ್ರಮ ಪ್ರಾರಂಭವಾಯಿತು.

ಮೊದಲಿಗೆ ಪ್ರಾರ್ಥನೆ. ಸುಜಯಳ ಸಹೋದ್ಯೋಗಿ ರಂಜಿತಾ, ಗಣೇಶನ್ನ ಕುರಿತ ದೇವರನಾಮ ಹಾಡಿದಳು. ನಂತರ ವಿವೇಕ ಎಲ್ಲರನ್ನೂ ಸ್ವಾಗತಿಸಿದ. ಕಾರ್ಯದರ್ಶಿಗಳು ಆಶ್ರಮದ ಬೆಳವಣಿಗೆಯ ಬಗ್ಗೆ ಮಾತನಾಡಿದರು. ಅಲ್ಲಿಯ ಹಿರಿಯ ವೃದ್ಧರೊಬ್ಬರು, ಆಶ್ರಮವನ್ನು ಕುರಿತು, ಪ್ರಶಂಸೆಯ ಮಾತುಗಳನ್ನಾಡಿದರು. "ವೃದ್ಧಾಶ್ರಮಗಳು ಬೆಳೆಯಲಿ, ಹುಟ್ಟಿಕೊಳ್ಳಲಿ ಅಂತ ನಾನು ಹಾರೈಸುವುದಿಲ್ಲ. ಸಮಾಜದ ಸಂಬಂಧಗಳಿಗೆ ಇದು ವರವಲ್ಲ. ಆದರೂ ಇಂತಹ ಆಶ್ರಮಗಳು ಇದ್ದಲ್ಲಿ, ಮಕ್ಕಳಿಗೆ, ಸಮಾಜಕ್ಕೆ ಬೇಡವಾದ ವೃದ್ಧರು, ನೆಮ್ಮದಿಯಿಂದ ಇರಲು ಬಯಸುವುದು ಸಹಜ ಎನಿಸುತ್ತದೆ. ತಮ್ಮ ಜೀವಿತದ ಉಳಿದ ಕಾಲವನ್ನು ತೃಪ್ತಿಯಿಂದ ಕಳೆಯುವುದಕ್ಕೆ ಈ ವೃದ್ಧಾಶ್ರಮಗಳು ಸಹಕಾರಿಯಾಗುತ್ತವೆ. ಇಲ್ಲಿ ಸೇರಿಕೊಂಡಿರುವ ವೃದ್ಧರೆಲ್ಲರ ಪರವಾಗಿ, ಈ ಸಂಧ್ಯಾಶ್ರಮದ ಆಡಳಿತ ವರ್ಗದವರಿಗೆಲ್ಲ ನಾನು ಕೃತಜ್ಞತೆಯನ್ನು ಸಲ್ಲಿಸುತ್ತೇನೆ" ಪ್ರೇಕ್ಷಕರು ಚಪ್ಪಾಳೆ ತಟ್ಟಿ ತನ್ಮೂಲಕ ಅಭಿನಂದನೆ ಪ್ರಕಟಿಸಿದರು. ನಂತರ ಅಲ್ಲಿಯ ಸಂಸ್ಥಾಪಕರಾದ ಸುಬ್ಬರಾಮಪ್ಪನವರು ವೇದಿಕೆಗೆ ಬಂದರು.

"ನಾನು ಮನೆ ಮಠವನ್ನು ಬಿಟ್ಟು ಈ ವೃದ್ಧಾಶ್ರಮದಲ್ಲಿ ಯಾಕೆ ವಾಸ ಮಾಡುತ್ತಿರುವೆನೆಂಬ ಕುತೂಹಲ ನಿಮಗಿರಬಹುದು. ಇದು ನಾನೇ ಸ್ಥಾಪಿಸಿದ ಆಶ್ರಮ. ಮೊದಲ ಸದಸ್ಯ ನಾನೇ. ಇದು ನಾನೇ ಆರಿಸಿಕೊಂಡ ಜೀವನ.... ಮನೆಯಿಂದ ಯಾರಿಗೂ ಬೇಡದವನಾಗಿ ಹೊರ ಬಿದ್ದವನಲ್ಲ. ಅದಕ್ಕೆ ಬೇರೆಯೇ ಕಾರಣವಿದೆ. ಅದನ್ನು ಇಲ್ಲಿ ಹೇಳಬೇಕಾದ ಅಗತ್ಯವಿಲ್ಲ. ನಾನೇ ಇಲ್ಲಿ ಇದ್ದುದರಿಂದ, ಇಲ್ಲಿಯ ವ್ಯವಸ್ಥೆಗಳ ಬಗ್ಗೆ ಹೆಚ್ಚು ಹೆಚ್ಚು ಗಮನವನ್ನು ಹರಿಸಲು ಸಾಧ್ಯವಾಯಿತು. ನನ್ನ ಹಿರಿಯ ಸ್ನೇಹಿತರೊಬ್ಬರು ಈಗ ತಾನೇ ಹೇಳಿದಂತೆ, ಒಂಟಿ ಜೀವನವನ್ನು ಮರೆಸುವ, ಉಳಿದ ಕಾಲವನ್ನು ನೆಮ್ಮದಿಯಿಂದ ಬಾಳುವಂತೆ ಈ ವೃದ್ಧಾಶ್ರಮ ಇಲ್ಲಿಯ ಸದಸ್ಯರಿಗೆ ಸಹಕಾರಿಯಾಗಿದೆ ಎಂದು ತಿಳಿದು ಹೆಚ್ಚು ಸಂತೋಷವಾಯಿತು. ಅನಂತರ ಪ್ರಾರಂಭವಾದದ್ದು ಅನಾಥಾಶ್ರಮ. ಹಾಗೇ ಅನಾಥಾಶ್ರಮದ ಮಕ್ಕಳಿಗೆಂದೇ ಪ್ರಾರಂಭವಾದದ್ದು ಈ ಶಾಲೆ. ಪ್ರಾಥಮಿಕ ಶಾಲೆಯನ್ನು ನಡೆಸುತ್ತಿದ್ದೇವೆ. ಉಪಾಧ್ಯಾ

ಯಿನ್ನಿಯರು ಇಲ್ಲಿ ನಿಷ್ಠೆಯಿಂದ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಶ್ರದ್ಧೆಯಿಂದ ಮಕ್ಕಳ ಅಭಿವೃದ್ಧಿಗೆ ಶ್ರಮಿಸುತ್ತಿದ್ದಾರೆ. ಅವರೆಲ್ಲರಿಗೂ ನನ್ನ ಶುಭ ಹಾರೈಕೆಗಳು. ಭಗವಂತನು ಅವರುಗಳನ್ನು ಚೆನ್ನಾಗಿ ಕಾಪಾಡಲಿ. ಈ ಅಭಿವೃದ್ಧಿಗೆ ಕಾರಣರಾದವರು ಅನೇಕರು. ಕೆಲವರು, ಈ ದಿನ ನಮ್ಮೊಂದಿಗಿಲ್ಲ. ಕಾರ್ಯಕಾರಿ ಸಮಿತಿಯ ಸದಸ್ಯರು, ಸಿಬ್ಬಂದಿ ವರ್ಗದವರು ಎಲ್ಲರೂ ಕರ್ತವ್ಯ ನಿಷ್ಠರಾಗಿದ್ದಾರೆ. ಎಲ್ಲರಿಗೂ ನನ್ನ ಹೃತ್ಪೂರ್ವಕ ವಂದನೆಗಳು." ವಿವೇಕ ಅವರನ್ನು ವೇದಿಕೆಯಿಂದ ಕೆಳಕ್ಕೆ ಇಳಿಸಿಕೊಂಡು ಬಂದ.

ಆ ನಂತರ ಸಾಂಸ್ಕೃತಿಕ ಕಾರ್ಯಕ್ರಮಗಳು ಪ್ರಾರಂಭವಾಗಿದ್ದವು. ಅನಾಥಾಶ್ರಮದ ಮಕ್ಕಳು ಮನೋರಂಜನಾ ಕಾರ್ಯಕ್ರಮಗಳನ್ನು ನಡೆಸಿ ಕೊಟ್ಟರು. ಮಧ್ಯೆ ವಿವೇಕ ಬಂದು ನಿಂತು, ಒಂದೆರಡು ಸಿನಿಮಾ ಹಾಡುಗಳನ್ನು ಮಧುರವಾಗಿ ಹಾಡಿದ. ಎಲ್ಲರೂ ಚಪ್ಪಾಳೆ ತಟ್ಟಿ ಸಂತೋಷವನ್ನು ವ್ಯಕ್ತಪಡಿಸಿದರು. ಕಡೆಯಲ್ಲಿ ಲೀಲಾ ವೇದಿಕೆಗೆ ಬಂದು ವಂದನಾರ್ಪಣೆಯನ್ನು ಮಾಡಿದಳು. ಅಲ್ಲಿಗೆ ಕಾರ್ಯಕ್ರಮ ಮುಗಿದಿತ್ತು. ಎಲ್ಲವೂ ಚಿತ್ತಾಕರ್ಷವಾಗಿ ಜರುಗಿತ್ತು.

"ಸಭಿಕರೆಲ್ಲರೂ ಊಟ ಮಾಡಿಕೊಂಡು ಹೋಗಬೇಕೆಂದು ಪ್ರಾರ್ಥನೆ" ಕಾರ್ಯದರ್ಶಿಗಳು ವಿನಂತಿಸಿಕೊಂಡರು. ಎಲ್ಲರೂ ಊಟದ ಹಾಲ್‌ನ ಕಡೆಗೆ ನಡೆದರು.

"ಯಾಕೇ ಬಹಳ ಡಲ್ ಆಗಿದೀಯ? ಯಾರಾದ್ರೂ ಏನಾದ್ರೂ ಅಂದ್ರೇನೇ?" ದೀಪಾ ಸುಜಯಳ ಹೆಗಲ ಮೇಲೆ ಕೈಯಿಟ್ಟು ಕೇಳಿದಳು.

"ಇಲ್ಲ.... ಆದ್ರೂ ಯಾಕೋ ಏನೋ ಮೂಡ್ ಕೆಟ್ಟು ಹೋಗಿದೆ...."

"ಕಾರಣ ಏನೂಂತ ಕೇಳ್ಬಹುದಾ?"

"ಕಾರಣ ನಂಗೆ ಗೊತ್ತಿದ್ರೆ ತಾನೇ....."

"ಇದೊಳ್ಳೆ ಚೆನ್ನಾಗಿದೆ. ಅಪ್ಸೆಟ್ ಆಗಿರೋಳು ನೀನು. ನಿಂಗೇ ಕಾರಣ ಗೊತ್ತಿಲ್ಲ. ನಾನು ಹೇಳ್ಲಾ? ನಾನು ಗೆಸ್ ಮಾಡಿದೀನಿ"

"ಏನೂ ಬೇಡ..... ಚೆನ್ನಾಗಿ ಊಟ ಮಾಡು. ಇಲ್ಲಿಯ ಅಡುಗೆಯವರು ತುಂಬಾ ಚೆನ್ನಾಗಿ ಅಡುಗೆ ಮಾಡ್ತಾರೆ. ಬೇಕಾದ್ರೆ ಸ್ಪೆಷಲ್ ಏನಿದೆಯೋ ಅದನ್ನು ನಿಂಗೆ ಪ್ಯಾಕ್ ಮಾಡಿಸಿ ಕೊಡ್ತೀನಿ"

"ಮೊದಲು ತಿಂದು, ಆಮೇಲೆ ಬೇಕಾದ್ರೆ ನಾನೇ ಕೇಳ್ತೀನಿ.... ನಾನು ಈ ರಾತ್ರಿ ಇಲ್ಲೇ ಇದ್ರೆ ಏನಾದ್ರೂ ಅಬ್ಜೆಕ್ಷನ್ ಬರುತ್ತಾ?"

"ನೀನು ಇಲ್ಲಿರ್ತೀಯಾ? ನಿಂಗೂ ಅಷ್ಟು ಇಷ್ಟ ಆಯ್ತಾ ಈ ಆಶ್ರಮದ ಪರಿಸರ?"

"ಬೆಳಗಿನ ತಂಗಾಳಿಯಲ್ಲಿ ಇಲ್ಲಿ ಸ್ವಲ್ಪ ಸುತ್ತಾಡೋಣಾಂತ... ಮನೆಗೆ ಹೋಗಿ ಒಂಟಿಯಾಗಿ ಮಲಗುವ ಬದಲು, ಈ ರಾತ್ರಿ ನಿನ್ನ ಜೊತೆ ಸ್ವಲ್ಪ ಹರಟೆ

ಹೊಡೆಯೋಣಾಂತ...."

"ನನಗಂತೂ ತುಂಬಾ ಸುಸ್ತಾಗಿದೆ. ಹರಟೆ ಹೊಡೆಯುವ ಮೂಡ್‌ನಲ್ಲಿಲ್ಲ ನಾನು. ನಿದ್ದೆ ಮಾಡಬೇಕು. ಗೊರಕೆ ಹೊಡೆದ್ರೆ, ಕನವರಿಸ್ಕೊಂಡು ಕಿರುಚಿದ್ರೆ ಮಾತ್ರ ಬೈಬೇಡ ನನ್ನನ್ನು...."

"ಇದೇನೇ ಹೀಗೆ ಹೆದರಿಸ್ತೀಯ? ಊರಿಂದ ಬಂದ್ಮೇಲೆ ಬೋರ್ ಆಗ್ತಾ ಇರುತ್ತೆ. ಹೀಗಾಗಿ ನಿನ್ನ ಜೊತೆ ಕಾಲ ಕಳೆಯೋಣಾಂತ.... ಇಲ್ದಿದ್ರೆ ನೀನೂ ನಡೇ ನಮ್ಮ ಜೊತೆ.... ನಾಳೆ. ಹೇಗೂ ಇಲ್ಲಿ ಸ್ಕೂಲಿಗೆ ರಜ ಇರಬಹುದು"

"ಕೇಳಿ ನೋಡ್ತೀನಿ.... ಯಾವುದಕ್ಕೂ ಅವರ ಪರ್ಮಿಷನ್ ಬೇಕು"

"ನಿಂಗ್ಯಾಕೇ ಬೇಕಿತ್ತು ಇಂಥಾ ತೇಪೇದಾರಿ ಕೆಲ್ಸಾ? ಹಾಯಾಗಿ ಅಮ್ಮನ ಮನೇಲಿರಬಾರ್ದಾಗಿತ್ತಾ?"

"ಈಗ ನೀನೂ ಅಮ್ಮನ ಮನೆಲಿದೀಯ. ಹಾಯಾಗೆಲ್ಲಿದೀಯಾ?"

"ನನ್ನ ವಿಷಯ ಬೇರೆ.... ಮದುವೆ ಮಾಡ್ಕೊಂಡ್ಮೇಲೆ ಗಂಡನ್ನ ದೂರ ಬಿಟ್ಟು ಇರೋಕೆ ಕಷ್ಟ ಆಗುತ್ತೆ. ಆ ಅನುಭವ ಇನ್ನು ನಿನಗಾಗಿಲ್ಲ"

"ಅಂಥಾ ಅನುಭವ ಎಲ್ಲಾ ನಿನಗೇ ಇರಲಿ. ಬೇಗ ಬೇಗ ಊಟ ಮಾಡು"

ಇಬ್ಬರೂ ಒಟ್ಟಿಗೇ ಡೈನಿಂಗ್ ಹಾಲ್‌ಗೆ ಬಂದರು. ಕೈಯಲ್ಲಿ ತಟ್ಟೆ ಹಿಡಿದು ಸಾಲಿನಲ್ಲಿ ನಿಂತರು. ತಮಗೆ ಬೇಕಾದುದನ್ನು ಹಾಕಿಸಿಕೊಂಡು ಬಂದು, ಒಂದು ಕಡೆ ಕೂತರು. ಅಲ್ಲಿಗೆ ವಿವೇಕ ಬಂದ....

"ನೀವು ಇಲ್ಲಿದೀರಾ? ಸುಜಯಾ..... ಅಕ್ಕ ನಿಮ್ಮನ್ನ ಕೇಳ್ತಿದ್ಲು...."

"ಹೌದಾ? ನಿಮ್ಮಕ್ಕ ಎಲ್ಲಿ?"

"ಅಪ್ಪನ ರೂಂನಲ್ಲಿದ್ದಾಳೆ...."

"ನಿಮ್ಮ ತಂದೇದು ಊಟ ಆಯ್ತಾ?" ಸುಜಯ ಏಳಲು ಹೊರಟಳು. ದೀಪಾ ಎಡಗೈಯಿಂದ ಅವಳನ್ನು ಎಳೆದು ಕೂರಿಸಿದಳು.

"ನನಗೆ ಇಲ್ಲಿ ಕಂಪೆನಿ ಯಾರೂ ಇಲ್ಲ ವಿವೇಕ್. ಅದಕ್ಕೇ ನಾನೇ ಅವಳನ್ನು ಕೂರಿಸಿಕೊಂಡೆ.... ಅವಳನ್ನು ನಮ್ಮ ಜೊತೆ ಕರ್ಕೊಂಡು ಹೋಗ್ತಾ ಇದೀವಿ....."

"ಹೌದಾ ಸುಜಯಾ? ಅಕ್ಕನ್ನ ಕೇಳಿದ್ರಾ?"

"ಇಲ್ಲ.... ಕೇಳಿಲ್ಲ...." ಸುಜಯ ಬೇಗ ಬೇಗ ತಿನ್ನತೊಡಗಿದಳು.

"ನಿಧಾನವಾಗಿ ಊಟ ಮಾಡಿ ಸುಜಯಾ.... ಇಲ್ದಿದ್ರೆ ಗಂಟ್ಲಲ್ಲಿ ಹಿಡಕೊಳ್ಳುತ್ತೆ... ... ನೀರು ತಂದು ಕೊಡ್ಲಾ?"

"ಪ್ಲೀಸ್.... ಮರೆತು ಹೋಯ್ತು...." ದೀಪಾ ನುಡಿದಾಗ, ವಿವೇಕ ನೀರಿನ ಲೋಟಗಳನ್ನು ತರಲೆಂದು ಅತ್ತ ಸರಿದ.

"ಇವನೇನೇ ಒಳ್ಳೇ ಜೋಕರ್ ಥರಾ.... ನಿನ್ನ ಬೆನ್ನ ಹಿಂದೆ ಬಿದ್ದಿದ್ದಾನೆ.

ಹೇಗೆ ಟಾಲರೇಟ್ ಮಾಡ್ತೀಯೋ?"

"ಹಿಂದೆ ತಾನೇ ಬಿದ್ದಿರೋದು. ಮೈಮೇಲೆ ಬಿದ್ದಿಲ್ಲವಲ್ಲ.... ಮುಂದೆ ಬಂದರೆ ಹಾಯದ, ಹಿಂದೆ ಬಂದರೆ ಒದೆಯದ, ಪುಣ್ಯ ಕೋಟಿ ಹಸುವಿನಂಥಾ ಪ್ರಾಣಿ.... ಪಾಪ...." ಸುಜಯ ಲೊಚಗುಟ್ಟಿ ನಕ್ಕಳು. ದೀಪಳೂ ನಕ್ಕಳು.... ವಿವೇಕ ಬಂದು ನೀರಿನ ಲೋಟವನ್ನು ದೀಪಳಿಗೆ ಕೊಟ್ಟ.

"ಥ್ಯಾಂಕ್ ಯೂ ವಿವೇಕ್.... ನಂಗೆ ಇನ್ನೂ ಸ್ವಲ್ಪ ಭಾತ್ ಬೇಕಾಗಿತ್ತು. ಪ್ಲೀಸ್ ಹಾಕಿಸ್ಕೊಂಡು ಬರ್ತೀರಾ?"

"ಓ.... ಎಸ್.... " ಎನ್ನುತ್ತಾ ವಿವೇಕ ಅವಳು ಖಾಲಿ ಮಾಡಿದ್ದ ತಟ್ಟೆಯನ್ನು ಎತ್ತಿಕೊಂಡು ಅತ್ತ ಹೊರಟ.

"ಪಾಪಿ ಕಣೇ ನೀನು.... ಪಾಪ, ಅವನ ಇನ್ನೋಸೆನ್ಸ್‌ನ ದುರುಪಯೋಗ ಪಡಿಸ್ಕೋತಾ ಇದೀಯ...."

"ಅಯ್ಯೋ ಮಾಡ್ಲೀ ಬಿಡೇ. ಅವನೇನು ದಿನಾ ಮಾಡ್ತಾನಾ? ಗಂಡಸ್ರೇ ಹಾಗೆ. ಸ್ವಲ್ಪ ಸ್ಮಾರ್ಟ್ ಆಗಿರೋ ಹುಡುಗೀರನ್ನ ಕಂಡ್ರೆ ಸಾಕು.... ಕೈಕಟ್ಟಿ ನಿಂತು, ಹೇಳಿದ ಹಾಗೆ ಕೇಳ್ತಾರೆ"

"ದಿನೇಶ, ಮಹೇಶ ಆದ್ರೂ ಅಷ್ಟೇನಾ....?"

"ದಿನೇಶ ನಿನ್ನ ಗಂಡ, ಮಹೇಶ ನಿನ್ನ ಮೈದುನ.... ಇವನು ಯಾವ ಸಂಬಂಧ?"

"ನಿನಗ್ಯಾಕಮ್ಮಾ ಚುರ್ ಅಂತಿದೆ.... ಎನಿಥಿಂಗ್ ಕುಕಿಂಗ್?"

"ಕುಕಿಂಗೂ ಇಲ್ಲ, ಪ್ಯಾಕಿಂಗೂ ಇಲ್ಲ. ತಿಂದಿದ್ದು ಸಾಕಾಗಿದ್ರೆ, ಎದ್ದು ಕೈ ತೊಳಕೋ...... ಲೀಲಾ ಮೇಡಂ ಹತ್ರ ಮಾತಾಡೋಣ...."

"ಎಸ್....." ಎನ್ನುತ್ತಾ ದೀಪಾ ಎದ್ದಳು. ಎದುರಿಗೆ ಅತ್ತೆ ಸಿಕ್ಕಿದಳು.

"ಹೊಟ್ಟೆ ತುಂಬಾ ಊಟ ಮಾಡಿದ್ಯೇನೇ ದೀಪಾ! ಅಥವಾ ಬರಿ ಮಾತಾಡಿ ಮಾತಾಡಿ ಹೊಟ್ಟೆ ತುಂಬಿಸ್ಕೊಂಡ್ಯೋ?" ವನಜಮ್ಮ ವ್ಯಂಗ್ಯವಾಗಿ ಕೇಳಿದಾಗ, ಸುಜಯ ತನಗೆ ಕೇಳಿಸಲಿಲ್ಲ ಎಂಬಂತೆ ಮುಂದೆ ಮುಂದೆ ನಡೆದಳು.

"ಅತ್ತೇ.... ರಾತ್ರಿ ಇಲ್ಲಿಯೇ ಇದ್ದು ನಾಳೆ ಬರ್ತೀನಿ.... ನಾನು ಆಶ್ರಮವನ್ನು ನೋಡ್ಬೇಕು...."

"ಏನಿದೆ ಈ ಆಶ್ರಮದಲ್ಲಿ ಅಂತಹದ್ದು ನೋಡೋಕೆ. ಏನೂ ಬೇಡ. ಸುಮ್ಮನೇ ನಮ್ಮ ಜೊತೇಲಿ ಬಾ.... ದಿನೇಶಂಗೆ ಹೇಳಿದ್ರೆ ಖಂಡಿತಾ ಬೈಸ್ಕೋತೀಯ?"

"ಏನಂತೆ...." ಸಾವಿತ್ರಮ್ಮ ಹಿಂದಿನಿಂದ ಪ್ರಶ್ನಿಸಿದಳು.

"ನೋಡೀ ಸಾವಿತ್ರಮ್ಮ.... ದೀಪಾ ಇಲ್ಲಿರುತ್ತಾಳಂತೆ. ಈ ರಾತ್ರಿ..... ಮೊದಲೇ ಚೊಚ್ಚಿಲ ಬಸುರಿ. ನಮ್ಮ ಆತಂಕ ನಮಗೆ..... ಬೇಡ ಅಂತ ಹೇಳ್ದೆ...."

"ಇರಲಿ ಬಿಡಿ. ಇಲ್ಲಿ ಗೆಸ್ಟ್ ಹೌಸ್‌ನಲ್ಲಿ ಮಂಚ, ಸೊಳ್ಳೆ ಪರದೆ ಎಲ್ಲಾ ಇದೆ.

ಬಸುರಿ ಅಂತೀರಿ. ಅವಳ ಆಸೆಗೆ ಯಾಕೆ ಅಡ್ಡಿ ಮಾಡ್ತೀರಿ?"

"ನನಗೂ ಜವಾಬ್ದಾರಿ ಇದೆ ಸಾವಿತ್ರಮ್ಮ..... ಇವಳ ಗಂಡ, ಅಷ್ಟು ದೂರದಿಂದ ಕಳ್ಸಿದಾನೆ.... ಇವಳ ತಂದೆ ತಾಯಿ, ನಮ್ಮ ಮನೆಗೆ ಕಳ್ಸಿದಾರೆ.... ಇಲ್ಲಿ ಇವಳೊಬ್ಬಳನ್ನೇ ಬಿಟ್ಟು ಹೋಗುವ ಧೈರ್ಯ ನನಗಿಲ್ಲ"

"ಸುಜಯ ನನ್ನ ಜೊತೆಗೆ ಇರ್ತಾಳೆ ಅತ್ತೆ.... ನಂಗೇನೂ ಆಗುಲ್ಲ...."

"ಸುಜಯ, ಮದ್ವೆ ಆಗ್ದೇ ಇರೊ ಹುಡುಗಿ.... ರಾತ್ರಿ ನಿಂಗೆ ಒಂದು ಸುಸ್ತೋ, ಆಯಾಸವೋ ಆಯ್ತು ಅಂತಿಟ್ಕೋ, ಅವಳಿಗೇನು ಗೊತ್ತಾಗುತ್ತೆ?"

"ಇಲ್ಲೂ ಕ್ಲಿನಿಕ್ ಇದೆ. ಡಾಕ್ಟ್ರು ಇದಾರೆ ವನಜಮ್ಮ.... ಫೋನು ಮಾಡಿದ್ರೆ ತಕ್ಷಣ ಡಾಕ್ಟರ್ ಬರ್ತಾರೆ.... ನಿಮಗೆ ಅಷ್ಟು ಆತಂಕವಾದ್ರೆ, ನೀವೂ ಇಲ್ಲೇ ಇದ್ದು ಬಿಡಿ.... ನಿಮ್ಮ ಜೊತೆಗೆ ನಾನೂ ಇರ್ತೀನಿ"

"ನೋಡೋಣ ತಡೀರಿ. ನಮ್ಮ ಮಗನ್ನ ಒಂದ್ಮಾತು ಕೇಳ್ತೀನಿ" ವನಜಮ್ಮ ಕೈ ತೊಳೆದು, ಮಹೇಶನಿದ್ದ ಕಡೆಗೆ ಬಂದಳು.

"ಏನಮ್ಮಾ ಹೊರಡೋಣ್ವಾ? ಒಂಭತ್ತೂವರೆ ಆಗಿದೆ.... ಅತ್ತಿಗೆ ಎಲ್ಲಿ?"

"ಅವಳೇನೋ ಈ ರಾತ್ರಿ ಇಲ್ಲೇ ಇರ್ತಾಳಂತೆ. ಬೆಳಿಗ್ಗೆ ಆಶ್ರಮದಲ್ಲಿ ಸುತ್ತಾಡಬೇಕಂತೆ.... ನೀನಾದ್ರೂ ಹೇಳು. ಅದೆಲ್ಲ ಬೇಡಾಂತ, ನಿನ್ನ ಮಾತನ್ನು ಕೇಳಬಹುದು"

"ನಾನು ಬೇಡಾಂತ ಅಂದ್ರೆ ಕೆಟ್ಟೋನಾಗ್ತೀನಿ ಅಷ್ಟೇ.... ಇರಲಿ ಬಿಡು.... ಒಂದು ರಾತ್ರಿ ತಾನೇ?"

"ಒಂದು ರಾತ್ರೀಲಿ ಪ್ರಳಯ ಬೇಕಾದ್ರೂ ಆಗುತ್ತೆ. ಅವಳು ಗರ್ಭಿಣಿ.....ಏನಾದ್ರೂ ಹೆಚ್ಚು ಕಡಿಮೆ ಆದ್ರೆ... ನನಗೇ ಕೆಟ್ಟ ಹೆಸರು...." ದೀಪಾ ಖುಷಿಖುಷಿಯಾಗಿ ಅತ್ತೆಯ ಬಳಿಗೆ ಬಂದಳು.

"ನನಗೆ ಪರ್ಮಿಷನ್ ಸಿಕ್ಕಿದೆ.... ನಾನು ಇರಬಹುದಂತೆ...." ತಾಯಿ, ಮಗ ಮುಖ ಮುಖ ನೋಡಿಕೊಂಡರು.

"ಹಾಗಾದ್ರೆ, ನಾನೂ ಈ ರಾತ್ರಿ ಇಲ್ಲೇ ಉಳಕೊಳ್ತೀನಿ..... ಗೆಸ್ಟ್ ಹೌಸ್‌ನಲ್ಲಿ ರ್ತೀನಿ..... ಬೆಳಿಗ್ಗೆ ಇವಳನ್ನು ಕರಕೊಂಡೇ ನಾನು ವಾಪಸ್ಸು ಬರೋದು...."

"ಅತ್ತೇ..... ನೀವು? ನೀವು ಇಲ್ಲಿರ್ತೀರಾ?"

" ಯಾಕಮ್ಮಾ ನೀನು ಇರಬಹುದಂತೆ. ನಾನು ಇರಬಾರ್ದಾ?"

"ಮಹೇಶ್..... ಅಮ್ಮನ್ನ ಕರ್ಕೊಂಡ್ಹೋಗಿ..... ನಂಗೇನೂ ಆಗುಲ್ಲ.... ಸುಜಯಳ ಹತ್ರ ಮಾತಾಡ್ಬೇಕು. ಅವಳು ಸಿಕ್ಕೇ ಇಲ್ಲ...." ಮಹೇಶನಿಗೆ ಕಣ್ಣು ಸನ್ನೆ ಮಾಡಿದಳು. ಮಹೇಶ್ ತಾಯಿಯ ಕಡೆ ತಿರುಗಿದ.

"ಸಾವಿತ್ರಮ್ಮ, ಆಗ್ಲೇ ಇದ್ದು ಬಿಡಿ.... ಅಂತಂದ್ರು..... ನಂಗೂ ಅವರ ಹತ್ರ ಮಾತಾಡೋದಿದೆ.... ನೀನು ಹೋಗು ಮಹೇಶ. ಬೆಳಿಗ್ಗೆ ಇಲ್ಲಿ, ಆಶ್ರಮದಲ್ಲಿ ಸುತ್ತಾಡಿ,

ಕಾಲ ಕಳೆದ್ಮೇಲೆ ಫೋನು ಮಾಡ್ತೀನಿ. ಆಗ ಬರೂವಂತೆ"

"ನೀವೂ ಇಲ್ಲೇ ಇದ್ಬಿಡಿ ಮಹೇಶ್. ಗೆಸ್ಟ್ ಹೌಸ್‌ನಲ್ಲಿ ಬೇಕಾದಷ್ಟು ರೂಮುಗಳಿವೆಯಂತೆ...."

"ಅವನು ಮನೆಗೆ ಹೋಗಲಿ. ಬೀಗ ಹಾಕಿದೆ. ರಾತ್ರಿ ಅಲ್ಲಿ ಯಾರಾದ್ರೂ ಮನೇಲಿರಲೇಬೇಕು. ನೀನು ಹೊರಡು" ಮಹೇಶ ದಿಕ್ಕು ತೋಚದವನಂತೆ ಹಾಗೇ ನಿಂತಿದ್ದ.

"ಬಟ್ಟೆ ಗಿಟ್ಟೆ ಏನಿಲ್ಲವಲ್ಲಮ್ಮಾ...."

"ಒಂದು ರಾತ್ರಿ ಹೇಗೋ ಆಗುತ್ತೆ....." ಮಹೇಶ ಸುಜಯಳನ್ನು ಹುಡುಕಿಕೊಂಡು ಬಂದ.

"ಅತ್ತಿಗೆ ಇಲ್ಲಿ ಈ ರಾತ್ರಿ ಇರ್ತೀನಿ ಅಂತ ಹೇಳ್ತಿದಾರೆ ನಿಜಾನಾ?"

"ಹುಂ.... ಯಾಕೆ? ಎನಿ ಪ್ರಾಬ್ಲಂ?"

"ಅಮ್ಮಂಗೆ ಇಷ್ಟವಿಲ್ಲ. ಅತ್ಗೆ ಸ್ಪೆಷಲ್ ಅಂತ ಗೊತ್ತಲ್ಲ. ಸ್ವಲ್ಪ ಕೇರ್ ಫುಲ್ ಆಗಿರಬೇಕು.... ಅದಕ್ಕೇ...."

"ಹಾಗಾದ್ರೆ ಇರೋದು ಬೇಡ ಹೋಗು ಅಂತ ಹೇಳ್ಲಾ?"

"ಹಾಗಲ್ಲ.... ಒಂದು ರಾತ್ರೀಲಿ ಏನೂ ತೊಂದರೆ ಆಗುಲ್ಲ ಅಲ್ವಾ?"

"ಏನೂ ಆಗಬಾರದು.... ಇಲ್ಲಿಯೂ ಜನಗಳು ವಾಸ ಮಾಡ್ತಿದಾರೆ. ಕ್ಲಿನಿಕ್ ಇದೆ, ಡಾಕ್ಟ್ರು ಇದಾರೆ, ಕೆಲಸದ ಹೆಂಗಸರೂ ಇದ್ದಾರೆ.... ಆದರೂ, ನಿಮಗೆಲ್ಲ ಧೈರ್ಯವಿಲ್ಲದಿದ್ರೆ ನಾನು ದೀಪಾಗೆ ಹೇಳ್ತೀನಿ" ಕರ್ಕೊಂಡ್ಹೋಗಿ.

"ಬೇಡ.... ಬೇಡ.... ಅತ್ಗೆ ಇಲ್ಲಿರ್ತೀನಿ ಅಂತ ಅಂದ್ಮೇಲೆ, ಅಮ್ಮನೂ ಇಲ್ಲೇ ಇರ್ತೀನಿ ಅಂತ ನಿರ್ಧರಿಸಿದ್ದಾಳೆ...."

"ಯಾರು? ನಿಮ್ಮ ತಾಯೀನಾ? ಅವರು ನನ್ನ ರೂಮಿನಲ್ಲಿ ನಮ್ಮೊಂದಿಗೆ ಇರ್ತಾರಾ?" ಕಣ್ಣರಳಿಸಿ ಕೇಳಿದಳು.

"ಇಲ್ಲ. ಅವಳು ಗೆಸ್ಟ್ ಹೌಸಿನಲ್ಲಿರುತ್ತಾಳೆ. ನಾನು ನಾಳೆ ದಿನ ಬಂದು ಕರ್ಕೊಂಡು ಹೋಗ್ತೀನಿ"

"ಯಾಕೆ? ನೀವೂ ಇಲ್ಲೇ ಇದ್ದು ಬಿಡಬಹುದಲ್ಲ" ನಕ್ಕಳು.

"ತಮಾಷೆ ಮಾಡ್ತೀದೀರಾ ಮೇಡಂ.... ನಿಮ್ಮ ರೂಂನಲ್ಲಿ ನಂಗೆ ಜಾಗ ಇದೆಯಾ....?" ಅವಳ ಕಿವಿಗಳು ಬಿಸಿಯಾದವು, ಕದಪುಗಳು ಕೆಂಪಾದವು. ಕತ್ತಲಲ್ಲಿ ಅವನಿಗೆ ಕಾಣಲಿಲ್ಲ. "ಓ.ಕೆ. ನಾನು ಬರ್ತೀನಿ. ಅಷ್ಟು ದೂರ ಡ್ರೈವ್ ಮಾಡ್ಬೇಕು.... ಅತ್ಗೇನ, ಅಮ್ಮನ್ನ ಸಂಭಾಳಿಸೋ ಜವಾಬ್ದಾರಿ ನಿಮ್ಮದು...." ಸುಜಯ ಸುಮ್ಮನೇ ನಿಂತುಬಿಟ್ಟಳು. ಮಹೇಶ ಅಲ್ಲಿಂದ ಸರಿದು ಹೋದ.

"ಅದ್ಯಾಕೆ ಸುಜಯಾ ಇಲ್ಲಿ ಒಬ್ರೇ ನಿಂತಿದೀರಾ?" ಹಿಂದಿನಿಂದ ಲೀಲಾ

ಕೇಳಿದಾಗ, ಸುಜಯ ಬೆಚ್ಚಿದಳು.... ವಿವೇಕ ಅಲ್ಲಿಗೆ ಬಂದ.

"ಚಿಕ್ಕಮ್ಮ ಇಲ್ಲೆ ಇರ್ತಾರಂತೆ. ನೀನಾದ್ರೂ ಹೇಳು"

"ನಾನು ಹೇಳಿದ್ರೆ ಕೇಳ್ತಾರಾ? ಇರಲಿ ಬಿಡು. ಬೆಳಿಗ್ಗೆ ಬರ್ತಾರೆ...."

"ನಾವೂ ಇಲ್ಲೇ ಇದ್ದು ಬೆಳಿಗ್ಗೆ ಹೋಗೋಣ್ವಾ?"

"ಬೇಡ ವಿವೇಕ್.... ನನಗೆ ತುಂಬಾ ಸುಸ್ತಾಗಿದೆ. ಇಲ್ಲಿ ಹೊಸಾ ಜಾಗದಲ್ಲಿ ನನಗೆ ನಿದ್ದೆ ಬರಲ್ಲ. ಸೆಕ್ರೆಟರಿ ಹತ್ರ ಮಾತಾಡಿದೀನಿ. ನಾವು ನಾಳೆ ಬರದಿದ್ರೂ ನಡೆಯುತ್ತೆ. ನಡೀ ಹೊತ್ತಾಗಿದೆ.... "ಗುಡ್ ನೈಟ್ ಸುಜಯಾ..." ಲೀಲಾ ಮುಂದೆ ಹೋದಳು. ಹಿಂದೆ ಉಳಿದ ವಿವೇಕ ಸುಜಯಳ ಬಳಿಗೆ ಬಂದ.

"ನನ್ನ ಕಾರ್ಯಕ್ರಮ ಹೇಗಿತ್ತು? ಆ ಬಗ್ಗೆ ನೀವೂ ಏನೂ ಹೇಳ್ಲೇ ಇಲ್ಲ" ಎಂದ.

"ತುಂಬಾ ಚೆನ್ನಾಗಿತ್ತು. ನಿಮಗೆ ಹಾಡೋಕೆ ಬರುತ್ತೆ ಅಂತ ನಂಗೆ ಗೊತ್ತಿರಲಿಲ್ಲ"

"ಕಾಲೇಜ್ ಡೇಸ್‌ನಲ್ಲಿ ಹೊಸ ಹೊಸ ಹಾಡುಗಳನ್ನು ಬಹಳ ಹೇಳ್ತಿದ್ದೆ. ಇಂಥ ಬೆಳದಿಂಗಳ ರಾತ್ರಿಯಲ್ಲಿ ಗರ್ಲ್‌ಫ್ರೆಂಡ್ ಜೊತೆ ಸುತ್ತಾಡ್ತಾ ಹಾಡು ಹೇಳಿದ್ರೆ ಚೆನ್ನಾಗಿರುತ್ತೆ ಅಲ್ವಾ? ಆದರೆ ನಂಗೆ ಯಾರೂ ಗರ್ಲ್‌ಫ್ರೆಂಡ್ ಇಲ್ಲ. ನೀವು ನನ್ನ ಗರ್ಲ್‌ಫ್ರೆಂಡ್ ಆಗ್ತೀರಾ?" ಅವಳ ಕೈ ಹಿಡಿದು ತನ್ನ ತುಟಿಗಳಿಗೆ ಒತ್ತಿಕೊಂಡ. ಸುಜಯ ಕೈ ಬಿಡಿಸಿಕೊಂಡು, ಅಲ್ಲಿ ನಿಲ್ಲದೇ ತನ್ನ ರೂಮಿನ ಕಡೆಗೆ ಓಡಿದಳು. ಇವಳ ರೂಮಿನ ಬಾಗಿಲಲ್ಲಿ ಇವಳಿಗಾಗಿ ಕಾಯುತ್ತಾ ನಿಂತಿದ್ದ ದೀಪಾ, ಓಡಿ ಬಂದವಳನ್ನೇ ದಿಟ್ಟಿಸಿದಳು.

"ಯಾಕೇ ಹಾಗೆ ಓಡಿ ಬಂದೆ? ನಾಯಿ ಏನಾದ್ರೂ ಅಟ್ಟಿಸ್ಕೊಂಡು ಬಂತಾ?"

"ಏನೂ ಇಲ್ಲ..... ನೀನು ಕಾಯ್ತಾ ಇರ್ತೀಯಲ್ಲಾ ಅಂತ ಓಡಿ ಬಂದೆ....." ಎನ್ನುತ್ತಾ ರೂಮಿನ ಬಾಗಿಲನ್ನು ತೆರೆದಳು. ಇಲ್ಲಿ ಇರೋದು ಒಂದೇ ಮಂಚ. ನೀನು ಮೇಲೆ ಮಲಕ್ಕೋ ನಾನು ಕೆಳಗೆ ಏನಾದ್ರೂ ಹಾಸ್ಕೊಂಡು ಮಲಗ್ತೀನಿ"

"ನಂಗ್ಯಾಕೇ ಉಪಚಾರ. ನಾನು ಕೆಳಗೇ ಮಲಗ್ತೀನಿ"

"ಬೇಡ.... ನೀನು ಸ್ಪೆಷಲ್.... ನಿನಗೆ ಯಾವುದೇ ರೀತಿಯ ತೊಂದರೆ ಆಗ ಬಾರದು. ಏನಾದ್ರೂ ಆದ್ರೆ ಮೊದಲು ನಿಮ್ಮ ಅತ್ತೆಗೆ, ಮಹೇಶಂಗೆ.... ನಿನ್ನ ಗಂಡಂಗೆ ಉತ್ತರ ಕೊಡಬೇಕಾಗುತ್ತೆ.... ನೀನು ಮೇಲೆ ಮಲಕ್ಕೋ.... ನನಗೆ ಎಷ್ಟು ಆಯಾಸ ಆಗಿಧೆ ಅಂತಂದ್ರೆ, ಬರೀ ನೆಲದ ಮೇಲೆ ಮಲಗಿದ್ರೂ ಸಾಲಿಡ್ ನಿದ್ದೆ ಬರುತ್ತೆ"

"ನಿದ್ದೆ ಮಾಡ್ಬೇಡ್ವೇ.....ನಾನು ನಿನ್ಹತ್ರ ಮಾತಾಡ್ಬೇಕು...."

"ನೀನು ಆಡ್ತಾ ಇರು.... ನಿನ್ನ ಅತ್ತೆ ನಿನ್ನ ಕಾವಲಿಗೆ ಇಲ್ಲೇ ಇದ್ದಾರಂತೆ"

"ಮಹೇಶ್ ಹೇಳಿದ್ರಾ? ಅವರಿಗೆ ಸಾವಿತ್ರಮ್ಮನ ಕಂಪೆನಿ ಸಿಕ್ಕಿದೆ.... ಅಂದ್ಹಾಗೇ ಈ ಸಾವಿತ್ರಮ್ಮ ಯಾರು?"

"ಅವರು ತಮ್ಮ ಪರಿಚಯ ಹೇಳಿಕೊಳ್ಳಲಿಲ್ವಾ? ಅವರು ಲೀಲನ ಚಿಕ್ಕಮ್ಮ"

"ಲೀಲನ ಚಿಕ್ಕಮ್ಮ, ಅತ್ತೆಗೆ ಫ್ರೆಂಡು.... ಇವತ್ತು ನಮ್ಮ ಅತ್ತೆಗೆ ಖಂಡಿತಾ ನಿದ್ದೆ ಇಲ್ಲ.... ನನ್ನನ್ನು ಗೆಸ್ಟ್‌ಹೌಸ್‌ನಲ್ಲೇ ಮಲಕ್ಕೊಳ್ಳೂವಂತೆ ಬಾ ಅಂತ ಅಂದ್ರು.... ಆದ್ರೆ ಸಾವಿತ್ರಮ್ಮನೇ, ಪಾಪ ಬಸುರಿ ಹುಡುಗಿ, ಫ್ರೆಂಡ್ ಜೊತೆ ಮಲಕ್ಕೋಬೇಕು ಅಂತ ಆಸೆ ಪಡ್ತಿದೆ, ಹೋಗ್ಲಿ ಬಿಡಿ.... ನಮ್ಮಿಬ್ಬರ ಮಾತಿನ ಮಧ್ಯೆ ಈ ಹುಡುಗಿಗೆ ಬೇಸರ ಆಗುತ್ತೆ ಅಂತ ನನ್ನನ್ನು ಬಚಾವ್ ಮಾಡಿದ್ರು.... ಈ ಪ್ರೆಗ್ನೆನ್ಸಿಯಿಂದ ಎಷ್ಟು ಲಾಭ ಆಗ್ತಿದೆ. ಮಜಾ ಸಿಗ್ತಿದೆ ಗೊತ್ತಾ? ನನ್ನ ಆಸೆಗೆ ಯಾರೂ ಅಡ್ಡಿಯೇ ಮಾಡುಲ್ಲ..... ಏಯ್ ಸುಜೀ....ಕೇಳಿಸ್ಕೋತಾ ಇದೀಯೇನೇ.... ಹ್ಞಾಂ.... ಇಲ್ಲ; ಹ್ಞೂಂ ಇಲ್ಲ. ಮಲಗೇ ಬಿಟ್ಯಾ?"

"ಇಲ್ಲ ಹೇಳು ಕೇಳಿಸ್ಕೋತಾ ಇದೀನಿ....."

"ನಿದ್ದೆ ಮಂಪರಿನಲ್ಲಿ ನಿಂಗೇನು ಅರ್ಥವಾಗುತ್ತೆ. ಹೋಗ್ಲೀ ಮಲಕ್ಕೋ....." ಸುಜಯಳ ಉಸಿರಾಟ ಸಣ್ಣಗೆ ಕೇಳಿಸುತ್ತಿತ್ತು. ದೀಪಾ ತಾನೂ ನಿದ್ರಿಸಲು ಪ್ರಯತ್ನಿಸಿದಳು.

* * *

"ಆ ಹುಡುಗಿ ನಿಮಗೇನಾಗ್ಬೇಕು? ನಿಮ್ಮ ಸೊಸೆಗೆ ಸಂಬಂಧಿಯೋ? ಸ್ನೇಹಿತೆಯೋ?" ಸಾವಿತ್ರಮ್ಮ ಕೇಳಿದಳು.

"ಯಾವ ಹುಡುಗಿ?" ಏನೂ ಅರಿಯದವಳಂತೆ ವನಜಮ್ಮ ಕೇಳಿದಳು.

"ಅದೇ, ನಮ್ಮ ಆಶ್ರಮಕ್ಕೆ ಹೊಸ್ದಾಗಿ ಟೀಚರ್ ಆಗಿ ಬಂದು ಸೇರಿಕೊಂಡಿದೆಯಲ್ಲ ಆ ಹುಡುಗಿ..... ನಿಮ್ಮ ಸೊಸೆಗೆ ತುಂಬಾ ಹತ್ತಿರದವಳಾಗಿರಬೇಕು...."

"ಹೂಂ, ನಮ್ಮ ದೀಪಂಗೆ ಸೋದರತ್ತೆಯ ಮಗಳಾಗಬೇಕು..... ನನ್ನ ಸೊಸೆಗಿಂತ ವಯಸ್ನಲ್ಲಿ ದೊಡ್ಡೋಳು...."

"ಇನ್ನೂ ಮದುವೆ ಯಾಕೆ ಆಗಿಲ್ಲವೋ? ಅವರಪ್ಪ ಅಮ್ಮಂಗೆ ಇವಳೊಬ್ಬಳೇ ಮಗಳೋ ಅಥವಾ ಇನ್ನೂ ಬೇರೆ ಮಕ್ಕಳಿವೆಯೋ?"

"ಇನ್ನೂ ಒಂದಿದೆ..... ಬೇರೆ ಊರ್ನಲ್ಲಿದ್ಕೊಂಡು ಓದ್ತಿದೆ....."

"ಹಾಗಾದ್ರೆ ಅಪ್ಪ ಅಮ್ಮನ ಜೊತೆ ಯಾರೂ ಇಲ್ಲ... ಗಂಡುಮಕ್ಕಳು ಇಲ್ಲವೇನೋ?"

"ಗಂಡು ಮಕ್ಕಳಿಲ್ಲ. ಅದಕ್ಕೇ ಅವಳಪ್ಪಂಗೆ ಹುಷಾರಿಲ್ಲದಾಗ, ನಮ್ಮ ಮಹೇಶನೇ ತುಂಬಾ ಸಹಾಯ ಮಾಡಿದ. ಅಪ್ಪ ಅಮ್ಮನೊಂದಿಗೆ ಇರದೇ ಇಲ್ಲಿ ಬಂದು ಸೇರಿಕೊಂಡಿದ್ದಾಳೆ.... ಅದ್ಯಾಕೋ?" ಉದಾಸೀನದಿಂದ ನುಡಿದಳು.

"ಹೆಣ್ಣು ಮಕ್ಕಳು ಬೆಳೀತಿದ್ದ ಹಾಗೇ, ಒಂದು ಕಾಲನ್ನು ತವರು ಮನೆಯಿಂದ ಆಚೆ ಇಟ್ಟಿರುತ್ತಾರೆ.... ನೋಡೋಕೆ ಚೆನ್ನಾಗಿದ್ದಾಳೆ. ಪಾಠ ಕೂಡಾ ಅಷ್ಟೇ ಚೆನ್ನಾಗಿ

ಮಾಡ್ತಾಳಂತೆ. ನಮ್ಮ ವಿವೇಕಂಗೆ ಯಾಕೆ ವಿಚಾರಿಸ್ಬಾರ್ದು ಅಂತ.... ನಿಮ್ಮ ಸೊಸೆಗೆ ಹೇಳಿ ನೋಡಿ.... ಅವನೂ ಅದೇನೋ ಫಾರಿನ್ನಿಗೆ ಹೋಗ್ತೀನಿ ಅಂತ ಕುಣೀತಿದಾನೆ. ಅಲ್ಲಿ ಹೋಗಿ ಪರದೇಶದವಳನ್ನು ಕಟ್ಟಿಕೊಳ್ಳುವ ಬದಲು, ಮದ್ವೆ ಅಂತ ಒಂದು ಮಾಡಿಬಿಟ್ಟಿದ್ರೆ, ಹೆಂಡ್ತೀನೇ ಕರ್ಕೊಂಡು ಹೋಗ್ಲೀ...."

"ನಾನು ನಾಳೇನೇ ದೀಪಂಗೆ ಹೇಳ್ತೀನಿ. ಶುಭಕಾರ್ಯ ಆದಷ್ಟು ಬೇಗ ನೆರವೇರಲಿ...."

"ನಮ್ಮ ಲೀಲನ ವಿಷಯವೇ ಇತ್ಯರ್ಥವಾಗಲಿಲ್ಲ. ನಿಮ್ಮ ಮಗನ ಹತ್ರ ಮಾತ ನಾಡಿದ್ರಾ?"

"ಅವನು ಏನನ್ನೂ ಸರಿಯಾಗಿ ಹೇಳಲ್ಲ. ನಿಮ್ಮ ಮಗಂಗೆ ಆದಷ್ಟು ಬೇಗ ಮಧುವೆ ನಿಶ್ಚಯ ಮಾಡಿ. ಆ ಗಳಿಗೆಯಲ್ಲೇ ನಿಮ್ಮ ಮಗಳ ಮದುವೇನೂ ನಿಶ್ಚಯ ವಾಗಬಹುದು...."

"ಲೀಲಾ ದೊಡ್ಡೋಳು. ಅವಳ ಮದುವೆ ಮೊದಲಾಗಬೇಕು. ಆದರೆ ನಮ್ಮ ವಿವೇಕಂಗೂ ಅರ್ಜೆಂಟೇ.... ಯಾವಾಗ ಹೊರ ದೇಶಕ್ಕೆ ಹೊರಟು ಬಿಡ್ತಾನೋ?"

"ಮಗಂದು ಮಗಳದ್ದು ಜವಾಬ್ದಾರಿ ಮುಗಿಸದೇ, ನಿಮ್ಮ ಭಾವ ಇಲ್ಯಾಕೆ ಕೂತಿದಾರೆ? ನೀವು ಹೆಣ್ಣು ಹೆಂಗಸು ಏನು ಮಾಡಬಲ್ಲಿರಿ?"

"ಅದೊಂದು ದೊಡ್ಡ ಕತೆ ಬಿಡಿ. ಸುಮಾರು ಇಪ್ಪತ್ತೈದು ವರ್ಷಗಳಿಂದ ನಂದೇ ಜವಾಬ್ದಾರಿ.... ಲೀಲಾ ದೊಡ್ಡೋಳಾದ್ಮೇಲೆ... ಈಗ ಅವಳೇ ಎಲ್ಲಾ ನಿಭಾಯಿಸ್ತಾ ಇದಾಳೆ"

"ಇದು ತಪ್ಪಲ್ವಾ ಸಾವಿತ್ರಮ್ಮ. ಮನೆ ಯಜಮಾನನೇ ಮನೆಯಿಂದಾಚೆ ಇದ್ದರೆ, ಏನು ಚೆನ್ನ? ಇಂಥಾ ಅಪ್ಪಂದ್ರೂ ಇರ್ತಾರಾ?"

"ಒಂದು ವಿಷಯ ನಿಮ್ಮಲ್ಲೇ ಇರಲಿ..... ನಮ್ಮ ಭಾವಂಗೆ ಮಕ್ಕಳಿಲ್ಲ.... ಇವರಿಬ್ರೂ ದತ್ತು ಮಕ್ಕಳು....." ವನಜಮ್ಮ ಮಲಗಿದ್ದವಳು ಎದ್ದು ಕುಳಿತಳು.

"ಹೌದಾ? ಸ್ವಂತ ಮಕ್ಕಳಲ್ವಾ? ಅದಕ್ಕೇ ಈ ಧೋರಣೆ...... ಆದರೇನಂತೆ..... ಒಳ್ಳೇದಕ್ಕೆ ಕೆಟ್ಟದ್ದಕ್ಕೆ ಎಲ್ಲಾದಕ್ಕೂ ಇವರೇ ತಾನೇ...... ಅಂದ್ರೇ..... ನಿಮ್ಮ ಹತ್ತಿರದ ಸಂಬಂಧಿಗಳ ಮಕ್ಕಳೇ ಇರಬಹುದು. ಒಂದು ಗಂಡು ಮಗೂನ ದತ್ತು ತಗೊಂಡಿದ್ರೆ ಸಾಕಿತ್ತು.... ಹೆಣ್ಣು ಯಾಕೆ ಬೇಕಿತ್ತೋ.... ಕನ್ಯಾದಾನ ಮಾಡೋಕಾ? ಆದರೆ ಈ ಆಸ್ತಿ ಪಾಸ್ತಿಗಳಲ್ಲಿ ಇಬ್ಬರಿಗೂ ಸಮಪಾಲು ಇದೇ ತಾನೇ......"

"ಹಾಗೇ ಇರಬಹುದು. ಆದರೆ ನಮ್ಮ ಭಾವ 'ವಿಲ್' ಬರೆಸಿದಾರಂತೆ. ಅದರಲ್ಲಿ ಏನು ಬರೆಸಿದಾರೆ ಅಂತ ಯಾರಿಗೂ ಗೊತ್ತಿಲ್ಲ......"

"ಆಶ್ರಮದಲ್ಲಿ ಇರೋರಿಗೆ ಆಸ್ತಿಯ ಮೇಲೆ ಆಸೆ ಯಾಕೆ? ವಯಸ್ಸಾಗಿದೆ. ರಾಮಕೃಷ್ಣಾ ಅಂತ ಹಾಯಾಗಿ ಇರಬಾರದೇ?"

"ಅವರ ಕೈಯಲ್ಲಿ ಇರೋದ್ರಿಂದ, ಎಲ್ಲಾ ಉಳಿದುಕೊಂಡಿದೆ. ಇಲ್ದಿದ್ರೆ ಎಂದೋ ಪರರ ಪಾಲಾಗ್ತಿತ್ತು. ನಮ್ಮ ಲೀಲಾ, ವಿವೇಕ ಅನಾಥರಾಗಿ ಹೋಗ್ತಿದ್ರು..... ನಮ್ಮ ಮನೆ ಪುರಾಣ ಬೇಕಾದಷ್ಟಿದೆ. ಹೇಳ್ತಾ ಹೋದ್ರೆ ಬೆಳಗಾಗುತ್ತೆ ಅಷ್ಟೇ. ಮಲಗಿ, ಬೆಳಿಗ್ಗೆ ಮಾತನಾಡೋಣ" ಕೆಲವೇ ನಿಮಿಷಗಳಲ್ಲಿ ಸಾವಿತ್ರಮ್ಮನ ಗೊರಕೆ ಕೇಳಿಸಲಾರಂಭಿಸಿತ್ತು. ವನಜಮ್ಮ ನಿದ್ದೆ ಇಲ್ಲದೇ ಹೊರಳಾಡಿದಳು.

ಸುಬ್ಬರಾಮಪ್ಪ ಅವರು ಲೀಲಾ ಹಾಗೂ ವಿವೇಕನ ಸ್ವಂತ ತಂದೆ ಅಲ್ಲ.... ವಿಲ್‌ನಲ್ಲಿ ಏನು ಬರೆದಿದಾರೋ..... ವೃದ್ಧಾಶ್ರಮವೇ ಅವರ ಅಚ್ಚು ಮೆಚ್ಚಿನ ಜಾಗ..... ಮಕ್ಕಳಿಗೆ ಏನನ್ನೂ ಕೊಡದೇ ವೃದ್ಧಾಶ್ರಮಕ್ಕೇ ಎಲ್ಲವನ್ನು ಬರೆದಿದ್ದರೇ.... ಲೀಲಾ ಬರಿಗೈಯವಳಾಗಿ ಬಿಡ್ತಾಳೆ.... ಅವಳನ್ನು ನಮ್ಮ ಮನೆಗೆ ತುಂಬಿಸಿಕೊಳ್ಳು ವುದೇ..... ಮತ್ತೊಮ್ಮೆ ಸರಿಯಾಗಿ ಯೋಚಿಸಬೇಕು. ಮೊದಲು ಸುಜಯ ವಿವೇಕನ ಪತ್ನಿ ಯಾಗುವಂತೆ ಮಾಡಬೇಕು? ದೀಪಳಿಗೆ ಹೇಳಬೇಕು. ಯಾವಾಗ ಬೆಳಗಾಗುತ್ತೋ ಎಂದು ಕಣ್ಣು ಬಿಟ್ಟುಕೊಂಡು ಕಾಯುತ್ತಿದ್ದಳು.... ಮಹೇಶ ಒಬ್ಬನೇ ಮನೆಗೆ ಹೋದ. ಎಷ್ಟು ಹೊತ್ತಿಗೆ ತಲುಪಿದನೋ.... ಈ ದೀಪಳ ದೆಸೆಯಿಂದ, ಈ ರಾತ್ರಿ ಇಲ್ಲಿ ನಿದ್ದೆ ಇಲ್ಲದೇ ಹೊರಳಾಡುವಂತಾಗಿದೆ.... ಆದರೂ ಒಂದು ರಹಸ್ಯ ತಿಳಿದಂತಾ ಯಿತು.... ಆದರೆ ಇದೆಂಥಾ ಸಂಸಾರವೋ.... ಯಾವುದೋ ಮಕ್ಕಳನ್ನು ದತ್ತು ತೆಗೆದುಕೊಂಡು, ತಾನೆಲ್ಲೋ ವೃದ್ಧಾಶ್ರಮದಲ್ಲಿದ್ದುಕೊಂಡು.... ಈಕೆಯ ಕೈಗೆ ಮಕ್ಕಳನ್ನು ಒಪ್ಪಿಸಿ... ಯಾರ್‍ಯಾರ ಸಂಸಾರದಲ್ಲಿ ಏನೇನು ರಹಸ್ಯಗಳು ಅಡಗಿವೆಯೋ.... ಇದ್ದಕ್ಕಿದ್ದಂತೆ ವನಜಮ್ಮನ ಎದೆ ನಡುಗಿಸಿತು. ತನ್ನ ಸಂಸಾರದಲ್ಲಿಯೂ ಒಂದು ರಹಸ್ಯ ಅಡಗಿದೆ. ತಾನು ಅದನ್ನು ಎದೆಯಲ್ಲಿಯೇ ಮುಚ್ಚಿಟ್ಟು ಬಿಟ್ಟಿದ್ದೆ.... ಅದು ಅಲ್ಲಿಯೇ ಅಡಗಿರಲಿ ಭಗವಂತಾ.... ಬಹಿರಂಗವಾಗುವುದು ಬೇಡ.... ದೇವರಲ್ಲಿ ಪ್ರಾರ್ಥಿಸಿ, ಮಗ್ಗುಲು ಬದಲಾಯಿಸಿದಳು. ನಿದ್ದೆ ಹತ್ತಿರ ಸುಳಿದಿರಲಿಲ್ಲ.

* * *

"ಏಳೀಪ್ಪಾ.... ನಾನು.... ನಾನು.... ನಾನು ಬಂದಿದೀನಿ...." ಸುಜಯ ಅಸ್ಪಷ್ಟವಾಗಿ ಮಾತಾಡಿದಾಗ, ದೀಪಾಳಿಗೆ ಪೂರ್ತಿ ಎಚ್ಚರವಾಯಿತು. ಕಣ್ಣು ಬಿಟ್ಟಳು. ಹೊರಗೆಲ್ಲಾ ಕತ್ತಲೆ. ರೂಮಿನಲ್ಲಿ ಮಂದವಾದ ಬೆಳಕಿದ್ದರೂ, ಸ್ವಲ್ಪ ಭಯವೆನಿಸಿತ್ತು. ಸುಜಯ ಕನವರಿಸಿದಳು ಎಂದು ಅರ್ಥವಾಗಲು ಸ್ವಲ್ಪ ಸಮಯ ಹಿಡಿಯಿತು. ಮತ್ತೇನಾದರೂ ಆಡುವಳೋ ಎಂದು ಕಾದಳು.... ಆದರೆ ಸುಜಯ ಮತ್ತೆ ಮಾತಾಡಿರಲಿಲ್ಲ, ಅವಳಿಗೆ ಎಚ್ಚರವಾಗಿತ್ತು....

"ಸುಜೀ.... ಸುಜೀ....." ದೀಪಾ ಮಲಗಿದ್ದಲ್ಲಿಂದಲೇ ಕರೆದಳು.

"ಏನೇ ದೀಪು.... ನೀರೇನಾದ್ರೂ ಬೇಕಾಗಿತ್ತಾ?"

"ನೀನಾ ಮಾತಾಡಿದ್ದು...."

"ಹೂಂ. ಕನವರಿಸಿದೆ. ತಕ್ಷಣ ಎಚ್ಚರವಾಯಿತು. ಹೆದರಿದೆಯಾ? ನಿದ್ದೆ ಬಂದಿತ್ತಾ?"

"ನಿದ್ದೆ ಚೆನ್ನಾಗಿ ಬರಲಿಲ್ಲ. ಜೋಂಪು ಹತ್ತಿದ ಹಾಗಿತ್ತು. ಕನುಸು ಬಿತ್ತಾ.... ಅಪ್ಪಂದು..."

"ಹೂಂ. ಏನೋ ವಿಚಿತ್ರ ಕನಸು.... ನೀನು ಮಲಕ್ಕೋ.... " ಸುಜಯ ತಾನು ಎದ್ದು ಒಂದು ಗ್ಲಾಸು ನೀರು ಕುಡಿದು, ಏನನ್ನೋ ಪುಸ್ತಕದಲ್ಲಿ ಬರೆದಿಟ್ಟು ಮಲಗಿದಳು.

"ಏನೇ ಅದು ಬರೆದಿದ್ದು.... ದಿನಾ ರಾತ್ರಿ ಒಬ್ಬಳೇ ಮಲಗಿರುತ್ತೀಯಲ್ಲ. ಕನಸು, ಕನವರಿಕೆಯಿಂದ ಎಚ್ಚರ ಆದ್ರೆ ಹೆದರಿಕೆ ಆಗುಲ್ವಾ?"

"ಮೊದಲ್ನೇ ದಿನ ತುಂಬಾ ಭಯ ಆಯ್ತು. ಕಣ್ಣು ಮುಚ್ಚಿದರೆ, ಮತ್ತೆ ಅದೇ ಕನಸು ಕಣ್ಣ ಮುಂದೆ ಬರುತ್ತಿತ್ತು. ಕ್ರಮೇಣ ಅಭ್ಯಾಸ ಆಯ್ತು....."

"ದಿನಾ ಒಂದೇ ಕನಸು ಬೀಳುತ್ತಾ?" ದೀಪಾ ನಕ್ಕಳು.

"ಎಂಥದೋ... ಒಂದೊಂದು ದಿನ ಒಂದೊಂದು ಥರ. ಒಟ್ನಲ್ಲಿ ಇಲ್ಲಿಗೆ ಬಂದ ದಿನದಿಂದ ಕನಸುಗಳು ಬೀಳೋದು ಜಾಸ್ತಿ ಆಗಿದೆ.. ಕಣ್ತುಂಬಾ ನಿದ್ದೇನೇ ಇಲ್ಲ"

"ಹೌದೇನೇ? ಹಾಗಾದ್ರೆ ಈ ಪ್ಲೇಸ್‌ಗೆ ನೀನು ಹೊಂದಿಕೊಂಡಿಲ್ಲ ಅಂತಾಯ್ತು. ಏನೋ ವರಿ, ಏನೋ ಟೆನ್ಷನ್ ಇರಲೇಬೇಕು. ಯಾವ್ದಾದ್ರೂ ಬೇಸರವಾಗುವಂಥ ಘಟನೆ ನಡೀತಾ? ಅಥವಾ ಅಪ್ಪ ಅಮ್ಮನ್ನ ಬಿಟ್ಟು ಬಂದಿದೀನಿ ಅಂತ ಅವರನ್ನು ಮಿಸ್ ಮಾಡ್ಕೋತಿದೀಯೋ?"

"ಎಂಥದೋ ಗೊತ್ತಾಗ್ಲಿಲ್ಲ. ಕನಸುಗಳೋ ಒಮ್ಮೊಮ್ಮೆ ಅಸಂಬದ್ಧ ಅಂತ ಅನ್ನಿಸುತ್ತೆ. ಒಮ್ಮೊಮ್ಮೆ ರಿಯಲ್ ಅಂತ ಅನ್ನಿಸುತ್ತೆ. ಎಷ್ಟೋ ಸಾರಿ ಅದೇ ಗುಂಗಿನಲ್ಲಿ ನಿದ್ದೇನೇ ಬರಲ್ಲ. ಎಷ್ಟೋ ಸಾರಿ ಬೆಳಗಿನ ಹೊತ್ತಿಗೆ ಏನೂ ನೆನಪಿಗೆ ಇರಲ್ಲ. ಅದಕ್ಕೇ ಅದನ್ನೆಲ್ಲ ತಕ್ಷಣ ಬರೆದಿಟ್ಟುಬಿಡ್ತೀನಿ"

"ಓ..... ಕನಸುಗಳ ಡೈರಿ. ಏನು ಬರೆದಿದೀಯ ಕೊಡು ನೋಡೋಣ. ಹೇಗೂ ನಿದ್ದೆ ಬರ್ತಿಲ್ಲ, ಓದ್ತೀನಿ. ನಾನು ಅನಲೈಸ್ ಮಾಡೋಕೆ ಟ್ರೈ ಮಾಡ್ತೀನಿ"

"ನಂಗೇ ಅರ್ಥವಾಗಿಲ್ಲ. ಇನ್ನು ನಿಂಗೇನು ಅರ್ಥವಾಗುತ್ತೆ. ಪ್ಲೀಸ್ ಮಲಕ್ಕೋ. ಯಾವ್ದಾದ್ರೂ ನಿಂಗೆ ಗೊತ್ತಿರುವ ಸ್ತೋತ್ರ ಹೇಳ್ಕೋ.... ನಿಂಗೂ ಒಳ್ಳೇದು.... ಹುಟ್ಟಲಿರುವ ಮಗೂಗೂ ಒಳ್ಳೇದು.... ನನ್ನ ಕನಸಿನ ಕತೆ, ವ್ಯಥೆ ಎಲ್ಲಾ ಯಾಕೆ?"

"ಓ.ಕೆ. ಯಾವ್ದಾದ್ರೂ ಸ್ತೋತ್ರದ ಪುಸ್ತಕ ಇದ್ರೆ ಕೊಡು" ಸುಜಯ ಎದ್ದು ಕಬೋರ್ಡ್ ಬಳಿಗೆ ಬಂದಳು. ದೀಪವನ್ನು ಹಾಕಿ ಪುಸ್ತಕವನ್ನು ಹುಡುಕತೊಡಗಿದಳು.

"ಇಲ್ಲಿ ಪ್ರತೀ ಗುರುವಾರ ಭಜನೆಯ ಕಾರ್ಯಕ್ರಮ ಇರುತ್ತೆ. ಎಲ್ಲರೂ ಭಾಗವಹಿಸಲೇಬೇಕು. ಬೇರೆ ಯಾವ್ದಾದ್ರೂ ಕೊಡ್ಲೇನೇ?" ಅಷ್ಟರಲ್ಲಿ ದೀಪಳೂ ಎದ್ದು ಬಂದಿದ್ದಳು.

"ಇದೇನೇ ಇದು.... ವಾಲ್ ಪೈಂಟಿಂಗ್ ಇದ್ದ ಹಾಗಿದೆ.... ಎಷ್ಟು ಬ್ರೈಟ್

ಆಗಿದೆ... ಯಾರು ಕೊಟ್ರು?"

"ಇದು ಆಶ್ರಮದ ವಾರ್ಷಿಕೋತ್ಸವಕ್ಕೆ ಅಂತ ಇಲ್ಲಿ ಇರೋರಿಗೆಲ್ಲಾ ಕೊಟ್ಟ ನೆನಪಿನ ಕಾಣಿಕೆ. ಚೆನ್ನಾಗಿದೆ ಅಲ್ವಾ? ಆದರೆ ಬೆಳಿಗ್ಗೆ ಇದನ್ನು ನಾನು ಸರಿಯಾಗಿ ನೋಡ್ಲೇ ಇಲ್ಲ.... ನಾಳೆ ಬೆಳಿಗ್ಗೆ ನೋಡ್ತೀನಿ"

"ಇದು ಯಾವುದೋ ಹಳೆಯ ಕಲಾಕೃತಿಯ ಕಾಪಿ. ಫೋಟೋ ತೆಗೆಸಿ ಲ್ಯಾಮಿನೇಟ್ ಮಾಡಿದಾರೆ.... ಆದ್ರೂ ಒಂಥರಾ ಚೆನ್ನಾಗಿದೆ.... ಆದರೆ ಇದರೊಳಗೆ ಏನು ಅರ್ಥ ಅಡಗಿದೆ ಅಂತ ಗೊತ್ತಾಗ್ಲಿಲ್ಲ" ದೀಪಾ ಹಾಗೆ ಹೀಗೆ ತಿರುಗಿಸಿ ನೋಡಿ ಹೇಳಿದಳು. ಸುಜಯಳೂ ಬಾಗಿ ನೋಡಿದಳು.

"ಹೌದಲ್ವಾ? ಸ್ವಲ್ಪ ವಿಚಿತ್ರವಾಗಿದೆ.... ಯಾಕೋ ಇದು ಅಪೂರ್ಣ ಅಂತ ನನಗನ್ನಿಸ್ತಿದೆ"

"ಈ ಥರದ ಪೈಂಟಿಂಗ್ಸ್ ಬಗ್ಗೆ ನಿಂಗೇನು ಗೊತ್ತು? ಪೂರ್ಣವೋ, ಅಪೂರ್ಣವೋ.... ಗೋಡೆ ಮೇಲೆ ನೇತು ಹಾಕುಕ್ಕೆ ತುಂಬಾ ಚೆನ್ನಾಗಿದೆ.... ನಂಗೆ ಇಷ್ಟವಾಯ್ತು"

"ನಿನಗೊಂದು ಪೀಸು ಕೊಡಿಸ್ತೀನಿ ನನ್ನ ನೆನಪಾಗಿ ಇಟ್ಕೋ...."

"ಯಾರಾದ್ರೂ ಇದರ ವಿಶೇಷತೆ ಏನು? ಅರ್ಥ ಏನೂಂತ ಕೇಳಿದ್ರೆ?"

"ಯಾರೂ ಯಾರನ್ನೂ ಏನನ್ನೂ ಕೇಳಲ್ಲ. ಕೇಳಿದರೆ ತಮ್ಮ ಬುದ್ಧಿವಂತಿಕೆಗೆ ಕಮ್ಮಿ ಅಂತ ಭಾವಿಸ್ತಾರೆ....."

"ಆದರೂ ತಿಳಿದುಕೊಂಡಿದ್ರೆ ಒಳ್ಳೇದಲ್ವಾ? ಒಂದು ವೇಳೆ ದಿನೇಶನೇ ಕೇಳಿದ್ರು ಅಂತಿಟ್ಕೋ.... ಆಗ?"

"ಆಗ ನಾನು ಹೇಳ್ತೀನಿ.... ನಂಗೆ ಸ್ವಲ್ಪ ಸ್ವಲ್ಪ ಗೊತ್ತಿದೆ. ಆದ್ರೆ ಅಪೂರ್ಣ ಅಂತ ಹೇಳಿದ್ನಲ್ಲ.... ಇದರ ಇನ್ನೊಂದು ಭಾಗವೂ ಸಿಗಲಿ.... ಹೇಳ್ತೀನಿ" ಸುಜಯ ಧೃಢ ವಿಶ್ವಾಸದಿಂದ ಹೇಳಿದಾಗ ದೀಪಾ ಅವಳನ್ನೇ ನೋಡಿದಳು. ಇದ್ದಕ್ಕಿದ್ದಂತೆ ಸುಜಯ ಅತಿ ಗಂಭೀರವಾಗಿದ್ದಳು.

"ಸುಜೀ.... ಇದ್ದಕ್ಕಿದ್ದ ಹಾಗೇ ಏನಾಯ್ತೇ?" ದೀಪಾ ಅವಳನ್ನು ಅಲುಗಾಡಿಸಿದಳು. ಸುಜಯ ಬೆಚ್ಚಿ ಇತ್ತ ತಿರುಗಿದಳು.

"ನೀನು ಇನ್ನೂ ಮಲಗಲಿಲ್ವಾ?"

"ಭಜನೆ ಪುಸ್ತಕ ಕೊಡ್ತೀನಿ ಅಂತಂದೆ, ಸಿಕ್ತಾ?"

"ಇಲ್ಲೇ ಎಲ್ಲೋ ಇಟ್ಟಿದ್ದೆ..... ಸಿಗ್ತಿಲ್ಲವಲ್ಲ....."

"ಹೋಗ್ಲಿ ಬಿಡು. ಭಜನೆಯೂ ಬೇಡ; ಸಂಗೀತವೂ ಬೇಡ. ಹೊಟ್ಟೆ ತಾಳ ಹಾಕ್ತಿದೆ. ತಿನ್ನುಕ್ಕೆ ಏನಾದ್ರೂ ಇದೆಯಾ?"

"ಒಂದಿಷ್ಟು ಬಿಸ್ಕತ್ತು, ಹಣ್ಣು ಇದೆ ಕೊಡ್ಲಾ?" ಎನ್ನುತ್ತಾ ಸುಜಯ ಅವಳ ಮುಂದೆ ಹಣ್ಣಿನ ಬುಟ್ಟಿಯನ್ನು, ಬಿಸ್ಕತ್ತಿನ ಡಬ್ಬವನ್ನು ಇಟ್ಟಳು. ದೀಪಾ ತನಗೆ

ಬೇಕೆನಿಸಿದಷ್ಟನ್ನು ತಿಂದು ನೀರು ಕುಡಿದು ಮಲಗಿದಳು. ಸುಜಯಳ ನಿದ್ದೆ ದೂರವಾಗಿತ್ತು. ಬೆಳಗಿನ ಸುಪ್ರಭಾತ ಕೇಳುವವರೆಗೂ ಎಚ್ಚರವಾಗಿ ಮಲಗಿದ್ದಳು. ಸುಜಯ ಎದ್ದು ಬಚ್ಚಲು ಮನೆಗೆ ಹೋಗಿ ಮುಖ ತೊಳೆದು ಬರುವಷ್ಟರೊಳಗೆ, ಅಡುಗೆಯವರು ಕಾಫಿಯನ್ನು ತಂದಿದ್ದರು. ದೀಪಾ ಬಾಗಿಲನ್ನು ತೆರೆದಳು.

"ಸಾವಿತ್ರಮ್ಮನೋರು ಕೊಟ್ಬಾ ಅಂತಂದ್ರು.... ಕಾಫಿ ಕುಡಿದು ಆದ್ಮೇಲೆ ಅಲ್ಲಿಗೆ ಬರಬೇಕಂತೆ.... ಟೀಚರಮ್ಮ ಎಲ್ಲಿ?"

"ಮುಖ ತೊಳೆಯೋಕೆ ಹೋಗಿದ್ದಾರೆ! ನೀವು ಹೋಗಿ, ನಾನು ಹೇಳ್ತೀನಿ" ಆಕೆ ಹೊರಟು ಹೋಗಿದ್ದಳು. ಸುಜಯ ಹೊರಬರುವಷ್ಟರಲ್ಲಿ, ದೀಪಾ ಬಿಸಿ ಬಿಸಿ ಕಾಫಿ ಕುಡಿಯುತ್ತಿದ್ದಳು.

"ಇದೇನೇ? ಏನು ಕುಡಿತಿದೀಯಾ! ಯಾರು ತಂದು ಕೊಟ್ರು?"

"ಕಾಫೀ.... ದಿನಾ ಹೀಗೇ ರೂಮಿಗೆ ಸಪ್ಲೈ ಬರುತ್ತಾ?"

"ಹ್ಞೂಂ ಅಮ್ಮಣ್ಣೀ.... ಬರುತ್ತೆ ಬರುತ್ತೆ. ನಿನಗೋಸ್ಕರ ನಿಮ್ಮತ್ತೆ ಶಿಫಾರಸುಮಾಡಿ ಕಳಿಸಿರ ಬಹುದು...." ಎನ್ನುತ್ತಾ ಅವಳೂ ಕಾಫಿ ಕುಡಿದಳು. ಇಬ್ಬರೂ ಹೊರ ಹೊರಟರು.

"ಆಶ್ರಮದ ಮರ-ಗಿಡ ಬಳ್ಳಿಗಳನ್ನೆಲ್ಲಾ ದೀಪಂಗೆ ತೋರಿಸ್ಕೊಂಡು ಬಾ... ಸಿಟೀಲಿ ಇವೆಲ್ಲಾ ಭಾಳ ಅಪರೂಪ. ಅಲ್ದೇ ಬಸಿರಿ ಹುಡ್ಗಿ. ಸ್ವಚ್ಛವಾದ ಗಾಳೀನ ಕುಡೀಲಿ" ಸಾವಿತ್ರಮ್ಮ ಸುಜಯಳಿಗೆ ಅಪ್ಪಣೆ ಇತ್ತಳು. ಅವರಿಬ್ಬರೂ ಕಾಲು ದಾರಿಯಲ್ಲಿ ಮರೆಯಾದರು.

"ಬನ್ನಿ ವನಜಮ್ಮಾ, ನಮ್ಮ ಭಾವನವರನ್ನು ಮಾತನಾಡಿಸ್ಕೊಂಡು ಬರೋಣ. ನಿಮ್ಮ ಮಗ ಬಂದ ಮೇಲೆ ಬಿಡುವಾಗುಲ್ಲ. ಹಾಗೇ ಸುಜಯನ ಪ್ರಸ್ತಾಪಾನೂ ಮಾಡ್ತೀನಿ. ಅವರ ಮನಸ್ನಲ್ಲಿ ಏನಿದೆ ಅಂತ ತಿಳಿಯುತ್ತೆ"

ಹೊರಗಿನ ವೆರಾಂಡದಲ್ಲಿ ಕುಳಿತು, ಎಳೆಯ ಸೂರ್ಯನ ಬಿಸಿಲನ್ನು ಕಾಯುತ್ತಾ ಕುಳಿತಿದ್ದ ಸುಬ್ಬರಾಮಪ್ಪ ಇತ್ತ ತಿರುಗಿದರು. "ಯಾರದು?" ಕಣ್ಣು ಕಿರಿದು ಮಾಡಿ ಕೇಳಿದರು.

"ನಾನು ಭಾವ, ಸಾವಿತ್ರಿ.... ಇವರು ವನಜಮ್ಮ ಅಂತ, ನನ್ನ ಸ್ನೇಹಿತರು. ಡೆಲ್ಲೀಲಿ ನನಗೆ ಇವರ ಪರಿಚಯವಾಯಿತು"

"ನಮಸ್ಕಾರ" ವನಜಮ್ಮ ಕೈ ಮುಗಿದಳು.

"ಕೂತ್ಕೊಳ್ಳಿ...." ಆತ ಕುರ್ಚಿಗಳಿದ್ದ ಕಡೆ ಕೈ ಮಾಡಿದರು.

"ಭಾವ, ವಿವೇಕಂಗೆ ಅಂತ ನಾನು ಒಂದು ಹುಡುಗೀನ ನೋಡಿದೀನಿ. ಅದನ್ನೇ ಹೇಳೋಣ ಅಂತ ಬಂದೆ...."

"ಹುಡ್ಗಿ ಇವರ ಮಗಳಾ? ಅಲ್ಲ ಸಾವಿತ್ರಿ, ವಿವೇಕಂಗೆ ಈಗ ಮದುವೆಗೆ ಏನು

ಅವಸರ? ಸರಿಯಾದ ಕೆಲ್ಸ ಇಲ್ಲ. ಸಂಪಾದ್ನೆ ಇಲ್ಲ.... ಅಲ್ಲದೇ ಲೀಲನ ವಿಷಯಾನಾ ಇವರಿಗೆ ತಿಳ್ಸಿದೀಯಾ?" ಸಾವಿತ್ರಮ್ಮ ಪೆಚ್ಚಾಗಿದ್ದಳು. ವನಜಮ್ಮನ ಕಡೆ ನೋಡಿ ಮಾತನ್ನು ಮುಂದುವರೆಸಿದಳು.

"ಲೀಲಂಗೂ ಒಬ್ಬ ವರನನ್ನು ನೋಡಿದೀನಿ...."

"ಸಾವಿತ್ರೀ! ಏನಿದು ತಮಾಷೆ? ಲೀಲಂಗೆ ಈ ವಿಷಯ ಗೊತ್ತಾ? ನನ್ನ ಗಮನಕ್ಕೆ ತ್ಾರ್ದೆ ನನ್ನ ಬೆನ್ನ ಹಿಂದೆ ಏನೇನೋ ನಿರ್ಣಯ ತಗೋಬೇಡಿ... ನೀವುಗಳು..."

"ನಿಮಗೆ ತಿಳಿಸದೇ ಯಾವ ನಿರ್ಧಾರವನ್ನೂ ತಗೊಳ್ಳುಲ್ಲ.... ಆತಂಕ ಪಡಬೇಡಿ .... ಲೀಲಾ ಹಾಗೇ ಎಷ್ಟು ವರ್ಷ ಅಂತ ಇರ್ತಾಳೆ? ಅವಳಿಗೂ ಒಂದು ನೆಲೆ ಮಾಡಬೇಡ್ವೇ ನೀವು?"

"ನನ್ನ ವಿಷಯ ಇರಲಿ. ಮೊದಲು, ಲೀಲನ ಮನಸ್ನಲ್ಲಿ ಏನಿದೆ ಅಂತ ತಿಳ್ಕೋ.... ಯಾವ ವಿಷಯಕ್ಕೂ ಬಲವಂತ ಮಾತ್ರ ಮಾಡಬಾರದು... ಹಾಗೇ ಆ ಹುಡುಗನ್ನ ನಾನು ನೋಡಿ ಮಾತಾಡ್ಬೇಕು...."

"ನೀವು ಆ ಹುಡುಗನ್ನ ಖಂಡಿತಾ ಮೆಚ್ಕೋತೀರಿ ಭಾವ.... ಹುಡುಗ ತುಂಬಾ ಸಭ್ಯ.... ನಾನು ಹೇಳೋದೇ ಮರೆತುಬಿಟ್ಟೆ..... ಹುಡುಗ ಇವರ ಮಗ ಮಹೇಶ ಅಂತ.... ಒಳ್ಳೇ ಕೆಲಸದಲ್ಲಿದ್ದಾನೆ...."

"ಸರಿ ನೋಡೋಣ. ಲೀಲಾ, ವಿವೇಕ ಎಷ್ಟೊತ್ತಿಗೆ ಬರ್ತಾರೆ! ನೀನ್ಯಾಕೆ ಅವರ ಜೊತೆ ಹೋಗಲಿಲ್ಲ!"

"ಇವರು ಆಶ್ರಮವನ್ನು ನೋಡ್ಬೇಕು ಅಂತಂದ್ರು... ಅದಕ್ಕೇ ಉಳ್ಕೊಂಡೆ..."

"ಸರಿ. ಹೋಗಿ ತಿರುಗಾಡಿಸ್ಕೊಂಡು ಬಾ.... ಕಾಫಿ ಆಯ್ತಾ? ಸ್ಪೆಷಲ್ ತಿಂಡಿ ಮಾಡ್ಬೇಕಂತೆ ಅಂತ ಅಡುಗೆಯವರಿಗೆ ಹೇಳಿಬಿಡು" ಸಾವಿತ್ರಮ್ಮ ಸಂಜ್ಞೆ ಮಾಡಿ ವನಜಮ್ಮನನ್ನು ಎಬ್ಬಿಸಿದಳು. ಸ್ವಲ್ಪ ದೂರ ತಿರುಗಾಡುವಷ್ಟರಲ್ಲೇ ಸುಜಯ, ದೀಪ ಎದುರಾದರು.

"ಆಯ್ತಾ ತಿರುಗಾಡಿದ್ದು.... ಹೇಗನ್ನಿಸ್ತು ನಮ್ಮ ಆಶ್ರಮ?"

"ತುಂಬಾ ಚೆನ್ನಾಗಿದೆ ಆಂಟೀ.... ತಿರುಗಾಡ್ತಾನೇ ಇರೋಣ ಅಂತನ್ನಿಸ್ತು"

"ರಾತ್ರಿ ನಿದ್ದೆ ಬಂತೇನಮ್ಮಾ ದೀಪಾ! ಆಯಾಸ ಆಗಿದೆ ಅಂತನ್ನಿಸ್ತಿದೆ"

"ಹೂಂ. ಅತ್ತೆ ಹೊಸ ಜಾಗ, ನಿದ್ದೆ ಬರ್ಲಿಲ್ಲ.....ಇವತ್ತು ಮನೆಗೆ ಹೋಗಿ ಧೊಪ್ ಅಂತ ಹಾಸ್ಗೆ ಮೇಲೆ ಬಿದ್ರೆ ಸಾಕು.... ನಿದ್ದೆ ಎಳೆದ್ಕೊಂಡು ಬಿಡುತ್ತೆ...."

"ಎಷ್ಟು ತಿಂಗಳು ನಿಮ್ಮ ಸೊಸೆಗೆ?"

"ಇನ್ನೂ ಮೂರು ತುಂಬಿಲ್ಲ. ಡೆಲ್ಲಿಯ ಬಿಸಿಲಿನ ತಾಪ ತಡೀಲಾಗದೇ ಬಂದಿದ್ದಾಳೆ"

"ಮೊದಲು ಮೂರು ತಿಂಗಳು ಸ್ವಲ್ಪ ಹುಶಾರಾಗಿರಬೇಕಮ್ಮ.... ನಾನು ಚೊಚ್ಚಲ ಬಸಿರಿಯಾಗಿದ್ದಾಗ....." ಸಾವಿತ್ರಮ್ಮ ಇದ್ದಕ್ಕಿದ್ದಂತೆ ಮಾತನ್ನು ನಿಲ್ಲಿಸಿದಳು. ವನಜಮ್ಮನ ಕಡೆ ನೋಡಿ ತಲೆ ತಗ್ಗಿಸಿದಳು. ದೀಪಾ ಕೆಟ್ಟ ಮುಖ ಮಾಡಿದಳು. ಸುಜಯ ಅವಳನ್ನು ಎಳೆದಳು.

"ದೀಪಾ, ಇವರ ಭಾವನ್ನ ಮಾತಾಡಿಸ್ಕೊಂಡು ಬಾಮ್ಮಾ..... ಮಹೇಶ ಬರ್ತಿದ್ದ ಹಾಗೇ ಹೊರಟು ಬಿಡೋಣ"

"ನಡಿಯೇ ಸುಜೀ...." ಇಬ್ಬರು ಅತ್ತ ಹೊರಟರು. ಸಾವಿತ್ರಮ್ಮ ಪಾಕಶಾಲೆಯ ಕಡೆಗೆ ವನಜಮ್ಮನೊಂದಿಗೆ ನಡೆದಳು. ಇಲ್ಲಿ ಹಾಲು ತುಪ್ಪ, ಮೊಸರು ಬೆಣ್ಣೆ ಯಾವುದಕ್ಕೂ ಕೊರತೆ ಇಲ್ಲ. ಹಣ್ಣು-ಹಂಪಲಂತೂ ಇಲ್ಲ ಅನ್ನಿಸಿದ ದಿನವೇ ಇಲ್ಲ.... ಇದು ಪಾಕಶಾಲೆ.... ಇದು ಗೋಶಾಲೆ.... ಆ ಕಡೆ ಕಾಣುತ್ತಲ್ಲ, ಅದೇ ಇಲ್ಲಿಯ ಆಸ್ಪತ್ರೆ.... ಸಕಲ ಅನುಕೂಲವೂ ಇಲ್ಲಿದೆ. ಇದೇ ಒಂದು ಸಣ್ಣ ಊರು ಇದ್ದ ಹಾಗೇ..... ಆದ್ರೂ ನಂಗೆ ಇಲ್ಲಿ ಬಂದು ಇರೋಕೆ ಮನಸ್ಸಿಲ್ಲ.... ಅಲ್ಲಿ ನಾನು ಆರಾಮವಾಗಿದೀನಿ. ಇಲ್ಲಿಗೆ ಬಂದರೆ, ನಮ್ಮ ಭಾವನ ಅಧೀನಕ್ಕೆ ಬಿದ್ದುಬಿಡ್ತೀನೇನೋ ಅನ್ನೋ ಭಯ.... ಕೇಳಿದ್ರಲ್ಲ ಅವರ ಮಾತನ್ನ.... ಸ್ವಲ್ಪ ವಿಚಿತ್ರ ಮನುಷ್ಯ."

"ನನಗೆ ಅವರ ಬಗ್ಗೆ ಹಾಗೇನೂ ಅನ್ನಿಸ್ಲಿಲ್ಲ ಸಾವಿತ್ರಮ್ಮ. ಸರಿಯಾಗೇ ಇದಾರೆ.... ನೀವು ಬೇಕೂಂತ ಏನನ್ನೋ ಮುಚ್ಚಿಡ್ತಾ ಇದೀರಿ....."

"ಏನೂ ಇಲ್ಲ. ಏನಿದೆ ಮುಚ್ಚಿಡೋಕೆ? ಅವರಿಗೆ ಅರಳು ಮರುಳು. ಏನೇನೋ ಮಾತಾಡಿದಾರೆ. ನೀವು ಮರುಳಾಗಿದೀರಿ.... ಕಾಫಿ ಕುಡಿಯೋಣ ಬನ್ನಿ. ಹೊಸ ಹಾಲಿನ ಫ್ರೆಶ್ ಕಾಫಿ ಮಾಡಿರ್ತಾರೆ......" ಎಂದು ಹೇಳಿ ಅಡುಗೆ ಮನೆಯ ಕಡೆಗೆ ಕರೆದೊಯ್ದಳು. ಪಾಕಶಾಲೆಯಲ್ಲಿ ಎಲ್ಲಾ ನವೀನ ಉಪಕರಣಗಳಿದ್ದವು.

"ಎರಡು ಸ್ಟ್ರಾಂಗ್ ಕಾಫೀ ಕೊಡಿ ಭಟ್ರೇ....." ಇಬ್ಬರೂ ಕುಳಿತರು.

"ನೋಡಿದ್ರಲ್ಲ.... ಇಲ್ಲಿ ಎಲ್ಲಾ ಅನುಕೂಲಗಳಿವೆ. ಅದಕ್ಕೇ ನಮ್ಮ ಭಾವನಿಗೆ ಇಲ್ಲಿಯೇ ಒಗ್ಗಿ ಹೋಗಿದೆ. ನಾನು ಮಾತ್ರ, ಎಷ್ಟೇ ಮುದುಕಿಯಾಗಿ, ಕೈಲಾಗದಿದ್ರೂ ಇಲ್ಲಿಗೆ ಮಾತ್ರ ಬರಲ್ಲ. ಡೆಲ್ಲಿಯಲ್ಲಿರುವ ನನ್ನ ತಂಗಿಯ ಮಗಳ ಮನೆಗೆ ಹೊರಟು ಹೋಗ್ತೀನಿ" ಮತ್ತೊಮ್ಮೆ ನುಡಿದಳು.

ಯಾಕೆ ಎಂದು ವನಜಮ್ಮನೂ ಕೇಳಲಿಲ್ಲ. ಆಕೆಯೂ ಹೇಳಲಿಲ್ಲ. ಇಬ್ಬರೂ ಬಿಸಿ ಬಿಸಿ ಹೊಗೆಯಾಡುವ, ಘಮಗುಟ್ಟುವ ಕಾಫಿಯನ್ನು ಕುಡಿಯುತ್ತಾ ಕುಳಿತರು.

* * *

"ತಾತಾ ನಾನು ದೀಪಾ ಅಂತ. ಸುಜಯಳ ಕಸಿನ್" ದೀಪ ಆ ವೃದ್ಧರೆದುರಿಗೆ ನಿಂತು ತನ್ನ ಪರಿಚಯ ಹೇಳಿಕೊಂಡು ಕೈ ಮುಗಿದಳು.

"ನಮಸ್ಕಾರಮ್ಮ.... ಏನಾಗಬೇಕಿತ್ತು ಈ ಮುದುಕನಿಂದ?"

"ನೆನ್ನೆ ದಿನದ ಕಾರ್ಯಕ್ರಮಕ್ಕೆ ಅಂತ ಬಂದಿದ್ದೆ..... ಇಲ್ಲೇ ಉಳಿದುಕೊಂಡಿದ್ದೆ. ಇನ್ನು ಸ್ವಲ್ಪ ಹೊತ್ತಿಗೆ ವಾಪಸ್ಸು ಹೋಗ್ತೀನಿ"

"ನಮ್ಮ ಆಶ್ರಮ ನೋಡಿದ್ದಾಯ್ತಾ? ಸುಜಯ ಕರ್ಕೊಂಡು ಹೋಗಿದ್ಯಾ?"

"ಹೂಂ...."

"ನೀನ್ಯಾಕಮ್ಮಾ ಮಂಕಾಗಿದ್ದೀಯಾ? ಏನಾಯ್ತು?"

"ನೆನ್ನೆ ರಾತ್ರಿ ನಮ್ಮಿಬ್ಬರಿಗೂ ನಿದ್ದೆ ಇಲ್ಲ. ಇಬ್ರೂ ಸುಸ್ತಾಗಿದೀವಿ" ದೀಪ ನಗುತ್ತಾ ನುಡಿದಳು.

"ನಿದ್ದೆಗೆಟ್ಟು ಮಾತ್ಯಾಕೆ ಆಡ್ಬೇಕಾಗಿತ್ತು? ಏನು ಮಾತಾಡಿದ್ರಿ?"

"ಏನೇನೋ ಮಾತಾಡಿದ್ವಿ.... ಕನಸುಗಳನ್ನು ಕುರಿತು ಮಾತಾಡಿದೆವು... ಆಮೇಲೆ, ನೆನ್ನೆ ದಿನ ನೀವು ಕೊಟ್ಟ ನೆನಪಿನ ಕಾಣಿಕೆ, ಅದೇ ಆ ಸುಂದರ ಚಿತ್ರದ ಬಗ್ಗೆ ಮಾತಾಡಿದೆವು...."

"ನಿನಗೆ ಅದು ಇಷ್ಟ ಆಯ್ತಾ ಮಗು...."

"ಹೂಂ. ನಂಗೂ ಇಷ್ಟ ಆಯ್ತು. ಸುಜಯಂಗಂತೂ ತುಂಬಾ ಇಷ್ಟ ಆಯ್ತು...."

"ಹೌದು. ಅದು ಅಷ್ಟು ಸುಂದರವಾಗಿದೆ.... ಆದರೆ ಅದರ ಸುಂದರತೆಯಲ್ಲಿ ಅಡಗಿರುವ ಅರ್ಥ ಮಾತ್ರ ಸುಲಭವಾಗಿ ಆಗುವಂಥದಲ್ಲ...."

"ಅದರಲ್ಲಿ ಅಡಗಿರುವ ತತ್ವ, ಸತ್ಯ, ಸುಂದರ ಎಲ್ಲಾ ನನಗೆ ಅರ್ಥವಾಗಿದೆ. ಆದರೆ ಆ ಚಿತ್ರಣ ಅಪೂರ್ಣವಾಗಿದೆ" ಸುಜಯ ಎಂದಳು.

"ಏನಂದೆ? ಅಪೂರ್ಣವೇ? ನಿನಗ್ಯಾಕೆ ಹಾಗೆ ಅನ್ನಿಸ್ತು?"

"ಯಾಕಂದ್ರೇ.... ಈ ಮುಂಚೆ ನಾನು ಪೂರ್ಣ ಚಿತ್ರವನ್ನು ನೋಡಿದೀನೀಂತ ಅನ್ನಿಸುತ್ತೆ. ಆದರೆ ಎಲ್ಲಿ ಯಾವಾಗ ಅಂತ ನೆನಪಿಗೆ ಬರುತ್ತಿಲ್ಲ"

"ಏನು? ನೀನು.... ನೋಡಿದೀಯಾ! ಸಾಧ್ಯವೇ ಇಲ್ಲ.... ಅದು ನಮ್ಮ ಮನೆಯಲ್ಲಿ ಬಿಟ್ಟು ಇನ್ನೆಲ್ಲಿಯೂ ಇಲ್ಲ.... ನನಗೆ ನಿನ್ನ ಮಾತಿನ ಮೇಲೆ ನಂಬಿಕೆ ಇಲ್ಲ"

"ನನಗೆ ಅನ್ನಿಸಿದ್ದನ್ನು ನಾನು ಹೇಳಿದೆ. ನಂಬದಿದ್ದರೆ ನನಗೆ ಬೇಸರವೇನೂ ಇಲ್ಲ"

"ಏನೇ ಸುಜೀ..... ಎಷ್ಟು ರಫ್ ಆಗಿ ಮಾತಾಡ್ತೀಯಲ್ಲ. ಅವರು ಹಿರಿಯರು...."

"ಆಡ್ಲಿ ಬಿಡಮ್ಮಾ.... ಅವಳೂ ನನ್ನ ಮಗಳ ಹಾಗೇ.... ನನಗೇನೂ ಬೇಸರವಿಲ್ಲ. ನೀವುಗಳು ಬಂದು ಮಾತಾಡ್ತಾ ಇದ್ರೆ, ನನ್ನ ಬೇಸರ ಕಳೆಯುತ್ತೆ. ಈ ಹುಡುಗಿಗೆ ನನ್ನ ಮೇಲೆ ಏನೋ ಪ್ರೀತಿ, ಏನೋ ವಿಶ್ವಾಸ.....ನನಗೆ ಹಬ್ಬದ ಊಟ ತಂದು ಬಡಿಸಿದ್ದಳು.... ಈ ವೃದ್ಧಾಶ್ರಮಕ್ಕೆ ಬಂದ ಮೇಲೆ ಅದೆಲ್ಲ ಮರೆತೇ ಹೋಗಿದೆ. ಆವತ್ತು ನನ್ನ ಚಿತ್ತವೆಲ್ಲಾ ಕಲಕಿ ಹೋಗಿತ್ತು....ಕಣ್ಣುಗಳಲ್ಲಿ ನೀರು ತುಂಬಿಕೊಂಡಿತ್ತು.... ನನ್ನ ಮಗಳೇ ಸ್ವತಃ ಬಂದು ನನಗೆ ಬಡಿಸಿದಂತಾಗಿತ್ತು.... ಹೃದಯ ತುಂಬಿ

ಬಂದಿತ್ತು...." ಸುಜಯಳೂ ಆ ದಿನವನ್ನು ನೆನೆದಳು.

ಆ ದಿನ, ಅವರ ಹುಟ್ಟು ಹಬ್ಬ ಎಂದು ತಿಳಿದ ದಿನ, ಆತ್ಮೀಯ ಭಾವ ಅತಿಯಾಗಿ, ತಾನೇ ಅವರ ರೂಮಿಗೆ ಊಟವನ್ನು ಕೊಟ್ಟು ಬಂದಿದ್ದಳು. ಆಗಾಗ್ಗೆ ಅವರನ್ನು ಕಂಡು ಮಾತನಾಡಿಸಿಕೊಂಡು ಬಂದಿದ್ದಳು. ಭಜನಾ ಮಂದಿರದಲ್ಲಿ ಅವರನ್ನೇ ನೋಡುತ್ತಾ ಹಾಡುಗಳನ್ನು ಹೇಳುತ್ತಿದ್ದಳು. ಕನಸಿನಲ್ಲಿಯೂ ಅವರು ಆಗಾಗ್ಗೆ ಕಾಣಿಸುತ್ತಿದ್ದರು.... ಕನಸಿನ ಬಗ್ಗೆ ಅವರಿಗೆ ಹೇಳಬೇಕೆಂದುಕೊಂಡಳು. ಆದರೆ ದೀಪಳ ಎದುರಿಗೆ ಹೇಳುವುದು ಹೇಗೆ? ಆದರೂ ಎಂದಾದರೂ ಇವರೆದುರು ಕುಳಿತು ತನ್ನ ಕನಸಿನ ಅರ್ಥಗಳನ್ನು ತಿಳಿದುಕೊಳ್ಳಬೇಕೆಂದೆನಿಸಿತ್ತು. ತನ್ನ ಇನ್ನೊಂದು ಡೈರಿ ಮಹೇಶನ ಬಳಿ ಇದೆ. ಅದನ್ನು ಅವನು ಡಾಕ್ಟರಿಗೆ ತೋರಿಸಿದನೋ ಇಲ್ಲವೋ.... ವಾಪಸ್ಸು ಕೇಳಿ ತೆಗೆದಿಟ್ಟು ಕೊಳ್ಳಬೇಕೆಂದುಕೊಂಡಳು.

"ಸುಜಯಾ.... ಒಳಗೆ ನನ್ನ ರೂಮಿನಲ್ಲಿ ಆ ಚಿತ್ರಪಟದ ಇನ್ನೊಂದು ಕಾಪಿ ಇದೆ. ಅದನ್ನು ದೀಪಳಿಗೆ ಕೊಡು.... ನನ್ನ ಆಶ್ರಮಕ್ಕೆ ಬಂದ ನೆನಪಿಗೆ, "ನೆನಪಿನ ಕಾಣಿಕೆ"

ಸುಜಯ ಒಳಗಿನ ರೂಮಿಗೆ ಹೋಗಿ, ಮಂಚದ ಬಳಿಯಿದ್ದ ಕಬೋರ್ಡ್‌ನಲ್ಲಿ ಹುಡುಕಿ, ಆ ಕಲಾಕೃತಿಯನ್ನು ತಂದು ಅವರ ಕೈಯಲ್ಲಿ ಕೊಟ್ಟಳು.

"ತಗೋಮ್ಮ...." ಇದನ್ನ ನಿನ್ನ ಗಂಡನಿಗೂ ತೋರಿಸು. ನಿನ್ನ ಗಂಡನ ಹೆಸರೇನು?"

"ಅವರ ಹೆಸರು ದಿನೇಶ್ ಅಂತ...."

"ತುಂಬಾ ಚೆನ್ನಾಗಿದೆ ಹೆಸರು.... ದಿನೇಶ್ ದೀಪಾ. ನಿಮ್ಮಿಬ್ಬರ ಜೋಡಿಯೂ ಚೆನ್ನಾಗಿದೆ. ನಿಮ್ಮಿಬ್ಬರ ಜೀವನ ಸದಾ ಚೆನ್ನಾಗಿರಲಿ. ಅವನನ್ನು ಒಮ್ಮೆ ಕರೆದುಕೊಂಡು ಬಾ...."

"ಆಯ್ತು ತಾತಾ. ಅವರೀಗ ಡೆಲ್ಲಿಯಲ್ಲಿದ್ದಾರೆ. ಬಂದ ಮೇಲೆ ಖಂಡಿತಾ ಕರೆದುಕೊಂಡು ಬರ್ತೀನಿ." ಎನ್ನುತ್ತಾ ಅವರಿಗೆ ನಮಸ್ಕಾರ ಮಾಡಿದಳು.

"ನೂರು ಕಾಲ ಚೆನ್ನಾಗಿ ಬಾಳಮ್ಮಾ" ಆಶೀರ್ವಾದ ಮಾಡಿದರು. ಸುಜಯಾ ಕೂಡಾ ಭಾವುಕಳಾಗಿದ್ದಳು. ದೀಪಾ ಅವರನ್ನೇ ಮತ್ತೆ ಮತ್ತೆ ನೋಡುತ್ತಾ ನಡೆದಳು. ಎಲ್ಲರು ಡೈನಿಂಗ್ ಹಾಲ್‌ಗೆ ಬಂದರು. ತಿಂಡಿಯ ವೇಳೆಯಾಗಿತ್ತು. ಅಡುಗೆಯವರು ಎಲ್ಲರಿಗೂ ಬಿಸಿ ಬಿಸಿ ರುಚಿಕರವಾಗ ಉಪ್ಪಿಟ್ಟನ್ನು ಕೊಟ್ಟರು. ಅದೇ ಸಮಯಕ್ಕೆ ಮಹೇಶನೂ ಬಂದ. ಅವನಿಗೂ ತಿಂಡಿ ಕಾಫಿ ಆಯಿತು. ಸಾವಿತ್ರಮ್ಮ ಅವನನ್ನು ಉಪಚರಿಸಿದಳು. ಅವನಿಗೆ ಸಂಕೋಚವಾಗಿತ್ತು. ದೀಪಾ ಮನಸಾರೆ ನಕ್ಕಳು.

"ಸಾವಿತ್ರಮ್ಮ ನಿಮಗೆ ಮಸ್ಕಾ ಹೊಡೀತಿದಾರೆ ಯಾಕೆ ಗೊತ್ತಾ?"

"ಹೂಂ. ಗೊತ್ತು, ನಾನೂ ಯಾಕಾಗಬಾರದು ಅಂತ ಯೋಚಿಸ್ತಿದೀನಿ"

ಸುಜಯಳ ಕಡೆ ಕೆಣಕುವ ನೋಟ ಬೀರಿದ. ಸುಜಯ ಅಣಗಿಸಿದಳು.

"ಹೇಗಿದೀರಿ ಅತ್ಗೆ.... ರಾತ್ರಿ ಚೆನ್ನಾಗಿ ನಿದ್ದೆ ಬಂತಾ?"

"ಸ್ವಲ್ಪ ನಿದ್ರೆ ಬಂದಿತ್ತು. ಇವಳು ಕನವರಿಸಿಕೊಂಡು, ಹೆದರಿಸಿ ಬಿಟ್ಲು. ಆಮೇಲೆ ನಿದ್ದೆ ಹಾರಿ ಹೋಯಿತು...." ಮಹೇಶ ನೆನಪಾದವನಂತೆ ನುಡಿದ.

"ಸಾರಿ. ನಿಮ್ಮ ಡೈರಿ ನನ್ನ ಹತ್ರಾನೇ ಉಳಿದುಬಿಟ್ಟಿದೆ...." ಸುಮ್ಮನಿರಿ ಎನ್ನುವಂತೆ ಸುಜಯ ಬಾಯಿ ಮೇಲೆ ಬೆರಳನ್ನಿಟ್ಟುಕೊಂಡು ತೋರಿಸಿದರೂ ದೀಪ ಕೇಳಿಸಿಕೊಂಡಿದ್ದಳು. ಮೂವರೂ ಡೈನಿಂಗ್ ಹಾಲ್‌ನಿಂದ ಹೊರಬಂದಿದ್ದರು.

"ಏನೇ ಅದು ಡೈರಿ.... ಪರ್ಸನಲ್ಲಾ? ಅದೇನು ಮಹೇಶ್‌ಗೆ ಮಾತ್ರ.... ಅಂಥಾ ವಿಶೇಷ ಏನಿದೆ? ಎಷ್ಟು ಸಾರಿ ಓದಿದ್ರಿ!"

"ಅದನ್ನ ಅವರಿಗೆ ಓದಕ್ಕೆ ಕೊಟ್ಟಿಲ್ಲ...."

"ಸುಮ್ನೆ ಬುರುಡೆ ಬಿಡಬೇಡ. ನಂಗೊತ್ತು...."

"ಏನಿಲ್ಲ ಅಂತ ಅಂದ್ನಲ್ಲ.... ಅದರಲ್ಲಿ ಯಾವ ಸೀಕ್ರೆಟ್ಟೂ ಇಲ್ಲ. ಮಹೇಶ್, ಆ ಡೈರೀನ ಇವಳಿಗೆ ಕೊಡಿ. ಓದಿ ತಲೆ ಕೆಡಿಸಿಕೊಳ್ಳಲಿ"

"ತಲೆ ಕೆಡುವಂಥಾದ್ದಾದ್ರೆ ಬೇಡ. ನಾನು ಓದುಲ್ಲ. ನೀವೇ ಹೇಳಿ ಬಿಡಿ ಮಹೇಶ್" ಸುಜಯ ಮೂತಿ ಊದಿಸಿಕೊಂಡು, ಅವರಿಬ್ಬರಿಗೆ ಬೆನ್ನು ಮಾಡಿ ನಿಂತಿದ್ದಳು.

"ನಿಮ್ಮ ರಾಣಿಗೆ ಕೋಪ ಬಂದಿದೆ. ಸಮಾಧಾನ ಮಾಡಿ.... ನಾನು ಆ ಕಡೆಗೆ ತಿರುಗಿಕೊಳ್ತೀನಿ...." ದೀಪ ಅತ್ತ ತಿರುಗಿದವಳೇ "ಅಮ್ಮಾ ಅಮ್ಮಾ" ಎಂದಳು. ಇವರಿಬ್ಬರಿಗೆ ಕೇಳುವಂತೆ. ಸುಜಯ ಮಹೇಶ ಈ ಕಡೆಗೆ ತಿರುಗಿದರು. ವನಜಮ್ಮ-ಸಾವಿತ್ರಮ್ಮ ಎದುರಿಗೆ ಬರುತ್ತಿದ್ದರು.

"ಹೊರಡೋಣ್ವಾ ಮಹೇಶಾ.... ಮನೆಗೆ ಹೋಗಿ ಸ್ನಾನ ಮಾಡ್ಬೇಕು.... ನೀವೂ ಬರ್ತೀರಾ ಸಾವಿತ್ರಮ್ಮ.... ನಿಮ್ಮನ್ನ ನಿಮ್ಮ ಮನೆ ಹತ್ರ ಇಳಿಸ್ತಾನೆ" ಮಹೇಶ ತಾಯಿಯ ಕಡೆ ನೋಡಿ ಹಲ್ಲು ಕಡಿದ.

"ಲೀಲಾ, ವಿವೇಕ ಇವತ್ತು ಬರ್ತಾರೋ ಇಲ್ಲವೋ ಗೊತ್ತಿಲ್ಲ.... ನಾನೂ ನಿಮ್ಮ ಜೊತೆಗೇ ಬಂದುಬಿಡ್ತೀನಿ" ವನಜಮ್ಮ ಒಂದ್ಮಾತು, ಹೇಗೂ ನಿಮ್ಮ ಮಗ ಬಂದಿದ್ದಾರಂ, ಭಾವನನ್ನು ಮಾತನಾಡಿಸ್ಕೊಂಡು ಬರ್ಲಿ. ಅವರೂ ನೋಡಿದ ಹಾಗಾಗುತ್ತೆ" ಸಾವಿತ್ರಮ್ಮ ವನಜಮ್ಮನ ಕಿವಿಯಲ್ಲಿ ಪಿಸುಗುಟ್ಟಿದಳು.

"ನಾನು ಮತ್ತೆ ಹೋಗ್ಲಾರೆ. ನಾನೇ ಹೋಗಿ ನನ್ನ ಮಗನ್ನ ಹೇಗೆ ಪರಿಚಯ ಮಾಡಿಕೊಡ್ಲಿ! ನೀವು ಹೋಗ್ಬನ್ನಿ"

"ನಾನು ಹೋಗುಲ್ಲಮ್ಮಾ.... ಅವರು ಒಂಥರಾ ಮನುಷ್ಯ. ವಕ್ರವಾಗಿ ಮಾತಾಡ್ತಾರೆ.... ಸುಜಯ ನೀನೇ ಕರ್ಕೊಂಡು ಹೋಗಮ್ಮಾ...."

"ಅವಳ್ಯಾಕೆ? ದೀಪಾ ನೀನು ಹೋಗು...."

"ಇಲ್ಲ ಅತ್ತೆ ನಂಗೆ ಬೇಜಾರು.... ಸುಜಯಾನೇ ಹೋಗಲಿ. ಎಷ್ಟಾಗಲೀ ಅವಳು ಇಲ್ಲಿಯವಳೇ.... ಅವರಿಗೆ, ಇವಳನ್ನ ಕಂಡ್ರೆ ಪ್ರೀತಿ ಇದೆ....."

"ಎಲ್ಲಾ ಸರಿ. ನಾನ್ಯಾಕೆ ಹೋಗ್ಬೇಕು?" ಮಹೇಶ ಪ್ರಶ್ನಿಸಿದ.

"ಅವರು ಈ ವೃದ್ಧಾಶ್ರಮದ ಸಂಸ್ಥಾಪಕರು. ಇಲ್ಲಿನ ಹಿರಿಯರು. ಅವರನ್ನು ನೋಡಿ, ಮಾತನಾಡಿಸುವುದು ನಿನ್ನ ಧರ್ಮ"

"ಸುಜೀ.... ಹಾಗೇ ಒಂದು ನೆನಪಿನ ಕಾಣಿಕೆಯನ್ನು ಮಹೇ[illegible]....." ದೀಪಾ ಜ್ಞಾಪಿಸಿದಳು.

"ಛೀ..... ಹೋಗೇ..... ನಾನು ಕೇಳಲ್ಲಮ್ಮ. ಅವರಾಗಿಯೇ ಕೊಟ್ಟರೆ ಕೊಡಲಿ. ಬೇಕಾದ್ರೆ ಇವರೇ ಕೇಳಲಿ....."

"ನಾನು ಏನನ್ನೂ ಕೇಳಲ್ಲ. ನನಗೆ ಏನೂ ಬೇಕಾಗಿಲ್ಲ.....ನಡೀರಿ ಸುಜಯಾ ಬೇಗ ಹೋಗಿ ಬರೋಣ" ಎನ್ನುತ್ತಾ ಅವಳ ತೋಳನ್ನು ಹಿಡಿದು ಮುಂದೆ ನಡೆದ.

ವನಜಮ್ಮ ಸಿಡಿಮಿಡಿಗೊಂಡಳು. ಸಾವಿತ್ರಮ್ಮ ಅಚ್ಚರಿಗೊಂಡಳು. ದೀಪಾ, "ಆಲ್ ದಿ ಬೆಸ್ಟ್" ಎಂದದ್ದು ಇವರಿಬ್ಬರಿಗೂ ಕೇಳಿಸಿತ್ತು......ಮಹೇಶ ಸುಜಯಳ ಕಡೆ ತಿರುಗಿ ಕಣ್ಣು ಹೊಡೆದು ನಕ್ಕ.

* * *

ಸುಬ್ಬರಾಮಪ್ಪನವರು ಒಳಗೆ ತಮ್ಮ ರೂಮಿನಲ್ಲಿ ದಿಂಬಿಗೆ ಒರಗಿ ಕುಳಿತಿದ್ದರು. ಕಿಟಕಿಯಿಂದ ಆಚೆ ಏನನ್ನೋ ನೋಡುತ್ತಾ ಚಿಂತಿಸುತ್ತಿರುವಂತಿತ್ತು. ಹೆಜ್ಜೆಯ ಸಪ್ಪಳ ಕೇಳಿ ಇತ್ತ ತಿರುಗಿ "ಯಾರು?" ಎಂದರು.

"ನಾನು ಸುಜಯಾ....."

"ಏನು ಬೇಕಾಗಿತ್ತು! ನಿನ್ನ ಜೊತೇಲಿ ಇರೋರು ಯಾರು?"

"ಮಹೇಶ್ ಅಂತ.... ನನ್ನ ಸ್ನೇಹಿತರು...." ಮಹೇಶ ನಮಸ್ಕರಿಸಿದ.

"ಸ್ನೇಹಿತರು.... ಇಬ್ಬರೂ ಒಬ್ಬರನ್ನೊಬ್ಬರು ಮೆಚ್ಚಿದ್ದೀರಿ.... ಹೌದು ತಾನೇ?"

"ಹೌದು ತಾತಾ.... ನಿಮಗೆ ಹೇಗೆ ಗೊತ್ತಾಯ್ತು?"

"ಅನುಭವದ ಕಣ್ಣುಗಳು ಎಲ್ಲವನ್ನೂ ಅರಿತುಕೊಳ್ಳುತ್ತವೆ.... ನಿಮ್ಮ ಜೋಡಿ ಅದ್ಭುತವಾಗಿದೆ.... ಆದಷ್ಟು ಬೇಗ ಮದುವೆಯಾಗಿಬಿಡಿ" ಮಹೇಶ ಸುಜಯಳ ಕಡೆ ನೋಡಿದ. ಏನೋ ಹೇಳಲಿದ್ದವಳನ್ನು ತಡೆದ.....

"ನನಗೇನೋ ಆದಷ್ಟು ಬೇಗ ಮದುವೆಯಾಗಬೇಕೆಂಬ ಆಸೆ ಇದೆ. ಆದರೆ ಕೆಲವು ಸಣ್ಣ ಅಡ್ಡಿಗಳಿವೆ. ಅದು ನಿವಾರಣೆ ಆಗಬೇಕು...."

"ಸಣ್ಣ ಅಡ್ಡಿಗಳಿಗೆ ಯಾಕೆ ಹೆದರಬೇಕು! ಆದಷ್ಟು ಬೇಗ ಮದುವೆ ಮುಗಿದರೆ, ಎಲ್ಲಾ ಅಡ್ಡಿಗಳೂ ತಾನಾಗಿಯೇ ನಿವಾರಣೆ ಆಗುತ್ತದೆ"

"ಆದರೆ...."

"ಗೊತ್ತಾಯ್ತು. ನಿಮ್ಮಿಬ್ಬರ ಪ್ರೀತಿಗೆ ಹಿರಿಯರ ಅನುಮತಿ ಇಲ್ಲ.... ಬೇಕಾದರೆ ನಾನು ನಿಮ್ಮ ಹಿರಿಯರ ಹತ್ರ ಮಾತಾಡ್ತೀನಿ. ಎಲ್ರೂ ಒಟ್ಟಾಗಿ ಕುಳಿತು ಏನೇ ಸಮಸ್ಯೆ ಇದ್ದರೂ, ಮಾತನಾಡಿ ಅದಕ್ಕೆ ಪರಿಹಾರವನ್ನು ಕಂಡುಕೊಂಡರಾಯ್ತು... ಸ್ಕೂಲು ಮುಗಿದ ಮೇಲೆ ಬಾ...ನಾನು ನಿನ್ನ ಹತ್ರ ಮಾತಾಡ್ಬೇಕು" ಅವರು ಸುಜಯಳಿಗೆ ಹೇಳಿದಾಗ ಅವಳು ಬೆದರಿದಳು. ಮಹೇಶ ಅವಳ ಕೈ ಒತ್ತಿ ಧೈರ್ಯ ಹೇಳಿದ. ಇಬ್ಬರೂ ಮತ್ತೊಮ್ಮೆ ಹೇಳಿ ಹೊರಬಂದರು.

"ಇದೆಲ್ಲಾ ಏನು ಮಹೇಶ್..... ನಾನು ಏನು ಮಾತಾಡ್ಲಿ?"

"ಯಾಕೆ? ಅವರು ಏನು ಕೇಳ್ತಾರೋ ಅದಕ್ಕೆ ಉತ್ತರ ಹೇಳಿದ್ರಾಯ್ತು....."

"ಅದು ಅಷ್ಟು ಸುಲಭವಲ್ಲ. ಏನೇನೋ ವಿಷಯಗಳು ಅಂತಂದ್ರೆ.... ಎಷ್ಟು ಹೇಳ್ಲಿ? ತುಂಬಾ.... ತುಂಬಾ.... ನನ್ನ ತಲೆ ಗೊಂದಲದಿಂದ ತುಂಬಿ ಹೋಗಿದೆ.... ನಾನು ಅದನ್ನೆಲ್ಲ ಯಾರಿಗೆ ಹೇಳಲಿ?"

"ನನಗೆ ಹೇಳಿ. ನಾನು ನಿಮ್ಮ ಆಪ್ತನಲ್ಲವಾ?"

"ಆದರೆ, ಏನು ಪ್ರಯೋಜನ ಅಂತ ಯೋಚಿಸ್ತಿದ್ದೆ....."

"ಸರಿ ಹಾಗಾದ್ರೆ.... ಹೀಗೇ ಯೋಚಿಸ್ತಾನೇ ಇರಿ.... ಕಾಲ ಸರಿದು ವರ್ಷಗಳು ಉರುಳುತ್ತವೆ. ಮುಂದೆ ನಾವಿಬ್ರೂ ಮುದುಕರಾಗ್ತೀವಿ. ನಾನು ಈ ವೃದ್ಧಾಶ್ರಮಕ್ಕೆ ಬಂದು ಸೇರಿಕೊಳ್ತೀನಿ. ನೀವು ಸಹ ಹೇಗೂ ಇಲ್ಲೇ ಇದೀರಲ್ಲ...." ಸುಜಯ ಸಶಬ್ದವಾಗಿ ನಕ್ಕಳು.

"ನೀವು ನಗಬೇಡಿ....." ಅವನು ಕೋಪವನ್ನು ನಟಿಸಿ ಅಣಕಿಸಿದ.

"ಇವತ್ತು ಬಿಡುವಾಗಿದೀರಾ ಮಹೇಶ್....."

"ಹುಂ. ಅವರಿಬ್ಬರನ್ನು ಮನೆಗೆ ತಲುಪಿಸಿದರೆ ಆಯ್ತು...ಸಾವಿತ್ರಮ್ಮನ್ನ ಅವರ ಮನೆಗೆ, ಅತ್ತಿಗೇನ ಅವರ ಮನೆಗೆ.... ಆಮೇಲೆ ನಮ್ಮ ಮನೆ....."

"ನಾನು ನಿಮ್ಮ ಹತ್ರ ಮಾತಾಡ್ಬೇಕಾಗಿತ್ತು. ಆದರೆ ಈಗ ಬೇಡ. ನನಗೆ ಸ್ಕೂಲಿದೆ..."

"ಇವತ್ತು ರಜ ಇಲ್ವಾ? ನಾನು ಲೀಲಂಗೆ ಫೋನು ಮಾಡಿ ಕೇಳ್ಲಾ?"

"ನೀವು ಲೀಲನ ಹತ್ರ ಮಾತಾಡ್ಬೇಡಿ....." ಸರ್ರನೆ ನುಡಿದಳು.

"ಯಾಕೆ? ಅವರೇ ಇಲ್ಲಿಗೆ ಹೆಡ್ ಅಲ್ವಾ?"

"ಹೆಡ್ಡೋ ಮಡ್ಡೋ.... ಅದೆಲ್ಲ ಈಗ ಯಾಕೆ? ಬೇಕಾದ್ರೆ ಆ ದಡ್ಡನ್ನ ಕೇಳಿ....."

"ದಡ್ಡಾ.... ಯಾರವನು?"

"ಅವನೇ ಅವಳ ತಮ್ಮ...... ಅವಿವೇಕ ಅಂತ ಹೆಸರನ್ನಿಡಬೇಕಾಗಿತ್ತು....."

"ಏನ್ಮಾಡ್ದ ಅವನು?" ನಗುತ್ತಾ ಪ್ರಶ್ನಿಸಿದ.

"ಏನನ್ನೂ ಮಾಡುವ ಧೈರ್ಯ ಇಲ್ಲ.... ಅಕ್ಕ ಹೇಳ್ದ ಹಾಗೆ ಕೇಳುವ ಜಾಣ...

ಅಷ್ಟೇ...."

"ಪಾಪ.... ಅಕ್ಕ ಜೋರು ಇರಬಹುದು...."

"ಬರೀ ಜೋರು ಅಷ್ಟೇ ಅಲ್ಲ. ರಾಕ್ಷಸಿ.... ಅವತ್ತು ಒಂದು ದಿನ, ತಮ್ಮನ ಕೆನ್ನೆಗೆ ಹೊಡೆದದ್ದನ್ನು ನಾನೇ ಕಣ್ಣಾರೆ ನೋಡಿದೀನಿ...."

"ಸರಿ. ಅದು ಅವರವರಿಗೆ ಸಂಬಂಧಿಸಿದ ವಿಷಯ. ನಿಮ್ಮ ಕಾಂಟ್ರ್ಯಾಕ್ಟ್ ಮುಗಿದ್ಮೇಲೆ ಇಲ್ಲಿಂದ ಪಲಾಯನ.... ಈಗ ಹೇಗೂ ಹಿರಿಯರ ಪರ್ಮಿಷನ್ ಸಿಕ್ಕಿದೆಯಲ್ಲ" ಮಹೇಶ ಅವಳ ಮೊಣಕೈ ತಿವಿದು ನಕ್ಕ.

"ನೀವು ನಗಬೇಡಿ, ನಂಗೆ ಕೋಪ ಬರುತ್ತೆ. ನಾನು ಇಲ್ಲಿಗೆ ಬಂದು ಸೇರೋಕ್ಕೆ ನೀವೇ ಕಾರಣ...."

"ನನ್ನ ಮೇಲೆ ಇಲ್ಲಸಲ್ಲದ ಅಪವಾದ ಹೊರಿಸ್ಬೇಡಿ. ಇದು ನ್ಯಾಯ ಅಲ್ಲ.... ಈಗ ಬಿಡಿ. ಅತ್ತಿಗೆ ನಮ್ಮನ್ನು ಹುಡುಕ್ಕೊಂಡು ಬರ್ತಾ ಇದಾರೆ...." ದೀಪಾ ಅವರನ್ನು ಸಮೀಪಿಸಿದಳು.

"ಇಲ್ಲಿ ನಿಂತು ಮಾತಾಡ್ತಾ ಇದೀರಾ? ಆಶ್ರಮದವರೆಲ್ಲಾ ನಿಮ್ಮನ್ನೇ ನೋಡ್ತಿದಾರೆ. ನಿಮ್ಮಿಬ್ಬರಿಗೆ ಈ ಕಡೆ ಜ್ಞಾನವೇ ಇಲ್ಲ" ಸುಜಯ ಸಂಕೋಚದಿಂದ ಸುತ್ತಾ ಕಣ್ಣಾಡಿಸಿದಳು. ಅಲ್ಲಿ ಯಾರೂ ಇರಲಿಲ್ಲ. ಮಹೇಶ ಕಣ್ಣರಳಿಸಿ ಸುತ್ತಲೂ ನೋಡಿ, ನಕ್ಕ.

ಮೊದಲಿಗೆ ಸಾವಿತ್ರಮ್ಮನ ಮನೆಯ ಮುಂದೆ ಕಾರು ನಿಂತಿತು. ಆಕೆಯ ಬಲವಂತಕ್ಕೆ ಎಲ್ಲರೂ ಅವರ ಮನೆಯೊಳಕ್ಕೆ ಬಂದರು. ಲೀಲಾ, ಕೆಲವೇ ನಿಮಿಷಗಳಲ್ಲಿ, ಕಿತ್ತಲೆ ಹಣ್ಣಿನ ಜ್ಯೂಸನ್ನು ತಂದು ಎಲ್ಲರಿಗೂ ಕೊಟ್ಟಳು. ಸಾವಿತ್ರಮ್ಮನ ಆದೇಶದಂತೆ, ವಿವೇಕ ಮಹೇಶನನ್ನು, ಮನೆ ತೋರಿಸುವ ಸಲುವಾಗಿ ತನ್ನೊಂದಿಗೆ ಕರೆದೊಯ್ದ. ದೀಪಳೂ ಅವರಿಬ್ಬರೊಂದಿಗೆ ನಡೆದಳು.

"ಅರವತ್ತು ವರ್ಷದ ಹಿಂದೆ ಕಟ್ಟಿಸಿದ ಮನೆ.... ಹಳೇ ಕಾಲದ್ದು...." ಎಂದು, ಮನೆಯ ಕೊಠಡಿಗಳನ್ನೆಲ್ಲಾ ತೋರುತ್ತಾ ಮಹಡಿಯ ಮೇಲಕ್ಕೆ ಕರೆದೊಯ್ದ. ಅಲ್ಲಿಯ ವಿಶಾಲವಾದ ಹಜಾರ, ಕೋಣೆಗಳು, ಫರ್ನೀಚರ್‌ಗಳು, ಎಲ್ಲಾ ಹಳೆಯ ರೀತಿಯದೇ ಆದರೂ, ಶ್ರೀಮಂತಿಕೆಯನ್ನು ಎತ್ತಿ ತೋರುವಂತೆ ಆಕರ್ಷಕವಾಗಿದ್ದವು.

ಹಾಲಿನ ಗೋಡೆಯ ಮೇಲೆ ಅಲಂಕೃತವಾಗಿದ್ದ ಕಲಾಕೃತಿ ದೀಪಳ ಗಮನಕ್ಕೆ ಬಂತು. ಮಹೇಶನಿಗೆ ತೋರಿಸಿದಳು.

"ಇದು ಎಷ್ಟು ಚೆನ್ನಾಗಿದೆ ಅಲ್ವಾ? ಇಂಥದೇ ಒಂದು ಚಿಕ್ಕ ಸೈಜಿನದನ್ನು ನನಗೂ ನೆನಪಿನ ಕಾಣಿಕೆಯನ್ನಾಗಿ ಕೊಟ್ಟಿದ್ದಾರೆ.... ನನಗೆ ತುಂಬಾ ಇಷ್ಟವಾಯ್ತು...." ಎಂದಳು.

ಮಹೇಶ ಅದನ್ನೇ ದಿಟ್ಟಿಸಿ ನೋಡಿದ. ವಿವೇಕ ಅವನ ಹಿಂದೆ ಬಂದು ನಿಂತ. "ಇದರ ಫೋಟೋ ತೆಗೆಸಿ, ಲ್ಯಾಮಿನೇಟ್ ಮಾಡಿ, ಎಲ್ಲರಿಗೂ ಆಶ್ರಮದ

ಸಿಲ್ವರ್ ಜ್ಯೂಬ್ಲಿ ವಾರ್ಷಿಕೋತ್ಸವದ ನೆನಪಿನ ಕಾಣಿಕೆಯನ್ನಾಗಿ ಕೊಟ್ಟೆವು. ಅದು ನಮ್ಮ ತಂದೆಯ ಆಸೆ."

"ಚೆನ್ನಾಗೇನೋ ಇದೆ.... ಆದರೆ ಈ ಕಲೆಯಲ್ಲಿ ಅಡಗಿರುವ ಅರ್ಥ ಏನು ಅಂತ ತಿಳಿಯಲಿಲ್ಲ"

"ಎಷ್ಟೋ ವರ್ಷಗಳಿಂದ ಈ ಗೋಡೆಯ ಮೇಲೆ ಕೂತಿದೆ. ನಾನು ದಿನಾ ನೋಡ್ತೀನಿ. ಆದರೂ ನಮಗೂ ಅರ್ಥವಾಗಿಲ್ಲ" ವಿವೇಕ ನಕ್ಕ.

"ಸುಜಯಾ ಮಾತ್ರ ನಂಗೆ ಅಲ್ಪ ಸ್ವಲ್ಪ ಅರ್ಥವಾಯಿತು... ಈ ಹಿಂದೆ ಎಲ್ಲೋ ನೋಡಿದ ನೆನಪು ಅಂತ ಅಂದಳು"

"ಸುಜಯಾ ತುಂಬಾ ಕ್ಲೆವರ್. ಐ ಲೈಕ್ ಹರ್....." ವಿವೇಕ್ ನುಡಿದಾಗ, ದೀಪಾ ಮಹೇಶನ ಕೈ ತಿವಿದಳು.

"ಅತ್ಗೆ, ನೀವು ಕೆಳಗೆ ಹೋಗಿ. ನಾನು ಸ್ವಲ್ಪ ಇವರ ಹತ್ರ ಮುಖ್ಯವಾದ ವಿಷಯವನ್ನು ಮಾತಾಡ್ಬೇಕು" ಎಂದು ಸಂಜ್ಞೆ ಮಾಡಿದ. ದೀಪಾ ಇಳಿದು ಹೋದಳು. ಮಹೇಶ, ವಿವೇಕ ಅಲ್ಲಿನ ಸೋಫಾದ ಮೇಲೆ ಕುಳಿತರು. ಮಹೇಶ ನೇರವಾಗಿ ಮುಖ್ಯವಾದ ವಿಷಯಕ್ಕೆ ಬಂದ.

"ನಾನು ಈಗಾಗ್ಲೇ ಒಬ್ಬ ಹುಡುಗೀನ್ನ ಪ್ರೀತಿಸ್ತಿದೀನಿ. ಅವಳನ್ನೇ ಮದುವೆ ಆಗ್ತೀನಿ... ಆದ್ದರಿಂದ ನಾನು ನಿಮ್ಮ ಅಕ್ಕನ್ನ ಮದುವೆಯಾಗಲು ಸಾಧ್ಯವಿಲ್ಲ. ಈ ವಿಷಯವನ್ನು ನಿಮ್ಮ ಚಿಕ್ಕಮ್ಮನಿಗೆ ತಿಳಿಸಿಬಿಡಿ...." ವಿವೇಕನ ಮುಖದ ಬಣ್ಣ ಕಪ್ಪಾಗಿತ್ತು.

"ಸಾರಿ. ನಿಮಗೆ ಬೇಸರವಾಗಿರಬಹುದು.... ಆದರೆ ನನ್ನ ಮನಸ್ಸಿನಲ್ಲಿರುವುದನ್ನು ತಿಳಿಸಿದೀನಿ...."

"ಹೋಗಲಿ ಬಿಡಿ... ನಮ್ಮಕ್ಕನಿಗೆ ಮರು ಮದುವೆಯಾಗುವ ಆಸೆ ಇರಲಿಲ್ಲ. ಆದರೆ ನಮ್ಮ ಚಿಕ್ಕಮ್ಮನದೇ ಬಲವಂತ......"

"ಅಂದರೇ...."

"ಈಗಾಗ್ಲೇ ಅವಳಿಗೆ ಒಂದು ಸಾರಿ ಮದುವೆಯಾಗಿತ್ತು. ಇಬ್ಬರಿಗೂ ಸರಿ ಹೋಗಲಿಲ್ಲ. ಬಿಟ್ಟು ಬಂದಳು. ಈಗ ಅವಳು ಡೈವೋರ್ಸಿ.... ಈ ವಿಷಯ ನಿಮ್ಮ ತಾಯಿಗೆ ಗೊತ್ತಿಲ್ಲ. ಚಿಕ್ಕಮ್ಮ ಹೇಳುವುದು ಬೇಡ ಅಂತ ಅಂದ್ರು...."

"ಓ...ಹೋಗ್ಲಿಬಿಡಿ. ಆ ಮಾತ್ಯಾಕೆ! ನಿಮ್ಮಕ್ಕನಿಗೆ ನನಗಿಂತ ಒಳ್ಳೆಯ ವರ ಸಿಗಲೆಂದು ಹಾರೈಸ್ತೀನಿ. ನಾನು ನಿಮಗೆ ನಿರಾಶೆ ಮಾಡಿದ್ದಕ್ಕೆ ವೆರಿ ಸಾರಿ....."

"ಪರವಾಗಿಲ್ಲ ಬಿಡಿ. ಈಗಲೆ ವಿಷಯ ತಿಳಿದದ್ದು ಒಳ್ಳೇದಾಯ್ತು.... ನಾನೂ ನಿಮ್ಮನ್ನು ಒಂದು ಫೇವರ್ ಕೇಳೋಣ ಅಂತ ಅಂದ್ಕೊಂಡಿದ್ದೆ...." ವಿವೇಕ ಹಲ್ಲು ಗಿಂಜಿದ.

"ಏನು ಹೇಳಿ.... ಅದು ನನ್ನಿಂದ ಆಗೋದಾದ್ರೆ ಖಂಡಿತಾ ಮಾಡ್ತೀನಿ"

"ನಾನು ಸುಜಯನ್ನ ಲೈಕ್ ಮಾಡ್ತಿದ್ದೀನಿ.... ಆದ್ರೆ ಅವರು ಲೈಕ್ ಮಾಡ್ತಾರೋ ಇಲ್ವೋ ಗೊತ್ತಿಲ್ಲ.... ನಿಮ್ಮ ಅತ್ಗೆ ಅವರಿಗೆ ಕಸಿನ್ ಅಂತೆ......"

"ಸುಜಯ ನಿಮ್ಮನ್ನು ಮದುವೆ ಆಗಲ್ಲ.... ಅವರೂ ಬೇರೆ ಯಾರನ್ನೋ ಪ್ರೀತಿಸ್ತಿದಾರೆ...."

"ಹೌದಾ? ನಿಮಗೆ ಹೇಗೆ ಗೊತ್ತು?"

"ಯಾಕೇಂದ್ರೆ, ಆ ಅದೃಷ್ಟವಂತ ನಾನೇ...." ಮಹೇಶ ಹೆಮ್ಮೆಯಿಂದ ಹೇಳಿಕೊಂಡಾಗ ವಿವೇಕ ಕೆಂಪಾದ. ಅಸೂಯೆ, ಅಸಹನೆ ಎಲ್ಲವೂ ಅಡಗಿತ್ತು. ಆದರೆ ಕ್ಷಣ ಮಾತ್ರದಲ್ಲಿ ಅದು ಮಾಯವಾಗಿತ್ತು.

"ಕಂಗ್ರಾಟ್ಸ್.... ಯೂ ಆರ್ ರಿಯಲಿ ಲಕ್ಕೀ.....ಆದರೆ ಈಗಲೇ ಈ ವಿಷಯವನ್ನು ಯಾರಿಗೂ ಹೇಳ್ಬೇಡಿ.... ಪ್ಲೀಸ್...." ಆಗಲಿ ಎನ್ನುವಂತೆ ಮಹೇಶ ತಲೆಯಾಡಿಸಿದ. "ಓಕೆ. ಆದರೆ ನಮ್ಮ ಅಕ್ಕನಿಗೆ ಯಾವ್ದಾದ್ರೂ ಹುಡುಗ ಇದ್ದರೆ ತಿಳಿಸಿ....ಅವಳ ಜವಾಬ್ದಾರಿ ನನ್ನ ಮೇಲಿದೆ...."

"ಒಂದ್ಮಾತು ಕೇಳ್ತೀನಿ ವಿವೇಕ್.... ತಪ್ಪು ತಿಳ್ಕೋಬೇಡಿ"

"ಇಲ್ಲ ಕೇಳೀ...."

"ನಿಮ್ಮ ತಂದೆ ಈ ವೃದ್ಧಾಶ್ರಮದಲ್ಲಿ ಯಾಕಿದಾರೆ! ಇಲ್ಲೇ ನಿಮ್ಮಗಳ ಜೊತೆಯಲ್ಲಿ ಯಾಕಿಲ್ಲ!"

"ಎಲ್ರಿಗೂ ಇದೇ ಡೌಟು. ಆದ್ರೆ ಎಲ್ರೂ ನಮ್ಮನ್ನ ಮಾತ್ರ ಕೇಳ್ತಾರೆ. ಅವರನ್ನು ಕೇಳುವ ಧೈರ್ಯ ಯಾರಿಗೂ ಇಲ್ಲ. ಯಾಕೇಂತ ನಮಗೆ ಗೊತ್ತಿಲ್ಲ. ಬಹುಶಃ ನಾವು ಅವರ ಸ್ವಂತ ಮಕ್ಕಳಲ್ಲ. ಅದಕ್ಕೇ ನಮ್ಮ ಜೊತೆ ಇರುವ ಇಷ್ಟ ಇಲ್ಲದಿರಬಹುದು"

"ಓ.... ಹೌದಾ?"

"ನಮ್ಮ ಫ್ಯಾಮಿಲಿಯ ಕತೆ ತುಂಬಾ ದೊಡ್ಡದಾಗಿದೆ. ಆದರೆ ನಾನು ಯಾರಿಗೂ ಹೇಳುವಂತಿಲ್ಲ. ಯಾಕೇಂದ್ರೆ ನಾನು ಚಿಕ್ಕವನು..... ನನಗ್ಯಾಕೆ ಇದೆಲ್ಲ ಅಂತ, ಕೇಳಿದ್ರು ಕೂಡಾ ಹೇಳುಲ್ಲ.... ಅಕ್ಕ, ಚಿಕ್ಕಮ್ಮ ಇಬ್ರೂ ನಂಗೆ ತಿಳುವಳಿಕೆ ಸಾಲದು ಅಂತ ಅಂದ್ಕೊಂಡಿದಾರೆ. ಎಲ್ರನ್ನೂ ಬಿಟ್ಟು ಎಲ್ಲಾದ್ರೂ ಓಡಿಹೋಗೋಣ ಅಂತ ಅನ್ನಿಸುತ್ತೆ. ಒಂದು ಸಾರಿ ಫಾರಿನ್ನಲ್ಲಿ ಕೆಲ್ಸ ಸಿಕ್ಕಿ ಹೊರಟು ಹೋದ್ರೆ, ನಾನು ಮತ್ತೆ ಈ ಕಡೆಗೆ ತಿರುಗಿ ನೋಡಲ್ಲ" ವಿವೇಕನ ಭುಜವನ್ನು ಮುಟ್ಟಿ ಸಾಂತ್ವನ ನೀಡಿದ.

"ನನ್ನ ಸ್ವಂತ ತಂದೆಯ ಮುಖ ನೋಡಿದ ನೆನಪಿಲ್ಲ. ತಾಯಿ ಯಾರು ಅಂತ ಗೊತ್ತಿದ್ರೂ ಯಾರಿಗೂ ಹೇಳುವ ಹಾಗಿಲ್ಲ..... ಇದೆಲ್ಲ ಅಸಹ್ಯ ಅಂತ ಅನಿಸುತ್ತೆ.... ನಮ್ಮದಲ್ಲದ ಅಸ್ತಿ ಯಾರಿಗೆ ಬೇಕಾಗಿದೆ?" ವಿವೇಕ ಕಿಟಕಿಯ ಬಳಿ ನಿಂತು ಕಿಟಕಿಯಾಚೆ ನೋಡುತ್ತಾ ನುಡಿದ. ಮಹೇಶನಿಗೆ ಮುಜುಗರವೆನಿಸಿತ್ತು.

"ನನಗೆ ಏನು ಹೇಳ್ಬೇಕೋ ಗೊತ್ತಾಗ್ತಿಲ್ಲ ವಿವೇಕ್......"

"ಹೌದು. ಯಾರಿಗೂ ನನ್ನ ಮನಸ್ಥಿತಿ ಅರ್ಥವಾಗಲ್ಲ. ಚಿಕ್ಕಮ್ಮ ಅಂತ ಕರೆಸ್ಕೊಳ್ಳೋ ಅಮ್ಮಂಗೆ ಅರ್ಥವಾಗಲ್ಲ. ಗಂಡನ್ನ ಬಿಟ್ಟು ಬಂದಿರುವ ಅಕ್ಕಂಗೆ ಅರ್ಥವಾಗಲ್ಲ. ನನಗೂ ನಿಮ್ಮ ಹಾಗೆ ಒಬ್ಬ ಅಣ್ಣ ಇದ್ದಿದ್ರೆ, ನನ್ನ ಮನದ ದುಗುಡವನ್ನು ಅರ್ಥ ಮಾಡಿಕೊಳ್ಳಬಹುದಾಗಿತ್ತು. ನನಗೆ ಅಣ್ಣ ಇಲ್ಲ. ತಮ್ಮ ಇಲ್ಲ.... ನಾನು ಒಂಟಿ.... ಸುಜಯನ್ನ ನಾನು ಲೈಕ್ ಮಾಡ್ದೆ. ಗರ್ಲ್‌ಫ್ರೆಂಡ್ ಆಗು ಅಂತ ಕೇಳಿಕೊಂಡೆ. ಕೆನ್ನೆಗೆ ಹೊಡೆದು ಓಡಿ ಹೋದ್ಲು... ಆದ್ರೂ ಅವಳನ್ನೇ ಮದುವೆ ಯಾಗೋ ಆಸೆಪಟ್ಟೆ... ಆ ನನ್ನ ಆಸೆಗೆ ಕಲ್ಲುಬಿತ್ತು. ಅವಳಿಗೆ ನನ್ನ ಮೇಲೆ ಪ್ರೀತಿ ಬರಲು ಸಾಧ್ಯವಿಲ್ಲ.... ಒಟ್ಟಿನಲ್ಲಿ ನಾನು ಯಾವ ಸುಖವನ್ನೂ ಕೇಳಿಕೊಂಡು ಹುಟ್ಟಲಿಲ್ಲ...."

"ಸಾರೀ ವಿವೇಕ್.... ನಿಮ್ಮ ಮನಸ್ನಲ್ಲಿ ಹೀಗೇ ದುಗುಡಗಳು ತುಂಬಿಕೊಂಡಿದೆ ಅಂತ ನನಗೆ ತಿಳಿದಿರಲಿಲ್ಲ. ನನ್ನನ್ನು ನಿಮ್ಮ ಅಣ್ಣ ಅಂತಲೇ ತಿಳಿದುಕೊಳ್ಳಿ.... ಅಥವಾ ಸ್ನೇಹಿತ ಅಂತ ತಿಳಿದುಕೊಳ್ಳಿ....."

"ನನಗೆ ಕೆಲವರು ಸ್ನೇಹಿತರಿದ್ದಾರೆ.....ಆದರೆ ಅವರೆಲ್ಲ ಮಜಾ ಮಾಡೋಕೆ ಮಾತ್ರ. ನನಗೆ ಯಾರ ಮೇಲೂ ನಂಬಿಕೆ ಇಲ್ಲ"

"ನನ್ನನ್ನು ನಂಬಿ. ನಾನು ನಿಮ್ಮಂತೆ ಶ್ರೀಮಂತನಲ್ಲ. ಬಡ ಕುಟುಂಬದಲ್ಲಿ ಬೆಳೆದವನು...."

"ನಾನೂ ನಿಮ್ಮ ಹಾಗೇ ಬಡ ಕುಟುಂಬದಲ್ಲಿ ಹುಟ್ಟಿದ್ದರೆ ಚೆನ್ನಾಗಿತ್ತು. ನನ್ನ ಪಾಡಿಗೆ ನಾನು ಹಾಯಾಗಿರಬಹುದಾಗಿತ್ತು..... ನನಗೂ ಸುಜಯಳಂಥ ಗರ್ಲ್‌ಫ್ರೆಂಡ್ ಸಿಕ್ಕಿರೋಳು. ದೀಪಾಳಂತಹ ಅತ್ತಿಗೆ ಸಿಕ್ಕಿರ್ತೋರು.... ನೀವು ತುಂಬಾ ಲಕ್ಕೀ..."

"ಮಹೇಶ್...." ಕೆಳಗಿನಿಂದ ದೀಪಾ ಕೂಗಿದ್ದಳು.

"ಅತ್ಗೆ ಕರೀತಿದಾರೆ. ನಾನಿನ್ನು ಹೊರಡ್ತೀನಿ. ನಿಮಗೆ ನನ್ನೊಡನೆ ಮಾತನಾಡ ಬೇಕೆನಿಸಿದಾಗ ಫೋನು ಮಾಡಿ ಬನ್ನಿ.... ನಿಮ್ಮ ಮನಸ್ಸೂ ಹಗುರವಾಗಬಹುದು" ವಿವೇಕನ ಕೈ ಒತ್ತಿ ವಿಶ್ವಾಸವನ್ನು ತೋರಿ, ಕೈ ಕುಲುಕಿ, "ಬರ್ತೀನಿ" ಎಂತಂದ.

"ಥ್ಯಾಂಕ್ಯೂ ಮಹೇಶ್.... ನೀವು ತುಂಬಾ ಒಳ್ಳೆಯವರು.... ನನಗೆ ನಿಮ್ಮ ಸ್ನೇಹ ಬೇಕು.... ಖಂಡಿತಾ ಬರ್ತೀನಿ...." ಮಹೇಶ ಕೆಳಗಿಳಿದ. ವಿವೇಕ ಅವನ ಹಿಂದೆ ಬರಲಿಲ್ಲ. ಇಬ್ಬರ ಮಧ್ಯೆ ಏನು ಮಾತುಕತೆ ನಡೆದಿರಬಹುದು. ದೀಪಾ ಕುತೂಹಲದಿಂದ ಮಹೇಶನ ಕಡೆ ನೋಡಿದಳು. ಆಮೇಲೆ ಹೇಳ್ತೀನಿ ಎನ್ನುವಂತೆ ಮಹೇಶ ಕಣ್ಣು ಸಂಜ್ಞೆ ಮಾಡಿದ. ಎಲ್ಲರಿಗೂ ಮತ್ತೊಮ್ಮೆ ಹೇಳಿ ಹೊರಟರು.

"ಅತ್ಗೇ... ನೀವು ನಮ್ಮ ಮನೆಗೆ ಬರ್ತೀರೋ... ಅಥವಾ ನಿಮ್ಮ ಮನೆಗೆ ಹೋಗ್ತೀರೋ!"

"ಮೊದಲು ಅತ್ತೇನ ಮನೆಗೆ ಬಿಟ್ಟು ಬಿಡಿ. ಅವರು ಸ್ನಾನ, ದೇವರಪೂಜೆ ಎಲ್ಲಾ ಮಾಡದೇ ಊಟ ಮಾಡೋರಲ್ಲ. ಆಮೇಲೆ ನನ್ನನ್ನ ನಮ್ಮ ಮನೆಗೆ ಬಿಟ್ಟು

ಬಿಡಿ....""ಸಿಂಪಲ್" ಮಹೇಶನಿಗೆ ದೀಪಾಳ ಮನಸ್ಸಿನಲ್ಲೇನಿದೆ ಅಂತ ಅರ್ಥವಾಗಿತ್ತು. ಸೀದಾ ತನ್ನ ಮನೆಯ ಕಡೆಗೆ ಕಾರನ್ನು ಓಡಿಸಿದ. ಯಾಕೋ ವನಜಮ್ಮ ಅತಿ ಮೌನವಾಗಿದ್ದಾಳೆಂದೆನಿಸಿತ್ತು. ತಾಯಿ ಇಳಿದಳು.... ಮಹೇಶ ಮತ್ತೆ ಕಾರನ್ನು ರಸ್ತೆಗೆ ತಂದ.

"ಹುಂ.... ಈಗ ಹೇಳಿ ಮಹೇಶ್...." ದೀಪ ಆತುರವನ್ನು ತೋರಿದಳು.

"ವಿವೇಕ, ಪೆದ್ದನೋ ಅಥವಾ ಮುಗ್ಧನೋ ಗೊತ್ತಿಲ್ಲ. ತನ್ನ ಮನೆಯ ವಿಷಯಗಳನ್ನೆಲ್ಲ ಬಿಟ್ಟುಕೊಟ್ಟ. ಲೀಲಾ ಡೈವೋರ್ಸಿ, ಇವರಿಬ್ಬರೂ ಸಾವಿತ್ರಮ್ಮನ ಮಕ್ಕಳು.... ಈ ವಿಷಯ ಅಮ್ಮಂಗೆ ತಿಳಿದರೆ ಎಷ್ಟು ನಿರಾಸೆಯಾಗಬಹುದು ಅಲ್ವಾ?" ನಕ್ಕ.

"ಬಹುಶಃ ಅವರಿಗೆ ಗೊತ್ತಾಗಿರಬಹುದು. ಅದಕ್ಕೆ ಅವರು ಮೌನವಾಗಿದ್ದರು ಅಂತ ಅನ್ನಿಸುತ್ತೆ....."

"ಒಳ್ಳೇದೇ ಆಯ್ತು.. ಈ ಮದುವೆ ಮಾತಿನ ಅಧ್ಯಾಯ ಇಲ್ಲಿಗೇ ಮುಗಿಯುತ್ತೆ..... ಆದರೆ ಒಂದು ವಿಷಯಾನ ಸುಜಯ ನಂಗೆ ಹೇಳ್ಲೇ ಇಲ್ಲ..... ವಿವೇಕ ಏನೋ ಮಿಸ್ ಬಿಹೇವ್ ಮಾಡಿ, ಅವಳ ಕೈಲಿ ಬೈಸಿಕೊಂಡಿದ್ದಾನೆ. ಹೊಡೆಸಿಕೊಂಡಿದ್ದಾನೆ. ನಿಮಗೆ ಗೊತ್ತಿತ್ತಾ ಅತ್ಗೇ....."

"ಇಲ್ವಲ್ಲಾ. ಇನ್ನು ಅವಳು ಅಲ್ಲಿರಬಾರದು.... ಇವರಿಬ್ಬರಿಂದ ಅವಳಿಗೆ ತೊಂದರೆ ತಪ್ಪಿದ್ದಲ್ಲಾ"

"ತೊಂದರೆ ಕೊಡುವಷ್ಟು ಧೂರ್ತನಂತೆ ಕಾಣಿಸೋಲ್ಲ. ಆದರೆ ಲೀಲಾ ಹೇಗೋ ನಂಗೆ ಗೊತ್ತಿಲ್ಲ....."

"ಹಾಗೇನಾದ್ರೂ ತೊಂದ್ರೆ ಕೊಟ್ಟರೆ, ಅವರಿಗೇ ಕೆಟ್ಟ ಹೆಸರು ಬರುತ್ತೆ...ಆಶ್ರಮದ ರೆಪ್ಯುಟೇಶನ್ ಹಾಳಾಗಿ ಹೋಗಲ್ವಾ? ಈ ಸುಜೀ ಫೂಲ್.... ಹೋಗೀ ಹೋಗೀ.... ಇಂಥಾ ಕಡೇನ ಸೇರಿಕೊಳ್ಳೋದು. ಅವಳನ್ನ ಲವ್ ಮಾಡ್ತೀರಲ್ಲ ನೀವು.... ಏನ್ಹೇಳಲಿ?"

"ನಾನು ಬ್ಲಡೀಫೂಲ್...." ಮಹೇಶ ಕಿಸಕ್ಕನೆ ನಕ್ಕ.

"ನೀವು ನಗಬೇಡಿ ಮಹೇಶ್.... ಈಗ ಅವಳನ್ನು ಅಲ್ಲಿಂದ ಬಚಾವ್ ಮಾಡೋ ಪ್ಲಾನ್ ಹುಡುಕಿ......"

"ನಾನು ಏನೇ ಪ್ಲಾನ್ ಹುಡುಕಿದರೂ, ಆ ನಿಮ್ಮ ಸುಜೀ ನಮ್ಮ ಮನೆಗೆ ಬರುಕ್ಕೆ ರೆಡಿ ಇಲ್ಲವಲ್ಲ.... ನಾನು ಸೈಕಿಯಾಟ್ರಿಸ್ಟ್ ಹತ್ರ ಕರಕೊಂಡು ಹೋಗಿ ಬಂದದ್ದೂ ಉಪಯೋಗಕ್ಕೆ ಬರಲಿಲ್ಲ"

"ಏನು? ಸುಜಯನ್ನ ಸೈಕಿಯಾಟ್ರಿಸ್ಟ್ ಹತ್ರ ಕರ್‍ಕೊಂಡು ಹೋಗಿದ್ರಾ? ಅವಳ ಪ್ರಾಬ್ಲಂ ಏನು?" ಗಾಬರಿಯಿಂದ ಕೇಳಿದಳು.

"ಗಾಬರಿ ಪಡುವಂಥಾದ್ದೇನಿಲ್ಲ......" ಎನ್ನುತ್ತಾ ಸುಜಯಳ ವಿಚಿತ್ರ ಅನುಭವಗಳ

ಬಗ್ಗೆ ಹಿಂದಿನ ವಿಷಯಗಳನ್ನು ಹೇಳಿದ.

"ಹೌದಾ! ನಂಗೆ ಗೊತ್ತೇ ಇರ್ಲಿಲ್ಲ.... ಡಾಕ್ಟ್ರು ಏನಂದ್ರು?"

"ಡಾಕ್ಟ್ರು ಹೇಳಿದ್ದನ್ನು ಸರಿಯಾಗಿ ಫಾಲೋ ಮಾಡಲಿಲ್ಲ. ದೊಡ್ಡ ತ್ಯಾಗಮಯಿ ಥರ, ಯಾರಿಗೂ ತಿಳಿಸ್ದೆ ಆಶ್ರಮದ ಸ್ಕೂಲಿಗೆ ಹೋಗಿ ಸೇರ್ಕೊಂಡ್ರು.... ನಾನೇನು ಮಾಡ್ಲೀ?"

"ನಿಮ್ಮ ತಾಯಿಗೆ ಈ ವಿಷಯ ಗೊತ್ತಾ?"

"ನಮ್ಮಮ್ಮಂಗೆ ಇರಲಿ, ಅವರಮ್ಮನಿಗೇ ಈ ವಿಷಯ ಗೊತ್ತಿಲ್ಲ. ಅವರು ನಂಗೆ ಹೇಳ್ದೇ ಇದ್ದಿದ್ರೆ, ಸುಜಯ ಆಶ್ರಮದ ಸ್ಕೂಲಿಗೆ ಕೆಲ್ಸಕ್ಕೆ ಸೇರಿಕೊಂಡ ವಿಷಯ ಕೂಡಾ ಗೊತ್ತಾಗ್ತಿರಲಿಲ್ಲ"

"ನಾನು ಇವತ್ತೇ ಸುಜಯಳ ಹತ್ರ ಮಾತಾಡ್ತೀನಿ. ನಡೀರಿ ಈಗ್ಲೇ, ಆಶ್ರಮಕ್ಕೆ ಮತ್ತೆ ಹೋಗೋಣ"

"ನಾವು ಮಾತಾಡಿ ಒಪ್ಪಿಸೋಕೆ ಆಗುತ್ತಾ? ಅವರೇ ಅಲ್ಲಿಂದ ಬರುವಂತೆ ಏನಾದ್ರೂ ಉಪಾಯ ಹುಡುಕಬೇಕು"

"ಆ ವೃದ್ಧರ ಹತ್ರ ಮಾತನಾಡಿ ಅವಳನ್ನು ಕೆಲಸದಿಂದ ತೆಗೆಸಿ ಹಾಕಿದರೆ...."

"ಸುಜಯಂಗೆ ಮೋಸ ಮಾಡಿದ ಹಾಗಾಗೋಲ್ವಾ. ಅವರು ಮತ್ತೆ ಸೈಕಿಯಾಟ್ರಿಸ್ಟ್ ಹತ್ರ ಬರುವ ಹಾಗೆ ಮಾಡಿ. ಕೌನ್ಸಲಿಂಗ್ ಮಾಡಿಸ್ಬೇಕು.... ಹೇಗೂ ನನ್ನ ಹತ್ರ ಅವರು ಕೊಟ್ಟಿರುವ ಡೈರಿ ಇದೆ...."

"ಹೌದು. ಅದೇ ಸರಿ. ಎಂತೆಂಥದೋ ಕನಸುಗಳು ಬೀಳುತ್ವೆ.. ಅಂತ ಹೇಳಿದ್ಲು. ಒಟ್ನಲ್ಲಿ ಅವಳು ಅಲ್ಲಿ ಹ್ಯಾಪಿಯಾಗಿಲ್ಲ....."

"ಹೌದು.... ಮೊದಲು ನೀವು ಆ ಡೈರಿಯನ್ನು ಓದಬೇಕು...." ಕಾರನ್ನು ಮತ್ತೆ ತನ್ನ ಮನೆಯ ದಾರಿಗೆ ತಿರುಗಿಸಿದ.

"ಇದೇನು ಇಬ್ರೂ ವಾಪಸ್ಸು ಬಂದುಬಿಟ್ರಿ? ಮನೆಗೆ ಬೀಗ ಹಾಕಿತ್ತಾ?"

"ದಾರೀಲಿ ಬೆಕ್ಕು ಅಡ್ಡಬಂತು. ಅದಕ್ಕೇ ವಾಪಸ್ಸು ಬಂದುಬಿಟ್ವೆವು" ಮಹೇಶ ತಮಾಷೆ ಮಾಡಿದ. ವನಜಮ್ಮ ಗಂಭೀರವಾಗಿಯೇ ಇದ್ದಳು. "ನಿನ್ನ ಸ್ನಾನ ಪೂಜೆ, ಎಲ್ಲಾ ಆಯ್ತಾ?"

"ಸ್ನಾನ ಆಯ್ತು ಅಷ್ಟೇ.... ಇನ್ನು ಅಡುಗೆಗೆ ಇಟ್ಟಿಲ್ಲ. ಏನು ವಿಷಯ ಹೇಳು.... ಏನಮ್ಮಾ ದೀಪಾ ಏನಾಯ್ತು?"

"ಏನೂ ಇಲ್ಲ...." ದೀಪ ಹಾಗೆ ಹೇಳಿದರೂ, ಮಹೇಶನ ರೂಮಿನ ಬಾಗಿಲಲ್ಲಿ ನಿಂತುಕೊಂಡಾಗ, ವನಜಮ್ಮನೂ ಬಾಗಿಲಿನ ಬಳಿಗೆ ಬಂದಳು. ಮಹೇಶ ಸರ್ರನೆ ಡೈರಿಯನ್ನು ಬೆನ್ನ ಹಿಂದೆ ಮುಚ್ಚಿಟ್ಟುಕೊಂಡ... ದೀಪಾ ಸಿಕ್ಕಿಬಿದ್ದವಳಂತೆ ಹಿಂದೆ ಸರಿದಳು.

"ಈ ಡೈರೀನ ತಗೊಂಡು ಹೋಗೋಕೆ ಬಂದ್ಯಾ? ಏನಿದೆ ಅಂಥಾ ವಿಶೇಷ ಈ ಡೈರಿಯಲ್ಲಿ?"

"ಏನೋ ನಂಗೊತ್ತಿಲ್ಲ..."

"ನಂಗೊತ್ತಿದೆ. ನಾನು ಹೇಳ್ತೀನಿ..." ವನಜಮ್ಮ ಹೇಳಿದಾಗ ಮಹೇಶ ಬೆಚ್ಚಿದ. ಅವನ ಕೈಯಿಂದ ಡೈರಿ ಕೆಳಕ್ಕೆ ಬಿತ್ತು... ದೀಪಾ ಕಣ್ಣರಳಿಸಿದಳು.

"ಅಮ್ಮಾ... ನೀನು ಇದನ್ನ....."

"ಹೂಂ. ಓದಿದೆ.... ಬರೀ ಸುಳ್ಳು.... ತೋಚಿದ್ದನ್ನೆಲ್ಲಾ ಬರೆದಿಟ್ಟಿದ್ದಾಳೆ. ಇವನು ಓದಿದ. ಈಗ ನೀನು ಓದು...." ಹುರುಳಿಲ್ಲ, ತಿರುಳಿಲ್ಲ, ಸಂಶಯದ ದನಿಯಿತ್ತು.

"ಅತ್ತೇ.... ಈ ಡೈರಿ ಯಾರದ್ದು ಅಂತ ಗೊತ್ತಾ?"

"ಹುಂ.... ಗೊತ್ತು, ಸುಜಯಂದು. ಇವನಿಗೆ ಪರ್ಸನಲ್ ಡೈರಿಯನ್ನು ಕೊಡೋರು ಬೇರೆ ಯಾರಿದ್ದಾರೆ! ಅದೇನು ಪುರಾಣವೋ ಪುಣ್ಯಕತೆಯೋ.... ಮಹಾಭಾರತವೇ ಭಾಗವತವೇ.... ಅದನ್ನು ಓದದಿದ್ದರೆ ಏನೂ ನಷ್ಟವಿಲ್ಲ. ಅಲ್ಲದೇ ನಿನ್ನಂಥ ಬಸಿರಿ ಹುಡುಗಿ ಓದಿ ತಲೆಕೆಡಿಸಿಕೊಳ್ಳೋ ಅಗತ್ಯವೇ ಇಲ್ಲ...."

ಮಹೇಶ ದೀಪಾಳಿಗೆ ಕಣ್ಣು ಸಂಜ್ಞೆ ಮಾಡಿದ. "ಅತ್ತೇ, ಸುಜಯ ಏನೋ ಸಮಸ್ಯೆಯಲ್ಲಿ ಸಿಕ್ಕಿಬಿದ್ದಿದ್ದಾಳೆ.... ನಾವು ಅವಳಿಗೆ ಸಹಾಯ ಮಾಡ್ತಿದೀವಿ ಅಷ್ಟೇ...."

"ಕನಸು ಎಲ್ಲರಿಗೂ ಬೀಳುತ್ತೆ. ಅದೇನು ಹೊಸದಲ್ಲ. ರಾತ್ರಿ ಕಂಡ ಕನಸು ಬೆಳಿಗ್ಗೆ ಏಳುವ ಹೊತ್ತಿಗೆ ಮರೆತು ಹೋಗಿರುತ್ತೆ.... ಅದ್ಯಾವ ಸಮಸ್ಯೆ.....?"

"ಅದೊಂದು ಥರ ಸೈಕಲಾಜಿಕಲ್ ಸಮಸ್ಯೆ ಇದ್ದರೂ ಇರಬಹುದು ಅಂತ.... ಅದನ್ನು ಡಾಕ್ಟರಿಗೆ ತೋರಿಸಬೇಕು...."

"ನಾನು ಅವತ್ತೇ ಅಂದ್ಕೊಂಡೆ... ಆ ಹುಡುಗಿಯ ನಡವಳಿಕೆಯಿಂದ್ಲೇ ಅರ್ಥವಾಗುತ್ತೆ. ಏನೋ ಸಮಯಕ್ಕೆ ಇದೆ ಅಂತ. ಇನ್ನಾದರೂ ಇವನು ಅವಳ ಹಂಬಲವನ್ನು ಬಿಡಲಿ.... ಸಮಸ್ಯೆ ಇರುವ ಹುಡುಗಿಯ ವಿಷಯ ಇವನಿಗ್ಯಾಕೆ?"

"ಅದು ಹಾಗಲ್ಲ ಅತ್ತೇ......"

"ನೀನಾದ್ರೂ ತಿಳುವಳಿಕೆ ಹೇಳು. ನಿನ್ನ ಹಾಗೇ ಯೋಗ್ಯಳಾಗಿರುವ ಹುಡುಗಿಯನ್ನು ನೋಡಿ ಮದುವೆ ಮಾಡ್ತೀನಿ...."

"ಲೀಲಾ ಮಹೇಶನಿಗೆ ತಕ್ಕವಳಲ್ಲ ಅತ್ತೇ.... ನಿಮಗೆ ಗೊತ್ತಿಲ್ಲದ ವಿಷಯ ತುಂಬಾ ಇದೆ...."

"ಲೀಲ ಗಂಡ ಬಿಟ್ಟವಳು... ಈ ವಿಷಯ ತಾನೇ... ಸಾವಿತ್ರಮ್ಮ ಇವತ್ತು ಬಾಯಿಬಿಟ್ಟಳು"

"ಅಮ್ಮಾ ಹಾಗೆಲ್ಲಾ ಕರ್ಟ್ ಆಗಿ ಮಾತಾಡ್ಬೇಡ. ಇದರಲ್ಲಿ ಲೀಲನ ತಪ್ಪೇನು? ಡೈವೋರ್ಸ್ ಆಗಿರಬಹುದು"

"ನಿನಗೆ ಇಂಥದದಲ್ಲಿ ತಪ್ಪು ಕಾಣಲ್ಲ. ನಿನ್ನ ವಯಸ್ಸು ಅಂಥದ್ದು.... ಈಗ ಈ ವಿಷಯ ಸಾಕು. ಅಡುಗೆಗೆ ಇಡ್ತೀನಿ. ಹೊತ್ತಾಗುತ್ತೆ.... ಬೂತ್‌ಗೆ ಹೋಗಿ ಹಾಲು, ಮೊಸರು ತಗೊಂಡು ಬಾ.... ದೀಪಾ ನೀನು ಸ್ನಾನ ಮಾಡು... ಊಟ ಬೇಗ ಆದರೆ, ಶಾಸ್ತ್ರಿಗಳ ಮನೆಗೆ ಹೋಗಿ ಬರ್ತೀನಿ"

ಏನೋ ಹೇಳಲು ಹೊರಟ ಮಹೇಶನನ್ನು, ದೀಪಾ ಕಣ್ಣು ಸಂಜ್ಞೆಯಲ್ಲೇ ತಡೆದಳು. ಮಹೇಶ ಚೀಲ ಹಿಡಿದು ಅಂಗಡಿ ಕಡೆ ಹೊರಟ. ದೀಪಾ ಬಚ್ಚಲು ಮನೆಯ ಕಡೆ ನಡೆದಳು. ವನಜಮ್ಮ ಬೇಗ ಬೇಗ ಅಡುಗೆ ಮಾಡಿದಳು. ಮೂವರೂ ಮೌನವಾಗಿ ಊಟ ಮಾಡಿದರು.

"ದೀಪಾ, ನೀನು ಒಂದು ಗಳಿಗೆ ಸುಧಾರಿಸ್ಕೋ... ಕಾಫಿ, ಟೀ ಏನಾದ್ರೂ ಬೇಕಿದ್ರೆ ಮಹೇಶನ್ನ ಕೇಳು ಮಾಡಿಕೊಡ್ತಾನೆ. ಇಬ್ರೂ ಅನಾವಶ್ಯಕವಾದ ಮಾತನ್ನಾಡ್ತಾ ಮನಸ್ಸನ್ನ ಕೆಡಿಸ್ಕೋಬೇಡಿ...."

"ಅಮ್ಮಾ... ನಾನೂ ಬರ್ಲೇನಮ್ಮಾ... ನಾನು ಶಾಸ್ತ್ರಿಗಳನ್ನ ಏನೇನೋ ಕೇಳಬೇಕಾಗಿದೆ....." ದೀಪ ಅತ್ತೆಗೆ ಕಾಣದಂತೆ ನಕ್ಕಳು.

"ಏನೂ ಬೇಡ... ದೀಪಾ ಒಬ್ಬಳೇ ಇರ್ತಾಳೆ.... ನೀನು ಮನೆಯಲ್ಲೇ ಇರು. ಎಲ್ಲಿಗೂ ಹೋಗ್ಬೇಡ" ವನಜಮ್ಮ ಛತ್ರಿ ಹಿಡಿದು ಬೀದಿಗೆ ಇಳಿದಳು. ಮಹೇಶ ಎಸ್ಸೆನ್ನುತ್ತಾ ಬಂದು ಸೋಫಾದ ಮೇಲೆ ಕುಳಿತ. ದೀಪಾ ಅವನ ಎದುರಿಗೆ ಕುಳಿತು ಮನೆಯನ್ನೊಮ್ಮೆ ವೀಕ್ಷಿಸಿದಳು. "ಏನತ್ಗೆ ಹಾಗೆ ನೋಡ್ತಾ ಇದೀರಿ. ಹೊಸಬರ ಥರಾ...."

"ನಾನು ಎಂದೂ ಸರಿಯಾಗಿ ನಿಮ್ಮ ಮನೆಯೊಳಗೆ ಏನಿದೆ, ಏನಿಲ್ಲ ಅಂತ ನೋಡೇ ಇಲ್ಲ. ಇಲ್ಲಿ ಸುಜಯಂಗೆ ಅಪ್ಸೆಟ್ ಆಗುವಂಥಾದ್ದು ಏನಿದೆ ಅಂತ?"

"ಈ ಫೋಟೋ...." ಬಾಗಿಲೆದುರಿಗಿದ್ದ ಗೋಡೆಯ ಮೇಲೆ, ಮೊಳೆಗೆ ತಗುಲಿ ಹಾಕಿದ್ದ ಫೋಟೋ ಕಡೆ ಬೆರಳು ಮಾಡಿ ತೋರಿದ.

"ಅಂದ್ಹಾಗೇ, ಈ ಫೋಟೋದಲ್ಲಿರೋರು ಯಾರು?"

"ನನಗೆ ಗೊತ್ತಿರುವ ಹಾಗೆ, ನನ್ನ ತಾತ, ಅಜ್ಜಿ.....ಇಷ್ಟರ ಮೇಲೆ ಇದರಲ್ಲೂ ಏನು ರಹಸ್ಯ ಅಡಗಿದೆಯೋ.... ಸುಜಯಳ ಹಾಗೆ, ಲೀಲಳ ಹಾಗೆ, ಸಾವಿತ್ರಮ್ಮನ ಹಾಗೇ..." ವಿಕಟನಗೆ ನಕ್ಕ.

"ತಮಾಷೆ ಮಾಡ್ಬೇಡಿ ಮಹೇಶ್....ಸೀರಿಯಸ್ ಆಗಿ ಮಾತಾಡಿ...."

"ಎಷ್ಟೋ ವರ್ಷಗಳಿಂದ ಈ ಫೋಟೋ ಇಲ್ಲೇ ಹೀಗೇ ಇದೆ. ಬರೋರು, ಹೋಗೋ ರನ್ನೆಲ್ಲಾ ನೋಡ್ತಾ ಇರೋ ಈ ದಂಪತಿಗಳು.... ನಮಗ್ಯಾರಿಗೂ ಏನೂ ವಿಶೇಷ ಅಂತ ಅನ್ನಿಸಿಲ್ಲ...ಈ ಮನೆಗೆ ಹೊಸಬ್ರು ನೀವು... ನಿಮಗೂ ಏನೂ ಕಂಡಿಲ್ಲ. ಸುಜಯಂಗೆ ಮಾತ್ರ ತಲೆಸುತ್ತು, ಕಣ್ಣು ಕತ್ತಲು, ಎಂತೆಂಥದೋ

ಯಾಕಾಯ್ತು? ಅದನ್ನು ಈ ಮಹಾನುಭಾವರೇ ಹೇಳಬೇಕು." ಮಹೇಶ ಕೈ ಮುಗಿದ.

"ಆ ಫೋಟೋನ ಕೆಳಕ್ಕೆ ತೆಕ್ಕೊಡಿ.... ಹತ್ತಿರದಿಂದ ನೋಡ್ತೀನಿ...."

"ದೂರದಿಂದ ಎಷ್ಟು ಚೆನ್ನಾಗಿ ಕಾಣ್ತಾರೋ.... ಹತ್ತಿರದಿಂದ್ಲೂ ಅಷ್ಟೇ ಚೆನ್ನಾಗಿ ಕಾಣ್ತಾರೆ. "ತ್ರೀಡಿ" ಫೋಟೋ ಅಲ್ಲ." ಅಂತ ಹೇಳಿದರೂ ಕುರ್ಚಿ ಹಾಕಿಕೊಂಡು ಹತ್ತಿ, ಫೋಟೋ ಕೆಳಗಿಳಿಸಿದ. ಗಾಜಿನ ಮೇಲೆ ಹತ್ತಿದ್ದ ಧೂಳನ್ನು ಒರೆಸಿ, ದೀಪಳ ಕೈಗೆ ಕೊಟ್ಟ....

"ಮಹೇಶ್, ಫೋಟೋ ಎಷ್ಟು ಭಾರ ಆಗಿದೆಯಲ್ಲ....."

"ಹೂಂ. ಹಳೇ ಕಾಲದ್ದು. ಮರದ ಫ್ರೇಂ.... ಗಾಜು ಎಲ್ಲಾ ಭಾರವೇ.... ಅವನೂ ಎತ್ತಿ ನೋಡಿ ಅಲುಗಾಡಿಸಿದ. ಒಳಗೆ ಏನೋ ಗಲಗಲ ಸದ್ದು ಮಾಡಿತು. ಕಿವಿಯ ಹತ್ತಿರಕ್ಕೆ ಹಿಡಿದು ಮತ್ತೆ ಅಲುಗಾಡಿಸಿದ. ಒಳಗೆ ಏನೋ ಸೇರಿಕೊಂಡಿದೆ. ಸದ್ದಾಗುತ್ತಿದೆ...."

"ಏನೋ ಗಾಜೋ, ಕಲ್ಲೋ ಚೂರು ಒಳಗೆ ಸೇರಿಕೊಂಡಿರಬಹುದು... ಕಟ್ಟು ಬಹಳ ಮಜಬೂತಾಗಿದೆ. ಅದನ್ನು ತೆಗೆಯುವುದು ಕಷ್ಟ.... ತೆಗೆಯುವಂಥ ಎಕ್ವಿಪ್ಮೆಂಟ್ ಯಾವುದೂ ಇಲ್ಲ ನನ್ನ ಹತ್ರ...."

"ಹತ್ತಿರ ಯಾರಾದ್ರೂ ಫ್ರೇಂ ವರ್ಕ್ಸ್‌ನವರು ಇದ್ರೆ ತೆಗೆಸಿ ನೋಡೋಣ. ಏನಾದರೂ ಕ್ಲೂ ಸಿಗಬಹುದು"

"ಹೊರಭಾಗದಲ್ಲಿ ಸಿಗದ ಕ್ಲೂ, ಒಳಭಾಗದಲ್ಲಿ ಏನಿರುತ್ತೆ ಅತ್ಗೇ..... ಅಮ್ಮ ಬರಲಿ, ಆಮೇಲೆ ಹೋಗಿ ತೆಗೆಸಿ ನೋಡ್ತೀನಿ. ಆದ್ರೆ ಅಮ್ಮಂಗೆ ಮಾತ್ರ ಈಗ್ಲೇ ಗೊತ್ತಾಗಬಾರದು"

"ರೈಟ್" ಎನ್ನುತ್ತಾ, ದೀಪಾ ಆ ಫೋಟೋವನ್ನು ಎತ್ತಿಕೊಂಡು ತನ್ನ ರೂಮಿಗೆ ಹೋದಳು.

* * *

"ಟೀಚರ್.... ಟೀಚರ್.... ತಾತಾ ಕರೀತಿದಾರೆ.... ನೀವು ಬರಬೇಕಂತೆ" ಹುಡುಗನೊಬ್ಬ ಓಡಿ ಬಂದು ಕರೆದಾಗ ಸುಜಯ ಅವನೊಂದಿಗೆ ಹೊರಟಳು. ಆ ವೃದ್ಧರ ಜತೆಯಲ್ಲಿ ಇನ್ನೂ ಇಬ್ಬರು ಹಿರಿಯರು ಕುಳಿತಿದ್ದರು.

"ಬಾಮ್ಮಾ ಸುಜಯ ಕೂತ್ಕೋ...." ತಮ್ಮ ಸಮೀಪದಲ್ಲಿದ್ದ ಕುರ್ಚಿಯ ಕಡೆ ಕೈ ತೋರಿಸಿದರು. ಸುಜಯ ಸಂಕೋಚದಿಂದ ಹಾಗೇ ನಿಂತಿದ್ದಳು.

"ಪರವಾಗಿಲ್ಲ ಕೂತ್ಕೋ.... ಇವರೂ ನಮ್ಮವರೇ.... ನೀನೂ ನೋಡಿರಬಹುದು. ಅವರಿಗೂ ನಿನ್ನ ಪರಿಚಯವಿದೆ...." ಸುಜಯ ಕೂತಳು.

"ಇವತ್ತು ಆಶ್ರಮವೆಲ್ಲಾ ನಿಶ್ಯಬ್ದವಾಗಿದೆ.... ನೆನ್ನೆ ದಿನ ಸಂಭ್ರಮದ ಹಬ್ಬ ಇದ್ದ ಹಾಗಿತ್ತು. ಮಕ್ಕಳು ಕುಣಿದದ್ದೇ ಕುಣಿದದ್ದು.... ಊಟವಂತೂ ಸೊಗಸಾಗಿತ್ತು. ಮತ್ತೆ

ಎಂದು ಅಂಥ ಊಟ ಹಾಕಿಸ್ತೀರಿ?"

"ಹಾಕಿಸೋಣ. ನನ್ನ ಮಗಳ ಮದುವೆ ಗೊತ್ತಾಗಲಿ...."

"ನಿಮ್ಮ ಮಗಳಿಗೆ ಮತ್ತೆ ಮದುವೆ ಮಾಡ್ತೀರಾ!"

"ಹೂಂ. ಜೀವಮಾನವೆಲ್ಲಾ ಆಕೆ ನಮ್ಮ ಜೊತೇನೇ ಇರೋಕ್ಕೆ ಆಗುತ್ತಾ? ಅವಳ ಅಮ್ಮ ಗಂಡನ್ನು ಕೂಡಾ ನೋಡಿದಾಳೆ.... ಅವಳ ಮದುವೆ ಆದ್ಮೇಲೆ ವಿವೇಕನ ಮದುವೆ.... ಎಂಥಾ ಹೆಣ್ಣು ಸಿಗ್ತಾಳೋ.... ಅವನು ಮೃದು. ಲೀಲನ ಹಾಗೆ ಜೋರಲ್ಲ...."

"ನಿಮಗ್ಯಾಕೆ ಅವರ ಚಿಂತೆ ಸುಬ್ಬರಾಮಪ್ನೋರೇ.... ನಿಮ್ಮ ಪಾಡಿಗೆ ನೀವು ಹಾಯಾಗಿರಬಾರದಾ! ಅವರಮ್ಮ ಅದನ್ನೆಲ್ಲ ನೋಡ್ಕೋತಾಳೆ ಬಿಡಿ....."

"ಸಾವಿತ್ರಿಗೆ ತಿಳುವಳಿಕೆ ಕಡಿಮೆ. ಈ ಮಕ್ಕಳ ಜವಾಬ್ದಾರಿ ನನ್ನ ಮೇಲೆ ಬಿದ್ದಿದೆ.....ನನ್ನ ತಮ್ಮ ಹೆಂಡ್ತಿ ಹತ್ರ ಜಗಳ ಆಡ್ಕೊಂಡು ದೇಶಾಂತರ ಹೋದ. ಈ ಮಕ್ಕಳನ್ನು ನಂತರ ನಾನು ದತ್ತು ತೆಗೆದುಕೊಂಡೆ....."

"ಹಾಗಾದ್ರೆ ನಿಮ್ಮ ಆಸ್ತಿಯೆಲ್ಲಾ ಈ ಮಕ್ಕಳಿಗಾ?"

"ಹಾಗಂತ ಸಾವಿತ್ರಿ ತಿಳಿದುಕೊಂಡಿದ್ದಾಳೆ. ಆದರೆ ನಾನು ಈಗಾಗಲೇ ವಿಲ್ ಬರೆಸಿದೀನಿ. ಅದರಲ್ಲಿ ಅರ್ಧ ನನ್ನ ಮೊಮ್ಮಗನಿಗೆ...."

"ಮೊಮ್ಮಗ ಎಲ್ಲಿದಾನೆ ಅಂತ ಪತ್ತೆ ಆಯ್ತಾ ಸುಬ್ಬರಾಮಪ್ಪಾ?"

"ಇನ್ನೂ ಇಲ್ಲ. ಒಂದಲ್ಲ ಒಂದು ದಿನ ಸಿಕ್ಕೇ ಸಿಗ್ತಾನೆ ಅನ್ನೋ ನಂಬಿಕೆ ನನಗಿದೆ... ಒಂದು ವೇಳೆ, ಅವನು ಸಿಗೋಕೆ ಮುಂಚೇನೇ ನಾನೇನಾದ್ರೂ ಸತ್ತು ಹೋದ್ರೇ..."

"ಛೀ.... ಸತ್ತೋಗೋ ಮಾತನ್ಯಾಕೆ ಆಡ್ತೀರಿ? ಬಿಡ್ತೂ ಅನ್ನಿ.... "

"ನನ್ನ ಮೊಮ್ಮಗನ್ನ ನೋಡದೇ ಸಾಯೋ ಆಸೆ ನನಗೂ ಇಲ್ಲ... ಆದರೂ ಹಾಗಂತ 'ವಿಲ್'ನಲ್ಲಿ ಬರೆಸಿದೀನಿ...."

"ಏನಂತ?"

"ನನಗೆ ಅತ್ಯಂತ ಪ್ರಿಯರಾದ ವ್ಯಕ್ತಿ ಯಾರೇ ಆಗಿರಲಿ, ಅವರಿಗೆ ಆ ಭಾಗದ ಆಸ್ತಿ ಸೇರುತ್ತೆ.... ಅದನ್ನು ಕಾಲವೇ ನಿರ್ಣಯ ಮಾಡುತ್ತೆ"

"ಮೆಲ್ಲಗೆ ಹೇಳೀಪ್ಪಾ.... ಯಾರಾದ್ರೂ ಕೇಳಿಸ್ಕೊಂಡ್ರೆ? 'ವಿಲ್' ವಿಚಾರವನ್ನು ಬಯಲು ಮಾಡಬಾರದು"

"ಅದಕ್ಕೇ ನಿಮಗೆ ಹೇಳ್ತಾ ಇರೋದು.... ಈ ವಿಷಯ ಈ ಹುಡುಗಿಗೂ ಗೊತ್ತಿರಲಿ ಅಂತ, ಇವಳಿಗೆ ಹೇಳಿ ಕಳಿಸಿದೆ"

"ಈ ಹುಡುಗಿ ನಿಮಗೆ ಅತ್ಯಂತ ಪ್ರಿಯಳಾಗಿರೋ ಹಾಗಿದೆ...."

"ಈ ಹುಡುಗೀನ ಮೊದಲನೇ ದಿನ ನೋಡಿದಾಗ್ನಿಂದ, ನನಗೆ ಅಚ್ಚು ಮೆಚ್ಚಿನವ

ಳಾಗಿದ್ದಾಳೆ.... ಎಲ್ಲೋ ಹುಟ್ಟಿ ಬೆಳೆದ ಹುಡುಗಿ, ಈಗ ನನ್ನ ಕಣ್ಣ ಮುಂದೆ ತಿರುಗಾಡಿಕೊಂಡಿದ್ದಾಳೆ. ದಿನಕ್ಕೊಮ್ಮೆ ಇವಳನ್ನು ನೋಡ್ತೀನಿ. ಇವಳೂ ಆಗ ಈಗ ಬಂದು ನನ್ನನ್ನು ನೋಡ್ಕೊಂಡು ಹೋಗ್ತಾಳೆ... ನನಗೆ ಅದೇ ಸಂತಸ. ಯಾಕೋ ಏನೋ ಲೀಲನ ಬಗ್ಗೆ ನನಗೆ ಈ ಪ್ರೀತಿ, ಆತ್ಮೀಯತೆ ಬರಲೇ ಇಲ್ಲ"

"ಹುಡುಗಿ ಚೆನ್ನಾಗಿದಾಳೆ. ನಿಮಗೆ ಇವಳ ಮೇಲೆ ಕಣ್ಣು ಬಿದ್ದಿದೆ" ಆ ವೃದ್ಧರು ಗೊಳ್ ಅಂತ ನಕ್ಕರು. ಸುಜಯ ಕೆಂಪಾಗಿದ್ದಳು.

"ಛೀ... ಏನು ಮಾತಾಡ್ತೀಯಾ? ಇವಳು ನನ್ನ ಮಗಳ ಸಮಾನ... ನನ್ನ ಮಗಳನ್ನು ಕಳೆದುಕೊಂಡು ಕೊರಗುತ್ತಿದ್ದ ನನಗೆ, ಈ ಹುಡುಗಿಯನ್ನು ಕಂಡ ದಿನ ನನ್ನ ಮಗಳನ್ನೇ ನೋಡಿದಷ್ಟು ಸಂತಸವಾಯಿತು. ಅವಳ ನೆನಪು ಒತ್ತಿಕೊಂಡು ಬಂತು. ಯಾರಿಗೂ ಕಾಣದಂತೆ ಕಣ್ಣುಗಳನ್ನು ಒರೆಸಿಕೊಂಡಿದೀನಿ. ಈ ಹುಡುಗಿಯ ಎದುರಿಗೇ ಹೀಗೆಲ್ಲಾ ಮಾತಾಡ್ತೀರಲ್ಲ. ನಿಮಗೆ ನಾಚಿಕೆಯಾದ್ರೂ ಬೇಡ್ವಾ?" ಸುಜಯ ಭಾವುಕಳಾಗಿ ಅವರನ್ನೇ ನೋಡುತ್ತಿದ್ದಳು.

"ಈ ಮುದುಕ್ರು ಹೀಗೆಲ್ಲಾ ಮಾತಾಡಿದ್ರು ಅಂತ ನೀನು ಬೇಸರ ಪಟ್ಕೋಬೇಡ... ನನ್ನನ್ನ ಗೇಲಿ ಮಾಡೋದು ಅಂತಂದ್ರೆ ಇವರಿಗೆ ಚಪಲ....." ಆ ಮುದುಕರು ಮತ್ತೆ ನಕ್ಕರು.

"ಅಡುಗೆಯವರಿಗೆ ಹೇಳಿ, ನಮಗೆ ಸ್ಪೆಷಲ್ ಕಾಫೀ ಮಾಡಿಸ್ಕೊಂಡು ಬರ್ತೀಯಾ?"

"ಹೂಂ" ಸುಜಯ ಎದ್ದು ಪಾಕಶಾಲೆಯ ಕಡೆಗೆ ನಡೆದಳು.

"ಲೀಲಾಗಾಗಲೀ, ವಿವೇಕಂಗಾಗಲೀ, ಈ ವಿಲ್ ವಿಷಯ ತಿಳಿದರೆ ಏನಾಗ ಬಹುದು? ಕೋಟ್ಯಾಂತರ ರೂಪಾಯಿಗಳ ಆಸ್ತಿ... ಬಿಟ್ಟು ಬಿಡ್ತಾರ್ಯೇ?"

"ಅದಕ್ಕೆಲ್ಲಾ ವ್ಯವಸ್ಥೆ ಮಾಡಿದೀನಿ. ಕೋರ್ಟು ಇದೆ. ಕಾನೂನು ಇದೆ. ಈ ಆಸ್ತಿ ಎಲ್ಲಾ ನನ್ನ ಸ್ವಯಾರ್ಜಿತ.... ನನ್ನ ತಮ್ಮನಿಗೆ ಅಂತ ಅವನು ಇದ್ದಾಗಲೇ ಸ್ವಲ್ಪ ಭಾಗ ಕೊಟ್ಟಿದ್ದೆ. ಲಕ್ಷಾಂತರ ರೂಪಾಯಿ ಬೆಲೆ ಬಾಳುವ ಮನೆ ಈಗ ಸಾವಿತ್ರಿಯ ಹೆಸರಿನಲ್ಲಿದೆ.... ಅವಳ ನಂತರ ಅವಳ ಮಕ್ಕಳಿಗೇ ತಾನೇ... ನಾನು ಅವರಿಗೂ ಮೋಸ ಮಾಡಿಲ್ಲ"

ಅಡುಗೆಯವರು ಬಿಸಿ ಬಿಸಿ ಕಾಫಿಯನ್ನೂ ಜೊತೆಗೆ, ಹಿಂದಿನ ದಿನ ಮಾಡಿದ್ದ ಚೌ ಚೌ ತಂದಿಟ್ಟರು. ಮಾತನಾಡುತ್ತಾ ಕಾಫಿಯನ್ನು ಕುಡಿದರು. ಸುಜಯ ಕೆಲವೊಮ್ಮೆ ಆಸಕ್ತಿಯಿಂದ, ಕೆಲವೊಮ್ಮೆ ನಿರಾಸಕ್ತಿಯಿಂದ ಅವರಾಡುತ್ತಿದ್ದ ಮಾತುಗಳನ್ನು ಕೇಳಿಸಿ ಕೊಳ್ಳುತ್ತಿದ್ದಳು. ತಾನು ಈ ಆಶ್ರಮಕ್ಕೆ ಹೊಸದಾಗಿ ಬಂದು ಸೇರಿಕೊಂಡವಳು. ತನ್ನ ಎದುರಿಗೆ ಗಂಭೀರವಾದ, ಮಹತ್ವದ ವಿಷಯಗಳ ಬಗ್ಗೆ ಚರ್ಚಿಸುತ್ತಿದ್ದಾರೆ.... ಯಾಕೆ ಹೀಗೆ?"

"ಏನಮ್ಮಾ, ಏನು ಯೋಚಿಸ್ತಿದೀಯಾ? ಮಹೇಶ ಫೋನು ಮಾಡ್ಲಿಲ್ವಾ?" ಸುಜಯ ನಾಚಿಕೆಯಿಂದ ಕೆಂಪಾದಳು.

"ಮಹೇಶ? ಯಾರದು?"

"ಇವಳನ್ನು ಮದುವೆಯಾಗುವ ಹುಡುಗ...."

"ಹಾಗಾದ್ರೆ ಈ ಹುಡುಗಿಗೆ ಮದುವೆ ಗೊತ್ತಾಗಿದೆ. ಮದುವೆ ಮಾಡ್ಕೊಂಡು ಹೊರಟು ಹೋದ್ರೆ.... ನಿಮಗೆ ಬೇಸರ ಆಗಲ್ವೇ...."

"ಆಗುತ್ತೆ. ಹಾಗಂತ ಹೆಣ್ಣು ಮಕ್ಕಳನ್ನು ಮದುವೆ ಮಾಡಿ, ಗಂಡನ ಮನೆಗೆ ಕಳಿಸದೇ ಇರೋಕೆ ಆಗುತ್ಯೇ? ಇನ್ನು ಒಂದು ಉಪಾಯ ಇದೆ.... ಆದರೆ ಅದನ್ನು ಈಗಲೇ ಹೇಳಲ್ಲ...."

"ಹೇಳೀ ಪರವಾಗಿಲ್ಲ. ತಮಾಷೆಯಾಗಿರುತ್ತೆ"

"ಎದ್ದು ಹೋಗಿ, ಕಾಫಿ ಕುಡಿದಾಯ್ತಲ್ಲ. ನನ್ನ ಮಾತು ತಮಾಷೆ ಆಗಿರುತ್ತಂತೆ. ಅಲ್ಲ ಇದೇನು ಮೋಜಿನ ಮಾತುಗಳೇ?"

"ಕೋಪಿಸ್ಕೋಬೇಡಿ ಸುಬ್ಬರಾಮಪ್ಪ. ಹತ್ತು ಹನ್ನೆರಡು ವರ್ಷಗಳಿಂದ ನಾವು ನಿಮ್ಮನ್ನು ನೋಡ್ತಾ ಇದೀವಿ.... ಒಮ್ಮೊಮ್ಮೆ ನಿಮಗೆ ಅರಳು ಮರಳು ಅಂತ ಅನ್ನಿಸುತ್ತೆ"

"ನನಗಲ್ಲ ಅರಳು ಮರಳು.... ನಿಮಗೇ.... ನಿದ್ದೇಲಿ ಕನವರಿಸಿಕೊಳ್ತೀರಂತೆ. ಕನಸ್ನಲ್ಲಿ ಮಕ್ಕಳು ಬಂದು ಬನ್ನಿ ಬನ್ನಿ ಅಂತ ಕರೀತಾರಂತೆ"

"ಇದನ್ನೆಲ್ಲ ನಿಮಗೆ ಯಾರು ಹೇಳಿದ್ರು"

"ನಾನು ಈ ವೃದ್ಧಾಶ್ರಮದ ಯಜಮಾನ. ಗೂಢಾಚಾರರನ್ನಿಟ್ಟಿದೀನಿ... ಎಲ್ಲರ ವಿಷಯವೂ ನನಗೆ ತಿಳಿಯುತ್ತೆ....." ಮುಕ್ತವಾಗಿ ನಕ್ಕರು.

"ಬರೀ ಸುಳ್ಳು. ಗೂಢಾಚಾರನೂ ಇಲ್ಲ; ಪತ್ತೇದಾರನೂ ಇಲ್ಲ. ಆದರೆ ಒಂದು ಮಾತಂತೂ ನಿಜ. ಇಲ್ಲಿ ನಿಮ್ಮಂಥೋರ ಕಂಪೆನಿ ಇಲ್ಲದೇ ಇದ್ದಿದ್ರೆ... ಈ ವೃದ್ಧಾಶ್ರಮದ ಜೀವನ ಬರಡಾಗಿರುತ್ತಿತ್ತು...."

"ಜೀವನದ ಆಸೆ, ಆಸಕ್ತಿ, ಮಮತೆ, ವ್ಯಾಮೋಹ ಯಾವುದನ್ನೂ ಬಿಡೋಕೆ ಆಗುಲ್ಲ. ಈಗ ನನ್ನನ್ನೇ ನೋಡಿ, ಹೆಂಡತಿಯನ್ನು ಕಳೆದುಕೊಂಡೆ.... ಮಗಳನ್ನು ಕಳೆದುಕೊಂಡೆ.... ಮಗಳು ಮತ್ತೆ ಹುಟ್ಟಿ ಬರುತ್ತಾಳೆ ಎಂಬ ಭ್ರಮೆಯಲ್ಲಿ ಕೆಲವು ವರ್ಷಗಳನ್ನು ಕಳೆದೆ. ಮೊಮ್ಮಗನನ್ನು ಮತ್ತೆ ನೋಡ್ತೀನಿ ಅನ್ನುವ ಹಂಬಲದಲ್ಲಿ ಕಾಲವನ್ನು ನೂಕಿದೆ. ಆ ಹಂಬಲದಲ್ಲೇ ಹೊತ್ತು ಮೂಡುತ್ತದೆ. ಹೊತ್ತು ಮುಳುಗುತ್ತದೆ. ಅವುಗಳ ನಡುವೆ ಈ ವೃದ್ಧಾಶ್ರಮದ ಜವಾಬ್ದಾರಿ.... ನನ್ನ ಜೀವನವೇ ಬರಡು ಬರಡು.... ಆದರೆ ಅದನ್ನು ಮರೆಯುವ ನೆವದಲ್ಲಿ, ನನ್ನಂತಹವರಿಗೆ ಒಂದು ಅನುಕೂಲವನ್ನು ಕಲ್ಪಿಸಿಕೊಡುವ ಹಾದಿಯಲ್ಲಿ ನಡೆಯುತ್ತಿದ್ದೀನಿ. ಇದು

ಒಂದು ತರಹದಲ್ಲಿ, ಸ್ವಾಮಿಕಾರ್ಯವೂ ಹೌದು; ಸ್ವಕಾರ್ಯವೂ ಹೌದು.... ಹೌದೋ ಅಲ್ವೋ....."

"ಸುಬ್ಬರಾಮಪ್ನೋರೇ.... ನಾವು ಧನ್ಯರು. ಎಷ್ಟು ಚೆನ್ನಾಗಿ ಮಾತಾಡ್ತೀರಿ?"

"ನನ್ನ ಎದುರಿಗೆ ಹೊಗಳ್ತೀರಿ.... ಹಿಂದೆ ಆಡಿಕೊಳ್ತೀರಿ......"

"ಹಾಗೆ ಮಾಡಿದರೆ ನಿಮಗೆ ವರದಿ ಬರುತ್ತಲ್ಲ ಸ್ವಾಮೀ....." ಆ ವೃದ್ಧರು ಬಾಯಿ ತುಂಬಾ ನಕ್ಕರು. ಸುಬ್ಬರಾಮಪ್ಪ ಸುಜಯಳ ಕಡೆ ನೋಡಿ ಮುಗುಳ್ನಕ್ಕರು.

"ನೀವು ಇಷ್ಟು ಚೆನ್ನಾಗಿ ಮಾತಾಡ್ತೀರಿ ಅಂತ ನಂಗೆ ಗೊತ್ತಿರಲೇ ಇಲ್ಲ"

"ಸಮಯ ಹೋಗ್ಬೇಕಲ್ಲ ತಾಯೀ.... ಒಂದು ಕಾಲಕ್ಕೆ ಸ್ಕೂಲಲ್ಲಿ ಮೇಷ್ಟ್ರಾಗಿದ್ದವನು.. ಪಾಠ, ಉಪಪಾಠದ ಜೊತೆಗೆ ಕತೆಯನ್ನು ಮಕ್ಕಳಿಗೆ ಹೇಳ್ತಿದ್ದೆ. ಅದೇ ಅಭ್ಯಾಸ. ಆಗ ಮಕ್ಕಳು, ಈಗ ಈ ವೃದ್ಧರು.... ಒಟ್ನಲ್ಲಿ ಒಂದಿಬ್ಬರು" ಮತ್ತೊಮ್ಮೆ ಆ ವೃದ್ಧರಿಬ್ಬರು ಚಪ್ಪಾಳೆ ತಟ್ಟಿ ನಕ್ಕರು. "ಇವತ್ತಿಗೆ ಇಷ್ಟು ಸಾಕು. ಕೂತೂ ಕೂತೂ ಬೆನ್ನು ನೋಯ್ತಿದೆ.... ನನ್ನನ್ನ ಸ್ವಲ್ಪ ಒಳಕ್ಕೆ ಕರ್‍ಕೊಂಡು ಹೋಗಿ ಬಿಡ್ತೀಯಾ ತಾಯೀ...." ಸುಜಯ ಅವರನ್ನು ಎಬ್ಬಿಸಿಕೊಂಡು ಒಳಕ್ಕೆ ಕರೆದೊಯ್ದಳು.

"ಹಾಗೇ ಸ್ವಲ್ಪ ಡಾಕ್ಟರಿಗೆ ಫೋನು ಮಾಡು..... ನೆನ್ನೆ ಊಟ ಜಾಸ್ತಿ ಆಯ್ತು. ಇವತ್ತು ಮಾತು ಜಾಸ್ತಿ ಆಯ್ತು.... ಏನಾದರೂ ಹೆಚ್ಚು ಕಡಿಮೆ ಆಗುವ ಮೊದಲು ಅವರು ಬಂದು ನನ್ನನ್ನು ನೋಡಲಿ"

ಸುಜಯ ನಕ್ಕು ಡಾಕ್ಟರಿಗೆ ಫೋನು ಮಾಡಿದಳು. ಡಾಕ್ಟ್ರು ಬರುವವರೆಗೂ ಅಲ್ಲೇ ಇದ್ದಳು. ಅವರು ಬಂದು ಚೆಕಪ್ ಮಾಡಿ, ಎಲ್ಲಾ ಪರ್ಫೆಕ್ಟ್ ಅಂತ ಹೇಳಿದಾಗ, ಸುಬ್ಬರಾಮಪ್ಪ ಉಬ್ಬಿ ಹೋದರು. ಮುದದಿಂದ ಸುಜಯಳ ಕಡೆ ನೋಡಿದರು. ಡಾಕ್ಟರ್ ಜೊತೆ ಸುಜಯಳೂ ಹೊರಬಂದಳು. ಇಬ್ಬರೂ ಮಾತನಾಡುತ್ತಾ ಸ್ವಲ್ಪ ದೂರ ನಡೆದರು.

* * *

"ಫೋಟೋ ಅಂಗಡಿಗೆ ಯಾವಾಗ ಹೋಗೋಣ ಮಹೇಶ್?"

"ನೀವೇನೂ ಬರ್ಬೇಡಿ. ಅದು ಒಂದು ಗಲ್ಲೀಲಿ ಇದೆ. ನಾನೊಬ್ನೇ ಹೋಗ್ತೀನಿ. ನೀವು ಇವತ್ತು ಇಲ್ಲೇ ಇರ್ತೀರಿ ತಾನೇ...."

"ಇಲ್ಲ.... ನಾನು ಹೋಗ್ಬೇಕು. ಆದರೆ ನೀವು ಏನೇ ವಿಷಯ ಇದ್ರೂ ನಂಗೆ ತಿಳಿಸ್ತೀರಿ ಅಲ್ವಾ?"

"ಷೂರ್.... ತಕ್ಷಣ ಫೋನು ಮಾಡ್ತೀನಿ" ವನಜಮ್ಮನನ್ನು ಕಂಡು ಇಬ್ಬರೂ ಮಾತನ್ನು ನಿಲ್ಲಿಸಿದರು.

"ಮತ್ತೆ ಯಾವಾಗ ಬರ್ತೀಯಮ್ಮಾ ದೀಪಾ.... ನೀನಿದ್ರೆ ಒಂದು ಕಳೆ ಈ ಮನೆಗೆ"

"ಡಾಕ್ಟರ ಹತ್ರ ಹೋಗಿ ಬಂದ್ಮೇಲೆ ಮತ್ತೆ ಬರ್ತೀನಿ...." ದೀಪಾ ಕಿಟ್ ಬ್ಯಾಗನ್ನೆತ್ತಿಕೊಂಡಳು.

"ಕಿಟ್ ಬ್ಯಾಗ್‌ನಲ್ಲೇನಿದೆ? ನೀನು ಭಾರ ಎತ್ತ ಬೇಡ...."

"ಇಲ್ಲಿ ಕೊಡಿ ಅತ್ತೇ...." ಮಹೇಶ ಬಂದು ಕಿಟ್ ಬ್ಯಾಗನ್ನು ತೆಗೆದುಕೊಂಡ. ಕಾರು ಹೊರಡುವವರೆಗೂ ಹೊರಗೇ ನಿಂತಿದ್ದ ವನಜಮ್ಮ ಒಳಗೆ ಬಂದಳು. ಅನಿರೀಕ್ಷಿತವಾಗಿ ಅವಳ ಗಮನ ಗೋಡೆಯ ಮೇಲೆ ಹರಿಯಿತು. ಗಾಬರಿಯಿಂದ ಎದೆ ಹೊಡೆದುಕೊಂಡಿತು.

"ಅಯ್ಯೋ ಶಿವನೇ.... ಗೋಡೆ ಮೇಲಿದ್ದ ಫೋಟೋ ಏನಾಯ್ತು! ಮಹೇಶ ಏನಾದ್ರೂ ತೆಗೆದಿಟ್ಟಿರಬಹುದೇ.... ಅವನೂ ಹೊರಟು ಹೋದ್ನಲ್ಲ...." ಅವನ ರೂಮಿಗೆ ಬಂದು ಅಲ್ಲಿ ಇಲ್ಲಿ ಎಲ್ಲ ಕಡೆ ಹುಡುಕಿ ನೋಡಿದಳು. ದೀಪಳ ಮೇಲೆ ಅವಳಿಗೆ ಯಾವ ಅನುಮಾನವೂ ಇರಲಿಲ್ಲ.

ನನಗೆ ತಿಳಿಯದಂತೆ ಯಾರು ಒಳಗೆ ನುಗ್ಗಿರಬಹುದು? ಈ ಫೋಟೋ ಮಾತ್ರ ಕಾಣೆಯಾಗಿದೆ. ಇದು ಯಾರ ಕೆಲಸ? ಮಹೇಶನ ನಂಬರಿಗೆ ಫೋನು ಮಾಡಿದಳು. ಆದರೆ ಅವನ ಮೊಬೈಲ್ ಆಗ ಸ್ವಿಚ್ ಆಫ್ ಆಗಿತ್ತು. ಇದೇನಿದು? ಯಾಕೆ ಹೀಗಾಯ್ತು? ಇದುವರೆಗೆ ನಮ್ಮ ಮನೆಯಿಂದ ಒಂದು ಸಣ್ಣ ಗುಂಡು ಸೂಜಿಯೂ ಕಳುವಾಗಿರಲಿಲ್ಲ. ಈ ಕೆಲಸವನ್ನು ಯಾರು ಮಾಡಿರಬಹುದು! ಇದನ್ನೇ ಯಾಕೆ ತೆಗೆದುಕೊಂಡು ಹೋಗಿದ್ದಾರೆ.... ಇಂಥಾ ಕಳ್ಳರೂ ಇದಾರೆಯೇ? ಆದರೆ, ಈ ಫೋಟೋ ಕಳುವಾಗಬಾರದಾಗಿತ್ತು. ಮನೆಯ ಬಾಗಿಲ ಎದುರಿಗೆ ಲಕ್ಷಣವಾಗಿ ಕಾಣುತ್ತಿತ್ತು.... ಈಗ ಗೋಡೆ ಹಾಳು ಬಿದ್ದಂತೆ ಕಾಣಿಸುತ್ತಿದೆ..... ಯಾಕೋ ಮನಸ್ಸಿಗೆ ಆತಂಕವಾಗುತ್ತಿದೆ.... ಯಾಕೆ ಹೀಗಾಯ್ತು! ಹೀಗೆ ಮಾಡಿದವರು ಯಾರು? ಮನೆಯ ಕೆಲಸಗಳನ್ನು ಮರೆತು ಯೋಚಿಸುತ್ತಾ ಕುಳಿತಳು ವನಜಮ್ಮ. ಫೋನು ರಿಂಗಾಯಿತು. ಮನೆ ತಲುಪಿದ ದೀಪಾ ಫೋನು ಮಾಡಿದ್ದಳು.

"ನೋಡೇ ದೀಪಾ, ಎಂಥಾ ಕೆಲಸವಾಗಿದೆ. ಯಾರೋ ಮನೆಯ ಒಳಗೆ ಬಂದು ಮನೆ ಗೋಡೆಯ ಮೇಲಿದ್ದ ಫೋಟೋನ ಎತ್ಕೊಂಡು ಹೋಗಿದಾರೆ. ನೆನ್ನೆ ನಾನು ಮನೇಲಿಲ್ಲದಾಗಲೇ ಈ ಕಳ್ಳತನ ನಡೆದಿರಬೇಕು" ದೀಪಾ ಉಸಿರು ಬಿಗಿ ಹಿಡಿದಳು. "ಒಂದೇ ಬೇಜಾರು.... ಎಷ್ಟೋ ವರ್ಷಗಳಿಂದ ಗೋಡೆ ಮೇಲೆ ಇದ್ದ ಫೋಟೋ.... ಈಗಿಲ್ಲ. ಬಿಕೋ ಅಂತಿದೆ. ನೀವಿಬ್ರೂ ಮನೇಲೇ ಇದ್ರಲ್ಲ.... ನಿಮಗೆ ಸದ್ದು ಕೇಳಿಸಲಿಲ್ವಾ?"

"ಸಾರೀ ಅತ್ತೇ. ನಿಮಗೆ ಹೇಳೋದನ್ನೇ ಮರೆತುಬಿಟ್ಟೆ.... ಹತ್ತಿರದಿಂದ ನೋಡೋಕೆ ಅಂತ ಕೆಳಕ್ಕೆ ತೆಗೆಸಿಕೊಂಡಿದ್ದೆ. ಕೈಯಿಂದ ಜಾರಿ ಬಿದ್ದು ಗಾಜು ಒಡೆದು ಹೋಯ್ತು"

"ನಂಗ್ಯಾಕೆ ಹೇಳ್ಲಿಲ್ಲ..... ಮಹೇಶನೂ ಹೇಳ್ಲಿಲ್ಲ"

"ನಿಮ್ಮ ಮನಸ್ಸಿಗೆ ಬೇಜಾರಾಗುತ್ತೆ ಅಂತ ನಾವಿಬ್ರೂ ಹೇಳ್ಲಿಲ್ಲ. ಮಹೇಶ ಅದನ್ನು ಫ್ರೇಂ ಅಂಗಡಿಗೆ ಕೊಟ್ಟಿದ್ದಾರೆ. ಆಗಿದ್ದರೆ ಮನೆಗೆ ಬರುವಾಗ ತರ್ತಾರೆ."

"ಸದ್ಯ, ಈಗ ನೆಮ್ಮದಿಯಾಯ್ತು.... ಆದರೂ, ನೀನಾದ್ರೂ ಹೇಳಬಹುದಾಗಿತ್ತು ಅಲ್ವಾ ದೀಪಾ.... ಒಡೆದ ಗಾಜಿನ ಚೂರುಗಳನ್ನು ಎಲ್ಲಿ ಎಸೆದ್ರಿ?"

"ಗಾಜು ಚೂರಾಗಿರಲಿಲ್ಲ. ಫ್ರೇಂನಲ್ಲೇ ಸೇರಿಕೊಂಡಿತ್ತು.... ಬಿರುಕು ಬಿಟ್ಟಿತ್ತು.... ಐ ಆಮ್ ಸಾರೀ ಅತ್ತೇ...."

"ಹೋಗ್ಲಿ ಬಿಡು. ಆದದ್ದು ಆಗಿ ಹೋಯ್ತು.... ಆದರೆ ಇಷ್ಟು ವರ್ಷಗಳಲ್ಲಿ ಎಂದೂ ಹೀಗಾಗಿರಲಿಲ್ಲ..... ಅಷ್ಟು ಜೋಪಾನವಾಗಿಟ್ಟುಕೊಂಡಿದ್ದೆ....." ಪೇಚಾಡಿದಳು.

"ಮಹೇಶನನ್ನು ಬೈಯಬೇಡಿ ಅತ್ತೇ.... ಅವರದ್ದೇನೂ ತಪ್ಪಿಲ್ಲ. ನಾನು ಕೇಳಿದ್ದಕ್ಕೆ ಮೇಲಿನಿಂದ ತೆಗೆದರು. ನಂಗೇನು ಗೊತ್ತಿತ್ತು ಹೀಗಾಗುತ್ತೆ ಅಂತ...."

"ನೀನು ಅದನ್ನೇ ಹಚ್ಕೊಂಡು ಕೊರಗ್ಬೇಡ...." ವನಜಮ್ಮ ಮಾತನ್ನು ಮುಗಿಸುವಂತೆ ನುಡಿದಳು.... ದೀಪಾ, ಶಬ್ದವಾಗದಂತೆ ರಿಸೀವರನ್ನು ಹಿಂದಕ್ಕೆ ಇಟ್ಟು ತಕ್ಷಣವೇ ಮಹೇಶನಿಗೆ ಫೋನು ಮಾಡಿದಳು.

ಫ್ರೇಂ ತೆಗೆದು, ಅದನ್ನು ಮತ್ತೆ ಸರಿಯಾಗಿ ಫಿಕ್ಸ್ ಮಾಡಿಕೊಟ್ಟ ಅಂಗಡಿಯವನಿಗೆ ಥ್ಯಾಂಕ್ಸ್ ಹೇಳಿ, ಅವನು ಕೇಳಿದಷ್ಟು ದುಡ್ಡು ಕೊಟ್ಟು ಆ ಫೋಟೋ ಹಿಡಿದು ಕಾರಿನ ಬಳಿಗೆ ಬಂದ. ದೀಪಾಳಿಗೆ ಫೋನು ಮಾಡಿ, ವಿಷಯವನ್ನು ತಿಳಿಸಿ, ತಾನೀಗ ಮನೆಗೆ ಹೋಗುತ್ತಿರುವುದಾಗಿ ಹೇಳಿದ.

ಮಹೇಶ ಮನೆಗೆ ಬೇಗ ಬರಬಹುದೆಂಬ ನಿರೀಕ್ಷೆಯಲ್ಲಿದ್ದ ವನಜಮ್ಮನಿಗೆ, ಅವನು ಬಂದಾಗ ಅಚ್ಚರಿಯಾಗಲಿಲ್ಲ. ಗಂಭೀರವದನಳಾಗಿ ಅವನನ್ನೇ ನೋಡಿದಳು.

"ಏನಮ್ಮಾ, ಹಾಗೆ ನೋಡ್ತಾ ಇದೀಯ...." ಎನ್ನುತ್ತಾ ಫೋಟೋ ಮೇಲೆ ಸುತ್ತಿದ್ದ ಪೇಪರನ್ನು ಕಿತ್ತು ಹಾಕಿ, ಫೋಟೋವನ್ನು ಗೋಡೆಯ ಮೇಲೆ ಮುಂಚೆ ಇದ್ದ ಜಾಗದಲ್ಲೇ ನೇತು ಹಾಕಿದ.

"ಹ್ಲಾಂ....ಈಗ ನ್ಯೂ ಲುಕ್.... ಹೇಗೆ ಹೊಳೀತಿದೆ ಹೊಸ ಗಾಜು? ನೋಡಿದ್ಯಾ?"

"ಅದು ಹೊಸ ಗಾಜು ಅಂತ ಅನ್ನಿಸ್ತಿಲ್ಲ. ಯಾವುದೋ ಹಳೇ ಕಟ್ಟಿನ ಗಾಜನ್ನು ಹಾಕಿಕೊಟ್ಟು ನಿನಗೆ ಮೋಸ ಮಾಡಿದ್ದಾನೆ ಅಂಗಡಿಯವನು.... ಅದ್ಸರಿ ಈ ವಿಷಯಾನ ನೀನ್ಯಾಕೆ ನಂಗೆ ಹೇಳ್ಲಿಲ್ಲ?"

"ಸುಮ್ನೆ ಅತ್ಗೆ ಎದುರಿಗೆ ಮಾತ್ಯಾಕೆ ಅಂತ ಹೇಳ್ಲಿಲ್ಲ"

"ಅವಳಂತೂ ಹೊರಗ್ನಿಂದ ಬಂದೋಳು. ನೀನು ಅವಳಿಗೆ ತಿಳಿಯದಂತೆ ಹೇಳಬಹುದಾಗಿತ್ತಲ್ಲ"

"ಚಾಡಿ ಹೇಳಿದ ಹಾಗೆ ಆಗ್ತಿರಲಿಲ್ವೇನಮ್ಮಾ.... ಅತ್ಗೆ ನೊಂದ್ಕೊಳ್ತಿರ್ಲಿಲ್ವಾ?

ಇಷ್ಟು ಸಣ್ಣ ವಿಷಯಕ್ಕೆ ನೀನ್ಯಾಕೆ ಅಪ್ಸೆಟ್ ಆಗಿದೀಯ"

"ಇದು ಸಣ್ಣ ವಿಷಯ ಅಲ್ಲ. ಗಾಜು ಒಡೆದರೆ ಅಪಶಕುನ ಅಂತ ಹೇಳ್ತಾರೆ. ದೀಪಾ ಬಸಿರಿ.... ದಿನೇಶ, ಬೇರೆ ಊರ್ನಲ್ಲಿದ್ದಾನೆ...."

"ಏನೂ ಆಗಲ್ಲಮ್ಮ. ನೀನು ಚಿಂತೆ ಮಾಡ್ಬೇಡ" ವನಜಮ್ಮ ಸಂಶಯದಿಂದ ಮಹೇಶನ ಕಡೆ ನೋಡಿದಳು. ಅವನು ನಸುನಕ್ಕ. ಅವಳು ನಗಲಿಲ್ಲ.

* * *

"ಶಿವರಾಮಯ್ಯನ ಕಾರು ಇದ್ದ ಹಾಗಿದೆ" ವನಜಮ್ಮ ಒಳಬಾಗಿಲಲ್ಲಿ ನಿಂತು ಹೇಳಿದಾಗ, ಏನನ್ನೋ ಯೋಚಿಸುತ್ತಾ ಕುಳಿತಿದ್ದ ಮಹೇಶ ಮುಂಬಾಗಿಲಿಗೆ ಬಂದ.

"ಹೂಂ.... ಅವರದ್ದೇ ಕಾರು.... ಅತ್ಗೇ ಇದಾರೆ ನೋಡು. ಆದರೆ ಅವನು ಯಾರೋ ತಿಳೀಲಿಲ್ಲ"

ಕಾರಿನಿಂದ ಇಳಿದ ವ್ಯಕ್ತಿ, ಮಹೇಶನ ಕೈಕುಲುಕಿ, "ಹಾಯ್.... ನಾನು ದಿಲೀಪ.... ದೀಪಾಳ ಬ್ರದರ್...." ಎಂದು ತನ್ನ ಪರಿಚಯ ಹೇಳಿಕೊಂಡ.

"ನೈಸ್ ಮೀಟಿಂಗ್ ಯೂ.... ಇವರು ನಮ್ಮ ತಾಯಿ...."

"ನಮಸ್ಕಾರ ಅಮ್ಮಾ... " ದಿಲೀಪ ವಿನಯದಿಂದ ನಮಸ್ಕರಿಸಿದಾಗ ವನಜಮ್ಮ ಹಿಗ್ಗಿದಳು.

"ಬನ್ನಿ... ಯಾವಾಗ ಬಂದ್ರೀ?"

"ನಾನು ಚಿಕ್ಕವನು. ಏಕವಚನದಲ್ಲಿ ಕರೀರಿ. ಇಲ್ದಿದ್ರೆ ನಂಗೆ ಸಂಕೋಚ ಆಗುತ್ತೆ" ದಿಲೀಪ ವನಜಮ್ಮನೊಂದಿಗೆ ಒಳಬಂದ.

ಮಹೇಶ ಪಿಸುದನಿಯಲ್ಲಿ ಏನೋ ಮಾತಾಡಿದ.

"ದೀಪಾ.... ಹೊರಗೆ ಏನು ಮಾತು? ಒಳಗೆ ಬಾ" ಇಬ್ಬರೂ ಒಳ ಬಂದರು.

ವನಜಮ್ಮ ದಿಲೀಪನಿಗೆ ಕಾಫಿ ತಿಂಡಿ ಕೊಟ್ಟು ಬಾಯಿ ತುಂಬಾ ಉಪಚಾರ ಮಾಡಿದಳು. "ನಿನ್ನ ತಂಗಿಯ ಮದುವೆಗೆ ಬರಲಿಲ್ಲ.... ಇನ್ನೂ ನಿನ್ನ ಭಾವನ್ನ ನೀನು ನೋಡಿಲ್ಲ"

"ಇಲ್ಲ ಅತ್ತೇ.... ಇವನು ಡೆಲ್ಲಿಗೇ ಹೋಗಿದಾನೆ ಮೊದಲು. ನಾನು ಅಲ್ಲಿಯೇ ಇದೀನಿ ಅಂತ ಅಂದ್ಕೊಂಡಿದ್ನಂತೆ.... ನಾನು ಇಲ್ಲಿ ಇದೀನಿ ಅಂತ ತಿಳಿದ ಕೂಡಲೇ ತಕ್ಷಣವೇ ಹೊರಟು ಬಂದಿದಾನೆ"

"ಸರಿ. ಒಳ್ಳೇದೇ ಆಯ್ತು. ಏನನ್ನಿಸ್ತು ನಿನ್ನ ಭಾವನ್ನ ನೋಡಿ..."

"ಚೆನ್ನಾಗಿದಾರೆ. ಒಳ್ಳೆ ಸ್ವಭಾವ ಕೂಡಾ. ಆದರೆ ಹೆಚ್ಚು ಸಮಯ ಒಟ್ಗೇ ಇರಲಿಲ್ಲ."

"ನನ್ನ ಬಗ್ಗೆ ಏನಂದ್ರೋ ನಿನ್ನ ಭಾವ?"

"ನಿಮ್ಮ ತಂಗಿ ಡುಮ್ಮಿಯಾಗಿದಾಳೆ... ನಿಮಗೆ ಗುರುತೇ ಸಿಗುಲ್ಲ ಅಂತ ಅಂದ್ರು... ಡೆಲ್ಲಿಯ ವೆದರ್ ನಿಂಗೆ ತುಂಬಾ ಒಗ್ಗಿದೆ ಕಣೇ.... ಸಖತ್ ಮೈ ಬಂದಿದೆ".

"ಥೂ ಹೋಗೋ ಕಣ್ಣು ಹಾಕ್ಬೇಡ...." ದೀಪಾ ನಾಚಿ ಮಹೇಶನ ಕಡೆ ನೋಡಿದಳು.

"ಸುಜೀ, ಚುಮ್ಮೀ ಎಲ್ಲಾ ಹಾಗೇ ಇದಾರೋ ಬದಲಾಗಿದಾರೋ... ನಿನ್ನಂಗೆ."

"ಸುಜೀ ಮೊದಲ್ಗಿಂತ ಚೆನ್ನಾಗಿ ಆಗಿದಾಳೆ.... ಚುಮ್ಮೀನ ನಾನು ಬಂದ ಮೇಲೆ ನೋಡಿಯೇ ಇಲ್ಲ"

"ಬರ್ತೀಯಾ ಮೈಸೂರಿಗೆ ಹೋಗಿ ಬರೋಣ.... ನಾನೂ, ನೀನೂ, ಸುಜೀ.... ನೀವೂ ಬರ್ತೀರಾ ಮಹೇಶ್.... ಸುಜೀಗೆ ಫೋನು ಮಾಡ್ತೀನಿ. ಅವಳ ಮೊಬೈಲ್ ನಂಬರನ್ನು ಹೇಳು...."

"ಅರ್ಜೆಂಟೇನು? ನಿಧಾನವಾಗಿ ಮಾತನಾಡಿದ್ರಾಯ್ತು.... ಮೊದಲು ಅತ್ತೆ ಮಾವನ್ನ ಮಾತಾಡಿಸ್ಕೊಂಡು ಬಾ..."

"ಅತ್ತೆ ಪರವಾಗಿಲ್ಲ. ಮಾವ ಬೋರು.... ಅವರ ಹತ್ರ ಮಾತನ್ನಾಡೋಕೆ ಏನೂ ಇಲ್ಲ. ಕ್ರಿಕೆಟ್ ಗೊತ್ತಿಲ್ಲ. ಪಾಲಿಟಿಕ್ಸ್ ಗೊತ್ತಿಲ್ಲ....ಇನ್ನು ಸಿನಿಮಾ ವಿಚಾರ ವಂತೂ.... ಮಾರು ದೂರ.... ಹೇಗೆ ಕಾಲ ಕಳೀತಾರೋ....?"

"ಅವರು ಅಧ್ಯಾತ್ಮದ ವಿಚಾರಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಓದ್ತಾರೆ"

"ಹೌದಾ! ಹಾಗೆ ಅಂತ ಗೊತ್ತಿದ್ದಿದ್ರೆ ಕಲ್ಕತ್ತಾದಿಂದ, ಬೇಕಾದಷ್ಟು ಪುಸ್ತಕಗಳನ್ನು ತಂದು ಕೊಡುತ್ತಿದ್ನಲ್ಲೇ.... ಅತ್ತೆ ಸುಮ್ಮನಿರ್ತಾರಾ?"

"ಈಗ ಅತ್ತೆ ಮಾವ ಇಬ್ರೇ ಅಲ್ಲಿ. ಸುಜಯ ಒಂದು ಆಶ್ರಮದಲ್ಲಿ ಟೀಚರ್ ಆಗಿದ್ದಾಳೆ...."

"ವಾಟ್! ಆಶ್ರಮಾನಾ? ಅವಳ್ಗೇನೇ ಬಂತು?"

"ಷ್. ಈಗ ಆ ಮಾತು ಬೇಡ.... ತಿಂಡಿ ತಿನ್ನು. ರಾತ್ರಿ ಆ ವಿಷಯ ಮಾತಾಡೋಣ"

"ಸಾರಿ ಮಹೇಶ್.... ನಿಮಗೆ ಏನನ್ನಿಸ್ತೋ? ನಾವಿಬ್ರೇ ಮಾತಾಡತಿದ್ವಿ."

"ಏನೂ ಇಲ್ಲ. ನಾನು ಎಂಜಾಯ್ ಮಾಡ್ತಿದ್ದೆ. ಕಲ್ಕತ್ತಾ ಬಗ್ಗೆ ಹೇಳಿ... ಅಲ್ಲಿ ಎಷ್ಟು ವರ್ಷದಿಂದ ಇದೀರಿ?"

"ಈಗ ಮೂರು ವರ್ಷಗಳಿಂದ ಅಲ್ಲಿದೀನಿ.... " ದಿಲೀಪ ಅಲ್ಲಿನ ವಿಷಯಗಳನ್ನು ಹೇಳತೊಡಗಿದ. ದೀಪಾ ಮಹೇಶನ ಮೊಬೈಲ್ ಎತ್ತಿಕೊಂಡು, ಸುಜಯಳೊಂದಿಗೆ ಮಾತನಾಡಿದಳು.

"ನಾವು ನಾಳೆ ಆಶ್ರಮಕ್ಕೆ ಹೋಗೋಣ.... ಸುಜಯ ಕರೆದಿದ್ದಾಳೆ...."

"ಅವಳೇ ಇಲ್ಲಿಗೆ ಬರಲಿ. ಆಶ್ರಮಕ್ಕೆಲ್ಲಾ ನಾನು ಹೋಗುಲ್ಲ. ನಾನು ಅವಳ ಹತ್ರ ಮಾತಾಡ್ತೀನಿ.... ಅವಳ ನಂಬರ್ರು ಕೊಡು" ದಿಲೀಪ ಸುಜಯಳೊಂದಿಗೆ ಮಾತನಾಡಿದ. ಮಹೇಶ ಗಂಭೀರನಾದ.

"ನಾನು ಬೇಗ ಬೇಗ ಅಡುಗೆ ಮಾಡ್ತೀನಿ. ಇಲ್ಲೇ ಊಟ ಮಾಡೋರಂತೆ"

"ಅತ್ತೇ ನನ್ನ ಹೆಲ್ಪ್ ಬೇಕಾ?"

"ಏನೂ ಬೇಡ.... ನಿಮ್ಮಣ್ಣ ಏನಂದುಕೊಂಡಾನು! ಬಸುರಿ ಹುಡುಗಿ ಕೈಲಿ ಈ ಘಟವಾಣಿ ಅತ್ತೆ ಕೆಲಸ ಮಾಡಿಸ್ತಿದಾಳೆ ಅಂತ ಅಂದ್ಕೋತಾನೇ ಅಷ್ಟೇ"

"ನಾನಿನ್ನೂ ಈ ವಿಷಯಾನ ಅವನಿಗೆ ತಿಳಿಸಿಲ್ಲ....."

"ಅವನು ಮೊದಲ ಬಾರಿಗೆ ಸೋದರಮಾವ ಆಗ್ತಾ ಇದಾನೆ. ಅದಕ್ಕೂ ಖುಷಿ ಆಗುತ್ತೆ.... ಹೇಳ್ಲೇ ಬೇಕು.... ಹೇಳ್ಬಿಡು."

"ನಾಚಿಕೆ ಆಗುತ್ತೆ ಅತ್ತೇ... "

"ಅವನೇನು ಹೊರಗಿನೋನಾ? ಅವನ ಬೆನ್ನಲ್ಲಿ ಬಿದ್ದಿರೋಳು ನೀನು. ಗಂಡು ಹುಡುಗರಿಗೆ, ನಾವಾಗೇ ಏನೂ ಹೇಳ್ದೇ ಇದ್ರೆ ಗೊತ್ತೇ ಆಗುಲ್ಲ...."

"ನಾನೂ ಮಹೇಶ, ಇಲ್ಲೇ ಸ್ವಲ್ಪ ತಿರುಗಾಡಿ ಬರ್ತೀವಿ. ನೀನೂ ಬರ್ತೀಯೇನೇ ದೀಪು...."

"ಇಲ್ಲಪ್ಪಾ. ನಾನು ಅತ್ತೆ ಜೊತೆ ಇರ್ತೀನಿ...."

"ನೀನೂ ಬೇಗ ಮದುವೆ ಮಾಡ್ಕೊಂಡು, ನಿನ್ನ ಅಮ್ಮನಿಗೆ ಒಬ್ಬಳು ಸೊಸೆಯನ್ನು ತಂದುಕೊಡು. ಸೇವೆ ಮಾಡ್ಲೀ"

"ಅದಕ್ಕೇ ಆಂಟಿ ಬಂದಿರೋದು.... ಯಾವ್ದಾದ್ರೂ ಹುಡ್ಗಿ ಇದ್ದರೆ ಹೇಳಿ.... ನಮ್ಮ ದೀಪೂಗಿಂತ ಚೆನ್ನಾಗಿರಬೇಕು. ಇವಳ ಜಂಭ ಕಡಿಮೆ ಆಗಬೇಕು" ಎಂದ.

"ನಿಮ್ಮ ಮಾವನ ಮಗಳೇ ಇದ್ದಾಳಲ್ಲ.... ರತಿ ಇದ್ದ ಹಾಗಿದ್ದಾಳೆ...ಅವಳನ್ನೇ ಮದುವೆಯಾಗು..."

"ಯಾರು ನನ್ನ ಮಾವನ ಮಗಳು? ಓ ಸುಜೀ ಬಗ್ಗೆ ಹೇಳ್ತಿದೀರಾ? ಅವಳನ್ನು ಆ ದೃಷ್ಟಿಯಿಂದ ನಾನೆಂದೂ ನೋಡೇ ಇಲ್ಲ" ಮಹೇಶ ನಿರಾಳವಾಗಿ ಉಸಿರುಬಿಟ್ಟ. ದೀಪ ಅವನ ಕಡೆ ನೋಡಿ ಮುಗುಳ್ನಕ್ಕಳು.

* * *

"ನೀನು ಹೇಳೋದನ್ನ ಕೇಳಿದ್ರೆ, ಸುಜೀ ಖಂಡಿತಾ ಪ್ರಾಬ್ಲಂನಲ್ಲಿದ್ದಾಳೆ ಅಂತ ಅನ್ಸುತ್ತೆ.... ಮಾವ ಅತ್ತೆಗೆ ಯಾಕೆ ಗೊತ್ತಾಗ್ಲಿಲ್ಲ?"

"ಅವಳು ಯಾರಿಗೂ ಹೇಳಿಲ್ಲ. ಮಹೇಶಂಗೆ ಮಾತ್ರ ಹೇಳಿದ್ದಾಳೆ. ಆದರೆ ಇಲ್ಲಿ ಮಹೇಶನ ತಾಯಿ ಸಹಕಾರವಿಲ್ಲ. ಅವರಿಗೆ ಸುಜಯನ್ನ ಕಂಡರೆ ಅಷ್ಟಕಷ್ಟೆ...."

"ಏನಂತೆ ಆಕೆಗೆ? ಸುಜಯನಂಥ ಸೊಸೆ ಸಿಗಬೇಕಾದರೆ ಆಕೆ ಪುಣ್ಯ ಮಾಡಿರಬೇಕು"

"ನಿಂಗೊತ್ತಿಲ್ಲ. ದಿನೇಶನ್ನ ಅವಳು ಒಪ್ಪಿರಲಿಲ್ಲ. ಅದನ್ನೇ ಒಂದು ದೊಡ್ಡ ಇಷ್ಯು ಮಾಡಿಬಿಟ್ಟಿದಾರೆ.... ಅವಳು ಮಹೇಶನ ಪತ್ನಿಯಾಗಿ ಬರುವುದು ಅವರಿಗೆ

ಇಷ್ಟವಿಲ್ಲ. ಅದಕ್ಕೇ ಅವಳನ್ನು ನಿನಗೆ ಸಜೆಸ್ಟ್ ಮಾಡಿದ್ದು...."

"ಈ ವಿಷಯ ಮುಂಚೇನೇ ಗೊತ್ತಿದ್ದಿದ್ರೆ ಆಕೇನ ಸ್ವಲ್ಪ ಆಟ ಆಡಿಸಬಹುದಾಗಿತ್ತು.... ಈ ಮಹೇಶಂಗೆ ತಾಯೀನ ಎದುರಿಸುವ ಧೈರ್ಯ ಇಲ್ಲ.... ಇಂಥೋನು ಪ್ರೀತಿ ಮಾಡ್ಲೇ ಬಾರ್ದಾಗಿತ್ತು...."

"ಈಗ ಮಾಡಿದ್ದಾಗಿದೆ.... ಸುಜಯ ಆ ಮನೆಯ ಸೊಸೆಯಾಗಿ ಬರಬೇಕು. ಆಕೆ ತಾನೇ ಒಪ್ಪಿಗೆ ಕೊಡಬೇಕು. ಅಂಥಾದ್ದೇನಾದ್ರೂ ಉಪಾಯ ಇದ್ರೆ ಹೇಳು"

"ಕೊರವಂಜಿ ಶಾಸ್ತ್ರ ಹೇಳಿಸ್ಬೇಕು.... ಇಲ್ಲ ಅಂತಂದ್ರೆ ಹಳ್ಳಿ ಶಕುನ ನುಡಿಯುವ ಬುಡಬುಡಕೆಯವನನ್ನು ಆಕೆಯ ಮನೆಗೆ ಕಳಿಸ್ಬೇಕು.... ಹೆದರಿಕೊಂಡು, ಸುಜಯನ ಕಾಲು ಹಿಡಿದು ಕರೆತಂದು ಮನೆ ತುಂಬಿಸ್ಕೊಳ್ತಾರೆ ನಿಮ್ಮತ್ತೆ."

ದೀಪಾ ನಕ್ಕಳು, "ಇದಕ್ಕೆಲ್ಲ ನಮ್ಮತ್ತೆ ಒಗ್ಗೋರಲ್ಲ... ಅಲ್ದೇ ಇಲ್ಲಿ ಪ್ರಾಬ್ಲಂ ಸುಜೀಗೂ ಇದೆ" ಎನ್ನುತ್ತಾ ಫೋಟೋ ವಿಷಯವನ್ನು ತಿಳಿಸಿದಳು.

"ಅದರಲ್ಲಿ ಏನಾದ್ರೂ ಕ್ಲೂ ಸಿಕ್ತಾ?"

"ಫೋಟೋ ಫ್ರೇಂನ ಒಳಗೆ ಒಂದೆರಡು ಚಿಕ್ಕ ಚಿಕ್ಕ, ಬ್ಲ್ಯಾಕ್ ಅಂಡ್ ವೈಟ್ ಫೋಟೋಗಳಿದ್ದವಂತೆ.... ಎಂಥದೋ ಒಂದು ಮೆಟಲ್ ಪೀಸ್ ಇತ್ತಂತೆ. ಇನ್ನೊಂದು ಬಟ್ಟೆ ಇತ್ತಂತೆ. ಅದರ ಮೇಲೆ ಕಸೂತಿ ಹಾಕಿತ್ತಂತೆ....."

"ಈಗ ಅದೆಲ್ಲಾ ಎಲ್ಲಿದೆ?"

"ಮಹೇಶನ ಹತ್ತಿರ ಇದೆ.... ಸುಜಯಳ ಡೈರಿ ನನ್ನ ಹತ್ರ ಇದೆ.... ಅದರ ತುಂಬಾ ತನಗೆ ಬೀಳುವ ಕನಸುಗಳನ್ನು ಬರೆದಿದಾಳಂತೆ. ನಾನು ಓದಿಲ್ಲ. ನಂಗ್ಯಾಕೋ ಭಯ ಆಯ್ತು.... ಮಹೇಶ ಓದಿದಾರೆ. ಆದರೆ ಅವರಿಗೆ ಸರಿಯಾಗಿ ಅರ್ಥವಾಗಲಿಲ್ಲವಂತೆ. ಒಂದು ತಮಾಷೆ ವಿಷಯ ಗೊತ್ತಾ? ಅದನ್ನ ನಮ್ಮತ್ತೆ ಓದಿದಾರೆ. ಅಸಂಬದ್ಧವನ್ನು ಬರೆದಿರುವ ಸುಜಯಳ ತಲೆ ಕೆಟ್ಟಿದೆ ಅನ್ನೋ ತೀರ್ಮಾನಕ್ಕೆ ಬಂದಿದಾರೆ...."

"ಸುಜಯನ್ನ ಈ ವರ್ತುಲದಿಂದ ಹೊರ ತರಲೇಬೇಕು. ನನ್ನ ಸ್ನೇಹಿತ ಒಬ್ಬ ಡಾಕ್ಟರಿದಾನೆ. ಅವನ ಹತ್ರ ಮಾತನಾಡಿ, ಮುಂದೆ ಏನು ಮಾಡಬಹುದು ತಿಳ್ಕೋತೀನಿ... ಇದಕ್ಕೆ ಸುಜಯಳ ಕೋ ಆಪರೇಷನ್ ಮುಖ್ಯ... ನಾವು ಈಗಲೇ ಹೋಗಿ ಅವಳ ಹತ್ರ ಮಾತನಾಡೋಣ.... ಬರ್ತೀಯ ತಾನೇ.... ಬೈಕ್‌ನಲ್ಲಿ ಹೋಗೋಣ..."

"ನಾನು ಅಷ್ಟು ದೂರ ಬೈಕ್‌ನಲ್ಲಿ ಬರೋಲ್ಲ. ನೀನು ಮಹೇಶನ್ನ ಕರ್ಕೊಂಡು ಹೋಗು. ನಾನು ಅವರ ಹತ್ರ ಮಾತಾಡ್ತೀನಿ" ದೀಪ ತಕ್ಷಣವೇ ಮಹೆಶನಿಗೆ ಕರೆ ಮಾಡಿ, ವಿಷಯವನ್ನು ತಿಳಿಸಿದಳು. ಮಹೇಶ ಬರಲು ಒಪ್ಪಿಕೊಂಡ. ಮಹೇಶ ಬರುವಷ್ಟರೊಳಗೆ ದಿಲೀಪ ಸಿದ್ಧನಾಗಿದ್ದ. ಇಬ್ಬರೂ ಆಶ್ರಮದ ಕಡೆಗೆ ಹೊರಟರು.

ಸುಜಯ, ದಿಲೀಪ ತನ್ನನ್ನು ನೋಡಲು ಬಂದಿದ್ದಾನೆಂದು ತಿಳಿದ ಕೂಡಲೇ ಉತ್ಸಾಹದಿಂದ ಅವನನ್ನು ಕಾಣಲು ಬಂದಳು. ಅವನೊಡನೆ ಇದ್ದ ಮಹೇಶನನ್ನು

ಕಂಡು ಹುಬ್ಬೇರಿಸಿದಳು.

"ದೀಪಾ ಬರ್ಲ್ಲಿಲ್ವಾ?"

"ಇಲ್ಲ" ಎನ್ನುತ್ತಾ ದಿಲೀಪ ಅವಳನ್ನೇ ಏಕದೃಷ್ಟಿಯಿಂದ ನೋಡಿದ.

"ಏನೋ ಹಾಗೆ ನೋಡ್ತಾ ಇದೀಯ... ನಾನು ಹೊಸಬಳಾ?"

"ತುಂಬಾ ಬದಲಾಗಿದೀಯಾ ಸುಜೀ... ಒಳ್ಳೇ ವಯಸ್ಸಾದ ಹೆಂಗಸಿನ ಥರ ಕಾಣ್ತಾ ಇದೀಯ... ಈ ಆಶ್ರಮ ನಿನ್ನ ವಯಸ್ಸಿನೋರಿಗಲ್ಲ..." ಸುಜಯ ಮಹೇಶನ ಕಡೆ ನೋಡಿ ಮುಗುಳ್ನಕ್ಕಳು.

"ಮೇಡಂ.... ಮಾತಾಡ್ತಾ ಇರೋನು ನಾನು, ಅವರ ಕಡೆ ಏನು ನೋಡ್ತಾ ಇದೀರಾ!" ಅವಳ ಮುಖವನ್ನು ತನ್ನ ಕಡೆಗೆ ತಿರುಗಿಸಿಕೊಂಡ.

"ನಾನು ಇಲ್ಲಿಗೆ ಬರೋಕ್ಕೆ, ಇವರೇ ಕಾರಣ... "

"ಹೌದಾ ಮಹೇಶ್? ಯಾಕೆ ಹೀಗೆ ಮಾಡಿದ್ರಿ? ಓ.ಕೇ. ಈಗ ನಾವಿಬ್ರೂ ಬಂದಿದೀವಿ, ನಿನ್ನನ್ನ ಇಲ್ಲಿಂದ ಕರ್ಕೊಂಡು ಹೋಗೋಕೆ...."

"ಎಲ್ಲಿಗೇ...." ರಾಗವಾಗಿ ಕೇಳಿದಳು.

"ನಮ್ಮ ಮನೆಗೆ...." ಇಬ್ಬರೂ ಒಟ್ಟಾಗಿ ನುಡಿದರು. ಸುಜಯ ಬಾಯ್ತುಂಬಾ ನಕ್ಕಳು. ಇವರು ಇಬ್ಬರೂ ತಮ್ಮ ನಗೆಯನ್ನು ಸೇರಿಸಿದರು.

"ಇಲ್ಲಿ ಒಂಟಿಯಾಗಿ ಇರೋಕೆ ಬೇಜಾರಾಗಲ್ವೇನೇ ನಿಂಗೆ?" ಅವಳು ಉತ್ತರಿಸದೇ ತಲೆ ತಗ್ಗಿಸಿದಳು. ಕಣ್ಣೀರಿನ ಹನಿಗಳು ಉರುಳಿದವು.

"ಅರೇ! ಅಪ್ಸೆಟ್ ಯಾಕೆ ಆಗ್ತೀಯ! ಪ್ರಾಬ್ಲಂ ಏನೇ ಇದ್ರೂ ನಮಗೆ ಹೇಳು. ನಾವು ಹೆಲ್ಪ್ ಮಾಡ್ತೀವಿ" ಸುಜಯ ಕಣ್ಣೀರನ್ನು ಒರೆಸಿಕೊಂಡು, ಬಲವಂತವಾಗಿ ನಕ್ಕಳು.

"ಓ.ಕೆ ನೀನು ಮಹೇಶ್ ಹತ್ರ ಮಾತಾಡ್ತಾ ಇರು. ನಾನು ಆಶ್ರಮದಲ್ಲಿ ಒಂದು ಸುತ್ತು ಸುತ್ತಿ ಬರ್ತೀನಿ" ಅವನು ಅತ್ತ ತಿರುಗಿದ ಕೂಡಲೇ ಸುಜಯ ಎಂದಳು.

"ದೀಪಂಗೆ, ದಿಲೀಪಂಗೆ ಎಲ್ಲಾ ಹೇಳಿ ಬಿಟ್ಟಿದ್ದೀರಿ" ದುಗುಡಗೊಂಡಿದ್ದಳು.

"ಹೇಳಬೇಕಾಗಿ ಬಂತು.... ನೋಡಿ, ನಮ್ಮ ಮನೆಯ ಹಳೇ ಫೋಟೋದ ಹಿಂದೆ ಈ ಹಳೆಯ ಫೋಟೋಗಳಿದ್ದವು..." ಎನ್ನುತ್ತಾ ಬ್ರೀಫ್‌ಕೇಸ್ ತೆಗೆದು, ಅವುಗಳನ್ನು ಅವಳ ಮುಂದೆ ತೋರಿಸಿದ... ಸುಜಯ ಅವುಗಳನ್ನು ದಿಟ್ಟಿಸಿ ನೋಡಿ, ಹಾಗೇ ಕಣ್ಣುಗಳನ್ನು ಮುಚ್ಚಿಕೊಂಡಳು... ಏನನ್ನೋ ಹೇಳಲು ಪ್ರಯತ್ನಿಸಿದಳು. ಆದರೆ ಅವಳ ಗಂಟಲಿನಿಂದ ಧ್ವನಿ ಹೊರಡಲಿಲ್ಲ......

"ಸುಜಯಾ.... ಏನಾಯ್ತು. ಇಲ್ಲಿ ನೋಡಿ ಸುಜಯ ಮಾತಾಡಲಿಲ್ಲ. ಕಣ್ಣು ಗಳನ್ನು ತೆರೆಯಲಿಲ್ಲ. ಹಾಗೇ ಹಿಂದಕ್ಕೆ ಒರಗಿಕೊಂಡಳು... ಮಹೇಶನಿಗೆ ಗಾಬರಿ

ಯಾಗಿತ್ತು. ಅವುಗಳನ್ನು ಬ್ರೀಫ್‌ಕೇಸ್‌ನೊಳಕ್ಕೆ ತುರುಕಿ, ಅವಳನ್ನು ಎಚ್ಚರಿಸಲು ನೋಡಿದ. ಅಲುಗಾಡಿಸಿದ. ಅವಳಿಂದ ಉತ್ತರವಿಲ್ಲ. ಬಾಗಿಲ ಬಳಿ ನಿಂತು, "ದಿಲೀಪ್..... ದಿಲೀಪ್...." ಎಂದು ಕೂಗು ಹಾಕಿದ. ಅವನು ಎಲ್ಲಿಯೂ ಕಾಣಲಿಲ್ಲ. ಅಕ್ಕ-ಪಕ್ಕ ನೋಡಿ, ಸಮೀಪದಲ್ಲಿ ನಿಂತು ಮಾತನಾಡುತ್ತಿದ್ದ ಹೆಂಗಸರನ್ನು ಕೂಗಿದ.

"ಸ್ವಲ್ಪ ಬೇಗ ಬನ್ನಿ..." ಅವರಿಬ್ಬರೂ ಬೇಗ ಬೇಗ ಬಂದರು.....

"ನಾನು ಡಾಕ್ಟ್ರನ್ನ ಕರ್‍ಕೊಂಡು ಬರ್ತೀನಿ, ನೀವು ಸ್ವಲ್ಪ ಇವರ ಜೊತೇಲಿ ಇರ್ತೀರಾ!"

"ಏನಾಯ್ತು ಇವರಿಗೆ? ಯಾಕೆ ಹೀಗೆ ಕೂತು ಬಿಟ್ಟಿದ್ದಾರೆ?"

"ಏಳಿ ಮೇಡಂ...." ಅವರು ಮೈ ಮುಟ್ಟಿ ಎಚ್ಚರಿಸಿದರು. ಸುಜಯ ಕಣ್ಣು ಬಿಟ್ಟಳು. ಆದರೂ ಗೊಂದಲ ಅವಳ ಕಣ್ಣಲ್ಲಿ ಕಂಡಿತ್ತು.

"ದಿಲೀಪ ಎಲ್ಲಿ? ಇವರ್‍ಯಾಕೆ ಇಲ್ಲಿಗೆ ಬಂದಿದಾರೆ?"

"ನಾನೇ ಕರೆದೆ. ಅವರಿಗೆ ಸ್ವಲ್ಪ ನೀರು ಕುಡಿಸಿ... ನಾನು ಈಗ್ಲೇ ಡಾಕ್ಟ್ರನ್ನ ಕರ್‍ಕೊಂಡು ಬರ್ತೀನಿ"

"ಏನೂ ಬೇಡ ಮಹೇಶ್...." ಮುಖದ ಬೆವರನ್ನು ಒರೆಸಿಕೊಂಡಳು.

"ಇಲ್ಲಾ ಮೇಡಂ. ನೀವ್ಯಾಕೋ ತುಂಬಾ ಸುಸ್ತಾಗಿರುವಂತೆ ಕಾಣ್ತಿದೀರಿ. ಡಾಕ್ಟ್ರು ಬಂದು ನೋಡ್ಲಿ ಬಿಡಿ.... ನೀವು ಇವರ ಜೊತೇಲಿರಿ ಸಾರ್.... ನಾವು ಈಗ್ಲೇ ಡಾಕ್ಟರಿಗೆ ಫೋನು ಮಾಡ್ತೀವಿ" ಆ ಹೆಂಗಸರಿಬ್ಬರೂ ಆಫೀಸಿನ ಕಡೆ ಹೊರಟರು.... ಮಹೇಶ ಪರೀಕ್ಷಿಸುವವನಂತೆ ಅವಳನ್ನು ನೋಡುತ್ತಿದ್ದ. ಇದ್ದಕ್ಕಿದ್ದಂತೆ ಏನಾಯ್ತು.... ಸರಿಯಾಗಿಯೇ ಇದ್ದಳಲ್ಲ....ಸುಜಯಾ ಪೆಚ್ಚಾಗಿದ್ದಳು.

ಹತ್ತು ನಿಮಿಷಗಳೊಳಗೆ ಡಾಕ್ಟರು ಬಂದರು. ಚೆಕಪ್ ಮಾಡಿ, "ಎಲ್ಲಾ ಸರಿ ಯಾಗಿದೆ. ಏನಾಯಿತು ಅಂತ ನೀವೇ ಹೇಳ್ಬೇಕು ಮೇಡಂ...." ಅಂತಂದರು.

"ಏನೂ ಇಲ್ಲ... ಸ್ವಲ್ಪ ತಲೆನೋವಿನಂತೆ ಆಯ್ತು. ಕಣ್ಣು ಮುಚ್ಚಿದೆ. ಇವರು ಗಾಬರಿಯಾಗಿದಾರೆ ಅಷ್ಟೇ"

"ಬಿ.ಪಿ. ಕೂಡಾ ನಾರ್ಮಲ್ ಆಗಿದೆಯಲ್ಲ....." ಅವರು ಮಹೇಶನ ಕಡೆ ತಿರುಗಿದರು. ಮಹೇಶ ತನ್ನ ಪರಿಚಯವನ್ನು ಹೇಳಿಕೊಂಡ. ಹಾಗೇ ಸುಜಯಳ ಕಸಿನ್ ದಿಲೀಪ ಬಂದಿರುವ ವಿಷಯವನ್ನು ತಿಳಿಸಿದ.

"ಓ.ಕೆ. ನೀವು ರೆಸ್ಟ್ ತಗೊಳ್ಳಿ ಮೇಡಂ.... ಏನಾದ್ರೂ ಬೇಕಾದ್ರೆ ನಂಗೆ ಫೋನು ಮಾಡಿ...." ಎಂದು ಹೇಳಿ ಡಾಕ್ಟರ್ ಹೊರಟರು. ಅವರ ಹಿಂದೆ ಮಹೇಶ ನಡೆದ.

"ನಾನು ನಿಮ್ಮ ಹತ್ರ ಸ್ವಲ್ಪ ಮುಖ್ಯವಾಗಿ ಮಾತಾಡ್ಬೇಕು... ಸುಜಯಳ ವಿಷಯ...."

"ಓ.ಕೆ.... ಬನ್ನಿ....." ಅವರು ಮುಂದೆ ಹೊರಟು ಹೋದರು.

"ಸುಜಯಾ, ನೀವು ನಿಮ್ಮ ರೂಮಿಗೆ ಹೋಗಿ ರೆಸ್ಟ್ ತಗೊಳ್ಳಿ, ನಾನು ದಿಲೀಪಂಗೆ ಹೇಳ್ತೀನಿ....." ಸುಜಯಾ ಹೆಚ್ಚು ಮಾತನಾಡದೇ ಆ ಹೆಂಗಸರಿಬ್ಬರೊಂದಿಗೆ ತನ್ನ ರೂಮಿಗೆ ಹೊರಟು ಹೋದಳು... ದಿಲೀಪನಿಗಾಗಿ ಸ್ವಲ್ಪ ಹೊತ್ತು ಅಲ್ಲಿಯೇ ಕಾಯುತ್ತಾ ನಿಂತಿದ್ದ. ದಿಲೀಪ ಬೇಗ ಬೇಗನೇ ಇವನ ಬಳಿಗೆ ಬಂದ.

"ನಾನು ನಿಮ್ಮ ತಾಯಿೀನ, ಈಗ ಸ್ವಲ್ಪ ಹೊತ್ತಿಗೆ ಮುಂಚೆ, ಇಲ್ಲೇ ನೋಡ್ದೆ... ಆದರೆ ಅವರು ನನ್ನನ್ನು ನೋಡಲಿಲ್ಲ"

"ಇಂಪಾಸಿಬಲ್.... ನಮ್ಮಮ್ಮನ ಥರ ಇರೋ ಯಾರನ್ನೋ ನೋಡಿದೀರಿ ಅಂತ ಕಾಣಿಸುತ್ತೆ"

"ಇಲ್ಲ ಮಹೇಶ್.... ಅವರೇ.... ಒಂದು ಬಾರಿ ನೋಡಿದೋರ ಮುಖವನ್ನು ಅಷ್ಟು ಬೇಗ ಮರೆಯೋನಲ್ಲ ನಾನು..." ದಿಲೀಪ ಒತ್ತಿ ಹೇಳಿದರೂ ಮಹೇಶ ಅತ್ತ ಗಮನ ಕೊಡಲಿಲ್ಲ. ಅವನಿಗೆ ಸುಜಯಳದ್ದೇ ಚಿಂತೆ. ನಡೆದ ವಿಷಯವನ್ನು ದಿಲೀಪನಿಗೆ ಹೇಳಿದ. "ನಾವು ಡಾಕ್ಟರ್ ಹತ್ರ ಹೋಗೋಣ ಬನ್ನಿ" ಎಂದ. ಇಬ್ಬರೂ ಕ್ಲಿನಿಕ್‌ಗೆ ಬಂದರು. ಒಂದಿಬ್ಬರು ಹೊರ ರೋಗಿಗಳನ್ನು ನೋಡಿ ಕಳಿಸುವವರೆಗೂ ಇಬ್ಬರೂ ಇಲ್ಲಿಯೇ ಕಾಯುತ್ತಾ ನಿಂತಿದ್ದರು.

ಮಹೇಶ ಡಾಕ್ಟರಿಗೆ ದಿಲೀಪನ ಪರಿಚಯವನ್ನು ಮಾಡಿಕೊಟ್ಟ, ದಿಲೀಪ ಅವರನ್ನೇ ನೋಡಿದ. "ನಾನು ಈಗ ಸ್ವಲ್ಪ ಹೊತ್ತಿಗೆ ಮೊದಲು ನೋಡಿದ್ದೆ ಅಂತ ಅನ್ನಿಸ್ತಿದೆ...."

"ಹೌದು. ಆದರೆ ನನಗೆ ನಿಮ್ಮ ಪರಿಚಯ ಆಗಿರಲಿಲ್ಲ.... ಸುಜಯಾ ಮೇಡಂನ ನೋಡೋಕೆ ಬಂದಿದ್ರಾ? ಯಾವ ಊರಿನಲ್ಲಿದ್ದೀರಿ! ಯಾವಾಗ ಬಂದ್ರೀ?" ಅವರು ವಿಚಾರಿಸುವಾಗ, ಮಹೇಶ ಅಸಹನೆಯಿಂದ ಚಡಪಡಿಸಿದ.

ಮಹೇಶ ತನ್ನ ಸುಜಯಳ ಪರಿಚಯ, ಸ್ನೇಹ, ಪ್ರೀತಿಯ ವಿಷಯವನ್ನೆಲ್ಲಾ ತಿಳಿಸಿ, ಮದುವೆಗೆ ಇರುವ ಅಡ್ಡಿಯನ್ನು ತಿಳಿಸಿ, ಈಗ ಸ್ವಲ್ಪ ಹೊತ್ತಿಗೆ ಮುಂಚೆ ನಡೆದುದನ್ನೆಲ್ಲಾ ತಿಳಿಸಿದ.

"ನೀವು ಅವರಿಗೆ ತೋರಿಸಲು ತಂದಿದ್ದೆ ಅಂತ ಹೇಳಿದ್ರಲ್ಲ, ಅದೇನದು...."

"ಮಹೇಶ ಬ್ರೀಫ್‌ಕೇಸಿನಿಂದ ಆ ಫೋಟೋಗಳನ್ನು ಕಸೂತಿ ಹಾಕಿದ ಕರಿ ಬಣ್ಣದ ಬಟ್ಟೆ ಹಾಗೂ ಗುಂಡಗೆ ಇದ್ದ ಮೆಟಲ್ ಪೀಸುಗಳನ್ನು ತೆಗೆದು ಅವರ ಎದುರಿಗೆ ಇಟ್ಟ...."ಇದೆಲ್ಲಾ ತುಂಬಾ ಹಳೆಯದಿರಬೇಕು. ನಾನು ನೋಡಿದ ನೆನಪಿಲ್ಲ ಇದು. ಫೋಟೋಗಳ ಹಿಂದೆ, ಕಟ್ಟಿನೊಳಗೆ ಇತ್ತು.... ಬಹುಶಃ ಇದಕ್ಕೂ ಸುಜಯ ಳಿಗೂ ಏನಾದ್ರೂ ಸಂಬಂಧ ಇರಬಹುದೇ.... ಅಂತ ಅನುಮಾನ...." ಎಂದು ಹೇಳಿ ದಿಲೀಪನ ಕಡೆ ನೋಡಿದ.

"ನಾನು ಜನರಲ್ ಪ್ರಾಕ್ಟೀಷನರ್. ಇದರ ಬಗ್ಗೆ ಯಾರಾದರೂ ಸ್ಪೆಷಲಿಸ್ಟ್‌ಗಳನ್ನು

ಕೇಳ್ಬೇಕು.... ಸಾಮಾನ್ಯವಾಗಿ ಇಂಥದ್ದೆಲ್ಲಾ ಸೈಕಿಯಾಟ್ರಿ ಕೇಸ್‌ಗಳಾಗಿರುತ್ತವೆ"

"ಸೈಕಿಯಾಟ್ರಿಸ್ಟ್‌ನ ಕನ್ಸಲ್ಟ್ ಮಾಡಿದ್ದಾಯಿತು.... ಇಲ್ಲಿಗೆ ಬಂದ ಮೇಲೆ, ಏನೇನೋ ಕನಸುಗಳು ಬೀಳುತ್ತವೆ ಅಂತ ಅದನ್ನೆಲ್ಲಾ ಬರೆದು ಸಹ ಇಟ್ಟಿದ್ದಾಳಂತೆ. ನನ್ನ ತಂಗಿ ಹೇಳಿದಳು" ದಿಲೀಪ ಎಂದ.

"ಹಾಗಾದ್ರೆ ಸೈಕಿಯಾಟ್ರಿಸ್ಟ್‌ನ್ನು ಕನ್ಸಲ್ಟ್ ಮಾಡ್ಲೇಬೇಕು.... ಅವರ ಪೇರೆಂಟ್ಸ್ ಹತ್ರ ಮಾತ್ನಾಡಿ...."

"ಇದುವರೆಗೂ ಅವರಿಗೆ ಯಾವ ವಿಷಯವೂ ತಿಳಿಯದು... ಯಾರಿಗೂ ತಿಳಿಯದಂತೆ, ಯಾರನ್ನಾದ್ರೂ, ಐ ಮೀನ್, ಸೈಕಿಯಾಟ್ರಿಸ್ಟ್‌ನ ಇಲ್ಲಿಗೇ ಕರೆಸಿ, ಕೌನ್ಸ್‌ಲಿಂಗ್, ಟ್ರೀಟ್‌ಮೆಂಟ್ ಕೊಡಿಸುಕ್ಕೆ ಆಗುಲ್ವಾ? ಅದಕ್ಕೆ ಎಷ್ಟು ಖರ್ಚಾಗುತ್ತೋ ಅದನ್ನು ನಾವು ಕೊಡ್ತೀವಿ"

"ಇಲ್ಲಿ ಇದುವರೆಗೂ ಎಂದೂ ಇಂತಹ ಕೇಸ್ ಯಾವುದೂ ಬಂದಿಲ್ಲ. ಈ ಬಗ್ಗೆ ನಾನು ಆಡಳಿತ ವರ್ಗದವರ ಹತ್ರ ಪರ್ಮಿಷನ್ ತಗೋಬೇಕಾಗುತ್ತೆ. ಸುಜಯನ್ನ ಇಲ್ಲಿಂದ ಕರ್‍ಕೊಂಡು ಹೋಗಿ. ಅವಳ ಹೆಲ್ತ್ ಸರಿಯಾಗಿಲ್ಲ ಅಂತ ನಾನು ಮೆಡಿಕಲ್ ಸರ್ಟಿಫಿಕೇಟ್ ಕೊಡ್ತೀನಿ....."

"ಅವರಿಗೆ ತಿಳಿಯದಂತೆ ಏನಾದ್ರೂ ಮಾಡುವಂಥದು ಇದ್ರೇ.... ಹೇಳ್ತೀರಾ?"

"ಚೆನ್ನಾಗಿದೆ ಮಿ. ದಿಲೀಪ್, ಪೇಷಂಟ್‌ಗೆ ತಿಳಿಯದಂತೆ, ಯಾವ ಟ್ರೀಟ್‌ಮೆಂಟ್ ಕೊಡೋಕೆ ಆಗುತ್ತೆ ಹೇಳಿ.... ಮೇಲು ನೋಟಕ್ಕೆ ಅವರು ಎಲ್ಲಾ ರೀತಿಯಿಂದಲೂ ಸರಿಯಾಗಿದಾರೆ. ಅವರಿಗೆ ದೈಹಿಕವಾಗಿ ಯಾವ ಪ್ರಾಬ್ಲಂ ಇಲ್ಲ...."

"ಏನೋ.... ಅವಳು ಈಗ ಒಂಟಿಯಾಗಿ ಇಲ್ಲಿ ಇದ್ದು ಬಿಟ್ಟಿದ್ದಾಳೆ. ಇಲ್ದಿದ್ರೆ ನಾವುಗಳು ಮಾತನಾಡಿ, ಅವಳ ಪ್ರಾಬ್ಲಂಗೆ ಸಲ್ಯೂಷನ್ ಹುಡುಕಬಹುದಾಗಿತ್ತು"

"ಅವಳ ಹೆಲ್ತ್ ಸರಿಯಾಗಿಲ್ಲ ಅಂತ, ಬೇಕಾದರೆ ಅವಳನ್ನು ಇಲ್ಲಿಂದ ತೆಗೆದು ಹಾಕಬಹುದು. ಆದರೆ ಅದರಿಂದ ಆ ಹುಡುಗಿಯ ಮನಸ್ಸು ಕೆಡುತ್ತದೆ. ಅದು ಭಾರೀ ಅಪಾಯ. ಒಂದು ಕೆಲಸ ಮಾಡ್ತೀನಿ. ಮೊದಲು ನಾನು ಸುಜಯಳ ಹತ್ರ ಮಾತನ್ನಾಡಿ, ಅವಳು ಇಲ್ಲಿರೋಕೆ ಇಷ್ಟಪಡ್ತಾಳೋ, ಏನಾದ್ರೂ ತೊಂದರೆ ಇದೆಯೋ ಅಂತ ಕೇಳಿ ತಿಳಿದುಕೊಳ್ತೀನಿ. ಆಮೇಲೆ ಮುಂದಿನದನ್ನು ಯೋಚಿಸೋಣ" ಎಂದರು.

"ಥ್ಯಾಂಕ್ಯೂ ಡಾಕ್ಟರ್...." ಮಹೇಶ, ದಿಲೀಪ ಇಬ್ಬರೂ ಎದ್ದರು.

* * *

ಡಾ. ಶಂಕರ್ 'ಸಂಧ್ಯಾಶ್ರಮ'ದ ಡಿಸ್ಪೆನ್ಸರಿಯ ಇನ್‌ಛಾರ್ಜ್ ಆಗಿ ನೇಮಕ ಗೊಂಡವರು. ಹತ್ತು ವರ್ಷಗಳಿಂದ ಇಲ್ಲೇ ವಾಸವಾಗಿದ್ದವರು. ಅವರಿಗೆ ಯಾವ ಸಂಸಾರವೂ ಇರಲಿಲ್ಲ. ಆಶ್ರಮವಾಸಿಗಳೇ ಅವರ ಬಂಧು ಬಾಂಧವರು. ಸುಬ್ಬ ರಾಮಪ್ಪನಿಗೆ ಆತ್ಮೀಯ ಗೆಳೆಯರಾಗಿದ್ದರು. ಆಶ್ರಮದ ಜವಾಬ್ದಾರಿ, ಚಟುವಟಿಕೆ

ಗಳೊಂದಿಗೆ ಡಾಕ್ಟರ್‌ಗೆ ಬಿಡುವೇ ಸಿಗುತ್ತಿರಲಿಲ್ಲ. ಅಪರೂಪಕ್ಕೊಮ್ಮೆ ಸಮಯ ಸಿಕ್ಕಿದರೆ, ಸುಬ್ಬರಾಮಪ್ಪನೊಂದಿಗೆ ಹರಟೆ ಹೊಡೆಯುತ್ತಿದ್ದರು.

ಈಗ ಡಿಸ್ಪೆನ್ಸರಿ, ಒಂದು ಆಸ್ಪತ್ರೆಯಾಗಿ ಪರಿವರ್ತನೆಗೊಂಡಿತ್ತು. ಕ್ಲಿನಿಕ್‌ನೊಂದಿಗೆ, ತುರ್ತು ಚಿಕಿತ್ಸೆಯ ಎಲ್ಲಾ ಸೌಲಭ್ಯಗಳೂ ಇದ್ದವು. ಇಬ್ಬರು ಅಸಿಸ್ಟೆಂಟ್ ಡಾಕ್ಟರ್ಸ್‌ಗಳಿದ್ದರು. ನರ್ಸು, ಆಯಾಗಳಿದ್ದರು. ಡಾ. ಶಂಕರ್ ಬಗ್ಗೆ ಎಲ್ಲರಿಗೂ ಗೌರವ, ಆದರಗಳಿದ್ದವು. ಲೀಲಾ ಕೂಡಾ, ಡಾಕ್ಟರ್ ಸಲಹೆ ಇಲ್ಲದೇ ಯಾವ ಕೆಲಸವನ್ನೂ ಮಾಡುತಿರಲಿಲ್ಲ. ಕಮಿಟಿಯ ಸದಸ್ಯರಲ್ಲಿ ಅವರೂ ಒಬ್ಬರಾಗಿದ್ದರು.

"ನನ್ನನ್ನು ಮೀಟಿಂಗು, ಭಾಷಣ ಅದೂ ಇದೂ ಅಂತ ಕರೆಯಬೇಡಿ. ನನ್ನ ಅವಶ್ಯಕತೆ ಇದ್ದರೆ ನಾನೇ ಬರ್ತೀನಿ" ಎಂದು ಹೇಳಿಬಿಟ್ಟಿದ್ದರಿಂದ, ಬೇರೆ ಯಾವುದೇ ಚಟುವಟಿಕೆಗಳಲ್ಲಿ ಡಾಕ್ಟರು ಭಾಗವಹಿಸುತ್ತಿರಲಿಲ್ಲ. ಕ್ಲಿನಿಕ್‌ಗೆ ಅಂಟಿಕೊಂಡಂತೆಯೇ ಅವರ ಕ್ವಾರ್ಟ್ರಸ್. ಆಶ್ರಮದ ಪಾಕಶಾಲೆಯಿಂದ ತಿಂಡಿ, ಕಾಫಿ ಎರಡು ಹೊತ್ತಿನ ಊಟ ಎಲ್ಲಾ ಅಲ್ಲಿಗೇ ಬರುತ್ತಿತ್ತು. ಸಮಾರಂಭದ ದಿನಗಳಲ್ಲಿ ಒಮ್ಮೊಮ್ಮೆ ಡೈನಿಂಗ್ ಹಾಲ್‌ನಲ್ಲಿ ಎಲ್ಲರೊಂದಿಗೆ ಕುಳಿತು ಊಟ ಮಾಡುತ್ತಿದ್ದರು.

ಸುಜಯಾ ಅಲ್ಲಿಯ ಸ್ಕೂಲಿಗೆ ಬಂದು ಸೇರಿದಾಗಿನಿಂದ, ಸುಬ್ಬರಾಮಪ್ಪನವರು ಆಗಾಗ್ಗೆ ಅವಳ ಬಗ್ಗೆ ಹೇಳುತ್ತಿದ್ದರು. "ಇಷ್ಟು ಜನರ ಪೈಕಿ, ನನಗೆ ಈ ಹುಡುಗಿ ಆತ್ಮೀಯಳಾಗಿ ಬಿಟ್ಟಿದ್ದಾಳೆ....." ಎಂದು ಮನತುಂಬಿ ಪ್ರಶಂಸಿಸುತ್ತಿದ್ದರು. ಡಾಕ್ಟರೂ ಅವಳನ್ನು ಗಮನಿಸುತ್ತಿದ್ದರು. ಆಶ್ರಮದ ಯಾವ ಆಕರ್ಷಣೆಗೆ ಒಳಗಾಗಿ ಇಲ್ಲಿಯ ಸ್ಕೂಲಿಗೆ ಬಂದು ಸೇರಿದ್ದಾಳೋ ಎಂದೂ ಅಚ್ಚರಿಪಟ್ಟಿದ್ದರು. ಈ ದಿನ, ಮಹೇಶನ ಜೊತೆ ಮಾತನಾಡಿದ ಮೇಲೆ, ಏನೋ ಪ್ರಬಲವಾದ ಕಾರಣವಿರಬೇಕು ಎಂದು ಊಹಿಸಿದರು.

ಭಜನಾ ಮಂದಿರದಲ್ಲಿ ಭಜನೆಯ ಸಮಯದಲ್ಲಿ ಒಮ್ಮೊಮ್ಮೆ ಬಂದು ಕುಳಿತ್ತಿದ್ದುದು ಉಂಟು. ಈ ದಿನ ಉದ್ದೇಶಪೂರ್ವಕವಾಗಿಯೇ ಅಲ್ಲಿಗೆ ಬಂದರು. ಸುಜಯ ಬಂದಿರಲಿಲ್ಲ. ಅವಳಿಗೆ ಹೇಳಿ ಕಳಿಸಿದರು.

"ಚಳಿ ಜ್ವರ ಬಂದಿದೆಯಂತೆ. ಬೆಚ್ಚಗೆ ರಗ್ ಹೊದ್ದು ಮಲಗಿದ್ದಾರೆ" ಕರೆಯಲು ಹೋಗಿದ್ದವರು ಬಂದು ಹೇಳಿದರು.

"ಚಳಿ ಜ್ವರ ಬರುವಂಥಾದ್ದು ಏನಾಗಿದೆ? ಅವರನ್ನು ಕ್ಲಿನಿಕ್‌ಗೆ ಕರ್ಕೊಂಡು ಬನ್ನಿ... ಬರಲೇಬೇಕಂತೆ. ನಾನು ಹೇಳಿದೆ ಅಂತ ಹೇಳಿ. ಬಲವಂತವಾಗಿ ಕರ್ಕೊಂಡು ಬನ್ನಿ" ಅಂತ ಹೇಳಿ ಕಳಿಸಿದರು. ಕ್ಲಿನಿಕ್‌ಗೆ ಹೋಗಿ ಅವಳಿಗಾಗಿ ಕಾಯುತ್ತಾ ಕುಳಿತರು....

ಒಳಬಂದ ಸುಜಯ, "ನಮಸ್ಕಾರ ಡಾಕ್ಟರ್" ಎಂದಳು. ಅವಳ ಮುಖ ನಿಸ್ತೇಜವಾಗಿತ್ತು. ಆದರೆ ಚಳಿಜ್ವರ ಬಂದವರಂತೆ ಕಾಣಬರಲಿಲ್ಲ.

"'ಭಜನಾಮಂದಿರದಲ್ಲಿ' ನಿನ್ನನ್ನು ಕಾಣಲಿಲ್ಲ. ಅದಕ್ಕೇ ಹೇಳಿ ಕಳಿಸಿದೆ.

ಏನು ಮಾಡ್ತಿದ್ದೆ?"

"ಸುಮ್ಮನೇ ಮಲಗಿದ್ದೆ...."

"ಸುಮ್ಮನೇ ಮಲಗಿದ್ದರೆ ಏನು ಪ್ರಯೋಜನ? ಆಕ್ಟಿವ್ ಆಗಿರಬೇಕು. ಭಜನೆಗೆ ಬರದೇ ಇದ್ದೋರಿಗೆ ಫೈನ್ ಹಾಕಿಸಿ ಅಂತ ಹೇಳ್ತೀನಿ" ಡಾಕ್ಟರು ನಕ್ಕರು. ಅವಳೂ ಸಪ್ಪಗೆ ನಕ್ಕಳು.

"ಏನು ಕೊರೀತಾ ಇದೆ.... ಇಲ್ಲಿಯ ಲೈಫ್ ಸಾಕಾಯ್ತು, ಮನೆಗೆ ಹೋಗಿ ಎಲ್ಲರ ಜೊತೆ ಇರ್ಬೇಕು ಅಂತ ಅನ್ನಿಸ್ತಾ ಇದೆಯಾ? ಒಂಟಿ ಜೀವನ ಬೇಸರ ಅಂತ ಅನ್ನಿಸ್ತಾ ಇದೆಯಾ!"

"ಹಾಗೇನಿಲ್ಲ...."

"ಏನೂ ಇಲ್ಲದಿದ್ರೆ ಮುಖ ಯಾಕೆ ಹೀಗೆ ಇದೆ! ಆಗಾಗ್ಗೆ ನಿನ್ನನ್ನು ನೋಡ್ತಾನೇ ಇರ್ತೀವಲ್ಲ. ನೀನು ಎಂದೂ ಹೀಗೆ ಮೂಡ್ ಕೆಡಿಸಿಕೊಂಡಿರಲಿಲ್ಲ. ಇವತ್ತು ಏನಾಯ್ತು? ದಿಲೀಪ, ಮಹೇಶ ಏನಾದ್ರೂ ಬೇಸರವಾಗುವ ಹಾಗೆ ಮಾತಾಡಿದ್ರಾ?"

"ಇಲ್ಲ...."

"ಅವರುಗಳ ಜೊತೆ ಹೊರಗೆಲ್ಲಾದ್ರೂ ತಿರುಗಾಡಿ ಬರ್ಬೇಕೂಂತ ಆಸೇನಾ?"

"ಇಲ್ಲ...."

"ಮತ್ತೇನೂ? ಹೋಗಲಿ ಬಿಡು. ನಿನಗೆ ಹೇಳೋಕೆ ಇಷ್ಟವಿಲ್ಲದಿದ್ರೆ ನಾನು ಬಲ ವಂತ ಮಾಡಲ್ಲ. ಸುಬ್ಬರಾಮಪ್ಪನವರನ್ನು ನೋಡೋಕೆ ಹೋಗ್ತೀನಿ. ಬರ್ತೀಯಾ"

"ಸುಮ್ಮನೆ ಬರಿಗೈಯಲ್ಲಿ ಹೋಗೋದು ಹೇಗೆ? ಪ್ರಸಾದ ತಗೊಂಡು ಹೋಗ್ತೀನಿ"

"ಸರಿ, ಹಾಗಾದ್ರೆ ನಡೀ, ಭಜನೆ ಮುಗಿದಿರಬೇಕು. ಮಂಗಳಾರತಿಯನ್ನು ಮುಗಿಸ್ಕೊಂಡು, ಪ್ರಸಾದವನ್ನು ತಗೊಂಡು ಅಲ್ಲಿಗೆ ಹೋಗೋಣ"

* * *

"ಏಳಿ ಸುಬ್ಬರಾಮಪ್ಪ, ಅದ್ಯಾಕೆ ಮಲಗಿಬಿಟ್ಟಿದೀರಿ? ನಿಮಗೂ ಹುಷಾರಿಲ್ವಾ? ಭಜನಾ ಮಂದಿರಕ್ಕೆ ನೀವು ಬರಲಿಲ್ಲ. ತಗೊಳ್ಳಿ ದೇವರ ಪ್ರಸಾದ...."

"ನೀನೆಂಥಾ ಡಾಕ್ಟರಪ್ಪಾ.... ಮಲಗೋಕೂ ಬಿಡಲ್ಲ... ಹೂಂ ಕೊಡು" ಅವರು ಕೈ ನೀಡಿದರು. ಸುಜಯ ಪ್ರಸಾದದ ದೊನ್ನೆಯನ್ನು ಅವರ ಕೈಯಲ್ಲಿಟ್ಟಳು.

"ಓ... ನೀನಾ.... ? ಇದೇನು ಇವನ ಜೊತೆ ಇವತ್ತು?"

"ನಿಮ್ಮ ಹಾಗೇ, ಚಳಿ ಜ್ವರ ಅಂತ ರಗ್ ಹೊದ್ಕೊಂಡು ಮಲಗಿದ್ರು, ಎಬ್ಬಿಸ್ಕೊಂಡು ಬಂದೆ"

"ಹೌದೇನಮ್ಮಾ, ಹುಷಾರಿಲ್ವಾ? ಡಾಕ್ಟ್ರೇ ಸ್ವಲ್ಪ ಸರಿಯಾಗಿ ನೋಡಿ, ಏನಾದ್ರೂ ಹೆಚ್ಚು ಕಡಿಮೆ ಆದರೆ.... "

"ಏನೂ ಆಗಲ್ಲ.... ಏನೂ ಆಗಿಲ್ಲ. ಹಾಗೇನಾದ್ರೂ ಇದ್ದರೆ, ರೆಸ್ಟ್ ತಗೋ ಅಂತ ಮನೆಗೆ ಕಳಿಸಿದ್ರಾಯ್ತು...."

"ನಿನ್ನ ಮನೆಗೆ ಹೋಗ್ಬೇಕು ಅಂತ ಆಸೇನಾ ಸುಜಯಾ...ಇದು ನಿನ್ನ ಮನೆಯಂತೆಯೇ ಅಲ್ವಾ?"

"ಇಲ್ಲ. ಸದ್ಯಕ್ಕೆ ನಾನೆಲ್ಲೂ ಹೋಗುಲ್ಲ. ನಾನಿನ್ನು ಬರ್ಲಾ?"

"ಸರಿ ಹೋಗು ಕತ್ತಲಾಗಿದೆ. ಹುಷಾರು...." ಅವಳ ಹಿಂದೆ ಡಾಕ್ಟರು ಬಂದರು.

"ಇವತ್ತು ನಿನ್ನ ಮೂಡ್ ಸರಿಯಾಗಿಲ್ಲ. ಒಬ್ಬಳೇ ಮಲಕ್ಕೋಬೇಡ... ಸಿಸ್ಟರ್‌ನ ಕಳಿಸ್ತೀನಿ....." ಸುಜಯ ಬೇಡ ಎನ್ನಲಿಲ್ಲ.

"ಏನ್ ಡಾಕ್ಟ್ರೇ, ಆ ಹುಡ್ಗಿ ಹತ್ರ ಗುಸು ಗುಸು... ಅವಳು ಇಲ್ಲಿಗೆ ಬಂದ ಮೇಲೆ, ನೀವು ಯಂಗ್ ಆಗ್ತಿರುವ ಹಾಗನ್ನಿಸ್ತಿದೆ"

"ಈಗ ನೀವು ಯಂಗ್ ಆಗಿಲ್ವಾ? ಹಾಗೇ...."

"ನಾನು ಯಂಗ್ ಆಗಕ್ಕೆ ಕಾರಣವಿದೆ.... ಅದಿರಲಿ, ಇವತ್ತು ಏನಾಯ್ತು ಗೊತ್ತಾ? ನೀವು ಎಲ್ಲಿ ಹೋಗಿದ್ರಿ?"

"ಇಲ್ಲೇ ಡಿಸ್ಪೆನ್ಸರೀಲೇ ಇದ್ದೆ. ನೀವು ಹೇಳಿ ಕಳಿಸ್ಬೇಕಾಗಿತ್ತು.... ಹೋಗಲಿ ಏನು ನಡೀತು ಅಂತ ಹೇಳಿ....."

"ನನ್ನ ಮೊಮ್ಮಗ ಈಗ ಇದೆ ಊರಿನಲ್ಲಿದಾನಂತೆ.... ಅವನ ಭಾಗದ ಆಸ್ತೀನ ಅವನಿಗೆ ಕೊಟ್ಟು ಬಿಡಿ.... ಅಂತ ಕೇಳ್ಕೊಂಡು ಒಬ್ಬ ಹೆಂಗಸು ಬಂದಿದ್ದಳು"

"ಹೌದಾ? ಯಾರು ಆ ಹೆಂಗಸು?"

"ಯಾರೋ, ಹೆಸರು ಮರೆತು ಹೋಯ್ತು.... ಅಲ್ಲಾ ಎಂಥಾ ಕಾಲ ಬಂತು?"

"ಯಾಕೆ? ಮೊಮ್ಮಗನ ಬಗ್ಗೆ ತಿಳಿದು ಸಂತೋಷ ಆಗಲಿಲ್ವಾ?"

"ಇಪ್ಪತ್ತೈಂಟು ವರ್ಷಗಳ ಹಿಂದೆ ಈ ಊರ್ನಿಂದ ನಾಪತ್ತೆಯಾದ ಮಗು, ಈಗ ದಿಢೀರನೆ ಇಲ್ಲಿ ಪ್ರತ್ಯಕ್ಷ ಆಗೋದು ಅಂತಂದ್ರೆ.... ಇಲ್ಲಿ ಏನೋ ಮೋಸ ಇದೆ. ನನ್ನ 'ವಿಲ್' ಬಗ್ಗೆ ತಿಳಿದುಕೊಂಡು ಯಾರೋ ಆಸ್ತೀನ ಲಪಟಾಯಿಸೋಕೆ ನೋಡ್ತಿದಾರೆ"

"ಅದು ಅಷ್ಟು ಸುಲಭ ಅಲ್ಲ. ಅದಕ್ಕೆ ಸಾಕ್ಷಿ, ಆಧಾರ... ಎಲ್ಲಾ ಬೇಕು. ಹಾಗಂತ ಕೇಳಿದ್ರಾ?"

"ಹೂಂ. ನನ್ನ ಹತ್ರ ಆಧಾರಗಳಿವೆ.... ಇವತ್ತು ತಂದಿಲ್ಲ. ತಂದು ತೋರಿಸ್ತೀನಿ. ಆಗ ಅವನೇ ನಿಮ್ಮ ಮೊಮ್ಮಗ ಅಂತ ನಿಮಗೇ ಗೊತ್ತಾಗುತ್ತೆ. ಅಂತಂದಳು"

"ಯಾವುದೋ ಒಂದು ಹಳೇ ಫೋಟೋ ತರ್ತಾರೆ.... ಇವನೇ ನಿಮ್ಮ ಮೊಮ್ಮಗ ಅಂತಂದ್ರೆ ಒಪ್ಪಿಕೊಂಡು ಬಿಡೋಕೆ ಆಗುತ್ತಾ!"

"ಅದಕ್ಕೇ ಡಾಕ್ಟ್ರೇ ನಂಗೆ ಚಿಂತೆಯಾಗಿರೋದು... ಇಷ್ಟು ವರ್ಷಗಳ ನಂತರ,

ಅದು ಯಾರದು? ವಾರ್ಷಿಕೋತ್ಸವದ ಸಮಯದಲ್ಲಿ ಎಷ್ಟೋ ಜನ ಬಂದ್ರು, ಹೋದ್ರು, ಅವರ ಪೈಕಿ ಯಾರಿಗೋ ನಮ್ಮ ಆಸ್ತಿಯ ಮೇಲೆ ಕಣ್ಣು ಬಿದ್ದಿದೆ. ಹಳೆಯ ವಿಷಯವನ್ನು ಎಲ್ಲಾ ತಿಳಿದೋರು ಯಾರೋ ಈ ರೀತಿ ಕಿತಾಪತಿ ಮಾಡ್ತಿದ್ದಾರೆ ಅಂತ ಅನುಮಾನ...."

"ನೀವು ವಿಲ್ ಬರೆಸಿದೀರಲ್ಲ ಸುಬ್ಬರಾಮಪ್ಪ, ಲಾಯರ್ರಿದಾರೆ, ಕೋರ್ಟು ಇದೆ. ಯಾರೇ ಆದ್ರೂ ಕೇಸ್ ಗೆಲ್ಲುವುದು ಸುಲಭವಲ್ಲ.... ಆ ಬಗ್ಗೆ ತಲೆ ಕೆಡಿಸಿ ಕೊಳ್ಳಬೇಡಿ. ಲೀಲಾ, ವಿವೇಕ್ ಇದಾರೆ.... ಎಲ್ಲಾ ನೋಡ್ಕೋತಾರೆ...."

"ಅದೇ ನನ್ನನ್ನ ತಿಂತಾ ಇರೋದು.... ವಿಲ್ ಬಗ್ಗೆ ಇಬ್ಬರಿಗೂ ಗೊತ್ತಿದೆ. ಏನೇನು ಹಗರಣವಾಗುತ್ತೋ... ಅದಕ್ಕೆ ಮೊದಲು ನಾನು ಬೇರೆ ವಿಲ್ ಬರೆಸಬೇಕು... ಲಾಯರ್ ಹತ್ರ ಮಾತಾಡ್ಬೇಕು...."

"ಹುಷಾರಾಗಿರಿ ಸುಬ್ಬರಾಮಪ್ಪ.... ಈಗ್ಲೇ ಎಲ್ಲರ ಹತ್ರ ಹೇಳಿ ಬಿಡ್ಬೇಡಿ"

"ನಂಗೇನೂ ಅಷ್ಟೂ ಗೊತ್ತಾಗಲ್ವೇ ಡಾಕ್ಟರ್?"

"ಊಟದ ಹೊತ್ತಾಯ್ತು.... ನೀವು ಊಟ ಮಾಡಿ. ನಾನು ಬರ್ತೀನಿ"

"ಥ್ಯಾಂಕ್ಸ್ ಕಣಪ್ಪಾ... ನನ್ನನ್ನ ವಿಚಾರಿಸಿಕೊಳ್ಳೋರು ನೀವಿಬ್ರೇ...." ಡಾಕ್ಟರು ಹೊರಬಂದರು. ಅಡುಗೆಯವರು ಊಟವನ್ನು ತಂದಿತ್ತರು.

* * *

"ಅಮ್ಮಾ ಎಲ್ಲಾದ್ರೂ ಹೊರಗೆ ಹೋಗಿದ್ಯಾ" ಮಹೇಶ್ ಇದ್ದಕ್ಕಿದ್ದಂತೆ ಕೇಳಿದಾಗ ವನಜಮ್ಮ ಚಕಿತಳಾದಳು.

"ಇಲ್ವಲ್ಲಾ, ಮನೆ ಬಿಟ್ಟು ಅಲ್ಲಾಡಿಲ್ಲ"

"ಹಾಗಾದ್ರೆ ಫೋನು ರಿಂಗಾಗುತ್ತಿದ್ರೂ, ಉತ್ತರ ಯಾಕೆ ಕೊಡಲಿಲ್ಲ!"

"ಫೋನು ಮಾಡಿದ್ಯಾ? ಕೇಳಿಸ್ಲೇ ಇಲ್ಲ. ಪಕ್ಕದ ಮನೆಯವರ ಹತ್ರ ಮಾತಾಡ್ತಿದ್ದೆ"

"ಪಕ್ಕದ ಮನೆ ಎರಡು ತಿಂಗಳಿಂದ ಖಾಲಿ ಇದೆ. ಯಾಕಮ್ಮಾ ಸುಳ್ಳು ಹೇಳ್ತಿ ದೀಯಾ? ಎಲ್ಲಿಗೆ ಹೋಗಿದ್ದೆ. ನನಗೆ ಹೇಳೋಕೆ ಇಷ್ಟವಿಲ್ಲದಿದ್ರೆ ಬೇಡ....."

"ಏನು? ಪೋಲೀಸ್ನೋರ ಥರ ಎನ್‌ಕ್ವೈರಿ ಮಾಡ್ತಿದೀಯ.... ಒಂದು ದಿನವೂ ಮನೆಗೆ ಫೋನು ಮಾಡ್ದೇ ಇದ್ದೋನು ಇವತ್ಯಾಕೆ ಮಾಡಿದ್ದೆ?"

"ನಾನಲ್ಲ. ಅತ್ಗೆ ಮಾಡಿದ್ರಂತೆ. ಆಮೇಲೆ ನಂಗೆ ಮಾಡಿ ಕೇಳಿದ್ರು..."

"ಇವಳೊಬ್ಳು ಹೊತ್ತಿಲ್ಲ ಗೊತ್ತಿಲ್ಲ. ತನಗೆ ಹೊತ್ತು ಹೋಗಲ್ಲ. ಅದಕ್ಕೆ ಫೋನ್ನಲ್ಲಿ ಮಾತಾಡ್ಬೇಕಾ! ಗಂಟೆಗಟ್ಟಲೆ ಸುಮ್ಮನೆ ವೇಸ್ಟು...."

"ಹಿಂದೆ ಅನ್ನಬೇಡ. ಎದುರಿಗೆ ಹೀಗೆ ಆಡೋ ಧೈರ್ಯ ಇದೆಯಾ?"

"ಭಯ ಏನು? ಆಡ್ತೀನಿ.... ಅವತ್ತು ಫೋಟೋಕ್ಕೆ ಗಾಜು ಹಾಕಿಸ್ಕೊಂಡು ಬಂದ್ಯಲ್ಲಾ ಯಾವ ಅಂಗಡಿ! ಅವಳೂ ನಂಗೆ ಗೊತ್ತಿಲ್ಲಾ ಅಂದಳು."

"ಯಾಕೆ?" ಎನ್ನುತ್ತಾ ಗೋಡೆಯ ಕಡೆ ನೋಡಿದ. ಅಲ್ಲಿ ಆ ಫೋಟೋ ಇರಲಿಲ್ಲ. "ಮತ್ತೆ ಗಾಜು ಒಡೀತಾ! ಬಿದ್ದು ಹೋಯ್ತಾ? ಸರಿಯಾಗೇ ಹಾಕಿದ್ನಲ್ಲ"

"ಹುಂ. ಯಾವ ಅಂಗಡಿ ಅಂತ ಹೇಳು. ನಾನು ಹಾಕಿಸ್ಕೊಂಡು ಬರ್ತೀನಿ"

"ನಾನೇ ಆದಾಗ ಹಾಕಿಸ್ಕೊಂಡು ಬರ್ತೀನಿ.... ಸದ್ಯಕ್ಕೆ ಬೇಡ ಬಿಡು...."

"ಸರಿ. ಅಂಗಡಿ ಯಾವುದು ಅಂತ ಹೇಳಲೇ ಇಲ್ಲವಲ್ಲ, ಹೇಳು."

"ಇಲ್ಲೇ ಐದನೇ ಕ್ರಾಸ್‌ನಲ್ಲಿದೆಯಲ್ಲ ಮಹಾವೀರ ಫ್ರೇಂ ವರ್ಕ್ಸ್ ಅಂತ... ಅವನ ಮೊಬೈಲ್ ನಂಬರ‍್ರು ಸಹ ಇದೆ ಕೊಡ್ಲಾ?" ವನಜಮ್ಮ ಉತ್ತರಿಸದೇ ಒಳಗೆ ಹೋಗಿದ್ದಳು. ದೀಪಾ ಫೋನು ಮಾಡಿದ್ದಳು. ಮಹೇಶ ಮಾತಾಡಿದ.

"ದಿಲೀಪ ಏನೇನೋ ಹೇಳ್ದ. ಈಗ ಏನು ಮಾಡೋದು?"

"ಅದನ್ನೇ ಯೋಚಿಸ್ತಾ ಇದೀನಿ...."

"ನಂಗೊಂದು ಪ್ಲಾನು ಹೊಳೆದಿದೆ ಮಹೇಶ್...." ಎನ್ನುತ್ತಾ ತನಗೆ ಹೊಳೆದ ಪ್ಲ್ಯಾನನ್ನು ತಿಳಿಸಿದಳು. ಈ ಪ್ರಯೋಗಾನ ಮಾಡಿ ನೋಡೋಣಾಂತ. ನೀವೇನು ಹೇಳ್ತೀರಿ!"

"ಓ.ಕೆ. ಏನು ಮಾಡ್ತೀರೋ ಮಾಡಿ.... ಸ್ವಲ್ಪ ದಿಲೀಪಂಗೆ ಫೋನು ಕೊಡ್ತೀರಾ?" ದಿಲೀಪ ಲೈನ್‌ಗೆ ಬಂದ....

"ನೀವು ಅಮ್ಮನ್ನ ನೋಡಿದೆ ಅಂತ ಹೇಳಿದ್ರಿ, ಆರ್ ಯೂ ಷೂರ್...."

"ಎಸ್. ಹಂಡ್ರೆಡ್ ಪರ್ಸೆಂಟ್.... ಅವರ ಜೊತೆ ಇನ್ನೊಬ್ಬ ಹೆಂಗಸ್ರು ಇದ್ರು, ಅವರ‍್ಯಾರೋ ಗೊತ್ತಿಲ್ಲ. ನಿಮ್ಮ ಮದರ್‌ನೇ ಕೇಳಿ ನೋಡಿ"

"ನಾನು ಸ್ವಲ್ಪ ಹೊರಗೆ ಹೋಗಿ ಬರ್ತೀನಿ. ಒಂದು ಐವತ್ತೋ ನೂರೋ ಇದ್ದರೆ ಕೊಡು" ವನಜಮ್ಮ ಕೇಳಿದಳು.

"ನಾನು ಕಾರ‍್ನಲ್ಲಿ ಕರ‍್ಕೊಂಡು ಹೋಗ್ಲಾ?"

"ಏನೂ ಬೇಡ. ವಾಕಿಂಗ್ ಆಗುತ್ತೆ. ನಡ್ಕೊಂಡು ಹೋಗ್ತೀನಿ" ತಾಯಿಯ ವರ್ತನೆ ಎಂದಿನಂತಿಲ್ಲ. ಅಥವಾ ತನ್ನ ದೃಷ್ಟಿಯೇ ಈ ದಿನ ಬದಲಾಗಿದೆಯೋ ಏನೋ ಅಂತ ಎಂದುಕೊಂಡ.

ಹದಿನೈದು ಇಪ್ಪತ್ತು ನಿಮಿಷಗಳಲ್ಲಿ ತಾಯಿ ವಾಪಸ್ಸಾಗಿದ್ದಳು. ಇವನೇನಾದರೂ ಕೇಳುವ ಮೊದಲೇ, "ದೊಡ್ಡ ಫೋಟೋದ ಒಳಗೆ ಇತ್ತಲ್ಲ ಚಿಕ್ಕ ಚಿಕ್ಕ ಫೋಟೋಗಳು ಅದನ್ನು ಕೊಡು....." ಎಂದಳು.

"ಯಾವ ಫೋಟೋ!" ಏನೂ ಅರಿಯದವನಂತೆ ಕೇಳಿದ.

"ಗೊತ್ತಿಲ್ಲದವನ ಥರ ಆಡಬೇಡ. ಫೋಟೋ ಅಂಗಡಿಯವನು ಕೊಟ್ಟನಂತಲ್ಲ ಅದು. ಎಲ್ಲಿಟ್ಟಿದ್ದೀಯ ಹೇಳು"

"ಅದು ಅತ್ತಿಗೆಯ ಬಳಿ ಇದೆ.... ಆ ಕವರನ್ನು ನಾನು ತೆಗೆದಿಟ್ಟುಕೊಳ್ಳಲಿಲ್ಲ.

ಅದರಲ್ಲಿ ಫೋಟೋಗಳಿದ್ದವು ಅಂತ ಫ್ರೇಂ ಅಂಗಡಿಯವನು ಹೇಳಲಿಲ್ಲ"

"ಸರಿ, ಬೆಳಿಗ್ಗೇನೇ ಹೋಗಿ ದೀಪಳಿಂದ ಅದನ್ನು ಇಸ್ಕೊಂಡು ಬಾ...."

"ಅದು ಅಷ್ಟು ಮುಖ್ಯಾನಾ? ಒಂದು ವೇಳೆ ಕಳೆದು ಹೋಗಿದ್ರೆ...."

"ಕಳೆದು ಯಾಕೆ ಹೋಗುತ್ತೆ! ಈಗ್ಲೇ ದೀಪಂಗೆ ಫೋನು ಮಾಡು...."

"ಮಾಡ್ತೀನಿ. ಆದರೆ ಅದು ಅಷ್ಟು ಮುಖ್ಯ ಯಾಕೆ ಅದನ್ನು ಮೊದಲು ಹೇಳು..."

"ಮೊದಲು ಅದು ಸಿಗಲಿ ಆಮೇಲೆ ಹೇಳ್ತೀನಿ"

"ಅದು ಸಿಕ್ಕೇ ಸಿಗುತ್ತೆ. ಸಿಗದೇ ಅದು ಎಲ್ಲಿ ಹೋಗುತ್ತೆ. ನಂಗೆ ಹೇಳದಿದ್ದರೆ, ನಾನು ಇವತ್ತಿಂದ ನಿನ್ನ ಹತ್ರ ಮಾತಾಡಲ್ಲ...."

"ಕೆಟ್ಟು ಕೆಟ್ಟದಾಗಿ ಮಾತಾಡ್ಬೇಡ. ಹೇಳ್ತೀನಿ, ಆದರೆ ನೀನು ಅದರ ಬಗ್ಗೆ ಮತ್ತೆ ಮತ್ತೆ ಏನನ್ನೂ ಕೇಳಬಾರದು, ಹಾಗಿದ್ರೆ ಹೇಳ್ತೀನಿ"

"ಅಂಥಾ ಸೀಕ್ರೆಟ್ಟು ಏನಪ್ಪಾ...."

"ಹೌದು ಸೀಕ್ರೆಟ್ಟೇ... ಅದನ್ನೆಲ್ಲ ನಿನಗೆ ಹೇಳಲೇಬೇಕೆಂಬ ನಿಯಮ ಏನೂ ಇಲ್ಲ.."

"ಸರಿಬಿಡು. ನಂಗೂ ಬೇಕಿಲ್ಲ. ನಿನ್ನ ಸೀಕ್ರೆಟ್, ನಿನ್ಹತ್ರಾನೇ ಇರಲಿ"

* * *

ಮಹೇಶ ಅತ್ತ ಆಫೀಸಿಗೆ ಹೋದ. ಕೆಲವೇ ನಿಮಿಷಗಳ ನಂತರ ದಿಲೀಪ, ದೀಪಾ ಬಂದರು. ವನಜಮ್ಮನಿಗೆ ಅವರಿಬ್ಬರ ಆಗಮನ ಇಷ್ಟವಾಗಲಿಲ್ಲ. ಆದರೂ ನಗು ಮುಖ ಮಾಡಿಕೊಂಡು ಆದರಿಸಿದಳು.

"ಮಹೇಶ ನಿಮ್ಮ ಮನೆಗೇ ಅಂತ ಹೊರಟಿದ್ದ.... ಸಿಕ್ಕಿದ್ನಾ?"

"ಇಲ್ವಲ್ಲಾ.... ನಾವೇ ಬರ್ತಿದ್ದೀವಿ ಅಂತ ಫೋನು ಮಾಡಿ ಹೇಳಿದ್ನಲ್ಲ"

"ಏನೋ.... ಮರೆತ ಅಂತ ಕಾಣುತ್ತೆ. ಈ ನಡುವೆ ಅವನು ಯಾವುದೋ ಚಿಂತೆಯಲ್ಲಿರ್ತಾನೆ. ಅದೇ ವಿಷಯಕ್ಕೆ ನನಗೂ ಅವನಿಗೂ ಮಾತುಕತೆ ಆಗಿತ್ತು" ಅಣ್ಣ-ತಂಗಿ ಇಬ್ಬರೂ ಮುಖ ಮುಖ ನೋಡಿಕೊಂಡರು.

"ಅಂದ್ಹಾಗೇ, ನಿನ್ಹತ್ರ ಯಾವುದೋ ಕವರ್ರು ಕೊಟ್ಟಿದ್ದೆ ಅಂತ ಹೇಳಿದ್ದ. ಅದು ನಿನ್ನ ಹತ್ರ ಇದೆಯಾ?"

"ಯಾವ ಕವರ್ರು? ಓ ಅದಾ? ಕಾರ್ನಲ್ಲಿ ಇರಬಹುದು.... ಅದರಲ್ಲಿ ಏನಿತ್ತು? ಮಹೇಶಂಗೆ ಫೋನು ಮಾಡ್ಲಾ?"

"ಪರವಾಗಿಲ್ಲ ಬಿಡು.... ಅವನು ಬಂದ್ಮೇಲೆ ಕೇಳ್ತೀನಿ"

"ಅತ್ತೇ.... ನೆನ್ನೆ ದಿನ ನಂಗೂ ಹೇಳಿದ್ರೆ, ನಾನೂ ನಿಮ್ಮ ಜೊತೆ ಆಶ್ರಮಕ್ಕೆ ಬರ್ತಿದ್ದೆ. ನೀವು ನಂಗೆ ಹೇಳ್ಲೇ ಇಲ್ಲ"

"ಎಲ್ಲಿಗೆ! ನಾನೆಲ್ಲಿಗೂ ಹೋಗಿರ್ಲಿಲ್ಲ.... ಮನೇಲೇ ಇದ್ದೆ"

"ದಿಲೀಪ ನಿಮ್ಮನ್ನು ಆಶ್ರಮದಲ್ಲಿ ನೋಡಿದ್ನಂತೆ.... ಅಲ್ವೇನೋ ದಿಲೀಪ?"

"ಹೂಂ. ಆಂಟೀ.... ನಿಮ್ಮ ಜೊತೆ ಇನ್ನೂ ಒಬ್ರು ಇದ್ರು....."

"ನಾನೇ ಹೋಗಿರ್ಲಿಲ್ಲ. ನನ್ನ ಜೊತೆಗೆ ಇನ್ಯಾರಿರ್ತಾರೆ? ನೀನು ಯಾರನ್ನು ನೋಡಿದ್ಯೋ?" ವನಜಮ್ಮ ದೃಷ್ಟಿ ತಪ್ಪಿಸಿದಳು.

"ಇಲ್ಲ ಆಂಟೀ.... ನೀವೇ...." ದಿಲೀಪ ಒತ್ತಿ ನುಡಿದ.

"ಹೋಗ್ಲಿ ಬಿಡು ದಿಲೀಪ.... ಅತ್ತೆ ಸುಳ್ಳು ಹೇಳ್ತಾರಾ?" ಆದರೆ ವನಜಮ್ಮನ ಮುಖ ಕಪ್ಪಿಟ್ಟಿತ್ತು.

"ಊಟಕ್ಕೇಳಿ. ಊಟದ ಸಮಯವಾಗಿದೆ. ತಟ್ಟೆ ಹಾಕ್ತೀನಿ" ವನಜಮ್ಮ ಒಳ ನಡೆದಳು. ದೀಪಾ, ದಿಲೀಪನನ್ನು ದುರು ದುರು ನೋಡಿದಳು.

"ಮಹೇಶನೂ ಬಂದಿದ್ರೆ ಚೆನ್ನಾಗಿತ್ತು.... ನಾನು ಫೋನು ಮಾಡ್ಲಾ ಅತ್ತೇ...."

"ಏನೂ ಬೇಡ.... ಯಾರೋ ಬಂದ್ರು, ಗೇಟು ಸದ್ದಾಯ್ತು. ನಾನು ನೋಡ್ತೀನಿ" ವನಜಮ್ಮನ ಹಿಂದೆ ದೀಪಾಳೂ ಬಂದಳು.

"ಅರೇ ಚುಮ್ಮೀ.... ಮೈಸೂರ್ನಿಂದ ಯಾವಾಗ ಬಂದ್ಯೇ? ಅತ್ತೆ, ಇವಳು ನನ್ನ ಕಸಿನ್.... ಸುಮತೀ.... ಸುಜಯಳ ತಂಗಿ."

"ಹೂಂ. ಗೊತ್ತು. ಮದುವೇಲಿ ನೋಡಿದ್ದೆ. ಒಬ್ಬಳೇ ಬಂದ್ಯಾ?" ಸುಮ್ಮನೇ ಎಂಬಂತೆ ಕೇಳಿದಳು.

"ಹೂಂ... ದೀಪಾ ಇಲ್ಲಿದ್ದಾಳೆ ಅಂತ ತಿಳೀತು. ನೋಡಿಕೊಂಡು ಹೋಗೋಣ ಅಂತ ಬಂದೆ...."

"ನಾನೂ ಇಲ್ಲೇ ಇದೀನಿ ಕಣೇ ಚುಮ್ಮೀ...." ಎನ್ನುತ್ತಾ ದಿಲೀಪನೂ ಹೊರಬಂದ. "ಹಾಯ್" ಎಂದಳು ಸುಮತಿ. ದಿಲೀಪ ಅವಳ ಹತ್ತಿರ ಬಂದು ಅವಳ ಭುಜವನ್ನು ಬಳಸಿದ. ನಾಳೆ ನಾಡಿದ್ದರಲ್ಲಿ ನಾನೇ ಮೈಸೂರಿಗೆ ಬರೋಣಾಂತ ಇದ್ದೆ... ಒಳ್ಳೇದೇ ಆಯ್ತು.... ನೀನೇ ನನ್ನನ್ನು ನೋಡೋಕೆ ಬಂದ್ಯಲ್ಲಾ"

"ಅವಳು ನನ್ನನ್ನು ನೋಡೋಕೆ ಬಂದಿರೋದು... ಏನನ್ನಿಸುತ್ತೇ ಚುಮ್ಮೀ... ನಾನು ಬದಲಾಗಿದೀನಾ?" ಕಮೀಜನ್ನು ಸರಿಪಡಿಸಿಕೊಳ್ಳುತ್ತಾ ಕೇಳಿದಳು.

"ಹುಂ... ಸ್ವಲ್ಪ ದಪ್ಪಗಾಗಿದೀಯಾ...."

"ದಪ್ಪಗಾಗದೇ ಇನ್ನೇನು! ಪ್ರೀತಿಸುವ ಗಂಡನ ಆರೈಕೆ ಹೆಚ್ಚಾಗಿದೆ. ಹಗಲು, ರಾತ್ರಿ ಕಷ್ಟಪಟ್ಟು ಓದ್ಬೇಕಾ? ಬರೀಬೇಕಾ? ಕೆಲಸಕ್ಕೆ ಹೋಗ್ಬೇಕಾ? ತಿಂದುಂಡು ಮಲಗೋದು ಅಷ್ಟೇ ಇವಳ ಕೆಲಸ...." ದಿಲೀಪ ಗೇಲಿ ಮಾಡಿದ.

"ನಿನ್ನ ಹೆಂಡ್ತಿ ಬಂದ್ರೆ ಅವಳು ಮಾಡೋದೂ ಅಷ್ಟೇ... ತಿಳೀತಾ?"

"ಹೌದೋ ದಿಲೀಪ ಯಾವಾಗ್ಲೋ ನಿನ್ನ ಮದುವೆ?"

"ನೀನು ಹೂಂ ಎಂದಾಗ...." ಸುಮತಿಯ ಮುಖ ಕೆಂಪಾಯಿತು.

"ನಾನೇನೋ ಕೇಳಿದ್ರೆ, ಇವನೇನೋ ಹೇಳ್ತಾನೆ...." ಅವನ ಬೆನ್ನ ಮೇಲೆ ಒಂದೇಟು ಹಾಕಿದಳು. ವನಜಮ್ಮನಿಗೆ ಇವರುಗಳ ಮಾತಿನ ಮೇಲೆ ಗಮನವಿರಲಿಲ್ಲ.

"ನೀನೂ ಊಟಕ್ಕೆ ಏಳಮ್ಮಾ... ಎಲ್ಲಾ ಬನ್ನಿ" ಮತ್ತೆ ಎಲ್ಲರೂ ಊಟದ ಮನೆಗೆ ಬಂದರು. ಅವರುಗಳು ಹರಟೆ ಹೊಡೆಯುತ್ತಾ, ಕಿಲಕಿಲ ನಗುತ್ತಾ ಊಟ ಮಾಡು ವಾಗ, ವನಜಮ್ಮ ಮಹೇಶನ ಬಗ್ಗೆ ಚಿಂತಿಸುತ್ತಿದ್ದಳು. ನೆನ್ನೆಯಿಂದ ಅವನ ಮೂಡ್ ಸರಿಯಾಗಿಲ್ಲ. ಇಷ್ಟು ವರ್ಷಗಳವರೆಗೂ ಹೇಳದೇ ಇದ್ದ ವಿಷಯವನ್ನು ತಾನೇಕೆ ಅವನಿಗೆ ಹೇಳಿದೆನೋ?

"ಅತ್ತೇ ಸ್ವಲ್ಪ ತುಪ್ಪ ಹಾಕ್ತೀರಾ! ಸಾರು ಸ್ವಲ್ಪ ಖಾರ...." ದೀಪಾ ಎಚ್ಚರಿಸಿದಳು. ವನಜಮ್ಮ ಕೂಡಲೇ ತುಪ್ಪವನ್ನು ಬಡಿಸಿದಳು.

"ಸುಜಯನ್ನ ನೋಡೋಕೆ ಹೋಗಲ್ವೇನೇ?"

"ಅವಳಿಗೇ ಬಾ ಅಂತ ಫೋನು ಮಾಡಿದೀನಿ... ಎಲ್ಲಾ ನಮ್ಮ ಮನೆಗೇ ಹೋಗೋಣ.... ಯಾವ್ದಾದ್ರೂ ಒಳ್ಳೇ ಮೂವಿ ನೋಡೋಣ"

"ಮೊದ್ಲು ಸುಜಯ ಬರಲಿ.... ಅವಳದ್ದೇ ಒಂದು ಕತೆಯಾಗಿದೆ"

"ಏನಾಯ್ತೇ ಅವಳಿಗೆ? ಆಶ್ರಮದಲ್ಲಿ ಹಾಯಾಗಿದೀನಿ ಅಂತಂದ್ಲಲ್ಲ"

"ಅವಳಾ? ಅವಳು ಎಲ್ಲಿಯೂ ಹಾಯಾಗಿರುವುದು, ಅವಳ ಜಾಯಮಾನಕ್ಕೇ ಬಂದಿಲ್ಲ. ಒಂಥರಾ ಕಾಂಪ್ಲೆಕ್ಸ್ ಅವಳಿಗೆ"

"ಷ್, ಸುಮ್ಮನಿರು ದಿಲೀಪ, ಎಲ್ರಿಗೂ ಕೇಳ್ಸುತ್ತೆ"

"ನಾನು ಸುಳ್ಳೂ ಹೇಳಿದ್ನಾ... ನೀನು ಅವಳ ಹಾಗೇ ಆಡ್ಬೇಡಾ. ನಿನ್ನ ಗಂಡನಾಗೋನಿಗೆ ಬಹಳ ಕಷ್ಟ ಆಗುತ್ತೆ"

"ದಿಲೀಪಾ.... ಇದು ನಮ್ಮ ಅತ್ತೆ ಮನೆ.... ಅಮ್ಮನ ಮನೆ ಅಲ್ಲ......"

"ಓ.ಕೆ. ಎಲ್ರೂ ನಮ್ಮ ಮನೆಗೇ ಹೋಗೋಣ. ನಡೀರಿ... ಹೇಗೂ ಎಲ್ಲರ ಊಟ ಆಯ್ತಲ್ಲಾ...."

"ನಮ್ಮತ್ತೆ ಮೂಡ್ ಯಾಕೋ ಚೆನ್ನಾಗಿಲ್ಲ. ಮಹೇಶ ಬಂದ್ಮೇಲೆ ಹೋಗೋಣ"

"ಸರಿ. ಹಾಗಾದ್ರೆ ನೀನು ಇಲ್ಲೇ ಕೂತಿರು. ನಾನು, ಚುಮ್ಮೀ ಹೊರಡ್ತೀವಿ. ನಡೆಯೇ ಚುಮ್ಮೀ....." ಅವನು ಅವಳ ತೋಳನ್ನು ಚಿವುಟಿದ.

"ಹ್ಞಾಂ... ಏನೋ ನೀನು! ನಾನು ನಿನ್ನ ಜೊತೆ ಬರುಲ್ಲ. ನಾನು ದೀಪಳ ಹತ್ರ ಮಾತಾಡ್ಬೇಕು. ಸುಜಯಳ ಫೋನು ಬಂದ್ಮೇಲೆ ಹೋಗ್ತೀನಿ" ದಿಲೀಪ ಅವಳ ಬೆನ್ನ ಮೇಲೆ ಒಂದು ಗುದ್ದು ಹಾಕಿ ಹೊರಬಂದು ನಿಂತ.

ಊಟವನ್ನು ಮುಗಿಸಿದ ವನಜಮ್ಮ, "ನಾನು ಒಂದು ಗಳಿಗೆ ಮಲಗಿರ್ತೀನಿ. ಮಹೇಶನ ಫೋನು ಬಂದರೆ ನನ್ನನ್ನು ಎಬ್ಬಿಸು" ಅಂತ ದೀಪಳಿಗೆ ಹೇಳಿ, ತನ್ನ

ರೂಮಿಗೆ ಹೊರಟು ಹೋಗಿದ್ದಳು.

* * *

"ಏನೇ ದೀಪಾ! ಹೊಸ ಲೈಫು ಹೇಗನ್ನಿಸುತ್ತೆ? ಡೆಲ್ಲಿ ಇಷ್ಟು ಬೇಗ ಬೋರ್ ಆಗ್ಹೋಯ್ತಾ! ಬೆಂಗಳೂರಿಗೆ ಬಂದು ಬಿಟ್ಟಿದೀಯಾ?" ಎಂದು ಸುಮತಿ ಕೇಳಿದಳು.

"ಡೆಲ್ಲಿ ಏನು ಬೋರ್ ಆಗ್ಲಿಲ್ಲ. ಆದರೆ ಬಿಸಿಲು ಜಾಸ್ತಿ. ಸ್ವಲ್ಪ ಹೆಲ್ತ್‌ಗೆ ತೊಂದ್ರೆ ಆಯ್ತು.... ಅದಕ್ಕೇ ಬಂದೆ. ಅಷ್ಟೇ"

"ಅಲ್ಲಿ ನೀನಿಲ್ಲದೇ ನಿನ್ನ ಗಂಡನಿಗೆ ಬೋರ್ ಆಗುಲ್ವಾ? ಏನಾದ್ರೂ ಜಗಳ ಆಡ್ಕೊಂಡು ಬಂದಿದೀಯಾ ಹೇಗೆ?"

"ಜಗಳ ಆಡಿದ್ದಿದ್ರೆ, ಇಲ್ಲಿ ಅತ್ತೆ ಮನೇಲಿ ಇರ್ತಿದ್ನಾ? ಇನ್ನೊಂದೆರಡು ತಿಂಗಳು ಕಳೀಲಿ. ನಿಂಗೇ ಎಲ್ಲಾ ಗೊತ್ತಾಗುತ್ತೆ! ಅದಿರಲಿ, ನಿನ್ನ ಕೋರ್ಸ್ ಯಾವಾಗ ಮುಗಿಯುತ್ತೆ! ಕ್ಯಾಂಪಸ್ ಇಂಟರ್‌ವ್ಯೂ ಆಯ್ತಾ?"

"ಇನ್ನು ನಾಲ್ಕು ಸೆಮಿಸ್ಟರ್‌ಗಳಿವೆ... ಈ ಎಕ್ಸಾಮ್ ಆದ್ಮೇಲೆ, ಕ್ಯಾಂಪಸ್ ಇಂಟರ್‌ವ್ಯೂಗೆ ಕಂಪನಿಯವರು ಬರ್ತಾರೆ. ಕೆಲಸ ಸಿಗೋದಂತೂ ಗ್ಯಾರಂಟಿ.....ನಂಗೆ ಎಲ್ಲಿ ಕೆಲಸ ಸಿಗುತ್ತೋ ಅಲ್ಲಿಗೇ ಅಪ್ಪ ಅಮ್ಮನನ್ನು ಕರ್ಕೊಂಡು ಹೋಗ್ತೀನಿ...."

"ವೆರಿಗುಡ್. ಮದುವೆ ಯಾವಾಗ ಮಾಡ್ಕೋತೀಯಾ?"

"ಅದರ ಬಗ್ಗೆ ಯೋಚಿಸಿಲ್ಲ. ಮೊದಲು ಅಕ್ಕನ ಮದುವೆಯಾಗಲಿ"

"ನಿನ್ನಕ್ಕನ ಮದುವೆ ಗಣೇಶನ ಮದುವೆ ಥರ ಆಗಿದೆ... ಬೇಗ ಮದುವೆ ಮಾಡ್ಕೋ... ಲೈನ್ ಕ್ಲಿಯರ್ ಮಾಡು ಅಂತ ದಬಾಯಿಸಿ ನೀನಾದ್ರೂ ಹೇಳು ನಿನ್ನ ಅಕ್ಕನಿಗೆ"

"ನಂಗೆ ಅರ್ಜೆಂಟೇನಿಲ್ಲ.... ಆದ್ರೂ ನೀನು ಹೇಳ್ದೆ ಅಂತ ಹೇಳ್ತೀನಿ"

"ನಿನಗೆ ಫಾರಿನ್ನಿಗೆ ಹೋಗೋ ಆಸೆ ಇದ್ರೆ ಹೇಳು... ಅಂಥಾ ಹುಡುಗನನ್ನೇ ನೋಡಿದ್ರಾಯ್ತು"

"ಈ ಕಾಲದಲ್ಲಿ ಫಾರಿನ್ನಿನ ಹುಡುಗನ್ನ ಯಾರಾದ್ರೂ ಬೇಡ ಅಂತ ಅಂತಾರಾ?" ಸುಮತಿ ನಾಚಿದ್ದರೂ, ಸ್ಪಷ್ಟವಾಗಿ ಹೇಳಿದ್ದಳು.

"ಓ.ಕೆ ಅದಕ್ಕೆ ನಾಚ್ಕೆ ಯಾಕೆ? ನೀನೇ ವಾಸಿ ಕಣೇ ಚುಮ್ಮೀ... ನಿನ್ನ ಅಕ್ಕ ಇದುವರೆಗೂ ಬಾಯಿ ಬಿಟ್ಟು ತನಗೆ ಎಂಥಾ ಗಂಡು ಬೇಕೂಂತ ಹೇಳಿಲ್ಲ. ಹಿಂದೆ ನಡೆದಿದ್ದೆಲ್ಲಾ ನಿಂಗೇ ಗೊತ್ತಿರಬೇಕಲ್ಲ"

"ಮಹೇಶನ್ನ ಕೇಳ್ಬೇಕೂಂತ ಇದೀನಿ ಅಂತ ಅಮ್ಮ ಹೇಳ್ತಿದ್ಲು...." ಅನುಮಾನಿಸುತ್ತಾ ನುಡಿದಳು.

"ಮಹೇಶ್ ರೆಡಿ... ಆದರೆ ನಿಮ್ಮಕ್ಕನ ಮನಸ್ನಲ್ಲಿ ಏನಿದೆಯೋ?"

"ಮಹೇಶ್ ಬಂದ್ರೂಂತ ಕಾಣುತ್ತೆ. ಕಾರು ಬಂದ ಸದ್ದಾಯಿತು." ಇಬ್ಬರೂ

ಮಾತನ್ನು ನಿಲ್ಲಿಸಿದರು. ಹೊರ ಬಾಗಿಲಲ್ಲಿ ನಿಂತಿದ್ದ ದಿಲೀಪನೊಡನೆ ಮಾತನಾಡುತ್ತಾ ನಿಂತ ಮಹೇಶ್. ದೀಪಾ ಎದ್ದು ಬಂದಳು.

"ಒಬ್ರೇ ಬಂದ್ರಾ? ಸುಜೀ ಬರಲಿಲ್ವಾ?" ಕೇಳಿದಳು.

"ಕಾರಿನಲ್ಲಿ ಕೂತಿದಾರೆ... ಹೋಗಿ ಕರ್ಕೊಂಡು ಬನ್ನಿ..."

"ಯಾಕೆ? ಮದುಮಗಳಿಗೆ ನಾಚಿಕೇನಾ?"

"ಅಮ್ಮ ಎಲ್ಲಿ?"

"ಮಲಗಿದಾರೆ ಅಂತ ಕಾಣಿಸುತ್ತೆ. ಮಲಗಿರಲಿ ಬಿಡಿ. ಎಬ್ಬಿಸ್ಬೇಡಿ. ಹೋಗೋ ದಿಲೀಪ, ಸುಜಯನ ಕೈ ಹಿಡಿದು ಇಳಿಸಿ ನಡೆಸ್ಕೊಂಡು ಬಾರೋ..."

"ಯಾಕೆ? ಏನಾಗಿದೆ ಅವಳಿಗೆ?"

"ಏನೂ ಇಲ್ಲ. ಸ್ವಲ್ಪ ಬಿಗುಮಾನ... ಹೋಗೇ ಚುಮ್ಮಿ. ನೀನೂ ಇವನ ಜೊತೆ ಹೋಗು"

"ಸುಮತೀ... ಯಾವಾಗ ಬಂದ್ರೀ....? ಹೇಗಿದೀರಿ?"

"ಅವಳನ್ನು ನಿಧಾನವಾಗಿ ವಿಚಾರಿಸಿಕೊಳ್ಳೋರಂತೆ. ನೀವು ಸುಜಯನ್ನ ಅಬ್ಸರ್ವ್ ಮಾಡಿ.... ಅವಳ ಎದುರಿಗೆ ಬರಬೇಡಿ" ದೀಪಾ, ಮಹೇಶ ಒಳಗೇ ಉಳಿದರು. ದಿಲೀಪನಾಗಲೇ ಕಾರಿನ ಬಳಿಗೆ ಹೋಗಿದ್ದ. ಮುಂಬಾಗಿಲಿನಲ್ಲಿ ನಿಂತಿದ್ದ ತಂಗಿಯನ್ನು ಸುಜಯಾ ನೋಡಿದಳು.

"ಇಲ್ಲೇನೇ ಮಾಡ್ತಿದೀಯಾ! ಯಾವಾಗ ಬಂದೆ?"

"ನೀನ್ಯಾಕೇ ಇಲ್ಲಿಗೆ ಬರ್ತಿದೀಯಾ! ಎಲ್ಲಿಂದ ಬರ್ತಿದೀಯಾ?"

"ದೀಪ ಫೋನು ಮಾಡಿದ್ಲು... ಅವಳನ್ನು ನೋಡೋಣಾಂತ ಬಂದೆ"

ಅಕ್ಕ ತಂಗಿಯರಿಬ್ಬರೂ ಮಾತನಾಡಿಕೊಳ್ಳುತ್ತಾ ಒಳ ಬಂದರು. ಸುಜಯ ಆ ಕಡೆ ಈ ಕಡೆ ನೋಡದೇ ಸೀದಾ ಒಳ ಬಂದಳು. ದೀಪಳನ್ನು ಕಂಡು ಮುಗುಳ್ನಕ್ಕಳು.

"ಏನೇ, ಏನು ವಿಷಯ? ನನ್ನನ್ನ ಕರ್ಕೊಂಡು ಬಾ ಅಂತ ಲಕ್ಷ್ಮಣನ್ನ ಕಳಿಸಿದ್ಯಲ್ಲ. ಯಾಕೆ?" ಅವಳ ನಗುವಿನಲ್ಲಿ ಏನೋ ಹೊಸತನವಿದೆ ಎಂದೆನಿಸಿತ್ತು.

"ಹೌದು ಎಲ್ರೂ ಹೇಳೋದು ಖಂಡಿತಾ ನಿಜ. ಈ ಸುಜೀ ಬ್ಯೂಟಿ ಬೇರೆ ಯಾರಿಗೂ ಇಲ್ಲ. ಸ್ವಲ್ಪ ಅಹಂಭಾವ ಆದ್ರೂ ದಿನೇಶನ್ನ ನಂಗೆ ಬಿಟ್ಟು ಕೊಟ್ಟಿದಾಳಲ್ಲ.... ಅದಕ್ಕೆ ಥ್ಯಾಂಕ್ಸ್ ಹೇಳಬೇಕು" ಎಂದುಕೊಂಡು,

"ಬಾರೇ ಕೂತ್ಕೋ ಬಾ.... ಊಟ ಮಾಡ್ತಿಯೇನೇ... ಅತ್ತೆ ತುಂಬಾ ಚೆನ್ನಾಗಿ ಅಡುಗೆ ಮಾಡ್ತಾರೆ...." ಅಂತಂದಳು. ಸುಜಯ ಬಂದು ಅವಳ ಎದುರಿಗೇ ಕುಳಿತಳು.

"ಬೇಡಮ್ಮಾ. ನಾವಿಬ್ಬರೂ ಆಶ್ರಮದಲ್ಲಿ ಊಟ ಮಾಡಿದ್ದಾಯ್ತು...."

"ಓ.... ಮಹೇಶಂಗೂ ಊಟ ಹಾಕ್ಸಿದ್ಯಾ? ಅತ್ತೆಗೆ ಗೊತ್ತಾಗಲೀ ತಡೀ...."

"ಗೊತ್ತಾಗ್ಲಿ ಬಿಡು. ಅವರೇ ಆಶ್ರಮಕ್ಕೆ ಬಂದದ್ದು.... ನಾನೇನು ಕರೆದಿರಲಿಲ್ಲ"

"ನೀನ್ಯಾಕೆ ಅಲ್ಲಿ ಹೋಗಿ ಕೂತ್ಕೋಬೇಕಾಗಿತ್ತು. ಪಾಪ, ನಮ್ಮ ಹುಡುಗಂಗೆ ಎಷ್ಟು ತೊಂದರೆ ಆಗ್ತಿದೆ ಗೊತ್ತಾ?" ಮುದ್ದಾಗಿ ನುಡಿದಳು.

"ಅವರೇ ಕಾರಣ, ನಾನು ಅಲ್ಲಿಗೆ ಹೋಗೋಕೆ...." ಎನ್ನುತ್ತಾ ಗೋಡೆಯ ಕಡೆ ನೋಡಿದವಳು, ಹಾಗೇ ಪಿಳಿ ಪಿಳಿ ನೋಡುತ್ತಾ ಸುಮ್ಮನಾಗಿಬಿಟ್ಟಳು.

"ಏನೇ ಏನಾಯ್ತೇ ಸುಜೀ... ಇದ್ದಕ್ಕಿದ್ದ ಹಾಗೇ... ನೀನು ಬಹಳ ಹೆದರ್ಸಿತ್ತೀಯಮ್ಮಾ.... ಏನೇನೋ ಮುಖ ಮಾಡ್ತೀಯ."

"ಏನಿಲ್ಲ.... ಇಲ್ಲಿ ಒಂದು ಫೋಟೋ ಇತ್ತಲ್ಲ, ಕಾಣ್ತಿಲ್ಲವಲ್ಲ.... " ಗೊಂದಲದಿಂದ ಕೇಳಿದಳು.

"ಹೋಗ್ಲಿ ಬಿಡು. ಅದನ್ನು ಕಟ್ಕೊಂಡು ನಿನಗೇನಾಗ ಬೇಕಾಗಿದೆ? ಕೇರಂ ಆಡೋಣ.... ಚುಮ್ಮೀ ಆ ಬೋರ್ಡ್, ಪಾನ್ಸ್ ಇದೆ ತಗೊಂಡು ಬಂದು ಸೆಟ್ ಮಾಡೇ ಪ್ಲೀಸ್..." ಸುಮತಿ ಎದ್ದು ಹೋದಳು. ದಿಲೀಪ ಅವಳಿಗೆ ಸಹಾಯ ಮಾಡಿದ. ಮಹೇಶನೂ ಅಲ್ಲಿ ಬಂದು ಕುಳಿತ.

"ನೀವೂ ಬರ್ತೀರಾ ಮಹೇಶ್...."

"ಇಲ್ಲ. ನಂಗೆ ಮೂಡ್ ಇಲ್ಲ"

"ಮೂಡ್ ಸರಿ ಹೋಗುತ್ತೆ ಬನ್ನಿ ಮಹೇಶ್.... ಸುಜೀ ನಿಮ್ಮ ಪಾರ್ಟನರ್ ಆಗ್ತಾಳೆ"

"ನೀವುಗಳು ಆಡಿ. ನಾನು ನೋಡ್ತೀನಿ" ಅವರೆಲ್ಲ ಆಟವನ್ನು ಪ್ರಾರಂಭಿಸಿದರು. ಕಟ್ ಕಟ್, ಸದ್ದಿಗೆ ವನಜಮ್ಮನಿಗೆ ಎಚ್ಚರವಾಗಿತ್ತು. ಆಕಳಿಸುತ್ತಾ ಎದ್ದು ಬಂದು ನೋಡಿದಳು. ಸುಜಯಳನ್ನು ಕಂಡು ಅವಳ ಹುಬ್ಬುಗಳು ಗಂಟಿಕ್ಕಿದವು. ಹಾಗೇ ಸೋಫಾದ ಮೇಲೆ ಕುಳಿತಿದ್ದ ಮಹೇಶನನ್ನು ಕಂಡಳು. ಅಲ್ಲೇ ನಿಂತು ಆಟವನ್ನು ನೋಡುವ ಮನಸ್ಸಿರಲಿಲ್ಲ. ಅಡುಗೆ ಮನೆಯ ಕಡೆಗೆ ಹೋದಳು. ಮಹೇಶನ ಹತ್ತಿರ ಬಿಡುವಾಗಿ ಮಾತಾಡುವಂತೆಯೂ ಇಲ್ಲ. ಇವರುಗಳೆಲ್ಲ ಯಾವಾಗ ಹೋಗ್ತಾರೋ.... ಆದಷ್ಟು ಬೇಗ ಕಾಫಿ ಕೊಡ್ತೀನಿ.... ಅವರೆಲ್ಲ ಬೇಗ ಹೋಗ ಬಹುದು ಎಂದುಕೊಂಡು ಕಾಫಿ ರೆಡಿ ಮಾಡಿದಳು. ಎಲ್ಲರೂ ಆಟವನ್ನು ನಿಲ್ಲಿಸಿದರು. ಕಾಫಿಯನ್ನು ಕುಡಿದರು.

ಅವರುಗಳೆಲ್ಲ ಅತ್ತ ಹೋದ ಮೇಲೆ ಮಗನ ಬಳಿಗೆ ಬಂದು ನಿಂತಳು. " ಆ ಕವರ್ರು, ನಿನ್ನ ಕಾರ್ನಲ್ಲೇ ಇದೆಯಂತೆ.... ದೀಪ ಹೇಳಿದ್ಲು....."

"ಅತ್ಗೇ ಹಾಗಂತ ಹೇಳಿದ್ರಾ? ನಾನು ಅವರಿಗೇ ಕೊಟ್ಟ ನೆನಪು...."

"ಇಬ್ರೂ ಸೇರಿ ಏನೋ ಮುಚ್ಚಿಡ್ತಾ ಇದೀರಾ? ನೀವಿಬ್ರೂ ಒಂದು.... ಅದೇನದು?"

"ನೀನೂ ಮುಚ್ಚಿಡ್ತಾ ಇದೀಯಲ್ಲಮ್ಮ, ಕೇಳಿದ್ರೆ ಹೇಳ್ಲಿಲ್ಲ"

"ಹೇಳ್ಲಿಲ್ಲ ಸರಿ. ಸಮಯ ಬಂದಾಗ ಹೇಳ್ತೀನಿ... ನೀನೂ ಯಾಕೆ ಸತಾಯಿಸ್ತೀಯಾ. ನಿನಗೆ ನನ್ನ ಮೇಲೆ ಏನೋ ಕೋಪ...."

"ಕೋಪ ಏನಿಲ್ಲ ಬಿಡಮ್ಮಾ. ನನ್ನ ಚಿಂತೆಯೇ ನನಗೆ ಬೇಕಾದಷ್ಟು ಇರುತ್ತೆ. ಆ ಕವರ್ರು ನನ್ಹತ್ರ ಇಲ್ಲ.... ಅತ್ಗೆ ಏನು ಮಾಡಿದ್ರೋ ನಂಗೆ ಗೊತ್ತಿಲ್ಲ. ಸಿಕ್ಕ ಕೂಡ್ಲೇ ಕೊಡ್ತೀನಿ. ಸರೀನಾ?" ವನಜಮ್ಮ ಮತ್ತೆ ಮಾತನ್ನು ಬೆಳೆಸಲಿಲ್ಲ.

* * *

"ಅಂತೂ ಇಬ್ರೂ ಸೇರಿ ಆ ಫೋಟೋಗಳನ್ನು ಕಳೆದು ಹಾಕಿಬಿಟ್ರು....ಮಹೇಶನ ವಿಧಿಯಲ್ಲಿ ಶ್ರೀಮಂತನಾಗುವ ಅವಕಾಶವಿಲ್ಲವೇನೋ.... ಹೆಚ್ಚು ಓದಲಿಲ್ಲ. ಒಳ್ಳೆಯ ಕೆಲಸದಲ್ಲಿಲ್ಲ. ಮೇಲು ಸಂಪಾದನೆ ಮಾಡುವ ಸ್ವಭಾವದವನಲ್ಲ. ಶ್ರೀಮಂತರ ಮನೆಯ ಅಳಿಯಾನಾದ್ರೂ ಆದರೆ... ಆ ಆಸೆಯೇ ಇಲ್ಲ ಇದಕ್ಕೆ. ಸುಜಯನ್ನ ಕಟ್ಟಿ ಕೊಂಡರೆ ಏನು ಸಿಗುತ್ತೆ? ಪ್ರೈಮರಿ ಸ್ಕೂಲಿನ ಟೀಚರ್‌ಗೆ ಎಷ್ಟು ಸಂಬಳ ಬಂದೀತು! ಅಷ್ಟಾದರೂ ತಿಳೀಬೇಡ್ವೇ ಇವನಿಗೆ? ಅವಳು ಎಲ್ಲಿ ಹೋದ್ರೆ ಅಲ್ಲಿಗೇ ಹುಡುಕಿಕೊಂಡು ಹೋಗಿ ಅಲೀತಾನೆ.... ಸುಜಯಳ ತಂಗಿ ಸುಮತಿ, ಇನ್ನೆರಡು ವರ್ಷಕ್ಕೆ ಇಂಜನಿಯರ್ರು ಆಗ್ತಾಳೆ. ಈ ಕಾಲದಲ್ಲಿ ಇಂಜನಿಯರ್ರು ಅಂತಾದ್ರೆ ಚಿನ್ನದ ಮೊಟ್ಟೆಯನ್ನಿಡುವ ಕೋಳಿ ಇದ್ದ ಹಾಗೆ.... ದಿಲೀಪ ಅವಳ ಮೇಲೆ ಕಣ್ಣು ಹಾಕಿರಬಹುದು. ನಮ್ಮ ಮಹೀಗೆ ಇಂಥ ಸೂಕ್ಷ್ಮಗಳೆಲ್ಲ ತಿಳಿಯುವುದೇ ಇಲ್ಲ. ಹೆಂಡತಿ ರೂಪವತಿ ಆಗಿದ್ರೆ ಸಾಕೇ.... ಜೊತೆಗೆ ಧನಕನಕ ಎಲ್ಲ ತರುವಂಥ ಲಕ್ಷ್ಮಿ ಆಗಿರಬೇಕು. ದೀಪಾ ಆದರೆ ಒಬ್ಬಳೇ ಮಗಳು. ಅವರು ಬೇಕಾದಷ್ಟು ಒಡವೆಗಳನ್ನು ಕೊಟ್ರು... ವಜ್ರದ ಓಲೆ, ನೆಕ್ಲೆಸ್ ಗಳ ಸೆಟ್ಟು, ಭಾರೀ ಭಾರೀ ಸೀರೆಗಳು ಎಲ್ಲಾಸಿಗ್ತು.... ಅದಕ್ಕೆ ತಕ್ಕ ಹಾಗೇ ದಿನೇಶನೂ ಶ್ರೀಮಂತನೇ. ಈ ಮನೆ, ಕಾರು, ಎಲ್ಲಾ ಅವನದೇ... ಮಹೇಶನಿಗೆ ಅಂತ ಏನೂ ಇಲ್ಲ. ಲೀಲನ್ನ ಮದುವೆ ಆಗಿದ್ದಿದ್ರೆ, ಬೇಕಾದ ಹಾಗೆ ಇರಬಹುದಾಗಿತ್ತು. ಅವಳು ಡೈವೋರ್ಸಿ ಎನ್ನುವ ಕುಂದು ಒಂದನ್ನು ಬಿಟ್ಟರೆ ಬೇರೆ ಯಾವುದರಲ್ಲೂ ಕಡಿಮೆ ಇಲ್ಲ.... ಆದರೆ ಇವೆಲ್ಲ ಗೊತ್ತಿದ್ದೂ ಗೊತ್ತಿದ್ದೂ ಮಹೇಶನಿಗೆ ಆ ಹುಡುಗಿಯನ್ನು ತಂದು ಕೊಳ್ಳಲು ನನ್ನ ಮನಸ್ಸು ಒಪ್ಪುತ್ತಿಲ್ಲ. ಆದರೂ ಈ ಸುಜಯನ್ನ ಸೊಸೆ ಎಂದು ಒಪ್ಪಿಕೊಳ್ಳಲು ನನ್ನ ಮನಸ್ಸು ಒಡಂಬಡುತ್ತಿಲ್ಲ.... ಅವನು ಮದುವೆ ಯಾಗದೇ ಹಾಗೇ ಇದ್ದರೂ, ಸರಿ.... ಬೇಡ ಬೇಡ... ಇವನೂ ಹೋಗಿ ಆ ಆಶ್ರಮದಲ್ಲೇ ಯಾವುದಾದರೂ ಕೆಲಸಕ್ಕೆ ಸೇರಿಕೊಂಡು ಬಿಟ್ಟರೇ!.... ಎಂಥಾ ಅವಮಾನ! ಮಗನೂ ನನ್ನಿಂದ ದೂರವಾಗಿ ಹೋಗುತ್ತಾನೆ.... ಆಗ ನನಗೇ ಎಲ್ಲರೂ ಸೇರಿ ತಿಳುವಳಿಕೆ ಹೇಳುತ್ತಾರೆ..... ಹಾಗಾಗಬಾರದು. ಆ ಫೋಟೋಗಳು ಸಿಕ್ಕಿಬಿಟ್ಟಿದ್ದರೇ.... ಇದ್ದಕ್ಕಿದ್ದಂತೆ ವನಜಮ್ಮನ ಮನಸ್ಸಿನಲ್ಲಿ ಒಂದು ಆಲೋಚನೆ ಹೊಳೆಯಿತು. ಸುಜಯ ಇವರಿಬ್ಬರ ಜೊತೆ ಓಡಾಡುತ್ತಿರುತ್ತಾಳೆ. ಅವಳ ಕೈಗೆ ಈ

ಫೋಟೋಗಳನ್ನು ಕೊಟ್ಟಿರಬಹುದೇ.... ಅವಳನ್ನು ಕೇಳಿದರೇ.... ಛೇ.... ನಾನ್ಯಾಕೆ ಹೀಗೆಲ್ಲಾ ಯೋಚಿಸಬೇಕು! ಸುಜಯನ್ನ ಕಂಡರೆ ನನಗೆ ಅಷ್ಟಕಷ್ಟೇ. ಮಗ ಅವಳನ್ನು ಮೆಚ್ಚಿದ್ದಾನೆ ಅಂತ ತಿಳಿದರೂ ನನಗೆ ಅವಳ ಮೇಲಿನ ಅಸಹನೆ ಕಡಿಮೆ ಆಗಿಲ್ಲ. ಅವಳು ಯಾವುದೇ ರೀತಿಯಲ್ಲೂ ಮಹೇಶನಿಗೆ ತಕ್ಕವಳಲ್ಲ ಎಂದೇ ಅನ್ನಿಸುತ್ತಿದೆ. ಈಗ ನಾನು ನಾನಾಗಿಯೇ ಅವಳನ್ನು ಕೇಳುವುದು ಹೇಗೆ? ಈ ವಿಷಯದಲ್ಲಿ ದೀಪ, ಮಹೇಶ್ ಯಾರೂ ನನಗೆ ಸಹಾಯ ಮಾಡುವುದಿಲ್ಲ. ವಿವೇಕನ ಕೈಲಿ ಹೇಳಿಸಿದರೇ....ಬೇಡ, ಅವನಿಗೂ ಎಲ್ಲ ವಿಷಯ ತಿಳಿದುಬಿಡುತ್ತದೆ. ಆದರೆ, ಯಾಕೋ ಏನೋ ಸುಜಯಳಿಗೆ ಆ ಫೋಟೋ ಬಗ್ಗೆ ತಿಳಿದಿರಬಹುದು ಎಂಬ ಅನುಮಾನ ವನಜಮ್ಮನನ್ನು ಕೊರೆಯತೊಡಗಿತು. ಯೋಚಿಸಿ ಯೋಚಿಸಿ ಕಡೆಗೆ ಒಂದು ನಿರ್ಧಾರಕ್ಕೆ ಬಂದಳು.

* * *

"ನಿಮ್ಮನ್ನು ಹುಡುಕಿಕೊಂಡು ಯಾರೋ ಬಂದಿದಾರೆ. ಅವರನ್ನು ಗೆಸ್ಟ್ ಹೌಸ್‌ನಲ್ಲಿ ಕೂರಿಸಿದ್ದಾರೆ" ಕೆಲಸದವಳು ಬಂದು ಹೇಳಿದಾಗ, ಸುಜಯ ಕೇಳಿದಳು.

"ಯಾರು? ಗಂಡಸೋ? ಹೆಂಗಸೋ, ಚಿಕ್ಕವರೋ, ದೊಡ್ಡವರೋ...?"

"ಹೆಂಗಸ್ರು.... ನೀವೇ ನೋಡ್ಬನ್ನಿ" ಅವಳು ಹೊರಟು ಹೋಗಿದ್ದಳು.

"ಅಮ್ಮನೇ, ಅತ್ತೆಯೇ...." ಶಂಕಿಸುತ್ತಾ ಸುಜಯ ಬಂದಳು. ವನಜಮ್ಮನನ್ನು ಕಂಡು ಹಾಗೇ ನಿಂತಳು. ವನಜಮ್ಮ ಬಲ ವಂತದ ನಗೆಯನ್ನು ನಕ್ಕಳು.

"ಹೇಗಿದೀಯಾ ಸುಜಯಾ! ಅವಳು ಕಕ್ಕಾಬಿಕ್ಕಿ. ತನ್ನನ್ನು ಅಸಮಾಧಾನದಿಂದ ನೋಡುವ ಹೆಂಗಸು, ಇಲ್ಲಿ ತನ್ನ ಎದುರಿನಲ್ಲಿ ಸಜ್ಜನಿಕೆಯ ಮಾತು ಬೇರೆ.... ಕಾರಣ ಏನಿರಬಹುದು? ತಾನು ಮಹೇಶನಿಂದ ದೂರ ಇರಲಿ ಅಂತ ಹೇಳೋದಿಕ್ಕೆ ಬಂದಿರಬಹುದೇ.... ನಾನು ದೂರ ಬಂದರೂ, ಇವರ ಮಗನೇ ತನ್ನ ಬಳಿಗೆ ಬರ್ತಾ ಇರೋದು... ಅದಕ್ಕೆ ನಾನೇನು ಮಾಡಲಿ? ಎಂದುಕೊಂಡು "ಕೂತ್ಕೊಳ್ಳಿ" ಎಂದಳು.

"ನೀನೂ ಕೂತ್ಕೋ...." ಆದರದಿಂದ ಹೇಳಿದಾಗ, ಸುಜಯ ಮನದಲ್ಲೇ ನಕ್ಕಳು.

"ನಿನ್ನಿಂದ ನನಗೆ ಒಂದು ಕೆಲಸ ಆಗ್ಬೇಕು...." ಏನದು ಅಂತ ಅವಳು ಕೇಳಲಿಲ್ಲ.

ಆಕೆಯೇ ಮುಂದುವರೆಸಿದಳು, "ನಾನು ಇಲ್ಲಿಗೆ ಬಂದು ನಿನ್ನ ಹತ್ರ ಮಾತನಾಡಿದ ವಿಷಯ ದೀಪಂಗಾಗಲೀ, ಮಹೇಶಂಗಾಗಲೀ ತಿಳಿಯಬಾರದು...." ಮೊದಲಿಗೆ ಕಂಡೀಷನ್ ಹಾಕಿದಳು.

"ನಾನು ಯಾರಿಗೂ ಹೇಳೋಲ್ಲ"

ಅತ್ತಿತ್ತ ನೋಡುತ್ತಾ, ಅನುಮಾನವನ್ನು ಹರಿಸುತ್ತಾ ಕೇಳಿದಳು. "ಮಹೇಶ ಯಾವ್ದಾದ್ರೂ ಕವರ್ರನ್ನು ನಿನಗೆ ಕೊಟ್ಟಿದಾನಾ?"

"ಇಲ್ವಲ್ಲಾ.... ಎಂಥಾ ಕವರ್ರು.... ಯಾರದ್ದು? ನನಗ್ಯಾಕೆ ಕೊಡ್ತಾರೆ?"

"ಹೋಗ್ಲಿಬಿಡು. ಯಾವ್ದಾದ್ರೂ ಫೋಟೋಗಳ ಬಗ್ಗೆ ನಿನಗೇನಾದ್ರೂ ಹೇಳಿದಾನಾ?" ಇದ್ದಕ್ಕಿದ್ದಂತೆ ಸುಜಯಳ ಮುಖದ ಬಣ್ಣ ಬದಲಾಯಿಸಿತು... ಎದ್ದು ನಿಂತಳು.

"ಯಾವ ಫೋಟೋ.... ನಂಗೇನೂ ಗೊತ್ತಿಲ್ಲ" ಬೆನ್ನು ತಿರುಗಿಸಿ ನಿಂತಳು.

"ಗೊತ್ತಿಲ್ಲದಿದ್ರೆ ಬಿಡು. ಅದಕ್ಕೆ ಕೋಪ ಯಾಕೆ?"

"ಮತ್ತೆ? ನಿಮ್ಮ ಮನೆ ಯಾವುದೋ ಹಳೆಯ ಫೋಟೋ ವಿಷಯಾನ ನನ್ನನ್ನ ಕೇಳಿದ್ರೆ ನಾನು ಏನು ಹೇಳ್ಲೀ?"

"ಸರಿ, ಬಿಡು. ಮಹೇಶ, ದೀಪಾ ಇಬ್ಬರೂ ನಮ್ಮ ಹತ್ರ ಇಲ್ಲ. ಎಲ್ಲೋ ಕಳೆದು ಹೋಗಿದೆ ಅಂತಂದ್ರು, ನಿನಗೆ ಅದರ ಬಗ್ಗೆ ಏನಾದ್ರೂ ಗೊತ್ತಾ.... ಅಂತ ಕೇಳಿದೆ"

"ಗೊತ್ತು. ಆದರೆ ನಾನ್ಯಾಕೆ ಹೇಳ್ಬೇಕು? ಈಗ ಆ ಫೋಟೋ ಗೋಡೆ ಮೇಲೆ ಇಲ್ಲವಲ್ಲ... ನೀವೇ ತೆಗೆದಿಟ್ಟಿರಬಹುದು...."

"ಸುಜಯಾ, ನನ್ನ ಮಾತನ್ನು ನೀನು ಸರಿಯಾಗಿ ಅರ್ಥಮಾಡಿಕೊಳ್ಳುತ್ತಿಲ್ಲ. ಆ ದೊಡ್ಡ ಫೋಟೋ ಬಗ್ಗೆ ಕೇಳ್ತಿಲ್ಲ.... ಆ ಕವರಿನಲ್ಲಿದ್ದ ಫೋಟೋಗಳ ಬಗ್ಗೆ ಕೇಳಿದೆ"

"ಏನೋ ನಂಗೊತ್ತಿಲ್ಲ. ಮಹೇಶ ಏನಾದ್ರೂ ಹೇಳಿದಾರೋ ಇಲ್ಲವೋ ನನಗೆ ನೆನಪಿಲ್ಲ....."

"ನೆನಪು ಮಾಡ್ಕೋ ಸುಜಯಾ.... ನಿಧಾನವಾಗಿ ನೆನಪಿಸ್ಕೋ.... ಅವುಗಳು ಎಲ್ಲಿವೆ ಅಂತ ಗೊತ್ತಾದ್ರೇ ನಮ್ಮ ಮಹೇಶನ ಅದೃಷ್ಟ ಖುಲಾಯಿಸುತ್ತೆ.... ಅವನಿಗೆ ಒಳ್ಳೇದಾಗುತ್ತೆ."

"ಸದ್ಯಕ್ಕೆ ನನಗೆ ಏನೂ ನೆನಪಾಗ್ತಿಲ್ಲ. ಮಹೇಶಂಗೆ ಒಳ್ಳೇದಾಗೋದಿದ್ರೆ ನಾನು ಹೇಳ್ದೇ ಇರ್ತೀನಾ! ನೆನಪಿಗೆ ಬಂದ್ರೆ ನಿಮಗೆ ಫೋನು ಮಾಡಿ ತಿಳಿಸ್ತೀನಿ"

"ಸರಿ. ಅಷ್ಟು ಮಾಡಮ್ಮ.... ನಮ್ಮ ಮನೆ ನಂಬರ್ರಿಗೆ ಫೋನು ಮಾಡು. ಅವನ ಮೊಬೈಲ್‌ಗೆ ಮಾಡ್ಬೇಡ.... ನಾನು ಬಂದ ವಿಷಯವನ್ನು ಯಾರಿಗೂ ಹೇಳ್ಬೇಡಾ?" ಮತ್ತೊಮ್ಮೆ ಹೇಳಿದಳು.

"ಸರಿ ನಾನಿನ್ನು ಬರ್ಲಾ?" ಸುಜಯ ಎದ್ದಳು.

"ಸರಿ ಹೇಳಿದ್ದನ್ನು ಮರೀಬೇಡ..."

"ಆಯ್ತು." ಆಕೆ ಅಲ್ಲಿಯೇ ನಿಂತಿದ್ದಳು. ಸುಜಯ ಎದ್ದು ಹೋಗಿದ್ದಳು.

ಆಕೆ ಬಂದ ಉದ್ದೇಶ, ಅದರಿಂದ ಮಹೇಶನಿಗಾಗುವ ಲಾಭ... ಇದ್ಯಾವುದೂ ಸುಜಯಳಿಗೆ ಅರ್ಥವಾಗಲಿಲ್ಲ. "ಅದ್ಯಾವುದೊ ಹಳೆಯ ಫೋಟೋ, ತನಗೆ ಶಾಪವಾಗಿದೆಯೋ, ವರವಾಗಿದೆಯೋ ಒಟ್ನಲ್ಲಿ ತನ್ನ ಬೆನ್ನನ್ನು ಬಿಡುತ್ತಿಲ್ಲ... ಈ ವಿಷಯವನ್ನು ಮಹೇಶನಿಗೆ ಹೇಳಿದರೆ ಹೇಗೆ? ಬೇಡ, ಹೇಳುವುದಿಲ್ಲ ಅಂತ ಮಾತು ಕೊಟ್ಟಿದೀನಲ್ಲ...." ಆದರೆ ಆ ನಂತರ ಅವಳಿಂದ ಯಾವ ಕೆಲಸವನ್ನೂ ಮಾಡಲಾಗಿರಲಿಲ್ಲ. ಮನಸ್ಸು ಅಸ್ತವ್ಯಸ್ತಗೊಂಡಿತ್ತು.

ಸುಮತಿ ಫೋನು ಮಾಡಿದ್ದಳು. ಆದರೆ ಅವಳೊಡನೆ ಮಾತನಾಡುವ ಉತ್ಸಾಹವೂ ಇರಲಿಲ್ಲ.... ಸುಮ್ಮನೇ ಹಾ, ಹೂ... ಎಂದಷ್ಟೇ ಹೇಳಿ ಮಾತನ್ನು ಮುಗಿಸಿದಳು.

"ಮೇಡಂ ಬಂದಿದಾರೆ. ಕರೀತಿದಾರೆ. ಬರ್ಬೇಕಂತೆ" ಅಟೆಂಡರ್ ಬಂದು ಹೇಳಿದಾಗ ವಿಧಿ ಇಲ್ಲದೇ ಎದ್ದಳು.

ಲೀಲಳೊಡನೆ ವಿವೇಕನೂ ಇದ್ದ. ಅವನನ್ನು ಕಂಡು ಇವಳ ಮುಖ ಹುಳ್ಳಗಾಗಿತ್ತು. ಅವನನ್ನು ನೇರವಾಗಿ ನೋಡಲಾಗಿರಲಿಲ್ಲ.

"ವಿವೇಕ ನೀನು ಸ್ವಲ್ಪ ಹೊರಗೆ ಹೋಗು. ನಾನು ಸುಜಯನ ಹತ್ರ ಮಾತಾಡ್ಬೇಕು" ವಿವೇಕ, ವಿಧೇಯತೆಯಿಂದ ಎದ್ದು ಹೋದ. ಆದರೂ ಸುಜಯಳ ತಳಮಳ ಕಡಿಮೆ ಆಗಿರಲಿಲ್ಲ.

"ಮಹೇಶನ ತಾಯಿ ಇಲ್ಲಿಗೆ ಬಂದಿದ್ರಂತೆ... ಯಾಕೆ ಬಂದಿದ್ರು?"

"ನನ್ಹತ್ರ ಏನನ್ನೋ ಕೇಳೋಕ್ಕೆ ಅಂತ ಬಂದಿದ್ರು. ಯಾಕೆ ಮೇಡಂ....?"

"ಏನು ಕೇಳಿದ್ರು? ಅವರ ಜೊತೆ ನಮ್ಮ ಚಿಕ್ಕಮ್ಮನೂ ಇದ್ರಾ?"

"ಇಲ್ಲವಲ್ಲ. ಅವರೊಬ್ರೇ ಇದ್ರು.... ಮಹೇಶ ನನ್ನ ಕೈಲಿ ಅದ್ಯಾವುದೋ ಕವರ್ರು ಅಂತೆ.... ಅದನ್ನ ಕೊಟ್ಟಿದಾರಾ ಅಂತ ಕೇಳೋಕೆ ಬಂದಿದ್ರು, ಅದ್ಯಾವುದೋ ನಂಗೆ ಗೊತ್ತಿಲ್ಲ ಅಂತ ಹೇಳಿದೆ"

"ಅವರು ಮತ್ತೇನಾದ್ರೂ ಬಂದ್ರೆ ತಕ್ಷಣ ನಂಗೆ ಫೋನು ಮಾಡು...."

"ಆಗಲಿ" ಎಂದು ಸುಜಯ ತಲೆಯಾಡಿಸಿದಳು. ಲೀಲಾ ಅವಳನ್ನೇ ಸಂದೇಹದಿಂದ ನೋಡಿದಳು.

"ಕಾರಣ ಏನೂಂತ ಕೇಳುಲ್ವಾ ಸುಜಯಾ?"

"ನನಗೆ ಹೇಳಬಹುದಾದ ಕಾರಣ ಆಗಿದ್ದರೆ, ನೀವೇ ಹೇಳಿಬಿಡಿ ಮೇಡಂ"

"ಓ.ಕೇ.... ಹೇಳ್ತೀನಿ. ಆದರೆ ಸಧ್ಯಕ್ಕೆ ಈ ವಿಷಯ ನಮ್ಮ ನಮ್ಮಲ್ಲೇ ಇರಲಿ" ಎನ್ನುತ್ತಾ ವಿಷಯವನ್ನು ತಿಳಿಸಿದಳು....

"ಆಮೇಲೆ ಇನ್ನೊಂದು ವಿಷಯ, ನಿಮಗೊಬ್ಬರು ತಂಗಿ ಇದಾರೆ ಅಂತ ತಿಳೀತು.....ಏನು ಮಾಡ್ತಿದಾರೆ?" ಕೇಳಿದಳು.

"ಇಂಜನಿಯರಿಂಗ್ ಓದುತ್ತಿದ್ದಾಳೆ. ಇನ್ನೂ ಮುಗಿದಿಲ್ಲ" ಸುಜಯ ಆಶ್ಚರ್ಯವನ್ನು ವ್ಯಕ್ತಪಡಿಸಲಿಲ್ಲ. ಯಾಕೆ ಎಂದು ಕೇಳಲಿಲ್ಲ.

*            *            *

ಮಹೇಶ ಡಾಕ್ಟರ್ ಶಂಕರ್‌ಗೆ ಫೋನ್ ಮಾಡಿದ. ಸುಜಯ ತನಗೆ ಹೇಳಿದ್ದನ್ನು ತಿಳಿಸಿದ. "ಮೊದಲೇ ಅವಳ ಮನಃಸ್ಥಿತಿ ಸರಿಯಿಲ್ಲ. ಅವಳ ಮೇಲೆ ಯಾವ ಒತ್ತಡ ಬೀಳುತ್ತಿದೆ ಅಂತ ಅರ್ಥ ಆಗುತ್ತಿಲ್ಲ. ನೀವೇ ಅವಳಿಗೆ ಧೈರ್ಯ ಹೇಳಬೇಕು. ಅವಳಿಗೆ ತೊಂದರೆ ಆಗದಂತೆ ನೋಡಿಕೊಳ್ಳಬೇಕು" ಎಂದು ಕೇಳಿಕೊಂಡ.

"ನಾನು, ಸುಜಯಳ ಹತ್ರ ಮಾತನಾಡಿ ವಿಷಯ ಏನೂಂತ ತಿಳಿದುಕೊಳ್ತೀನಿ. ನೀವೇನೂ ಯೋಚನೆ ಮಾಡ್ಬೇಡಿ. ಹಾಗೇ ನಾನು ನಿಮ್ಮ ತಾಯಿ ಹತ್ರ ಮಾತಾಡ್ಬೇಕು. ನಾನು ಲಾಯರ್ ಜೊತೆ ನಿಮ್ಮ ಮನೆಗೆ ಬರ್ತೀನಿ" ಎಂತಂದಾಗ ಅವನಿಗೆ ಆಶ್ಚರ್ಯವಾಗಿತ್ತು.

"ನೀವು ಗಾಬರಿಯಾಗ್ಬೇಡಿ. ಆಗೋದೆಲ್ಲಾ ಒಳ್ಳೇದಕ್ಕೇ ಅಂತ ಹೇಳ್ತಾರೆ. ನಾನು ನಿಮ್ಮ ತಾಯಿಯ ಹತ್ರ ಮಾತಾಡಿದ್ರೆ ಎಷ್ಟೋ ಸಂದೇಹಗಳು ನಿವಾರಣೆ ಆಗಬಹುದು. ಆದರೆ, ನಾವುಗಳು ಬರುವ ವಿಷಯವನ್ನು ಅವರಿಗೆ ತಿಳಿಸಬೇಡಿ. ಸಧ್ಯಕ್ಕೆ ರಹಸ್ಯ ವಾಗಿರಲಿ" ಮಹೇಶ ಹೂಂ ಗುಟ್ಟಿದ. ಅದರೂ ಮನಸ್ಸು ಕೆಟ್ಟು ಹೋಗಿತ್ತು.

ದಿಲೀಪ ಹೇಳಿದ್ದು ನಿಜ. ಅಮ್ಮ ಯಾರೊಂದಿಗೋ ಅಲ್ಲಿಗೆ ಹೋಗಿದಾಳೆ. ಕೇಳಿದ್ರೆ ಸುಳ್ಳು ಹೇಳಿದಳು. ನನ್ಹತ್ರ ನಿಜ ಹೇಳಿದ್ದರೆ ಏನಾಗ್ತಿತ್ತು? ಅಮ್ಮ ಸುಜಯಂಗೆ ಏನಾದ್ರೂ ತೊಂದರೆ ಕೊಡಲು ಹೋಗಿರಬಹುದೇ... ಅಥವಾ... ಇನ್ನೇನಿರಬಹುದು? ಸುಜಯನ್ನ ಅಲ್ಲಿಂದ ತೆಗೆದು ಹಾಕುವಂತೆ ಕಮಿಟಿಯವರ ಹತ್ರ ಮಾತಾಡಿರ ಬಹುದೇ... ಯಾಕೋ ತಾಯಿಯ ಮೇಲೆ ಬೇಸರ, ಕೋಪ ಉಂಟಾಗಿತ್ತು. ಅವರುಗಳು ಬಂದು ಏನಾದ್ರೂ ಮಾತನ್ನಾಡಿಕೊಳ್ಳಲಿ ತಾನು ಆ ಮಾತಿಗೆ ಹೋಗುವು ದಿಲ್ಲ ಅಂತಂದುಕೊಂಡ.

ತಾಯಿಯೊಡನೆ ಯಾವ ಮಾತೂ ಬೇಡ ಎನಿಸಿತ್ತು. ಅಮ್ಮನ ಮುಖವನ್ನೂ ನೋಡಬಾರದೆಂದೆನಿಸಿತ್ತು. ತಾಯಿ ತನ್ನನ್ನು ಎಂದೂ ಹೆಚ್ಚು ಪ್ರೀತಿಸಿರಲಿಲ್ಲ. ಹೆಚ್ಚು ಪಾಲು ಪ್ರೀತಿಯೆಲ್ಲಾ ದಿನೇಶನ ಪಾಲಾಗಿತ್ತು. ದಿನೇಶನ ಓದು, ಉದ್ಯೋಗ ಇವುಗಳ ಬಗ್ಗೆ ಹೆಚ್ಚು ಗಮನವಿತ್ತು. ತಾನು ಓದಿನಲ್ಲಿ ಹೆಚ್ಚು ಆಸಕ್ತಿ ತೋರಿಸಲಿಲ್ಲ ಎಂಬ ನೆವ ಮಾಡಿಕೊಂಡು, ತನ್ನನ್ನು ಹೆಚ್ಚು ಓದಿಸಲಿಲ್ಲ. ಏನು ಕೆಲಸ ಮಾಡ್ತೀನಿ, ಎಷ್ಟು ಸಂಪಾದಿಸ್ತೀನಿ... ಎಷ್ಟು ಕಷ್ಟ ಪಡ್ತೀನಿ... ಅಂತ ಒಂದು ದಿನವೂ ವಿಚಾರಿಸಿಲ್ಲ. ತಾನು ಸುಜಯಳನ್ನು ಇಷ್ಟ ಪಟ್ಟಿದೀನಿ ಅಂತ ತಿಳಿದಿದ್ದೂ ಅವಳನ್ನು ತನ್ನಿಂದ ದೂರ ಮಾಡಲು ನೋಡುತ್ತಿದ್ದಾಳೆ... ಇದು ತಾಯಿ ತನಗೆ ಮಾಡುತ್ತಿರುವ ಅನ್ಯಾಯ... ಸುಜಯ ಅತ್ತಿಗೆಗಿಂತ ಚೆನ್ನಾಗಿದಾಳೆ... ಅದು ಇವಳಿಗೆ ಸಹಿಸುವುದಿಲ್ಲವೇ.....

ಸುಜಯಳ ತೊಂದರೆ ಏನು ಅಂತ ತಿಳಿದುಕೊಳ್ಳುವ ಪ್ರಯತ್ನವನ್ನೇ ಮಾಡದೇ, ತನ್ನ ದುರಭಿಮಾನವನ್ನೇ ಪ್ರದರ್ಶಿಸುತ್ತಿದಾಳಲ್ಲ..... ಇಂತಹ ತಾಯಿಯೊಂದಿಗೆ ಇರಲು ನನಗೂ ಇಷ್ಟವಿಲ್ಲ. ದಿನೇಶ ವಾಪಸ್ಸು ಬಂದ ಮೇಲೆ, ಅವನೇ ಅಮ್ಮನ ಜೊತೆ ಇರಲಿ. ನಾನು ಬೇರೆ ಯಾವುದಾದರೂ ಊರಿಗೆ ಹೊರಟು ಹೋಗ್ತೀನಿ." ಗೊಣಗಿಕೊಂಡ.

"ಯಾಕೋ ಮಹೇಶ ಹೀಗಿದೀಯ? ಯಾರ್ಹತ್ರ ಮಾತಾಡ್ತಿದ್ದೆ.... ?"

"ನಿಂಗ್ಯಾಕೆ?" ಅಸಹನೆಯಿಂದ ಕೇಳಿದ.

"ಹಾಗ್ಯಾಕೆ ಸಿಡುಕ್ತೀಯಾ? ಸುಜಯ ಫೋನು ಮಾಡಿದ್ಲಾ?"

"ಯಾಕೆ ಮಾಡ್ಬಾರ್ದು... ಹೌದು ಅವಳ ಹತ್ರಾನೇ ಮಾತಾಡ್ತಿದ್ದೆ"

"ಆಡು... ಬರೀ ಫೋನ್ನಲ್ಲೇ ಮಾತಾಡ್ಕೊಂಡು ಈ ಜನ್ಮವೆಲ್ಲಾ ಕಳೀರಿ.... ನಂಗೇನು?"

"ಸರಿ ಬಿಡಮ್ಮ. ನಮಗೆ ಹೇಗ್ಬೇಕೋ ಹಾಗೆ ನಾವಿರ್ತೀವಿ. ನಿನಗೇನೂ ತೊಂದರೆ ಇಲ್ಲವಲ್ಲ"

"ತೊಂದರೆ ಯಾಕಿಲ್ಲ! ನನ್ನ ಮಗನ್ನ ನನ್ನಿಂದ ದೂರ ಮಾಡ್ತಾ ಇರೋಳಿಂದ ನನಗೆ ತೊಂದರೆ ಅಲ್ಲದೆ ಇನ್ನೇನು?"

"ಅವಳನ್ನು ನನ್ನಿಂದ ದೂರ ಮಾಡ್ತಾ ಇರೋಳು ನೀನು.... ಈಗ ಜಗಳ ಬೇಡ.... ಯಾರೋ ಬಂದ್ರು... ನೋಡ್ತೀನಿ" ಮಹೇಶ ಹೋಗಿ ಬಾಗಿಲು ತೆಗೆದ. ಆಚೆ ಕಡೆ, ಡಾ. ಶಂಕರ್, ಹಾಗೂ ಲಾಯರ್ ಗೋಪಾಲ್ ನಿಂತಿದ್ದರು.

"ಬನ್ನಿ.... " ಒಳಗೆ ಕರೆದು ಕೂರಿಸಿದ. ಕಣ್ಣು ಕಿರಿದು ಮಾಡುತ್ತಿದ್ದ ತಾಯಿಯ ಕಡೆ ನೋಡಿದ.

"ಯಾರೋ ಗೊತ್ತಾಗ್ಲಿಲ್ಲ" ವನಜಮ್ಮ ವಿನಯವನ್ನು ನಟಿಸುತ್ತಾ ನುಡಿದಳು.

ಡಾ|| ಶಂಕರ್ ಕೈ ಮುಗಿದು ನಮಸ್ಕಾರ ಎಂದು ಹೇಳಿ ತಮ್ಮ ಪರಿಚಯವನ್ನು ಮಾಡಿಕೊಂಡ.

* * *

"ನಾನು ಡಾಕ್ಟರ್ ಶಂಕರ್, ಇವರು ಲಾಯರ್ ಗೋಪಾಲ್. ನಾವಿಬ್ರೂ ಸಂಧ್ಯಾಶ್ರಮದಿಂದ ಬಂದಿದೀವಿ. ನೀವು ವನಜಮ್ಮ ತಾನೇ...."

"ಹೌದು" ವನಜಮ್ಮನ ಮುಖ ಬೆಳ್ಳಗಾಗಿತ್ತು. ಭಯದಿಂದ ಮಹೇಶನ ಕಡೆ ನೋಡಿದಳು. ಅವನು ಗಮನಿಸದವನಂತೆ ಸುಮ್ಮನೆ ನಿಂತಿದ್ದ.

"ನಾವು ನಿಮ್ಹತ್ರ ಸ್ವಲ್ಪ ಪ್ರೈವೇಟಾಗಿ ಮಾತಾಡ್ಬೇಕು..."

"ನನ್ಹತ್ರಾನಾ! ಯಾಕೆ" ತೊದಲುತ್ತಾ ಕೇಳಿದಳು.

"ನೀವು ಆಶ್ರಮಕ್ಕೆ ಬಂದಿದ್ರಂತೆ.... ಸುಬ್ಬರಾಮಪ್ಪನವರು ನಮ್ಮನ್ನು ಕಳಿಸಿದ್ದಾರೆ.

ಕೆಲವು ಮುಖ್ಯವಾದ ವಿಷಯಗಳನ್ನು ಮಾತನಾಡಬೇಕು" ಮಹೇಶ ಈ ವಿಷಯ ತನಗೆ ಸಂಬಂಧಿಸಿದುದೇ ಅಲ್ಲವೆನ್ನುವಂತೆ ನಿಂತಿದ್ದ. ವನಜಮ್ಮ ಒಳಸರಿದು, ಸಂಜ್ಞೆಯಲ್ಲಿ ಮಹೇಶನನ್ನು ಕರೆದಳು. ಅವನು ಸಿಡುಕುತ್ತಾ ಒಳ ಬಂದ.

"ನಾನು ಅವರ ಹತ್ರ ಮಾತನಾಡೋಲ್ಲ. ಅವರುಗಳನ್ನು ಕಳಿಸಿಬಿಡು"

"ನಾನು ಹೇಳೋಲ್ಲ. ನೀನೇ ಹೇಳು. ನೀನು ಆಶ್ರಮಕ್ಕೆ ಯಾಕೆ ಹೋಗಿದ್ದೆ ಅಂತ ನಂಗೇನಾದ್ರೂ ಹೇಳಿದ್ಯಾ, ಈಗ ಏನಾದ್ರೂ ಮಾಡ್ಕೋ...."

"ನೀನೆಂಥಾ ಮಗನೋ? ಇಂಥಾ ಸಮಯದಲ್ಲಿ ಹೀಗೆ ಮಾತಾಡ್ತೀಯಾ...."

"ನಾನೆಂಥಾ ಮಗ ಅಂತ ನಿಂಗೇ ಚೆನ್ನಾಗಿ ಗೊತ್ತು. ಬೆಳೆಸಿರೋಳು ನೀನೇ. ಅವರು ಏನು ಕೇಳ್ತಾರೋ ಅದಕ್ಕೆ ಉತ್ತರ ಹೇಳು. ಅವರು ಹೋಗ್ತಾರೆ. ನಾವು ಹೋಗಿ ಅಂತ ಹೇಳೋದು ಅಷ್ಟು ಚೆನ್ನಾಗಿರೋಲ್ಲ" ಅನಿಸಿದ್ದನ್ನೂ ಹೇಳಿದ.

"ನನಗ್ಯಾಕೋ ಭಯ ಆಗುತ್ತೆ ಕಣೋ ಮಹೀ..."

"ಭಯ ಯಾಕೆ? ಅವರೂ ಮನುಷ್ಯರೇ... ಚಂದಾ ಕೇಳೋಕೆ ಬಂದಿರಬಹುದು. ಅಥವಾ ವೃದ್ಧಾಶ್ರಮಕ್ಕೆ ಸೇರ್ಕೊಳ್ಳಿ ಅಂತ ಹೇಳೋಕೆ ಬಂದಿರಬಹುದು. ಮಾತಾಡಿದ್ರೆ ತಾನೇ ವಿಷಯ ಗೊತ್ತಾಗೋದು. ಸುಮ್ಮನೆ ಹೋಗು..." ಸಿಡುಕಿದ.

"ಸರಿ. ಹಾಗಾದ್ರೆ ನೀನೂ ಬಾ.... ದೀಪಂಗೆ ಫೋನು ಮಾಡ್ಲಾ?"

"ಯಾರೂ ಬೇಡ.... ನೀನು ಅವರ ಹತ್ರ ಮಾತಾಡ್ತಾ ಇರು... ನಾನು ಕಾಫಿ ಮಾಡ್ಕೊಂಡು ಬರ್ತೀನಿ"

"ಬೇಡ, ನೀನು ಮಾತಾಡ್ತಾ ಇರು, ನಾನು ಕಾಫಿ ಮಾಡ್ಕೊಂಡು ಬರ್ತೀನಿ" ಮಹೇಶ ಮನದಲ್ಲೇ ನಗುತ್ತಾ ಹೊರ ಬಂದ. ಡಾಕ್ಟರು ಅರ್ಥವಾದವರಂತೆ ಮುಗುಳ್ನಕ್ಕರು. ಲಾಯರ್ರು ಕುಳಿತಲ್ಲಿಂದಲೇ ಮನೆಯನ್ನು ನೋಡಿ ಅಳೆಯುತ್ತಿದ್ದರು. ವನಜಮ್ಮ ಕಾಫಿಯನ್ನು ತಂದಿತ್ತಳು.

"ಬಿಸಿಲು ಹೊತ್ತು. ಕಾಫಿ ಬೇಕಿರಲಿಲ್ಲ." ಎಂದರು ಲಾಯರ್ರು.

"ಹಾಗಾದ್ರೆ ಬೇಗ ಜ್ಯೂಸ್ ಮಾಡ್ಕೊಂಡು ಬರ್ತೀನಿ."

"ಬೇಡಿ ತಾಯೀ... ನೀವು ಕೂತ್ಕೊಳ್ಳಿ. ನಾವು ನಿಮ್ಮ ಹತ್ರ ಮಾತಾಡ್ಬೇಕು ಅಂತ ಬಂದದ್ದು... ಮನೇಲಿ ಇನ್ಯಾರಿದ್ದಾರೆ?"

"ಸದ್ಯಕ್ಕೆ ಯಾರೂ ಇಲ್ಲ. ನಾನು, ನನ್ನ ಮಗ ಮಹೇಶ ಇಬ್ಬರೇ. ನನ್ನ ಸೊಸೆ ದೀಪಾ ತವರು ಮನೇಲಿದಾಳೆ"

"ಅಂದ್ರೆ, ನಿಮ್ಮ ಈ ಮಗನಿಗೆ ಮದುವೆ ಆಗಿದೆ ಅನ್ನಿ"

"ಇಲ್ಲ. ಇವನು ನನ್ನ ಕಿರಿ ಮಗ; ಅವಳು ನನ್ನ ಹಿರಿ ಸೊಸೆ"

"ನಿಮ್ಮ ಹಿರಿ ಮಗ ಏನು ಮಾಡ್ತಾರೆ?"

"ಅವನು.... ಇಂಜಿನಿಯರ್.... ಡೆಲ್ಲಿಲಿದಾನೆ...."

"ನಿಮಗೆ ಇಬ್ಬರೇ ಮಕ್ಕಳು. ನಿಮ್ಮ ಯಜಮಾನರು ಏನ್ಮಾಡ್ತಿದ್ರು?"

"ಅವರು ಸ್ಕೂಲು ಟೀಚರ್ ಆಗಿದ್ರು...."

"ಅವರ ಹೆಸರು....?"

"ರಾಮಚಂದ್ರ ರಾವ್ ಅಂತ...." ಮಹೇಶ ಗೋಡೆಗೊರಗಿ ನಿಂತು, ತಾಯಿಯನ್ನೇ ನೋಡುತ್ತಿದ್ದ. ಗಲಿಬಿಲಿ ಅವಳ ಮುಖದಲ್ಲಿ ಎದ್ದು ಕಾಣುತ್ತಿತ್ತು.

"ನಾವು ಕೆಲವು ಪರ್ಸನಲ್ ವಿಷಯಗಳನ್ನು ಕೇಳಬೇಕು... ನಿಮಗೆ ಗೊತ್ತಿರುವಷ್ಟನ್ನು ಹೇಳಿ ಪರವಾಗಿಲ್ಲ. ಆತಂಕ ಪಟ್ಕೋಬೇಡಿ...."

"ನಮ್ಮ ಪರ್ಸನಲ್ ವಿಷಯದಿಂದ ನಿಮಗೆ ಆಗಬೇಕಾದ್ದೇನು? ನನಗೂ ನಿಮ್ಮ ಆಶ್ರಮಕ್ಕೂ ಯಾವ ಸಂಬಂಧವಿಲ್ಲ"

"ಹಾಗಾದ್ರೆ ಆಶ್ರಮಕ್ಕೆ ಯಾಕೆ ಬಂದ್ರಿ?" ಮಹೇಶನ ಕಡೆ ನೋಡಿದಳು. ಅವನು ಎತ್ತಲೋ ನೋಡುತ್ತಿದ್ದ.

"ಸುಜಯ ಅಂತ ಟೀಚರ್ ಇದಾಳಲ್ಲ. ಅವಳನ್ನು ನೋಡೋಕೆ ಅಂತ ಬಂದಿದ್ದೆ"

"ಅವಳು ನಿಮಗೇನಾಗಬೇಕು?"

"ಅವಳು ನನಗೆ ಏನೂ ಆಗಬೇಕಾಗಿಲ್ಲ. ಏನೋ ಕೇಳೋದಿತ್ತು... ಅದಕ್ಕೇ ಬಂದಿದ್ದೆ"

"ಅಷ್ಟೇನಾ? ಅದಕ್ಕೆ ಮುಂಚೆ ಬಂದಿದ್ದು! ಲಾಯರ್‍ರು ಕೇಳಿದ.

"ಸಾವಿತ್ರಮ್ಮ ನನ್ನನ್ನು ಕರ್ಕೊಂಡು ಹೋಗಿದ್ರು.... ಸುಮ್ಮನೇ ಹೋಗಿದ್ದೆವು"

"ನೀವು ನಿಜಾನ ಮುಚ್ಚಿಡ್ತಾ ಇದೀರಿ ತಾಯಿ. ಈಗ ನಿಜ ಹೇಳಿದರೆ ಅದರಿಂದ ನಿಮಗೇ ಲಾಭ." ಲಾಯರ್‍ರು ಹೇಳಿದ.

"ಅಂದರೇ.... ನಾನ್ಯಾಕೆ ಸುಳ್ಳು ಹೇಳಲಿ....?"

"ನೀವು ಸುಳ್ಳು ಹೇಳ್ತಿದೀರಿ ಅಂತ ನಿಮಗೂ ಗೊತ್ತು. ಜೊತೆಗೆ ನಮಗೂ ಗೊತ್ತು. ನಿಮ್ಮ ಮಗನ ಎದುರಿಗೆ ನಿಜ ಹೇಳಲು ನಿಮಗೆ ಮುಜುಗರವಾಗೋದಾದ್ರೆ ಹೇಳಿ, ಅವರನ್ನು ಆಚೆಗೆ ಕಳಿಸೋಣ.. " ಡಾಕ್ಟರು ಮಹೇಶನ ಕಡೆ ಸಂಜ್ಞೆ ಮಾಡಿದರು. ಮಹೇಶ ಹೊರಗೆ ಹೋಗಿ ನಿಂತ. ಡಾಕ್ಟರು ತಮ್ಮ ಬ್ರೀಫ್‌ಕೇಸ್ ತೆಗೆದು, ಅದರಿಂದ ಕೆಲವು ಹಳೆಯ ಕಪ್ಪು ಬಿಳುಪಿನ ಚಿಕ್ಕ ಚಿಕ್ಕ ಫೋಟೋಗಳನ್ನು ತೆಗೆದು ಆಕೆಯ ಮುಂದೆ ಇಟ್ಟರು.... ವನಜಮ್ಮ ಕಣ್ಣುಗಳನ್ನು ಅರಳಿಸಿದಳು.

"ಈ ಫೋಟೋದಲ್ಲಿರುವವರು ಯಾರು? ಸ್ವಲ್ಪ ಹೇಳ್ತೀರಾ?"

"ಈ ಫೋಟೋಗಳು ನಿಮಗೆ ಎಲ್ಲಿ ಸಿಕ್ತು?"

"ನಮ್ಮ ಪ್ರಶ್ನೆಗೆ ಮೊದಲು ಉತ್ತರ ಹೇಳಿ.... ಈ ಹೆಂಗಸು, ಈ ಮಗು ಮತ್ತು ಇವರೊಂದಿಗೆ ಇರುವ ಗಂಡಸು, ಇವರುಗಳು ಯಾರು?"

"ನಂಗೊತ್ತಿಲ್ಲ.... ನನಗೆ ಪರಿಚಯವಿಲ್ಲ....."

"ಸುಳ್ಯಾಕೆ ಹೇಳ್ತೀರಿ ಮೇಡಂ.... ಈ ಫೋಟೋಗಳಿಗಾಗಿಯೇ ನೀವು ಆಶ್ರಮಕ್ಕೆ ಎರಡನೇ ಬಾರಿ ಬಂದದ್ದು...., "

"ಆಶ್ರಮಕ್ಕೆ ನಾನು ಎಷ್ಟು ಸಾರಿ ಬೇಕಾದ್ರೂ ಬರ್ತೀನಿ. ಅದೆಲ್ಲಾ ನಿಮಗ್ಯಾಕೆ?"

"ಸರಿ ಬಿಡಿ. ನಿಮಗೆ ಏನೂ ತಿಳಿಯದು ಅಂತಂದ್ರೆ ನಿಮಗೆ ಯಾವ ಲಾಭವೂ ಇಲ್ಲ...."

"ನಡೀರೀ ಲಾಯರ್‍ರೇ.... ನಿಮ್ಮ ಪ್ಲ್ಯಾನು ಸರಿ ಹೋಗ್ಲಿಲ್ಲ. ಇದನ್ನೇ ಸುಬ್ಬರಾಮಪ್ಪನವರಿಗೆ ಹೇಳಿಬಿಡೋಣ.... ಅವರುಂಟು ಅವರ ಆಸ್ತಿ ಉಂಟು. ನಮಗೇನಾಗ ಬೇಕಾಗಿದೆ!"

"ಅದು ಸರಿ. ಆದರೆ ಅವರ 'ವಿಲ್'ಗೆ ನೀವು ಎಕ್ಸಿಕ್ಯೂಟರ್ ಆಗಿದ್ದೀರಲ್ಲ"

"ಎಕ್ಸಿಕ್ಯೂಟರ್ಸ್ ಕೆಲಸ ಬಹಳ ಕಷ್ಟ.. ಒಂಥರಾ ಸೂಕ್ಷ್ಮ...." ಎನ್ನುತ್ತಾ ಫೋಟೋಗಳನ್ನೆತ್ತಿ ತೆಗೆದಿಟ್ಟುಕೊಂಡರು. ಅವರಿನ್ನೇನು ಹೊರಟು ಬಿಡ್ತಾರೆ ಎನ್ನುವಾಗ ವನಜಮ್ಮ ಮಾತಾಡಿದಳು. ವನಜಮ್ಮ ಹೇಳಿದುದರ ಪಾಯಿಂಟ್ಸ್‌ಗಳನ್ನು ಲಾಯರ್ ಗುರುತು ಮಾಡಿಟ್ಟುಕೊಂಡರು.

"ನಾವು ಹೇಳಿ ಕಳಿಸಿದಾಗ ನೀವು ಆಶ್ರಮಕ್ಕೆ ಬರಬೇಕಾಗುತ್ತದೆ. ಕಾರಣವಿಲ್ಲದೇ ಆಶ್ರಮಕ್ಕೆ ಬರಬೇಡಿ. ಅದು ಸಂಶಯಕ್ಕೆ ಎಡೆ ಮಾಡುತ್ತದೆ ಎಂದು ಡಾಕ್ಟರು ಹೇಳಿದರು. ಇಬ್ಬರೂ ಅಲ್ಲಿಂದ ಹೊರಟರು. ಮಹೇಶ ಅವರನ್ನು ಕಳಿಸಿಕೊಡಲು ಕಾರಿನ ತನಕ ಬಂದಾದರೆ ಏನು ವಿಷಯ ಅಂತ ಇವರೂ ಹೇಳಲಿಲ್ಲ. ಅವನೂ ಕೇಳಲಿಲ್ಲ. ಕೈಯಾಡಿಸಿದರು. ಕಾರು ಹೊರಟು ಹೋಗಿತ್ತು. ಮಹೇಶ ಅಲ್ಲೇ ಯೋಚಿಸುತ್ತಾ ನಿಂತಿದ್ದ. ಫೋನು ರಿಂಗಾಯಿತು. ಮಾತನಾಡುತ್ತಾ ಹೊರಗೇ ನಿಂತವನನ್ನು, ವನಜಮ್ಮ ಕಿಟಕಿಯ ಮರೆಯಲ್ಲಿ ನಿಂತು ನೋಡುತ್ತಿದ್ದಳು. ಅವಳ ಮನಸ್ಸು ಕಲಕಿದ ಕೊಳದಂತಾಗಿತ್ತು.

* * *

ಕೆಲವು ದಿನಗಳು ಕಳೆದುಹೋದರೂ, ಆಶ್ರಮದಿಂದ ಯಾವ ಫೋನೂ ಬಂದಿರಲಿಲ್ಲ. ಕಾತುರದಿಂದ ನಿರೀಕ್ಷಿಸಿದ್ದವಳಿಗೆ ನಿರಾಸೆ ಆಗಿತ್ತು. ಅವರು ಯಾರೋ ಏನೋ, ಅವರಿಗೆ ತನ್ನ ಮನೆಯ ರಹಸ್ಯವನ್ನು ತಿಳಿಸಿಬಿಟ್ಟಿದ್ದು ತಪ್ಪಾಯಿತು ಎಂದು ತನ್ನಲ್ಲೇ ಕೊರಗುತ್ತಿದ್ದಳು, ವನಜಮ್ಮ.

ಇದ್ದಕ್ಕಿದ್ದಂತೆ ಸಾವಿತ್ರಮ್ಮ ಆಟೋದಿಂದ ಇಳಿದುದನ್ನು ಕಂಡು ವನಜಮ್ಮನಿಗೆ ಬೇಸರವಾಗಿತ್ತು. ಈಗ ಯಾಕೆ ಬಂದಳೋ ಈಕೆ. ತನಗೆ ಯಾವ ಮಾತುಕತೆಯೂ ಬೇಡ.... ಅಂತಂದುಕೊಂಡಳು. ಮುಗುಳ್ನಗುವಿನ ಲೇಪನವನ್ನು ಬಳಿದುಕೊಂಡು ಒಳಕ್ಕೆ ಕರೆದಳು. ಒಳಗಿನ ರೂಮಿನಲ್ಲಿ ಮಹೇಶ ಕುಳಿತಿದ್ದ.

"ಇಲ್ಲೇ ದೇವಸ್ಥಾನಕ್ಕೆ ಬಂದಿದ್ದೆ. ಹಾಗೇ ನಿಮ್ಮನ್ನು ನೋಡಿ ಹೋಗೋಣ ಅಂತ ಬಂದೆ.... ನಿಮ್ಮ ಮಗನ ಹತ್ರ ಮಾತಾಡಿದ್ರಾ? ಏನಂದ್ರು?"

"ಇಲ್ಲ, ಸಾವಿತ್ರಮ್ಮ. ಇನ್ನೊಂದು ತಿಂಗಳಿಗೆ ನನ್ನ ಹಿರಿಮಗ ಇಲ್ಲಿಗೇ ಬಂದು ಬಿಡ್ತಾನೆ. ಆಮೇಲೆ ಎಲ್ರೂ ಒಟ್ಟಿಗೆ ಕೂತು ಮಾತನಾಡೋಣ ಅಂತ" ಅಲ್ಲಿಯ ವರೆಗೂ ಯಾವ ಮಾತೂ ಬೇಡ.

"ನೀವು ದೊಡ್ಡ ಮನಸ್ಸು ಮಾಡಬೇಕು ವನಜಮ್ಮ... ನಮ್ಮ ಲೀಲು ಮುಗ್ಧೆ. ಇದರಲ್ಲಿ ಅವಳ ತಪ್ಪು ಏನೂ ಇಲ್ಲ. ನೀವೂ ಹೆಂಗಸು. ನಿಮಗೂ ಹೆಣ್ಣು ಹುಡುಗಿಯ ಪರಿಸ್ಥಿತಿ ಅರ್ಥವಾಗುತ್ತೆ"

"ಆಗಲಿ ನೋಡೋಣ...."

"ನಮ್ಮ ಲೀಲಂದು ಒಂದು ಸೆಟ್ಲ್ ಆಗಿಬಿಟ್ಟರೆ, ವಿವೇಕನಿಗೆ ಏನೂ ಚಿಂತೆ ಇಲ್ಲ. ಹೇಗೋ ಆಗುತ್ತೆ. ನೀವು ಆಶ್ರಮಕ್ಕೆ ಮತ್ತೆ ಹೋಗಿದ್ರಾ? ನಮ್ಮ ಭಾವನ ಹತ್ರ ಮತ್ತೆ ಮಾತನಾಡಿದ್ರಾ?"

"ಇಲ್ಲ...."

"ನಮ್ಮ ಭಾವಂಗೆ ಸ್ವಂತ ಬುದ್ಧಿ ಅನ್ನೋದೇ ಇಲ್ಲ. ನಾವು ಸ್ವಂತದವರು, ನಮ್ಮನ್ನು ಒಂದ್ಮಾತು ಕೇಳೋಲ್ಲ. ಆ ಡಾಕ್ಟ್ರು, ಲಾಯರ್ರು ಹೇಳಿದ್ದೇ ಪರಮ ವೇದ ವಾಕ್ಯ! ಮತ್ತೆ 'ವಿಲ್' ಬದಲಾಯಿಸಿದಾರಂತೆ. ಇದು ಮೂರನೇ ಸಾರಿ ಬರೆದಿರುವ 'ವಿಲ್'" ವನಜಮ್ಮನ ಎದೆ ಬಡಿತ ನಿಂತಂತಾಗಿತ್ತು... ಬಾಯಿ ಅಗಲವಾಗಿತ್ತು.

"ನಾನು ಹೇಳ್ದೆ ಅಂತ ಯಾರಿಗೂ ಹೇಳ್ಬೇಡಿ..."

"ಈ ವಿಷಯ ಎಲ್ಲಾ ನಿಮಗೆ ಹೇಗೆ ಗೊತ್ತಾಗುತ್ತೆ?"

"ನಮ್ಮ ವಿವೇಕ ಸ್ವಲ್ಪ ಮೊದ್ದು. ಕೆಲವು ಸಾರಿ ವಿಪರೀತ ಬೇಸರವಾದಾಗ ತನ್ನ ಮನಸ್ನಲ್ಲಿರೋದನ್ನೆಲ್ಲಾ ಒದರಿ ಬಿಡ್ತಾನೆ. ಅವನಿಗೆ ಸುಜಯನ್ನ ಮದುವೆ ಮಾಡ್ಕೋ ಬೇಕು ಅಂತ ಬಹಳ ಆಸೆ ಇತ್ತು.... ಇದೇ ಸಮಯದಲ್ಲಿ ಈ ಹೊಸ ವಿಲ್‌ನ ಸುದ್ದಿ ಬೇರೆ.... ವಿವೇಕ ತನಗೆ ತಿಳಿದದ್ದನ್ನ ಹೇಳಿಬಿಡ್ತಾನೆ"

"ಸುಜಯಳ ತಂದೆ ತಾಯಿಯ ಹತ್ರ ನಾನು ನಿಮ್ಮನ್ನು ಕರ್‍ಕೊಂಡು ಹೋಗ್ತೀನಿ ಬನ್ನಿ... ವಿವೇಕನಂತಹ ಹುಡುಗ ಅಳಿಯನಾಗ್ತಾನೆ ಅಂತಂದ್ರೆ.. ಅವರು ಧಾರಾಳವಾಗಿ ಒಪ್ಕೋತಾರೆ"

"ಬೇಡ ಬಿಡಿ. ಸುಜಯನ ಹತ್ರ ಮಾತಾಡಿದ್ನಂತೆ. ಅವಳು ಇವನನ್ನು ಒಪ್ಪಲಿಲ್ಲ ವಂತೆ... ಆ ಹುಡುಗಿ ಬೇರೆ ಯಾರನ್ನಾದ್ರೂ ಪ್ರೀತಿಸ್ತಾ ಇರಬಹುದೋ ಏನೋ...."

"ಆ ಹುಡುಗಿಯ ಸ್ವಭಾವವೇ ಹಾಗೇ. ಯಾವ ಗಂಡನ್ನೂ ಒಪ್ಪೊಲ್ಲವಂತೆ. ಮನೇಲಿ ದಿನಾ ಅದೇ ಹರಿಕಥೆ. ಅಪ್ಪ, ಅಮ್ಮನ ಉಪದೇಶ ಇವಳಿಗೆ ಬೇಡ.....ಅದಕ್ಕೇ ಆಶ್ರಮದ ಸ್ಕೂಲಿಗೆ ಸೇರಿಕೊಂಡಿರೋದು... ಏನು ಹುಡುಗಿಯೋ... ನಂಗೆ ಅವಳ

ಸ್ವಭಾವ ಒಂದು ಚೂರೂ ಹಿಡಿಸಲಿಲ್ಲ. ಅವಳ ತಂಗಿ ಒಬ್ಬಳಿದ್ದಾಳೆ. ಅವಳನ್ನು ಬೇಕಾದ್ರೆ ವಿಚಾರಿಸಬಹುದು. ಇಂಜಿನಿಯರಿಂಗ್ ಓದ್ತಿದಾಳೆ.... ಆದರೆ ಇನ್ನೂ ಚಿಕ್ಕದು. ನಿಮ್ಮ ವಿವೇಕನ ವಯಸ್ಸೆಷ್ಟು?"

"ಸುಜಯನ್ನ ಮದುವೆ ಆದ್ರೆ ನಮ್ಮ ವಿವೇಕಂಗೆ ಲಾಭ ಇತ್ತು.... ನಮಗೆ ಸಿಗಬೇಕಾದ ಆಸ್ತಿ ನಮಗೇ ಸೇರುತ್ತೆ.... ಅಂತ ಅಂದ್ಕೊಂಡೆವು." ಸಾವಿತ್ರಮ್ಮ ಕೆಳದನಿಯಲ್ಲಿ ವನಜಮ್ಮನಿಗೆ ಮಾತ್ರ ಕೇಳಿಸುವಂತೆ ಒಂದು ವಿಷಯವನ್ನು ತಿಳಿಸಿದಳು. ವನಜಮ್ಮ ಬಾಯಿ ಬಿಟ್ಟಳು. ಮನಸ್ಸು ನಾನಾ ದಿಕ್ಕಿನಲ್ಲಿ ವೇಗವಾಗಿ ಓಡಿದವು. ಆದರೂ ಸಾವರಿಸಿಕೊಂಡು ನಿಧಾನವಾಗಿ ಕೇಳಿದಳು.

"ಈಗ ನೀವು ಹೇಳ್ತಾ ಇರೋ ವಿಷಯ ನಿಜಾನಾ?"

"ವಿವೇಕನೇ ಹೇಳ್ದ... ಅವನು ಮುಗ್ಧ... ಸುಳ್ಳು ಹೇಳುಲ್ಲ. ಅದಕ್ಕೇ ನಾನು ದೇವಸ್ಥಾನಕ್ಕೆ ಬಂದಿದ್ದು. ಅದೇ ವಿಷಯವಾಗಿ ಶಾಸ್ತ್ರಿಗಳ ಹತ್ರ ಮಾತಾಡ್ದೆ... ನಮ್ಮ ವಿವೇಕಂಗೆ ಈಗ ಗುರುಬಲ ಇದೆಯಂತೆ. ಅವನು ಇಷ್ಟಪಡುವ ಹುಡುಗಿಯ ಜೊತೆಯೇ ಮದುವೆಯಾಗುತ್ತೆ ಯೋಚಿಸ್ಬೇಡಿ ಅಂತ ಹೇಳಿದಾರೆ"

"ಸಾವಿತ್ರಮ್ಮ ಬೇಗ ಹೋದರೆ ಸಾಕು" ಎನ್ನುವಂತೆ ವನಜಮ್ಮ ಆತುರ ತೋರಿದಳು. ಅಂತೂ ಆಕೆ ಹೊರಟಾಗ ನಿರಾಳವಾಗಿ ಉಸಿರಾಡಿದಳು. ಫ್ಯಾನಿನ ಗಾಳಿಯ ಕೆಳಗೆ ಸೋಫಾದ ಮೇಲೆ ಕುಳಿತು ತನ್ನ ಮನದ ಆಕಾಶದಲ್ಲಿ ನಿಧಾನವಾಗಿ ಹಾರಾಡತೊಡಗಿದಳು. ಅಂತರಂಗದಲ್ಲಿ ಹೊಸ ಹಕ್ಕಿಯ ಮರಿಯೊಂದು, ರೆಕ್ಕೆ-ಪುಕ್ಕಗಳನ್ನು ಹಚ್ಚಿಕೊಳ್ಳುತ್ತಿತ್ತು.

* * *

"ದಿನೇಶ ಬರ್ತಿದ್ದ ಹಾಗೇ ಮಹೇಶನಿಗೆ ಮದುವೆ ಮಾಡಿಬಿಡೋಣ.... ನೀನೂ ಮದುವೆ ಮನೇಲಿ ಓಡಾಡಬಹುದು.... ದಿನೇಶ ಯಾವಾಗ ಬರ್ತಾನಂತೆ? ನಿಂಗೇನಾದ್ರೂ ಫೋನು ಮಾಡಿದ್ನಾ?"

"ಇನ್ನು ಇಪ್ಪತ್ತು ದಿನದೊಳಗೆ ಇಲ್ಲಿರ್ತಾರೆ.... ಅದ್ಸರಿ, ಅರ್ಜೆಂಟಾಗಿ ಬಾ ಅಂತ ಫೋನು ಮಾಡಿದ್ರಲ್ಲ ಅತ್ತೆ.... ಏನು ವಿಷಯ?"

"ಅದೇ ನಮ್ಮ ಮಹೇಶನ ಮದುವೆ ವಿಷಯ.... ದಿನೇಶನ ಮದುವೆ ಸಮಯದಲ್ಲಿ ಓಡಾಡೋರೇ ಇರಲಿಲ್ಲ. ಈಗಾದ್ರೆ ನೀನು ಇದೀಯ.... ನಿನ್ನ ಹೆರಿಗೆಗೆ ಮುಂಚೆ ಮದುವೆ ಮುಹೂರ್ತ ಇಟ್ಟುಕೊಳ್ಳೋಣ ಅಂತ...."

"ದುಡುಕಬೇಡಿ ಅತ್ತೆ.... ದಿನೇಶ್ ಬರಲಿ. ಎಲ್ಲಾ ಕೂತು ಮಾತನಾಡಿ ಒಂದು ನಿರ್ಧಾರಕ್ಕೆ ಬರೋಣ. ಮಹೇಶ ಒಪ್ಪದೇ ಇದ್ರೆ, ಬಲವಂತ ಮಾತ್ರ ಮಾಡಬೇಡಿ.... ಪ್ಲೀಸ್"

"ಮಹೇಶನ ಒಪ್ಪಿಗೆ ಇಲ್ಲದೇ ನಾನು ಮುಂದುವರೀತೀನ್ಯೇ... ನನಗೂ ನನ್ನ

ಮಗನ ಭವಿಷ್ಯ ಮುಖ್ಯ. ಈಗ ನಮ್ಮ ಮಹೇಶನ ಭಾಗ್ಯೋದಯವಾಗುವ ಸಮಯ ಬಂದಿದೆ. ಯೋಗ್ಯಳಾದ ಪತ್ನಿ.... ಜೊತೆಗೆ ಬರುವ ಶ್ರೀಮಂತಿಕೆ... ಅವನ ಅದೃಷ್ಟದ ಬಾಗಿಲು ತೆಗೆಯುತ್ತಿದೆ. ಅವನು ದಿನೇಶನಂತೆ ಆಗಲಿಲ್ಲವಲ್ಲ ಅನ್ನೋ ಕೊರಗು ಸಣ್ಣದಾಗಿ ಉಳಿದುಕೊಂಡಿತ್ತು.... ಈಗ ಅದೂ ಮಾಯವಾಗುವ ಸಮಯ ಬಂದಿದೆ...

"ನೀವು ಏನು ಹೇಳ್ತಿದೀರೋ ನಂಗೆ ಸರಿಯಾಗಿ ಅರ್ಥವಾಗ್ತಿಲ್ಲ. ನೀವು ಬಿ.ಪಿ. ಚೆಕ್ ಮಾಡಿಸಿಕೊಂಡ್ರಾ?"

"ಬಿ.ಪಿ. ಗಿ.ಪಿ. ಏನೂ ಇಲ್ಲ. ಸರಿಯಾಗಿಯೇ ಇದೀನಿ. ಜವುಳಿ ತರಬೇಕು, ಒಡವೆ ಮಾಡಿಸೋಕ್ಕೆ ಹಾಕಬೇಕು. ನಿನ್ನ ಮದುವೇಲಿ ಎಲ್ಲಾ ಅವಾಂತರವಾಗಿ ಹೋಯ್ತು. ಈಗ ಹಾಗಾಗಬಾರ್ದು. ಮಹೇಶನ ಮದುವೆ ಆದ್ರೆ, ಇನ್ನು ಮೊಮ್ಮಕ್ಕಳ ತನಕ, ನಮ್ಮ ಮನೇಲಿ ಯಾವ ಮದುವೇನೂ ಇಲ್ಲ. ದಿನೇಶ ಬರೋದ್ರೊಳೊಗೆ ಎಲ್ಲಾ ತಂದು ಬಿಡೋಣ.... ಆಮೇಲೆ ನಿಂಗೆ ಬಿಡುವಾಗುಲ್ಲ...."

"ಅತ್ತೇ, ನಾನು ಮಹೇಶನ ಹತ್ರ ಮಾತಾಡ್ಲಾ?"

"ಏನೂ ಬೇಡ. ಅವನು ಬರೊ ಹೊತ್ತಾಯ್ತು. ಈ ಮಾತು ಸಾಕು. ಸುಮ್ಮನೇ ತಲೆಹರಟೆ ಮಾತ್ನಾಡಿ ರೇಗಿಸ್ತಾನೆ. ಏನು ತಿಂಡಿ ಮಾಡ್ಲೀ... ಈ ಸಂಭ್ರಮದಲ್ಲಿ ನಿನ್ನ ಆರೋಗ್ಯವನ್ನು ವಿಚಾರಿಸೋದೇ ಮರೆತು ಹೋಯ್ತು. ಡಾಕ್ಟರ್ ಹತ್ರ ಹೋಗಿದ್ಯಾ. ಎಲ್ಲಾ ನಾರ್ಮಲ್ ಆಗಿದೆಯಾ?"

"ಹ್ಞೂಂ ಅತ್ತೆ. ಏನೂ ಪ್ರಾಬ್ಲಂ ಇಲ್ಲ.... ಎಲ್ಲಾ ನಾರ್ಮಲ್ ಆಗಿದೆ"

"ಮಹೇಶ ಹನಿಮೂನ್‌ಗೆ ಹೋಗಿ ಬಂದ ಮೇಲೆ, ನಿನ್ನ ಸೀಮಂತದ ಫಂಕ್ಷನ್ ಇಟ್ಟುಕೊಳ್ಳೋಣ.... ನಿನ್ನ ಅಣ್ಣ ಎಲ್ಲಿ ಹೋದ? ಒಳಗೆ ಬರಲೇ ಇಲ್ಲ"

"ನನ್ನನ್ನ ಇಲ್ಲಿ ಬಿಟ್ಟು ಸ್ನೇಹಿತನ ಮನೆಗೆ ಹೋದ. ಅರ್ಧ ಗಂಟೆ ಬಿಟ್ಟು ಬರ್ತೀನಿ ಅಂತ ಅಂದಿದ್ದಾನೆ.... ಬಂದ ಅಂತ ಕಾಣುತ್ತೆ. ಕಾರು ನಿಂತ ಸದ್ದಾಯಿತು"

"ಅದು ದಿನೇಶನ ಕಾರು... ಮಹೇಶ ಬಂದ ಅಂತ ಕಾಣುತ್ತೆ. ಈ ನಡುವೆ ಮಹೇಶ ಕಾರ್‍ನಲ್ಲೇ ಓಡಾಡೋದನ್ನ ಜಾಸ್ತಿ ಮಾಡಿಬಿಟ್ಟಿದ್ದಾನೆ.... ಮದುವೆಯ ಹೊತ್ತಿಗೆ ಹೇಗೂ ಹೊಸ ಕಾರು ಬರುತ್ತೆ.... ದಿನೇಶ ಬಂದ ಮೇಲೆ, ನಿಮಗೂ ಓಡಾಡುಕ್ಕೆ ಕಾರು ಬೇಕಲ್ಲ."

"ಯಾಕತ್ತೆ ಹೀಗೆ ಮಾತಾಡ್ತೀರಿ! ನಾನಾಗ್ಲೀ ದಿನೇಶನಾಗಲೀ, ಮಹೇಶಂಗೆ ಬೇಜಾರಾಗೋ ಥರ ಮಾತಾಡಿದೀವಾ... ?"

"ದಿನೇಶ ಅಂಥೋನಲ್ಲ. ಅವನು ಅಪರಂಜಿ.... ಆದ್ರೂ ಮಹೇಶನ ಮನಸ್ನಲ್ಲಿ ಏನಿದೆಯೋ.... ದೊಡ್ಡವರಾದ ಮೇಲೆ ಕಾರು, ಮನೆ, ಎಲ್ಲಾ ಅವರವರದ್ದೇ ಸ್ವಂತವಾಗಿ ಇರ್ಬೇಕು. ಇವರೇನೋ ಅಣ್ಣ–ತಮ್ಮಂದಿರು. ಆದರೆ, ವಾರಗಿತ್ತಿಯರಿಗೆ ಸರಿ ಹೋಗ್ಬೇಕಲ್ಲ" ದೀಪಳ ಮುಖ ಕೆಂಪಾಗಿತ್ತು. ಅತ್ತೆ ಬೇಕೂಂತ ತನಗೆ ಅವಮಾನ

ಮಾಡುತ್ತಿರಬಹುದೇ....ಮಹೇಶನ ತಲೆಯೊಳಗೂ ಏನೋ ವಿಷವನ್ನು ತುಂಬಿರಬಹುದು. ಇಲ್ಲದಿದ್ದರೆ, ಅವನು ಮದುವೆಗೆ ಒಪ್ಪಿಗೆ ಕೊಡುವುದೆಂದರೇ..... ಮಹೇಶನೊಂದಿಗೆ ದಿಲೀಪನೂ ಒಳಗೆ ಬಂದ. ಇಬ್ಬರ ಮಾತೂ ನಿಂತಿತ್ತು. ದೀಪಾ ಮಹೇಶನ ಕಡೆ ವ್ಯಥೆಯಿಂದ ನೋಡಿದಳು. ಆದರೆ ಮಹೇಶ ಎಂದಿನಂತೆ ಇದ್ದ. ಇದ್ದಕ್ಕಿದ್ದ ಹಾಗೆ ಇವನ್ಯಾಕೆ ಬದಲಾದ?

"ಹೇಗಿದೀರಿ ಅತ್ಗೇ.... ದಿನೇಶ ಫೋನು ಮಾಡಿದ್ನಾ? ಬರುವ ತಾರೀಖನ್ನು ತಿಳಿಸಿದ್ನಾ?"

"ಹೂಂ. ಮತ್ತೆ ಫೋನು ಮಾಡ್ತೀನಿ ಅಂತ ಹೇಳಿದಾರೆ"

"ಕಂಗ್ರಾಟ್ಸ್ ಹೇಳುಲ್ವಾ ಅತ್ಗೇ...." ನಗುತ್ತಾ ಪ್ರಶ್ನಿಸಿದ. ದೀಪಾ ದಂಗಾದಳು.

"ಕಂಗ್ರಾಟ್ಸ್! ಯಾಕೆ?"

"ಅಮ್ಮ ಹೇಳ್ಲಿಲ್ವಾ! ನಂಗೆ ಪ್ರಮೋಷನ್ ಸಿಕ್ತು... ಬೇರೆ ಊರಿಗೆ ವರ್ಗ ಆಗಿದೆ. ಆ ಬ್ರ್ಯಾಂಚಿಗೆ ನಾನೇ ಚೀಫ್ ಇನ್ ಛಾರ್ಜ್"

"ಹೌದಾ? ಹೇಳಿಲ್ಲವಲ್ಲ. ಎನಿವೇ ಕಂಗ್ರಾಟ್ಸ್... ನಾನು ನಿಮ್ಮ ಹತ್ರ ಮುಖ್ಯವಾದ ವಿಚಾರವನ್ನು ಮಾತ್ನಾಡ್ಬೇಕಾಗಿತ್ತು... ಯಾವಾಗ ಸಿಕ್ತೀರಿ?"

"ನಾನು ಎಂಟು ಹತ್ತು ದಿನ ತುಂಬಾ ಬಿಸಿ... ನೀವು ಈ ದಿನ ಇಲ್ಲೇ ಇರೋದಾದ್ರೆ ರಾತ್ರಿ ಮಾತನಾಡೋಣ"

"ದಿಲೀಪನಿಗೆ ಹೆಣ್ಣುಗಳು ಬರುತ್ತಿವೆ... ನಾನು ಅಲ್ಲೇ ಇರಬೇಕು ಅಂತ ಹೇಳಿಬಿಟ್ಟಿದ್ದಾನೆ"

"ಓ.ಕೇ. ಆಲ್ ದಿ ಬೆಸ್ಟ್.... ನನ್ನ ಹಾಗೆ ಪ್ರೀತಿ ಪ್ರೇಮ ಅಂತ ಆ ಜಾಲಕ್ಕೆ ಸಿಕ್ಕಿ ಬಿದ್ದಿಲ್ಲವಲ್ಲ.... ಯೂ ಆರ್ ಕ್ಲೆವರ್...." ಮಹೇಶ ದಿಲೀಪನ ಬೆನ್ನು ತಟ್ಟಿ ತನ್ನ ರೂಮಿಗೆ ಹೊರಟು ಹೋದ. ದೀಪಾ, ಕೆಟ್ಟ ಮುಖ ಮಾಡಿ ದಿಲೀಪನ ಕಡೆ ನೋಡಿದಳು.

"ಎಲ್ಲಿ ಹೋದ ಈ ಮಹೇಶ? ಮಹೀ ಬಾರೋ ನಿನಗಿಷ್ಟವಾದ ತಿಂಡಿ ಮಾಡಿದೀನಿ" ವನಜಮ್ಮ ಎಲ್ಲರಿಗೂ ತಿಂಡಿಯನ್ನು ಕೊಟ್ಟಳು. ದೀಪಳ ಗಂಟಲಿನಲ್ಲಿ ತಿಂಡಿ ಇಳಿಯಲಿಲ್ಲ.

"ಯಾಕೋ ಸೇರ್ತಾ ಇಲ್ಲ ಅತ್ತೇ.... ನಂಗೆ ಬೇಡ" ಪಕ್ಕಕ್ಕೆ ಇಟ್ಟಳು.

"ಹೋಗ್ಲಿ ಬಿಡು. ಬಲವಂತವಾಗಿ ತಿನ್ನಬೇಡ.... ವಾಂತಿ ಆಗುತ್ತೆ...." ಮಹೇಶ ಹೊರಕ್ಕೆ ಬಂದಿರಲಿಲ್ಲ. ಅವನು ಮೊಬೈಲ್‌ನಲ್ಲಿ ಯಾರೊಡನೆಯೋ ಮಾತನಾಡುತ್ತಿರುವಂತಿತ್ತು.

"ದೀಪು... ನಾವು ಹೋಗೋಣ, ಅಮ್ಮ ಕಾಯ್ತಾ ಇರ್ತಾಳೆ" ಕಾಫಿ ಕುಡಿದು ಮುಗಿಸಿದ ದಿಲೀಪ ಎದ್ದ.

"ನಾನು ಮತ್ತೆ ಫೋನು ಮಾಡ್ತೀನಿ. ನಾಳೆ ನಾಡಿದ್ದರಲ್ಲಿ ಒಡವೆ ಅಂಗಡಿಗೆ ಹೋಗಿಬರೋಣ" ವನಜಮ್ಮನ ಮಾತಿಗೆ ದೀಪಾ ಸುಮ್ಮನೆ ತಲೆಯಾಡಿಸಿದಳು.

* * *

"ನಾಳೆ ದಿನೇಶ ಬರ್ತಾ ಇದಾರೆ. ನಾವೆಲ್ಲಾ ಏರ್‌ಪೋರ್ಟ್‌ಗೆ ಹೋಗ್ತಾ ಇದೀವಿ. ನೀನೂ ಬರ್ತೀಯೇನೇ...." ದೀಪಾ ಸುಜಯನ್ನ ಕೇಳಿದಳು.

"ಬರಬೇಕೂಂತ ಆಸೆ....ಆದರೆ ಒಂಥರಾ ಮುಜುಗರವಾಗುತ್ತೆ. ಮಹೇಶನೂ ಫೋನು ಮಾಡಿದ್ರು...."

"ಮಹೇಶ್ ನಿನ್ಹತ್ರ ಮಾತಾಡಿದ್ರಾ? ಯಾವಾಗ?"

"ಅವರನ್ನು ಪ್ರಮೋಷನ್ ಮೇಲೆ ಬೇರೆ ಊರಿಗೆ ವರ್ಗ ಮಾಡಿದಾರಂತೆ. ದಿನೇಶ ಬಂದ್ಮೇಲೆ, ನಾನು ಹೋಗ್ತಿದೀನಿ ಅಂತ ಹೇಳಿದ್ರು...."

"ಆಮೇಲೆ ಇನ್ನೇನು ಹೇಳಿದ್ರು?" ಏನಿಲ್ಲ ಎನ್ನುವಂತೆ ತಲೆಯಾಡಿಸಿದಳು.

"ಅಷ್ಟೇನಾ? ಇನ್ನೇನೂ ಹೇಳಲಿಲ್ವಾ?" ಮತ್ತೆ ಕೇಳಿದಳು.

"ಇಲ್ಲ. ಯಾಕೆ ಹೀಗೆ ಕೇಳ್ತಿದೀಯಾ!"

"ಅವರ ಮದುವೆ ಬಗ್ಗೆ ಏನೂ ಮಾತಾಡಲಿಲ್ವಾ?"

"ನಾನು ಒಪ್ಗೆ ಕೊಟ್ರೇ ತಾನೇ ಅವರು ಮದುವೆ ವಿಷಯಾನಾ ಮಾತನಾಡೋದು. ನಾನು ಆ ಸುದ್ದೀನೇ ಎತ್ತಲಿಲ್ಲ" ಸುಜಯ ಸಪ್ಪಗೆ ನಕ್ಕಳು.

"ನೀನು ಹೀಗೆ ಬಸವನ ಥರ ತೆಪ್ಪಗಿರು. ಅವರು ತಮ್ಮ ಪಾಡಿಗೆ ತಾವು ಮದುವೆಯಾಗಿ ಬೇರೆ ಊರಿಗೂ ಹೊರಟು ಹೋಗ್ತಾರೆ. ಆಗ ನೀನೇನ್ಮಾಡ್ತೀಯೇ..."

"ಈ ಆಶ್ರಮದಲ್ಲೇ ಇದ್ದು ಬಿಡ್ತೀನಿ"

"ಸಾಕು ತಮಾಷೆ. ಸರಿಯಾಗಿ ಯೋಚ್ನೆ ಮಾಡು... ನಾನು ಮಹೇಶನ ಹತ್ರ ಮಾತನಾಡೋಣಾಂತ ಅಂದ್ಕೊಂಡೆ. ಬಿಜಿ ಅಂತೆ. ಬಿಡುವಿಲ್ಲ ಅಂತಂದ್ರು, ದಿನೇಶ ಬಂದ್ಮೇಲೆ ನಾನು ಬಿಜಿ. ದಿಲೀಪಂಗೆ ಹೆಣ್ಣು ಗೊತ್ತಾಗಿದೆ. ಅವನ ಲಗ್ನ ಪತ್ರಿಕೆ ಫಂಕ್ಷನ್ ಇದೆ. ಷಾಪಿಂಗ್ ಹೋಗ್ಬೇಕು... ನೀನೂ ನಿನ್ನ ತಂಗಿ ಇಬ್ಬರೂ ನನ್ನ ಕೈಗೇ ಸಿಗೋಲ್ಲ. ನಿನ್ನ ತಂಗಿಗಂತೂ ಸ್ಟಡೀಸ್. ನೀನಾದ್ರೂ ನಿನ್ನ ಆಶ್ರಮದಿಂದ ಹೊರಕ್ಕೆ ಬಾ...."

"ಇನ್ನೊಂದು ತಿಂಗಳು...ಆಮೇಲೆ ಪರೀಕ್ಷೆ ಮುಗಿದ ಕೂಡ್ಲೇ ರಜ... ಅಲ್ಲೀವರೆಗೂ ನಿನ್ನ ಗಂಡನ ಜೊತೆ ಸುತ್ತಾಡು... ಬೋರ್ ಅಂತ ಅನ್ನಿಸಿದಾಗ ನನ್ನನ್ನ ನೆನೆಸ್ಕೋ... ನಾನು ಪ್ರತ್ಯಕ್ಷ ಆಗ್ತೀನಿ"

"ಹೂಂ.... ನೀನು ದೇವತೆ. ನೆನೆಸ್ಕೊಂಡ ಕೂಡ್ಲೇ ಪ್ರತ್ಯಕ್ಷ ಆಗ್ತೀಯಾ?"

"ಎಸ್. ಟ್ರೈ ಮಾಡಿ ನೋಡು...."

"ಮೊದ್ಲು ನಿನ್ನ ಮಹೇಶನ್ನ ನಿನ್ನ ಕಂಟ್ರೋಲ್‌ನಲ್ಲಿಟ್ಕೋ.... ಲೂಸ್ ಬಿಡಬೇಡ"

ಎಂದಳು ದೀಪಾ. ಸುಜಯಳ ಬೆನ್ನ ಮೇಲೆ ಹಗುರವಾಗಿ ಗುದ್ದಿದಳು.

* * *

ಮಹೇಶ್ ನನ್ನ ಕಂಟ್ರೋಲ್‌ನಲ್ಲಿರೋದ್ರಿಂದ್ಲೇ ನಂಗೆ ಫೋನು ಮಾಡಿದ್ದು.... ಅವರು ಕರೆದ್ರು ಅಂತ, ನಾನು ನಾಳೆ ಏರ್‌ಪೋರ್ಟ್‌ಗೆ ಬರ್ತಿದೀನಿ. ನಿನ್ನ ಗಂಡ ದಿನೇಶ್ ವಿರಹದಿಂದ ಸೊರಗಿ ಹೋಗಿದಾರೋ ಅಥವಾ ನಿನ್ನ ಕಾಟವಿಲ್ಲದೇ ಹಾಯಾಗಿದ್ರೋ ಅಂತ ತಿಳಿದುಕೊಳ್ಳುವ ಆಸೆ ನನಗೆ...." ಎಂದಳು ಸುಜಯಾ.

"ನನ್ನ ಗಂಡನ ಮೇಲ್ಯಾಕೆ ನಿನಗೆ ಕಣ್ಣು?" ದೀಪಾ ವ್ಯಂಗ್ಯವಾಗಿ ಕೇಳಿದಳು.

"ನಾನ್ಯಾಕೆ ಕಣ್ಣು ಹಾಕ್ಲೀ... ನಾನೇ ನಿನಗೆ ಅವರನ್ನು ಬಿಟ್ಟು ಕೊಟ್ಟೆ, ಅದು ನೆನಪಿದೆಯಾ?" ದೀಪ ಪೆಚ್ಚಾದಳು.

"ಸಾರಿ ಕಣೇ. ನಾನು ಹಾಗೆ ಮಾತಾಡ್ಬಾರ್ದಾಗಿತ್ತು.... ಏನೋ ಮಾತು ಹಾಗೆ ಬಂದು ಬಿಡ್ತು.... ನನಗೆ ಯಾವ ರಿಗ್ರೆಟ್ಸ್ ಇಲ್ಲ ಅಂತ ಅವತ್ತೇ ಹೇಳಿದ್ದೆ.... ಸಾರಿ.... ಸಾರಿ...."

"ಓ.ಕೇ.... ನೀನು ಆದಷ್ಟು ಬೇಗ ಮಹೇಶನ್ನ ಮದುವೆಯಾಗು.... ಆಗ ನಿನ್ನನ್ನು ಕ್ಷಮಿಸ್ತೀನಿ."

"ನಾನು ಮಹೇಶನ್ನ ಮದುವೆ ಆದ್ರೆ ನಿನಗೇನೇ ಲಾಭ...."

"ಆಗ ನೀನು ನನ್ನ ವಾರಗಿತ್ತಿ ಆಗ್ತೀಯ... ಹೀಗೇ ಜಗಳ ಆಡ್ಕೊಂಡು ಹರಟೆ ಹೊಡ್ಕೊಂಡು ಖುಷಿಯಾಗಿರಬಹುದು...." ಸುಜಯಳ ಕೈ ಒತ್ತಿದಳು.

"ನಾನಿನ್ನೂ ರೆಡಿಯಾಗಿಲ್ಲ. ಈ ಮದುವೆಗೆ... ಒಂದು ಚಿಕ್ಕ ಪ್ರಾಬ್ಲಂ ಇದೆ... ಈ ಜನ್ಮದಲ್ಲಿ ಸಾಲ್ವ್ ಆಗುತ್ತೋ ಇಲ್ವೋ ನಂಗೊತ್ತಿಲ್ಲ"

"ನಂಗೆಲ್ಲಾ ಗೊತ್ತು. ನಿಂಗೆ ಯಾವ ಪ್ರಾಬ್ಲಂ ಇಲ್ಲ.... ಇದ್ದ ಪ್ರಾಬ್ಲಂ ನಿಂಗೇ ಗೊತ್ತಿಲ್ಲದ ಹಾಗೆ ಸಾಲ್ವ್ ಆಗಿ ಹೋಗಿದೆ.... "

"ನಿಂಗೇನೂ ಗೊತ್ತಿಲ್ಲ ಸುಮ್ನಿರು...."

"ನಾಳೆ ಹೇಗೂ ಏರ್‌ಪೋರ್ಟ್‌ಗೆ ಬರ್ತೀಯಲ್ಲ. ಸೀದಾ ನಮ್ಮ ಜೊತೆಯಲ್ಲಿ ನಮ್ಮ ಅತ್ತೆ ಮನೆಗೆ ಬಾ.... ಆಗ ನಿಂಗೇ ಗೊತ್ತಾಗುತ್ತೆ...."

"ನೋಡೋಣ...."

"ನೋಡೋಣ ಅಲ್ಲ. ಪ್ರಯೋಗ ಮಾಡಿ ಬಿಡೋಣ.... ನಾಳೆ ನೀನು ನಮ್ಮ ಅತ್ತೆ ಮನೆಗೆ ಬರ್ತಿದೀಯಾ... ಅಷ್ಟೇ...." ಸುಜಯ ಮುಗುಳ್ನಕ್ಕು ಒಪ್ಪಿಗೆ ಕೊಟ್ಟಳು.

"ಇವಳೇ ನೋಡು ನನ್ನ ಅತ್ತಿಗೆಯಾಗೋಳು" ದೀಪಾ, ದಿಲೀಪನಿಗೆ ನೋಡಿದ್ದ ಹುಡುಗಿಯ ಫೋಟೋವನ್ನು ತೋರಿಸಿದಳು. "ಚೆನ್ನಾಗಿದಾಳೆ ಅಲ್ವಾ?"

"ಹುಂ, ಚೆನ್ನಾಗಿದ್ದಾಳೆ. ದಿಲೀಪ ಎಲ್ಲಿ? ಅವನನ್ನು ಒಂದು ಸ್ವಲ್ಪ ಚುಡಾಯಿಸೋಣ...."

"ಅವನು ಅವನ ಫ್ರೆಂಡ್ ಮನೆಗೆ ಹೋಗಿದಾನೆ. ಹಿ ಈಸ್ ಥ್ರಿಲ್ಡ್. ಬಹಳ ಖುಷಿಯಾಗಿದಾನೆ. ಅವಳೂ ಇಂಜಿನಿಯರ್.... ಮ್ಯೂಸಿಕ್ ಕಲಿತಿದ್ದಾಳೆ. ಅದರೆ ಸ್ವಲ್ಪ ಕುಳ್ಳು.... ಇವನು ಉದ್ದ ಅಲ್ವಾ?"

"ಅವನು ಒಪ್ಕೊಂಡ್ಮೇಲೆ, ಕುಳ್ಳೋ ಉದ್ದವೋ.... ಅದು ಅವನ ಪ್ರಾಬ್ಲಂ.... ನೀನು ಅದನ್ನೇ ಎತ್ತಿ ಎತ್ತಿ ಆಡ್ಬೇಡ..... ಅವನಿಗೆ ಪಿಚ್ಚೆನಿಸುತ್ತೆ"

"ಅವನು ನನ್ನ ಬ್ರದರ್ ಕಣೇ.... ನನ್ನ ಅತ್ತಿಗೆಯಾಗುವವಳು ಅವನಿಗೆ ಎಲ್ಲಾ ರೀತಿಯಿಂದಲೂ ಸರಿ ಇರಲಿ ಅಂತ ಆಸೆ ಇರೋದು ತಪ್ಪಾ? ನೀನು ಚುಮ್ಮಿ ಮದುವೆ ವಿಷಯ ಬಂದಾಗ, ಅವಳಿಷ್ಟ ಅಂತ ಸುಮ್ಮನಿದ್ದು ಬಿಡ್ತೀಯಾ?"

"ಇಲ್ಲ. ನಾನು ಚುಮ್ಮಿಗೆ ಏನೂ ಹೇಳುಲ್ಲ ನೋಡ್ತಿರು"

"ನಾನು ನಿನ್ನ ಹಾಗಲ್ಲ. ನನಗೆ ಅನ್ನಿಸಿದ್ದನ್ನು ಹೇಳೋಳೇ.... ದಿಲೀಪ, ನೀನು ಚುಮ್ಮಿ, ಮಹೇಶ ಯಾರೇ ಆದ್ರೂ ಸರಿ.... ನಾನು ಮಾತನಾಡೋಳೇ...."

"ಅದು ನಿನ್ನ ನೇಚರ್. ನಾನೇನು ಮಾಡ್ಲೀ?" ನಕ್ಕಳು.

"ವಿಚಿತ್ರವಾಗಿ ಮಾತಾಡ್ತೀಯ ಕಣೇ ಸುಜೀ ನೀನು."

"ನಾನು ಸ್ವಲ್ಪ ವಿಚಿತ್ರ ಅಂತ ಈಗಾಗ್ಲೇ ಪ್ರಸಿದ್ಧವಾಗಿದೀನಿ" ಮತ್ತೆ ನಕ್ಕಳು.

"ಪ್ಲೀಸ್ ನೀನು ನಗ್ಬೇಡ.... ನಿನ್ನ ಜೊತೆ ಮಾತಾಡಿದ್ರೆ, ಅವರೂ ವಿಚಿತ್ರವಾಗಿ ಬಿಹೇವ್ ಮಾಡೋಕ್ಕೆ ಶುರು ಮಾಡ್ತಾರೆ ಅಷ್ಟೇ. ಮಹೇಶ್ ಅದ್ಹೇಗೆ ನಿನ್ನನ್ನ ಟಾಲರೇಟ್ ಮಾಡ್ತಾರೋ ನಂಗೆ ಅರ್ಥವಾಗೊಲ್ಲ...."

"ನಾನು ಮಹೇಶನ್ನ ಟಾಲರೇಟ್ ಮಾಡ್ತಾ ಇರೋದು... ಒಂಥರಾ ಸಿಕ್ಕಿಬಿದ್ದಿದೀನಿ...." ಸುಜಯ ಮತ್ತೆ ನಕ್ಕಳು.

"ಎಲ್ಲಾ ಗೊತ್ತಿದ್ದೂ ನೀನು ನಗ್ಬೇಡ. ನಂಗೆ ಕೋಪ ಬರುತ್ತೆ....."

"ನಿನ್ನ ಕೋಪ ನಾಳೆವರೆಗೆ. ಆಮೇಲೆ ನನ್ನ ಕೈಗೆ ಎಲ್ಲಿ ಸಿಕ್ತೀಯಾ? ನೀನು ನಿನ್ನ ಗಂಡನ ಹಿಂದೆ, ದಿಲೀಪ ಅವನ ವುಡ್‌ಬೀ ಮುಂದೆ.... ಆಮೇಲೆ ನನಗೆ ಇಲ್ಲಿ, ಕೇಳೋರೂ ಇಲ್ಲ; ಹೇಳೋರೂ ಇಲ್ಲ...." ಅಷ್ಟರಲ್ಲಿ ದಿಲೀಪ ಬಂದ.

"ಹಾಯ್ ಸುಜೀ.... ಯಾವಾಗ ಬಂದ್ಯೇ?"

"ಏನಪ್ಪಾ ಮದುಮಗ.... ಎಲ್ಲಿಗೆ ಹೋಗಿತ್ತು ಸವಾರಿ? ಮಾವನ ಮನೆಗಾ?"

"ಮಾವನ ಮನೆಗೆ, ವರಪೂಜೆ ಮಾಡಿಸ್ಕೊಂಡ ಮೇಲೇ ಹೋಗೋನು ನಾನು.... ದೀಪಾ, ಫೋಟೋ ತೋರ್ಸಿದ್ಯಾ ಸುಜಯಂಗೆ.... ಹೇಗೆ ಇದಾಳೆ?"

"ನೀನು ಒಪ್ಪಿಕೊಂಡಾದ ಮೇಲೆ, ಯಾರನ್ನೂ ಏನೂ ಕೇಳ್ಬಾರ್ದು. ಒಬ್ಬೊಬ್ಬರ ವ್ಯೂ ಒಂದೊಂದು ಥರ ಇರುತ್ತೆ.... ಚೆನ್ನಾಗಿರೋಲ್ಲ"

"ಹುಂ.... ಹೌದು.... ಆದರೆ ಚೆನ್ನಾಗಿದಾಳೆ ಅಂತ ಹೇಳಿದ್ರೆ, ನಂಗೂ ಖುಷಿಯಾಗುತ್ತೆ. ನನ್ನ ಸೆಲೆಕ್ಷನ್ ಬಗ್ಗೆ ಹೆಮ್ಮೆ ಮೂಡುತ್ತೆ"

"ಕಟ್ಕೊಂಡೋರ್ಗೆ ಕೋಡಗ ಮುದ್ದು.... ಹೆತ್ತೋರಿಗೆ ಹೆಗ್ಗಣ ಮುದ್ದು ಅಂತಾರಲ್ಲ ಹಾಗೆ" ದೀಪ ಕಿಲಕಿಲನೆ ನಕ್ಕಳು.

"ಹಾಕ್ತೀನಿ ನೋಡು ಒಂದು ಗುದ್ದು... ನಾಳೆ ಬರ್ತಾರಲ್ಲ ದಿನೇಶ... ಅವರನ್ನ ಕೇಳ್ತೀನಿ, ಈ ಕೋಡಗ ಹೇಗೆ ಅಂತ... ಹಾಗೇ ಹೆರ್ತೀಯಲ್ಲ ಹೆಗ್ಗಣಾನ ಅದು ಹೇಗಿರುತ್ತೆ ಅಂತ ನೋಡಿಯೇ ಬಿಡ್ತೀನಿ" ದಿಲೀಪನೂ ಚುಡಾಯಿಸಿದ.

"ಅಮ್ಮಾ, ನೋಡಮ್ಮಾ ದಿಲೀಪನ್ನ... ನನ್ನ ಮಗು ಇನ್ನೂ ಹುಟ್ಟಿಯೇ ಇಲ್ಲ ಅದನ್ನು ಹೆಗ್ಗಣ ಅಂತ ಅಂತಾನೆ" ದೀಪಾ ಅಳು ಮುಖ ಮಾಡಿದಳು.

"ಯಾಕೋ ದಿಲೀಪ, ಅವಳನ್ನು ಗೋಳು ಹೊಯ್ದು ಕೊಳ್ತೀಯ..."

"ಇರಲಿ ಬಿಡಿ ಅತ್ತೆ.... ನೀವು ಅವಳ ಪರವಹಿಸಬೇಡಿ.... ನಾಳೆಯಿಂದ ಅವಳು ಯಾರ ಕೈಗೂ ಸಿಗೊಲ್ಲ. ಇವನೂ ಅಷ್ಟೇ.... ಹೆಂಡ್ತಿ ಬಂದ ಮೇಲೆ, ಅವಳ ಹತ್ರ ಮಾತ್ರ ಮಾತಾಡ್ಬೇಕು... ಹಾಗೆ ಅಪ್ಪಣೆ ಬರುತ್ತೆ.... ಸ್ವಾತಂತ್ರ್ಯ ಎಲ್ಲಿರುತ್ತೆ?"

"ಪರವಾಗಿಲ್ಲ ಕಣೇ ನೀನೂನೂ.... ಸದ್ಯದಲ್ಲೇ ಮಹೇಶನ ಸ್ವಾತಂತ್ರ್ಯವನ್ನು ನೀನು ಕಿತ್ಕೋತಾ ಇದೀಯ ಅಂತನ್ನು..."

"ಹೌದೇನಮ್ಮಾ ಸುಜಯಾ.... ಯಾವಾಗ ಮದುವೆ? ಪ್ರಭಾವತಿ ಹೇಳಲೇ ಇಲ್ಲ... ಗುಟ್ಯಾಕೆ?"

"ಇಲ್ಲ ಅತ್ತೇ.... ಇವರೆಲ್ಲ ತಮಾಷೆ ಮಾಡ್ತಿದಾರೆ.... ನನ್ನ ಮದುವೆ ವಿಷಯ ನಂಗೇ ಗೊತ್ತಿಲ್ಲ....." ದೀಪಾ ವ್ಯಥೆಯಿಂದ ಸುಜಯಳ ಕಡೆ ನೋಡಿದಳು. ಏನು ಎನ್ನುವಂತೆ ನೋಡಿದ್ದಳು ಸುಜಯ. ಅವಳಿಗೆ ಅರ್ಥವಾಗಲಿಲ್ಲ.

* * *

ಡೆಲ್ಲಿಯಿಂದ ಬರುವ ಏರೋಪ್ಲೇನ್ ಸಮಯಕ್ಕೆ ಸರಿಯಾಗಿ ಇಳಿದಿತ್ತು. ದಿನೇಶನನ್ನು ಎದುರು ನೋಡುತ್ತಾ ಎಲ್ಲರೂ ತುದಿಗಾಲಲ್ಲಿ ನಿಂತಿದ್ದರು. ದಿನೇಶ ಬರುತ್ತಿದ್ದಂತೆ, ಸುಜಯ ದಿಲೀಪನ ಹೊರತು ಉಳಿದವರೆಲ್ಲ ಸುತ್ತುವರೆದಿದ್ದರು.

"ಯಾಕೇ ಸುಜೀ ಇಲ್ಲೇ ನಿಂತ್ಬಿಟ್ಟೆ. ನೀನು ಹೋಗಿ ಗ್ರೀಟ್ ಮಾಡೋಲ್ವಾ?" ದಿಲೀಪ ಕೇಳಿದ.

"ನಾನಾ.... !" ಸುಜಯ ನಕ್ಕು ದಿನೇಶನನ್ನೇ ನೋಡಿದ್ದಳು. "ನೀನು?"

"ನನಗೆ ಹಾಗೆ ಎಲ್ಲರ ಮಧ್ಯೆ ತಳ್ಳಿಕೊಂಡು ಹೋಗು ಗ್ರೀಟ್ ಮಾಡುವ ಆತುರ ಇಲ್ಲ.... ಹೇಗೂ ಆಮೇಲೆ ಸಿಗ್ತಾರಲ್ಲ...." ದಿನೇಶ ತಾಯಿಯನ್ನು ಮಾತನಾಡಿಸಿ, ಮಹೇಶನನ್ನು ತಬ್ಬಿಕೊಂಡು, ಶಿವರಾಮಯ್ಯ ದಂಪತಿಗಳಿಗೆ ಕೈ ಮುಗಿದು ದೀಪಾಳ ಕಡೆ ತಿರುಗಿದ. ಉಳಿದವರು ಅವರಿಬ್ಬರನ್ನು ಬಿಟ್ಟು ಇತ್ತ ಕಡೆ ಬಂದರು....

"ದೀಪ್ಸ್.... ಹೇಗಿದೀಯಾ?" ಹೆಂಡತಿಯ ಭುಜವನ್ನು ಬಳಸಿದ.

"ಐ ಮಿಸ್ಡ್ ಯೂ.... ದಿನೇಶ್...." ದೀಪಾ ಅವನ ಭುಜಕ್ಕೆ ಒರಗಿದಳು. ದಿಲೀಪ ತನ್ನ ಕ್ಯಾಮೆರಾ ಕ್ಲಿಕ್ ಮಾಡಿದ. ಸುಜಯ ದಿಲೀಪನನ್ನು ಚಿವುಟಿದಳು.

"ಕಳ್ಳಾ.... ಇದಕ್ಕಾ ದೂರ ನಿಂತಿದ್ದು"

"ಎಲ್ರೂ ಒಟ್ಗೇ ನಿಂತ್ಕೊಳ್ಳಿ. ಒಂದು ಗ್ರೂಫ್ ಫೋಟೋ...." ಸುಜಯಳಿಗೆ ಸಂಕೋಚವೆನಿಸಿತ್ತು. ಸುಮ್ಮನೇ ನಿಂತಿದ್ದವಳನ್ನು ವನಜಮ್ಮ ಕೈ ಹಿಡಿದು ಕರೆತಂದಳು. ಎಲ್ಲರೂ ದಿಗ್ಭ್ರಮೆ ಹಿಡಿದವರಂತೆ ಆಕೆಯನ್ನು ನೋಡಿದರು.

"ನೀನು ಇಲ್ಲಿ ಮಹೇಶನ ಪಕ್ಕದಲ್ಲಿ ನಿಂತ್ಕೋ...." ದಿಲೀಪ ಸುಜಯಳ ಕಡೆ ನೋಡಿ ಕಣ್ಣು ಹೊಡೆದ.... ಸುಜಯ ಮಹೇಶನ ಪಕ್ಕ ನಿಂತಳು. ಕ್ಯಾಮೆರಾ ಫ್ಲಾಶ್ ಹೊಳೆಯಿತು.

ಎಲ್ಲರೂ ಮೊದಲಿಗೆ ಇವರ ಮನೆಗೇ ಬಂದರು. ದಿನೇಶ ಒಳ ಬಂದು ಮನೆಯ ಒಳಗೆಲ್ಲಾ ಒಮ್ಮೆ ಕಣ್ಣು ಹಾಯಿಸಿದ.... ಗೋಡೆಯ ಮೇಲಿದ್ದ ಫೋಟೋ ಕಾಣಲಿಲ್ಲ.

"ಅಮ್ಮಾ.... ಇಲ್ಲಿ ಇತ್ತಲ್ಲ ಹಳೆಯ ಫೋಟೋ.... ತೆಗೆದುಬಿಟ್ಟಿದೀರಲ್ಲ..." ದೀಪಾ ಮಹೇಶ ಮುಖ ಮುಖ ನೋಡಿಕೊಂಡರು.

"ಗಾಜು ಒಡೆದು ಹೋಯ್ತು.... ಮತ್ತೆ ಹಾಕಿಸ್ಲಿಲ್ಲ... ಒಳಗೆ ಬಾ. ಕೂತ್ಕೋ ಎಲ್ರಿಗೂ ಜ್ಯೂಸ್ ಕೊಡ್ತೀನಿ...." ಕೆಲವೇ ನಿಮಿಷಗಳಲ್ಲಿ ವನಜಮ್ಮ ಗ್ಲಾಸುಗಳಿಗೆ ಕಿತ್ತಲೆ ಜ್ಯೂಸನ್ನು ಹಾಕಿಕೊಂಡು ತಂದುಕೊಟ್ಟಳು.

"ಎಲ್ರೂ ಇಲ್ಲೇ ಊಟ ಮಾಡ್ಕೊಂಡು ಹೋಗೋರಂತೆ. ದಿನೇಶ ಒಂದು ಗಳಿಗೆ ಸುಧಾರಿಸ್ಕೋ. ಆಯಾಸ ಆಗಿರಬಹುದು"

"ಪ್ಲೇನ್‌ನಲ್ಲಿ ಏನು ಆಯಾಸ ಆಗಿರುತ್ತೆ?" ಮಹೇಶ ನಕ್ಕ. ದಿಲೀಪನೂ ತನ್ನ ನಗೆಯನ್ನು ಸೇರಿಸಿದ. ದಿನೇಶ ಎದ್ದು ತನ್ನ ರೂಮಿಗೆ ಹೋದ. ದೀಪ ಸದ್ದಿಲ್ಲದೇ ಅವನ ಹಿಂದೆ ನಡೆದಳು.

"ನಾನೂ ಕ್ಯಾಮೆರಾ ಹಿಡ್ಕೊಂಡು ಅವರಿಬ್ರ ಹಿಂದೆ ಹೋಗ್ಲೇನೇ ಸುಜೀ...." ದಿಲೀಪ ತಮಾಷೆ ಮಾಡಿದ. ಸುಜೀ ಅವನ ಕೈ ಮೇಲೆ ಹೊಡೆದಳು.

"ಸುಜಯಾ.... ಇಲ್ಲಿ ಬಾ... " ವನಜಮ್ಮ ಅಡುಗೆ ಮನೆ ಬಾಗಿಲ್ನಲ್ಲಿ ನಿಂತು ಕರೆದಾಗ ಅವಳು ತಬ್ಬಿಬ್ಬಾಗಿ ಮಹೇಶನ ಕಡೆ ನೋಡಿದಳು.

"ಏನಮ್ಮಾ... ಏನ್ಬೇಕಾಗಿತ್ತು?" ಮಹೇಶ ಅತ್ತ ನಡೆದ.

"ನಾನು ಕರೆದದ್ದು ಅವಳನ್ನು... ನಿನ್ನನ್ನಲ್ಲ....."

"ಹೋಗಿ ಭಾವೀ ಸೊಸೆಯವರೇ.... ಭಾವಿ ಅತ್ತೆಯ ಕರೆ ಬಂದಿದೆ" ದಿಲೀಪ ನಾಟಕೀಯವಾಗಿ ನುಡಿದ. ಸುಜಯ ಶಕುಂತಲನ ಕಡೆ ನೋಡುತ್ತಾ ಎದ್ದು

ಹೋಗಿದ್ದಳು.

"ಇಲ್ಲಿ ಕ್ಯಾರಿಯರ್‌ನಲ್ಲಿ ಊಟ ತರಿಸಿದ್ದಾಗಿದೆ. ಸ್ವಲ್ಪ ಏನೇನಿದೆ ಅಂತ ನೋಡ್ತೀಯಾ? ನಾನು ತಟ್ಟೆ ಬಟ್ಟಲುಗಳನ್ನು ಇಡ್ತೀನಿ"

"ನಾನಾ?"

"ಹೂಂ ನೀನೇ.... ಎಲ್ಲರಿಗಿಂತ ಚಿಕ್ಕೋಳು ನೀನು. ದೀಪ ತನ್ನ ಗಂಡನೊಂದಿಗೆ ಮಾತಾಡ್ತಿರಬಹುದು. ಎಷ್ಟೋ ದಿನಗಳ ಮಾತು ಇರುತ್ತೆ...." ಸುಜಯ ಕ್ಯಾರಿಯರ್ ಬಟ್ಟಲುಗಳನ್ನು ತೆಗೆಯಲು ಪ್ರಯಾಸ ಪಡುತ್ತಿರುವಾಗ ಮಹೇಶ ಅವಳಿಗೆ ಸಹಾಯ ಮಾಡಿದ.

"ನನ್ನ ಕಣ್ಣುಗಳನ್ನು ನನ್ನ ಕಿವಿಗಳನ್ನು ನಂಬುಕ್ಕೆ ಆಗ್ತಿಲ್ಲ. ನೀವೇನಾದ್ರೂ ಮಂತ್ರ ಮಾಡಿದೀರಾ?" ಮಹೇಶ ಪಿಸುದನಿಯಲ್ಲಿ ಕೇಳಿದ.

"ಇಲ್ಲಪ್ಪ. ಮಂತ್ರ ತಂತ್ರ ಏನೂ ಗೊತ್ತಿಲ್ಲ ನಂಗೆ... ಅಂದ್ಹಾಗೇ ಗೋಡೆ ಮೇಲೆ ಇತ್ತಲ್ಲ ಫೋಟೋ... "

"ಆ ಫೋಟೋನ ಕಿತ್ತು ಬಿಸ್ಹಾಕಿದೆ... ಅದರಿಂದ ನನ್ನ ನೆಮ್ಮದಿಯೇ ಹೊರಟು ಹೋಗಿತ್ತು...."

"ಈಗ ನೆಮ್ಮದಿ ಸಿಗ್ತಾ ಇದೆಯಾ?"

"ಬಹುಶಃ ಸಿಗ್ತಾ ಇದೆ ಅಂತ ಕಾಣ್ತಾ ಇದೆ. ಏನೇನೋ ಬದಲಾವಣೆ ಆಗ್ತಿದೆ... ಅಮ್ಮ ಬದಲಾಗಿದ್ದಾಳೆ.... ನೀವೂ ಬದಲಾಗಿದ್ದೀರಿ....."

"ನಾನಾ! ಇಲ್ಲವಲ್ಲ. ಹಾಗೇ ಇದೀನಿ...."

"ಹೋಗ್ಲಿ ಬಿಡಿ. ಮನೆಯ ವಾತಾವರಣ ಮಾತ್ರ ಬದಲಾಗಿದೆ"

"ಆಯ್ತೇನೋ ಮಹೀ.... ಏನೇನಿದೆ ಕ್ಯಾರಿಯರ್‌ನಲ್ಲಿ!"

"ಚಪಾತಿ, ಪಲ್ಯ, ಸಾಂಬಾರು.... ಅನ್ನ, ಉಪ್ಪಿನಕಾಯಿ, ಮೊಸರು, ಜಾಮೂನು ಎಲ್ಲಾ ಇದೆ"

"ಆರು ತಟ್ಟೆ ಹಾಕು.... ನಾನು ಬಡಿಸ್ತೀನಿ"

"ನಾವು ಏಳು ಜನ ಇದೀವಮ್ಮಾ...."

"ನಂಗೊತ್ತು. ಟೇಬಲ್ ಮೇಲೆ ಜಾಗ ಸಾಕಾಗಬೇಕಲ್ಲ. ಸುಜಯ ಆಮೇಲೆ ನನ್ನ ಜೊತೆಗೆ ಕೂತ್ಕೋತಾಳೆ...."

"ಸುಜಯ ಗೆಸ್ಟ್. ಅವಳು ಕೂತ್ಕೊಳ್ಳಲಿ. ನಾನು ಆಮೇಲೆ ಕೂತ್ಕೋತೀನಿ"

"ಸರಿ. ನಿನ್ನಿಷ್ಟ"

"ಹೋಗು ಸುಜಯಾ.... ಎಲ್ರನ್ನೂ ಕರೆದು ಬಾ... " ಸುಜಯ ಹೊರಬಂದಳು. ದಿನೇಶನ ರೂಮಿನ ಬಾಗಿಲನ್ನ ಓರೆ ಮಾಡಿತ್ತು. ದಿಲೀಪನಿಗೆ ಸಂಜ್ಞೆ ಮಾಡಿದಳು. ಅವನು ಬಾಗಿಲನ್ನು ಕೈಯಿಂದ ಮೆಲ್ಲನೆ ಬಡಿದ. ದೀಪಾ ಬಾಗಿಲನ್ನು ತೆಗೆದು

ನೋಡಿದಳು.

"ಒಂದ್ನಿಮಿಷ ಇಬ್ರೂ ಹಾಗೇ ನಿಂತ್ಕೊಳ್ಳಿ...." ಕ್ಯಾಮೆರಾವನ್ನು ತೆಗೆದ.

"ಅತೀ ಅತಿಯಾಯ್ತು ನಿಂದು...." ದೀಪಾ ರೇಗಿದಳು.

"ಈಗ ನೋಡು, ವಿರಹದ ತಾಪ ಮುಖದಲ್ಲಿ ಕಾಣುತ್ತಿಲ್ಲ...." ದಿಲೀಪ ರೇಗಿಸಿದ. ದೀಪಾ ಅವನನ್ನು ತಳ್ಳಿ ಇತ್ತ ಹೊರಬಂದಳು. ಅವಳ ಹಿಂದೆ ದಿನೇಶನೂ ಬಂದ. ಅಲ್ಲೇ ಸಮೀಪದಲ್ಲಿ ನಿಂತಿದ್ದ ಸುಜಯಳ ಕಡೆ ನೋಡಿದ. ಪೆಚ್ಚು ಪೆಚ್ಚಾಗಿ ನಕ್ಕ. ಸುಜಯಳೂ ಮಂದಹಾಸ ಬೀರಿದಳು.

"ಬಾರೇ ಸುಜೀ.... ಬನ್ನಿ ಮಹೇಶ್...." ದಿಲೀಪ ಊಟಕ್ಕೆ ಕರೆದ.

"ನಾನು ಆಮೇಲೆ ಊಟಕ್ಕೆ ಕೂತ್ಕೋತೀನಿ" ಇಬ್ಬರೂ ಒಟ್ಗೇ ನುಡಿದು ನಕ್ಕರು.

"ನೋಡಪ್ಪಾ ಎಂಥಾ ಒಗ್ಗಟ್ಟು.... ನೀವು ಬನ್ನಿ ಮಹೇಶ್, ಅವಳಿಗೆ ಆಂಟಿಯನ್ನು ಮೆಚ್ಚಿಸುವ ಆಸೆ...." ಆದರೆ ಇಬ್ಬರೂ ಕುಳಿತುಕೊಳ್ಳಲಿಲ್ಲ. ಮಹೇಶ ಕೈ ಕಟ್ಟಿ ಬಾಗಿಲ ಬಳಿ ನಿಂತಿದ್ದ. ಸುಜಯ ತಾಯಿಗೆ ಸಹಾಯ ಮಾಡುತ್ತಿದ್ದಳು.... ಇದು ಪ್ರಪಂಚದ ಮಹಾ ಅದ್ಭುತಗಳಲ್ಲಿ ಒಂದು ಎಂಬಂತೆ, ಮಹೇಶ ತಾಯಿಯನ್ನೇ ಗಮನಿಸುತ್ತಿದ್ದ. ಸುಜಯ ನಿರಾಳವಾಗಿದ್ದಾಳೆ. ಹಿಂದಿನ ಯಾವುದೇ ವಿಚಿತ್ರ ಅನುಭವ ಗಳು ಮರುಕಳಿಸಿಲ್ಲ. ತಾಯಿ ಬದಲಾಗಿದ್ದಾಳೆ. ಆ ಫೋಟೋದಲ್ಲಿ ಏನೋ ದುಷ್ಟ ಶಕ್ತಿ ಇತ್ತು ಅಂತ ಕಾಣುತ್ತೆ... ಇದ್ದಕ್ಕಿದ್ದಂತೆ, ತಾನು ಡಾ. ಶಂಕರ್‌ಗೆ ಕೊಟ್ಟ ಸಣ್ಣ ಫೋಟೋಗಳ ನೆನಪಾಗಿತ್ತು. ಮಂತ್ರ ತಂತ್ರಕ್ಕಿಂತ ಹೆಚ್ಚಿನ ಯಾವುದೋ ಪವಾಡ ಜರುಗಿದೆ ಅದನ್ನು ತಿಳಿಯಲೇ ಬೇಕು ಅಂತಂದುಕೊಂಡ.

"ಅಡುಗೆಯೆಲ್ಲಾ ತುಂಬಾ ಚೆನ್ನಾಗಿದೆ" ಶಿವರಾಮಯ್ಯ ಹೊಗಳಿದರು.

"ಅಪ್ಪ.... ಸ್ವಲ್ಪ ಕೇರ್ ಫುಲ್ ಆಗಿ ತಿನ್ನಿ...." ದಿಲೀಪ ಎಚ್ಚರಿಸಿದ. ದಿನೇಶ, ದೀಫಾ, ತಮ್ಮ ತಮ್ಮಲ್ಲೇ ಏನೋ ಮಾತನಾಡಿಕೊಂಡು ಊಟ ಮಾಡುತ್ತಿದ್ದರು. ವನಜಮ್ಮ ಉತ್ಸಾಹದ ಚಿಲುಮೆಯಾಗಿದ್ದಳು.

"ದಿನೇಶ ಬಂದಿರುವ ಸಂತೋಷ ಅಮ್ಮನಲ್ಲಿ ಎದ್ದು ಕಾಣುತ್ತಿದೆ..." ಮಹೇಶ ಅಸೂಯೆಗೊಂಡಿರಲಿಲ್ಲ. ಆದರೂ ಎದೆಯ ಮೂಲೆಯಲ್ಲಿ ಎಲ್ಲೋ ಪಿನ್ನು ಚುಚ್ಚಿ ದಂತಾಗಿತ್ತು. ಇನ್ನು ಕೆಲವೇ ದಿನಗಳಲ್ಲಿ ತಾನು ಬೇರೆ ಊರಿಗೆ ಹೊರಟು ಹೋಗ್ತೀನಿ.... ಆಗ ಅಮ್ಮ, ದಿನೇಶ, ಅತ್ಗೆ ಇಷ್ಟೇ ಜನ...." ಯಾಕೋ• ಆ ಅನಿಸಿಕೆಯೂ ಹಿತವೆನಿಸಲಿಲ್ಲ.

"ಸುಜೀ.... ದಿನೇಶಂಗೆ ಜಾಮೂನು ಅಂತಂದ್ರೆ ಭಾಳ ಇಷ್ಟ.... ಇನ್ನೆರಡು ಹಾಕು...."

"ನಂಗೊತ್ತು" ಎನ್ನುತ್ತಾ ಸುಜೀ ಜಾಮೂನಿನ ಕಪ್ಪನ್ನು ದಿನೇಶನ ಮುಂದಿಟ್ಟಳು.

"ನಿಮಗೆ ಹೇಗೆ ಗೊತ್ತು?" ದಿನೇಶ ಪ್ರಶ್ನಿಸಿದ. ಸುಜಯ ಉತ್ತರಿಸಲಿಲ್ಲ.

"ನಾನೇ ಹೇಳಿದ್ದೆ ಅಂತ ಕಾಣುತ್ತೆ" ದೀಪಾ ಸಮರ್ಥಿಸಿಕೊಂಡಳು.

ಅವರುಗಳ ಊಟ ಮುಗಿದಿತ್ತು. ದೀಪಾ ಹೊಟ್ಟೆ ಭಾರ ಆಯಿತು ಎನ್ನುವ ನೆವ ಹಾಕಿಕೊಂಡು ರೂಮನ್ನು ಸೇರಿದ್ದಳು. ದಿನೇಶನೂ ಯಾವುದೋ ಮಾಯದಲ್ಲಿ ರೂಮಿಗೆ ಹೋಗಿದ್ದ. ಮಹೇಶ ಎಲ್ಲರ ತಟ್ಟೆಗಳನ್ನು ತೆಗೆದು ಇಟ್ಟ. ಟೇಬಲನ್ನು ಒರೆಸಿದ. ಸುಜಯಳೇ ಮತ್ತೆ ಉಳಿದವರಿಗೆ ತಟ್ಟೆ ಹಾಕಿದಳು. "ನಾನು ಬಡಿಸ್ತೀನಿ" ಶಕುಂತಲ ಸೆರಗನ್ನು ಸೊಂಟಕ್ಕೆ ಸಿಕ್ಕಿಸಿ ನಿಂತಳು... ಮಹೇಶ ಸುಜಯ ಪಕ್ಕ ಪಕ್ಕದಲ್ಲಿ ಕುಳಿತಿದ್ದರೂ ಯಾವ ಮಾತಿಲ್ಲ. ವನಜಮ್ಮ ಆಗಾಗ್ಗೆ ಇಬ್ಬರನ್ನು ನೋಡುತ್ತಿದ್ದುದು ಅವರಿಬ್ಬರ ಗಮನಕ್ಕೆ ಬಂದಿತ್ತು. ಊಟ ಮುಗಿದರೆ ಸಾಕೆನ್ನಿಸಿತ್ತು ಅವಳಿಗೆ. ತಾಯಿ ಯಾವಾಗ ಏನಂದು ಬಿಡುವಳೋ ಎಂಬಂತೆ ಮಹೇಶ ಆತಂಕದಲ್ಲಿ ಊಟ ಮಾಡುತ್ತಿದ್ದ.

"ಯಾಕೋ ಸರಿಯಾಗಿ ಊಟ ಮಾಡ್ತಿಲ್ಲ? ಅಡುಗೆ ಚೆನ್ನಾಗಿಯೇ ಇದೆಯಲ್ಲ"

"ಮಾಡ್ತಿದೀನಲ್ಲ...." ಮೌನವಾಗಿ ಮೂರೂ ಜನರೂ ಊಟವನ್ನು ಮುಗಿಸಿದರು.

"ನಾವಿನ್ನು ಬರ್ತೀವಿ" ಶಿವರಾಮಯ್ಯ ದಂಪತಿಗಳು ಹೊರಟರು.

"ನೀನೂ ಬಾರೇ ಸುಜೀ.... ನಿಮ್ಮ ಮನೆಗೆ ಬಿಡ್ತೀವಿ" ದಿಲೀಪನೆಂದ.

"ಆಮೇಲೆ ಮಹೇಶ ಬೇಕಾದ್ರೆ ಬಿಡ್ತಾನೆ. ದೀಪಾನೂ ಏಳಲಿ...." ವನಜಮ್ಮನೆಂದಳು. ದಿಲೀಪ ಮಹೇಶನ ಕಡೆ ನೋಡಿ ಕಣ್ಣು ಹೊಡೆದ.

"ಅಮ್ಮ.... ಅತ್ಗೆ ಇಲ್ಲೇ ಇರ್ತಾರೆ ಅಲ್ವಾ? ಸುಜಯ ಹೋಗಲಿ" ಹಾಗೆ ಬಾಯಿ ಹೇಳಿದ್ದರೂ, ಸುಜಯ ಇರಲಿ ಎಂದು ಮನ ಬಯಸಿತ್ತು. ಅವಳ ಕಡೆ ನೋಡಿ ಹೋಗಬೇಡ ಎನ್ನುವಂತೆ ಸಂಜ್ಞೆ ಮಾಡಿದ. ಅವಳು ಉತ್ತರಿಸದಿದ್ದಾಗ ದಿಲೀಪ ನಕ್ಕ.

"ಓ.ಕೆ ನಿನ್ನಿಷ್ಟ.... ನಾನು ಅಪ್ಪ ಅಮ್ಮನ್ನ ಮನೆಗೆ ಬಿಟ್ಟು, ನಾನೂ ಎಲ್ಲೋ ಹೋಗ್ಬೇಕು. ನನಗೋಸ್ಕರ ಒಬ್ರು ಕಾಯ್ತಾ ಇದಾರೆ.... ಬೈ" ವನಜಮ್ಮ ಸುಜಯಳ ಕೈಯಲ್ಲಿ ಶಕುಂತಲನಿಗೆ ಎಲೆ ಅಡಿಕೆ ಹಣ್ಣುಗಳನ್ನು ಅರಿಶಿನ ಕುಂಕುಮದೊಂದಿಗೆ ಕೊಡಿಸಿದಳು.

"ನಿಮ್ಮ ಅತ್ತೆ ಮಾವನಿಗೆ ನಮಸ್ಕಾರ ಮಾಡು.... ಮಹೀ ನೀನೂ ಮಾಡು" ಮಹೇಶ ತಾಯಿಯನ್ನೇ ವಿಚಿತ್ರವಾಗಿ ನೋಡಿ, ಅವರಿಬ್ಬರಿಗೆ ನಮಸ್ಕರಿಸಿದ. ಸುಜಯಳೂ ನಮಸ್ಕರಿಸಿದಳು.

"ಆದಷ್ಟು ಬೇಗ ಮದುವೆಯಾಗಲಿ ಅಂತ ಆಶೀರ್ವಾದ ಮಾಡಿ" ವನಜಮ್ಮ ಹೇಳಿದಾಗ ಸುಜಯ ಕೆಂಪಾಗಿದ್ದಳು. ಮಹೇಶ ಅಚ್ಚರಿಗೊಂಡಿದ್ದ. ಅವರೆಲ್ಲರನ್ನೂ ಬೀಳ್ಕೊಟ್ಟು ಬಂದು, "ನಾನು ಸ್ವಲ್ಪ ಹೊತ್ತು ಮಲಗಿರ್ತೀನಿ... ಆಮೇಲೆ ಎದ್ದು

ಕಾಫಿ ಮಾಡ್ತೀನಿ. ಅಷ್ಟು ಹೊತ್ತಿಗೆ ದಿನೇಶನೂ ಏಳ್ತಾನೆ" ಎಂದು ಹೇಳಿ ಅವರಿಬ್ಬರನ್ನು ಅಲ್ಲಿಯೇ ಬಿಟ್ಟು ತನ್ನ ರೂಮಿಗೆ ಹೋಗಿದ್ದಳು.

ತಾಯಿಯ ಆಂತರ್ಯದಲ್ಲಿ ಏನಿದೆ! ಹೀಗೇಕೆ ವಿಭಿನ್ನವಾಗಿ ಆಡುತ್ತಿದ್ದಾಳೆ ಎಂದು ಅರಿಯದ ಮಹೇಶ, ಸುಜಯ ಏನು ಯೋಚಿಸುತ್ತಿರಬಹುದು ಎಂದು, ಒಂದೆರಡು ಬಾರಿ ಅವಳನ್ನೇ ನೋಡಿದ. ಅವಳು ಮಂದಹಾಸ ಬೀರಿ, ಅವನನ್ನು ಪ್ರಸನ್ನಗೊಳಿಸಿದ್ದಳು.

"ನೀವೂ ಒಂದು ಗಳಿಗೆ ರೆಸ್ಟ್ ತಗೊಳ್ಳಿ.... ನಾನು ಟಿ.ವಿ. ನೋಡ್ತಾ ಇರ್ತೀನಿ"

"ಪರವಾಗಿಲ್ಲ. ನನಗೂ ಮಧ್ಯಾಹ್ನದ ಹೊತ್ತು ಮಲಗಿ ಅಭ್ಯಾಸವಿಲ್ಲ" ಇಬ್ಬರೂ ಕುಳಿತು, ಟಿ.ವಿಯಲ್ಲಿ ಬರುತ್ತಿದ್ದ ಮೂವಿಯನ್ನು ನೋಡಿದರು. ಸಮೀಪದಲ್ಲಿ ಕುಳಿತಿದ್ದರೂ, ಇಬ್ಬರಲ್ಲೂ ಮಾತಿರಲಿಲ್ಲ. ವನಜಮ್ಮ ನಿದ್ದೆ ಮುಗಿಸಿ ಎದ್ದು ಬಂದು ಬಾಗಿ ನೋಡಿದ್ದಳು.... ಕಾಫಿಯನ್ನು ಬೆರೆಸಿ ತಂದುಕೊಟ್ಟಳು.

"ಮಲಗಲಿಲ್ವೇನೋ ಮಹೀ...."

"ಅಲ್ಲಮ್ಮ.... ಇಲ್ಲಿ ಇವರು ಒಬ್ರೇ.... ಅತ್ಗೇನೂ ಮಲಗಿದಾರೆ. ನೀನೂ ಮಲಗಿಬಿಟ್ರೆ..... ಇವರು ಏನಂದುಕೊಳ್ತಾರೆ? ಅದಕ್ಕೆ ನಾನೇ ಕಂಪನಿ ಕೊಟ್ಟೆ"

"ಒಳ್ಳೇದೇ ಆಯ್ತು ಬಿಡು.... ಕಾಫಿ ಕುಡಿದು ಮುಖ ತೊಳ್ಕೋ.... ಇವನು ನಿನ್ನನ್ನು ಮನೆಗೆ ಬಿಟ್ಟು ಬರ್ತಾನೆ...." ಸುಜಯನಿಗೆ ಹೇಳಿದಳು.

"ಅತ್ಗೇನೂ ಏಳಲಿ...."

"ಅವಳು ಯಾವಾಗ ಏಳ್ತಾಳೋ ಏಳಲಿ. ಬಸಿರಿ ಹುಡುಗಿ ಮಲಗಿದ್ದಾಗ ಎಬ್ಬಿಸ ಬಾರದು. ನಿನ್ನ ಬೈಕ್‌ನಲ್ಲಿ ಕರ್ಕೊಂಡು ಹೋಗಿ ಬಿಟ್ಟು ಬಾ.... ದಿನೇಶ ಎದ್ದ ಮೇಲೆ ಅವನಿಗೆ ಕಾರು ಬೇಕಾಗಬಹುದು" ಮಹೇಶ ತಾಯಿಗೆ ತಲೆ ಕೆಡುತ್ತಿದೆ ಎಂದೇ ಭಾವಿಸಿದ. ಕೆಲವೇ ಕ್ಷಣಗಳಲ್ಲಿ ಅವರಿಬ್ಬರೂ ಬೈಕ್ ಏರಿದ್ದರು.

"ಅಮ್ಮ ಏನೇನೋ ಮಾತಾಡಿದ್ಲು.... ನೀವು ತಪ್ಪು ತಿಳ್ಕೋ ಬೇಡಿ...."

"ದಿನೇಶನ್ನ ಆರು ತಿಂಗಳಿಂದ ಬಿಟ್ಟಿದ್ರಲ್ಲ. ಅವರು ಊರಿಗೆ ಬಂದ ಸಂತಸಕ್ಕೆ ನಿಮ್ಮ ತಾಯಿ ಸ್ವಲ್ಪ ಎಮೋಷನಲ್ ಆಗಿರಬಹುದು.... ನಾನು ಖಂಡಿತಾ ತಪ್ಪು ತಿಳ್ಕೋಳಲ್ಲ....."

"ಬೈಕ್‌ನಲ್ಲಿ ನನ್ನ ಹಿಂದೆ ಕೂತಿರೋದು ಮುಜುಗರ ಅಂತ ಅನ್ನಿಸ್ತಿದೆಯಾ?"

"ಇಲ್ಲ. ನಿಮ್ಮ ತಾಯಿ ಪರ್ಮಿಷನ್ ಸಿಕ್ಕಿರುವಾಗ, ನನಗ್ಯಾಕೆ ಮುಜುಗರ?"

"ಅಂದ್ರೇ...."

"ಅಂದ್ರೇ... ನಿಮ್ಮ ತಾಯಿ ನಮ್ಮಿಬ್ಬರ ಮದುವೆಗೆ ಒಪ್ಪಿರಬಹುದು"

"ನಿಮಗೆ ಹಾಗೆನ್ನಿಸ್ತಾ? ನನಗೇನೂ ಅನ್ನಿಸಲಿಲ್ಲ...." ಬೇಕಂತ ಹೇಳಿದ.

"ಹೌದು ಮಹೇಶ್, ನಾನು ನಿಮ್ಮ ತಾಯಿಯ ವರ್ತನೆಯಲ್ಲಿ ಬದಲಾವಣೆಗಳನ್ನು

ಗಮನಿಸಿದೀನಿ...." ಮಹೇಶ ಇದ್ದಕ್ಕಿದ್ದಂತೆ ಬ್ರೇಕ್ ಹಾಕಿದ. ಅವಳು ಅವನ ಬೆನ್ನ ಮೇಲೆ ಒರಗಿದಳು.

"ಏನಾಯ್ತು? ಯಾಕೆ ಬ್ರೇಕ್ ಹಾಕಿದ್ರಿ?"

"ಏನೂ ಇಲ್ಲ" ಎನ್ನುತ್ತಾ ಸೀದಾ ಅವಳನ್ನು ಅವಳ ಮನೆಯ ಮುಂದೆ ಇಳಿಸಿದ. "ಬೈ" ಎಂದ.

"ಒಳಕ್ಕೆ ಬರೋಲ್ವಾ?"

"ಇಲ್ಲ. ಇವತ್ತು ಬರೋಲ್ಲ. ದಿನೇಶನ ಹತ್ರ ಮಾತಾಡ್ಬೇಕು. ಅಮ್ಮನ್ನ ಸ್ವಲ್ಪ ವಿಚಾರಿಸ್ಕೋಬೇಕು" ಎನ್ನುತ್ತಾ ಬೈಕನ್ನು ಹಿಂದಕ್ಕೆ ಓಡಿಸಿದ. ಅವನನ್ನು ಕಂಡೊಡನೆ ವನಜಮ್ಮ ಅವನನ್ನು ಮನೆಯಲ್ಲಿ ಬಿಟ್ಟು ದೇವಸ್ಥಾನಕ್ಕೆ ಹೋಗಿ ಬರುತ್ತೇನೆಂದು ಹೊರಟಳು. ದೀಪಾ, ದಿನೇಶ ರೂಮಿನಿಂದ ಹೊರಕ್ಕೆ ಬಂದಿರಲಿಲ್ಲ. ಮಹೇಶ ಆಶ್ರಮದ ಡಾಕ್ಟರಿಗೆ ಫೋನು ಮಾಡಿದ.

* * *

ಮಹೇಶ ಆಶ್ರಮಕ್ಕೆ ಬಂದಾಗ, ಡಾಕ್ಟರೊಡನೆ ಲೀಲಾಳೂ ಇದ್ದಳು. ಮಹೇಶ ಮುಜುಗರಗೊಂಡ. ಅವಳೇ 'ಹಲೋ' ಎಂದಳು. ಕುಳಿತುಕೊಳ್ಳುವಂತೆ ಹೇಳಿದಳು. "ನಾನು ಇನ್ನು ಹತ್ತು ನಿಮಿಷ ಬಿಟ್ಟು ಬರ್ತೀನಿ. ನೀವಿಬ್ಬರೂ ಮಾತನಾಡ್ತಿರಿ" ಎಂದು ಹೇಳಿ ಡಾಕ್ಟರು ಹೊರಟರು. ಸ್ವಲ್ಪ ಹೊತ್ತಿನಲ್ಲೇ ಅಡಿಗೆಯವರು ಕಾಫಿಯನ್ನು ತಂದಿಟ್ಟರು. ಲೀಲಾ ಮಾತಿಗೆ ಪ್ರಾರಂಭಿಸಿದಳು.

"ನಿಮ್ಮ ಬ್ರದರ್ ಬಂದರಂತೆ.... ಅವರನ್ನೂ ಒಮ್ಮೆ ನಮ್ಮ ಆಶ್ರಮಕ್ಕೆ ಕರ್ಕೊಂಡು ಬನ್ನಿ"

"ಹೂಂ. ಎರಡು ದಿನ ಆಯ್ತು. ನಿಮಗೆ ಹೇಗೆ ಗೊತ್ತಾಯ್ತು?"

"ಡಾಕ್ಟರು ಹೇಳಿದ್ರು.... ಅವರು ಇಲ್ಲಿ ಹತ್ತು ವರ್ಷಗಳಿಂದ ಇದಾರೆ.... ನಮ್ಮ ಸ್ವಂತದವರೇ ಆಗಿ ಬಿಟ್ಟಿದ್ದಾರೆ. ಇಲ್ಲಿ ನಡೆಯುವ ಪ್ರತಿಯೊಂದು ವಿಷಯವನ್ನೂ ನನಗೆ ತಿಳಿಸ್ತಾರೆ" ಮಹೇಶ ಸುಮ್ಮನೆ ಮುಗುಳ್ನಕ್ಕ.

"ನಿಮ್ಮ ಮದುವೆ ಯಾವಾಗ?" ಮಹೇಶ ಅಚ್ಚರಿಗೊಂಡ.

"ಏನೋ ಗೊತ್ತಿಲ್ಲ....." ಲೀಲಾ ನಕ್ಕಳು.

"ಸುಜಯನ್ನ ನಾವು ಸದ್ಯಕ್ಕೆ ಇಲ್ಲಿಂದ ಕಳಿಸುವುದಿಲ್ಲ.... ಇನ್ನೂ ಐದಾರು ತಿಂಗಳು ಇಲ್ಲೇ ಇರಬೇಕಾಗುತ್ತದೆ...."

"ಇದನ್ನು ನನಗ್ಯಾಕೆ ಹೇಳ್ತಿದೀರಿ?"

"ಯಾಕಂದ್ರೆ ನೀವು ಅವಳ ಪತಿಯಾಗ್ತಾ ಇರೋರು. ಅದಕ್ಕೇ...." ಮಹೇಶ ಕಸಿವಿಸಿಗೊಂಡು ಎದ್ದು ನಿಂತ.

"ನನ್ನ ಮಾತಿನಿಂದ ನಿಮಗೆ ಯಾಕೆ ಮುಜುಗರ ಆಗ್ತಿದೆಯೋ ನಂಗೆ ಗೊತ್ತಿಲ್ಲ.

ನಮ್ಮ ಚಿಕ್ಕಮ್ಮ ನನಗೆ ಮತ್ತೆ ಮದುವೆ ಮಾಡುವ ಆಸೆಯಿಂದ ನಿಮ್ಮನ್ನು ವಿಚಾರಿಸಿದ್ದು ನಿಜ.... ನಾನು ನನ್ನ ನಿರ್ಧಾರವನ್ನು ತಿಳಿಸುವ ಮೊದಲೇ, ನೀವು ಸುಜಯಳನ್ನು ಪ್ರೀತಿಸುತ್ತಿರುವ ವಿಷಯ ತಿಳಿಯಿತು. ಒಳ್ಳೇದೇ ಆಯ್ತು.... ಸುಜಯ ನಿಮಗೆ ತಕ್ಕವಳು. ನನಗೆ ಮರು ಮದುವೆ ಆಗುವ ಆಸೆ ಇಲ್ಲ. ವಿವೇಕನಿಗೆ ನಿರಾಸೆ ಆದದ್ದು ನಿಜ. ಆದರೆ ಅದನ್ನೇ ಮನಸ್ಸಿನಲ್ಲಿಟ್ಟುಕೊಂಡು ದ್ವೇಷ ಸಾಧಿಸುವ ಹುಡುಗನಲ್ಲ ಅವನು. ಹೋಗಲಿಬಿಡಿ. ಬೇರೆ ಟಾಪಿಕ್‌ಗೆ ಬರ್ತೀನಿ." ಏನೋ ಯೋಚಿಸಿ ಮತ್ತೆ ಮಾತನ್ನು ಮೊಂದುವರೆಸಿದಳು.

"ನೀವು ಡಾಕ್ಟರಿಗೆ ಕೊಟ್ಟಿದೀರಲ್ಲ ಫೋಟೋಗಳು. ಅವು ನಿಮ್ಮ ಮನೆಗೆ ಹೇಗೆ ಬಂತು?"

"ನಂಗೊತ್ತಿಲ್ಲ"

"ಆ ಫೋಟೋದಲ್ಲಿರುವ ಹೆಂಗಸು, ಅವಳು ಎತ್ತಿಕೊಂಡಿರುವ ಮಗು ಯಾರು ಅಂತ ಗೊತ್ತಾ?"

"ನಂಗೊತ್ತಿಲ್ಲ"

"ನಂಗೆ ಗೊತ್ತು. ನಾನು ಹೇಳ್ತೀನಿ ಕೇಳಿ. ಆ ಹೆಂಗಸು ನನ್ನ ಅಕ್ಕ.... ಅವಳ ಕೈಯಲ್ಲಿರುವ ಮಗು, ನಿಮ್ಮ ಅಣ್ಣ ದಿನೇಶ...." ಮಹೇಶ ಎದ್ದು ನಿಂತ. ಅವನ ತಲೆ ಧಿಂ ಎಂದಿತು.

"ರಿಲಾಕ್ಸ್.... ಕೂತ್ಕೊಳ್ಳಿ.... ಇದನ್ನೆಲ್ಲ ನನಗೆ ಹೇಳಿದವರು ಡಾಕ್ಟರು.... ಅವರ ಹತ್ರ ಈ ವಿಷಯವನ್ನು ಹೇಳಿದವರು ನಿಮ್ಮ ತಾಯಿ ವನಜಮ್ಮ...."

"ಅಂದ್ರೆ.... ದಿನೇಶ...."

"ದಿನೇಶ ನಿಮ್ಮ ಅಣ್ಣನಲ್ಲ. ತಮ್ಮನೂ ಅಲ್ಲ.... ದಿನೇಶ ನಮ್ಮ ತಂದೆಗೆ ಸ್ವಂತ ಮೊಮ್ಮಗ. ನಾವು ಅವರ ತಮ್ಮನ ಮಕ್ಕಳು.... ಹಾಗೇ ನೀವು ದಿನೇಶನ ಸ್ವಂತ ಸಹೋದರ ಅಲ್ಲ. ನಿಮ್ಮ ನಿಜವಾದ ತಂದೆಯೂ ಬದುಕಿಲ್ಲ...."

"ಸುಳ್ಳು.... ಸುಳ್ಳು.... ನಾನು ಇದನ್ನೆಲ್ಲ ನಂಬೊಲ್ಲ...." ತಮಾಷೆ ಎಂಬಂತೆ ನಕ್ಕ. ಆದರೂ ಎದೆ ಚುಳ್ ಎಂದಿತ್ತು.

"ನಾನೂ ಇದನ್ನೆಲ್ಲ ಮೊದಲಿಗೆ ನಂಬಲಿಲ್ಲ. ಡಾಕ್ಟರು, ಲಾಯರ್ರು ನಿಮ್ಮ ಮನೆಗೆ ಬಂದು ನಿಮ್ಮ ತಾಯಿಯ ಹತ್ರ ಮಾತನಾಡಿದಾರೆ. ಇದನ್ನೆಲ್ಲ ನಿಮ್ಮ ತಾಯಿಯೇ ಹೇಳಿದಾರೆ. ಅದಕ್ಕೆ ಸಾಕ್ಷಿಯೂ ಇದೆ.... ನಿಮಗೆ ನಂಬಿಕೆ ಬರದಿದ್ದರೆ ನಿಮ್ಮ ತಾಯಿಯನ್ನೇ ಕೇಳಿ...."

"ಆದರೆ.... ಏನೇ ವಿಷಯ ಇದ್ದರೂ ಇಷ್ಟು ವರ್ಷಗಳ ನಂತರ ಇದನ್ನೆಲ್ಲ ಹೇಳುವ ಅಗತ್ಯ ಏನಿತ್ತು?"

"ನಮ್ಮ ತಂದೆ 'ವಿಲ್' ಮಾಡಿದಾರೆ.... ಅವರ ಆಸ್ತಿಯಲ್ಲಿ ಎರಡನೇ ಒಂದು

ಭಾಗ ಆಸ್ತಿಯನ್ನು ದಿನೇಶನ ಹೆಸರಿಗೆ ಬರೆಸಿದಾರೆ.... ಆ ವಿಷಯ ನಮ್ಮ ಚಿಕ್ಕಮ್ಮನಿಂದ ನಿಮ್ಮ ತಾಯಿಗೆ ತಿಳಿಯಿತು...."

"ಆದರೆ, ಇನ್ನೂ ಒಂದು ವಿಷಯ ಹೇಳಿದರೆ ನಿಮಗೆ ಬೇಸರವಾಗಬಹುದು. ... ದಿನೇಶನಿಗೆ ಈ ಯಾವ ವಿಷಯವೂ ತಿಳಿಯಬಾರದು ಅಂತ ಅವರ ಆಸೆ.... ಅದಕ್ಕಾಗಿ ಅವರು ನಿಮ್ಮನ್ನೇ ದಿನೇಶ ಅಂತ ನಮ್ಮ ತಂದೆಗೆ ತಿಳಿಸಿದ್ದರಂತೆ. ಅದು ಸಹಜ.... ಇಷ್ಟು ವರ್ಷ ಸಾಕಿ ಸಲಹಿದ ದಿನೇಶನ ಮನಸ್ಸನ್ನು ನೋಯಿಸಿ ಆಘಾತ ಮಾಡುವ ಇಚ್ಛೆ ಇಲ್ಲ ಅವರಿಗೆ. ಅದು ಮಾತೃಪ್ರೇಮ. ಅದರೊಂದಿಗೇ ದಿನೇಶನ ಭಾಗದ ಆಸ್ತಿಯನ್ನು ನಿಮಗೆ ಕೊಡಿಸುವ ಆಸೆ ಕೂಡಾ... ಅದು ಸ್ವಾರ್ಥ. ನನ್ನನ್ನು ತಮ್ಮ ಸೊಸೆಯನ್ನಾಗಿ ಮಾಡಿಕೊಳ್ಳಲು ಸಿದ್ಧರಾಗಿದ್ದರು... ಅದು ಹೊಂದಾಣಿಕೆ. ನಾನು ನಮ್ಮ ಚಿಕ್ಕಮ್ಮನನ್ನೇ ಸ್ವಾರ್ಥಿ ಅಂತ ಅಂದುಕೊಂಡಿದ್ದೆ... ಅವರು ನಮ್ಮನ್ನು ಹೆತ್ತ ತಾಯಿ. ಆಸ್ತಿಯ ಆಸೆಗಾಗಿ ನಮ್ಮನ್ನೂ ಇವರಿಗೆ ದತ್ತು ಕೊಟ್ಟರು.... ಆಸ್ತಿಯ ಆಸೆ ಬಹಳ ಕೆಟ್ಟದ್ದು ಮಹೇಶ್... ಅದು ಸಂಬಂಧಗಳನ್ನೇ ಕೆಡಿಸಿಹಾಕಿಬಿಡುತ್ತದೆ.

"ಈ ವಿಷಯಗಳೆಲ್ಲ ನಮ್ಮ ತಂದೆಯ ಮನಸ್ಸನ್ನು ಕೆಡಿಸಿದವು. ಅವರು ತಕ್ಷಣವೇ 'ವಿಲ್' ಬದಲಾಯಿಸಿದ್ದಾರೆ.... ಈಗ ದಿನೇಶನ ಹೆಸರೇ ಇಲ್ಲ ಈ ವಿಲ್‌ನಲ್ಲಿ... ಅವನ ಭಾಗದ ಆಸ್ತಿಯನ್ನು ಯಾರ ಹೆಸರಿಗೆ ಬರೆದಿದಾಗೆ ನಿಮಗೆ ಗೊತ್ತೇ? ನಾನೇ ಹೇಳ್ತೀನಿ ಕೇಳಿ. ನೀವು ಊಹಿಸಲು ಸಾಧ್ಯವಿಲ್ಲ. ಸುಜಯ ಈಗ ಆ ಭಾಗದ ಆಸ್ತಿಯ ಒಡತಿ......"

"ನೋ......ಇದನ್ನು ನಾನು ನಂಬೊಲ್ಲ. ಇದೆಲ್ಲ ಕಟ್ಟು ಕತೆ."

"ನೀವು ನಂಬಲಿ ಅಂತ ಇದನ್ನೆಲ್ಲ ನಾನು ಹೇಳುತ್ತಿಲ್ಲ ಮಹೇಶ್......ನೀವು ಸರಳ ಸ್ವಭಾವದವರು. ನಿಮಗೆ ತಿಳಿದಿರಲಿ ಅಂತ ತಿಳಿಸ್ತಿದೀನಿ... ಖಂಡಿತಾ ಕತೆಯಲ್ಲ."

"ಸುಜಯಳಿಗೆ ಈ ಆಸ್ತಿಯ ಮೇಲೆ ಯಾವ ಹಕ್ಕೂ ಇಲ್ಲ. ಅವಳಿಗೆ ಈ ವಿಷಯ ಗೊತ್ತಾ? ಗೊತ್ತಾದರೆ ಖಂಡಿತಾ ನಿರಾಕರಿಸುತ್ತಾಳೆ."

"ಇಲ್ಲ. ಅವಳಿಗೆ ಏನೂ ಗೊತ್ತಿಲ್ಲ.... ನಮಗೂ ಗೊತ್ತು. ಅವಳಿಗೆ ಯಾವ ಹಕ್ಕೂ ಇಲ್ಲ ಅಂತ...."

"ಹಾಗಾದ್ರೆ, ನಿಮ್ಮ ತಂದೆಯ ಹತ್ರ ಮಾತ್ನಾಡಿ...."

"ನಮ್ಮ ತಂದೆಯ ಹತ್ರ ಈ ಆಸ್ತಿಯ ಬಗ್ಗೆ ಯಾವ ಮಾತನ್ನೂ ಆಡಲು ನಮಗೆ ಇಷ್ಟವಿಲ್ಲ. ವಿವೇಕನಿಗಂತೂ ಸುತರಾಂ ಈ ಆಸ್ತಿಯ ಬಗ್ಗೆ ಆಸಕ್ತಿ ಇಲ್ಲ. ನ್ಯಾಯವಾಗಿ ಈ ಆಸ್ತಿಯೆಲ್ಲಾ ದಿನೇಶನಿಗೆ ಸೇರಬೇಕು. ಇದಕ್ಕೆ ನೀವೇನಂತೀರಿ!"

"ದಿನೇಶನಿಗೂ ಯಾವ ಆಸಕ್ತಿ ಉಂಟಾಗುವುದಿಲ್ಲ. ನಾನು ಅವನನ್ನು ಚಿಕ್ಕ ವಯಸ್ಸಿನಿಂದ ಬಲ್ಲೆ"

"ಆದರೆ ನಿಮ್ಮ ತಾಯಿಗೆ ಆಸಕ್ತಿ ಇದೆಯಲ್ಲ ಏನಂತೀರಾ.... ಈ ಬಗ್ಗೆ ನೀವು

ನಿಮ್ಮ ತಾಯಿಯ ಹತ್ರ, ದಿನೇಶನ ಹತ್ರ ಮಾತನಾಡಲು ಸಿದ್ಧರಿದ್ದೀರಾ!"

"ಇಲ್ಲ. ಮಾತನಾಡಿ, ಸಂಬಂಧಗಳನ್ನು ಕಳೆದುಕೊಳ್ಳಕ್ಕೆ ನನಗಿಷ್ಟವಿಲ್ಲ"

"ಹಾಗಾದ್ರೆ ಸುಜಯಾ! ಅವಳನ್ನೇನು ಮಾಡ್ತೀರಿ! ಅವಳಿಗೆ ಈ ಆಸ್ತಿಯ ಮೇಲೆ ಆಸಕ್ತಿ ಇರಬಹುದು.... ಹಾಗಾದರೆ ಅವಳನ್ನು ಮದುವೆಯಾಗುವುದಿಲ್ಲವಾ?"

"ಅವಳಿಗೆ ವಿಷಯ ಹೇಳಿ ತಿಳುವಳಿಕೆ ಹೇಳ್ತೀನಿ.... ಅವಳು ಒಪ್ಪದಿದ್ದರೇ, ನನಗೆ ಅವಳೂ ಬೇಡ" ಮಹೇಶ ಆವೇಶದಿಂದ ನುಡಿದ.

"ಓ. ಕೇ.... ಹಾಗೇ ಮಾಡಿ.... ಅವಳಿಗೂ ಈ ಆಶ್ರಮ ಒಗ್ಗಿದೆ... ನಮ್ಮ ತಂದೆಯ ಬಗ್ಗೆ ಗೌರವ ಇದೆ. ಆದರವೂ ಇದೆ. ನಮ್ಮ ತಂದೆಗೂ ಅವಳು ಬಹಳ ಪ್ರಿಯ ವಾಗಿದ್ದಾಳೆ. ಅವರು ಸಮಸ್ತವನ್ನೂ ಅವಳಿಗೇ ಕೊಟ್ಟರೂ ಆಶ್ಚರ್ಯವಿಲ್ಲ....."

"ಇದು ನ್ಯಾಯ ಅಲ್ಲ. ಸುಜಯ ಅವರ ಸಂಬಂಧಿಕಳಲ್ಲ. ಅವಳ ತಂದೆ ತಾಯಿ ಇದಕ್ಕೆ ಖಂಡಿತಾ ಒಪ್ಪುವುದಿಲ್ಲ. ಇವೆಲ್ಲವೂ ನಿಮಗೆ ಸೇರಬೇಕಾದದ್ದು. ನಾನು ನಿಮ್ಮ ತಂದೆಯ ಹತ್ರ ಮಾತನ್ನಾಡ್ಲಾ!"

"ನಮ್ಮ ತಂದೆ ಯಾರ ಮಾತನ್ನೂ ಕೇಳುವುದಿಲ್ಲ. ಅವರಿಗೆ ಅನ್ನಿಸಿದ್ದನ್ನು ಕಾರ್ಯಗತ ಮಾಡುವವರೇ... ನನ್ನ ಮಾತಿನಿಂದ ನಿಮಗೆ ನೋವಾಗಿರಬಹುದು. ಆದರೆ ನಾನು ಇದನ್ನೆಲ್ಲಾ ನಿಮಗೆ ತಿಳಿಸಲೇಬೇಕಾಗಿತ್ತು. ಆದಷ್ಟು ಬೇಗ ನೀವು ನಿರ್ಧರಿಸಿ ಸುಜಯನ್ನ ಮದುವೆಯಾಗುವುದೋ ಬೇಡವೋ ಅಂತ"

ಮಹೇಶ ಪೂರ್ತಿಯಾಗಿ ಕುಗ್ಗಿ ಹೋದ... ಇದೆಂಥಾ ಸನ್ನಿವೇಶ... ಸುಜಯಳಿಗೆ ಈ ವಿಷಯ ತಿಳಿದರೆ ನಿರಾಕರಿಸಿ ಇಲ್ಲಿಂದ ಹೇಗಾದರೂ ಹೊರಬರದೇ ಇರುವುದಿಲ್ಲ ಎಂದು ಕೊಂಡು,

"ನಾನು ಸುಜಯಳ ಹತ್ರ ಮಾತಾಡ್ಬೇಕು. ಪ್ಲೀಸ್ ಅವಳನ್ನು ಕರೆಸಿ" ಎಂದ.

"ಸರಿ ನೀವು ಇಲ್ಲೇ ಕೂತಿರಿ. ನಾನು ಕಳಿಸ್ತೀನಿ" ಎಂದು ಹೇಳಿ ಅವಳು ಹೊರಗೆ ಹೋದಳು. ತಕ್ಷಣವೇ ಡಾಕ್ಟರ್ ಶಂಕರ್ ಒಳಗೆ ಬಂದಿದ್ದರು.

* * *

"ನೀವು ಸುಜಯನ್ನ ಏನೂ ಕೇಳ್ಬೇಡಿ. ಅವಳಿಗೆ ಈ ವಿಷಯಗಳು ಒಂದೂ ತಿಳಿಯದು" ಡಾಕ್ಟರು ಮೆಲ್ಲನೆ ನುಡಿದರು.

"ಅಂದ್ರೇ.... ಡಾಕ್ಟರೇ ಏನಿದೆಲ್ಲಾ? ಲೀಲಾ ಹೇಳ್ತಿರೋದೆಲ್ಲಾ ನಿಜಾನಾ?"

"ನನಗೆ ನಿಮ್ಮ ಬಗ್ಗೆ ತುಂಬಾ ಬೇಸರವಾಗ್ತಿದೆ ಮಹೇಶ್.... ಆದರೆ ಇದನ್ನೆಲ್ಲಾ ಪೂರ್ಣ ಸತ್ಯ ಅಂತ ಸಾಭೀತು ಮಾಡಬೇಕಾದರೆ, ಇನ್ನೂ ಸಾಕಷ್ಟು ಸಾಕ್ಷಿ ಆಧಾರಗಳು ಬೇಕಾಗುತ್ತವೆ. ಎಲ್ಲರ ಮನಸ್ಸುಗಳೂ ಕೆಡುತ್ತವೆ. ಸಂಬಂಧಗಳಲ್ಲಿ ಬಿರುಕುಗಳು ಉಂಟಾಗುತ್ತವೆ. ಆದ್ದರಿಂದ ನನ್ನದೊಂದು ಸಲಹೆ.... ಈ ವಿಷಯಗಳಿಗೆ ಇಷ್ಟಕ್ಕೆ ಮುಕ್ತಾಯ ಹಾಕಿಬಿಡೋಣ. ನಿಮಗೇನನ್ನಿಸುತ್ತೆ....?"

"ನನಗಂತೂ ನಂಬಿಕೆ ಬರುತ್ತಿಲ್ಲ. ಕಟ್ಟು ಕತೆಯೇನೋ ಅಂತ ಅನ್ನಿಸ್ತಿದೆ"

"ನನಗೂ ಹಾಗೇ ಅನ್ನಿಸಿತ್ತು. ಆದರೆ, ನೀವು ಸುಜಯಳಿಗೆ ತೋರಿಸಲೆಂದು, ತಂದಿದ್ದ ಫೋಟೋಗಳು, ಕೆಲವು ವಸ್ತುಗಳು, ಇನ್ನೂ ಕೆಲವು ಊಹೆಗಳಿಗೆ ಆಸ್ಪದ ಕೊಡುತ್ತವೆ. ನಿಮ್ಮ ತಾಯಿ ಬಂದು, ಸುಜಯಳ ಬಳಿ ಫೋಟೋಗಳ ಬಗ್ಗೆ ವಿಚಾರಿಸಿದ್ದರಂತೆ. ಅಂದರೆ ಈ ಫೋಟೋದಲ್ಲಿರುವವರು ನಿಮ್ಮ ತಾಯಿಗೆ ಮೊದಲೇ ತಿಳಿದವರು ಎಂದು ತಾನೇ ಅರ್ಥ?"

"ಹೌದು. ಆದರೂ.... ಅಮ್ಮ ಈ ಬಗ್ಗೆ ನಮಗೆಂದೂ ತಿಳಿಸಿರಲಿಲ್ಲ...."

"ತಿಳಿಸದೇ ಇರುವುದಕ್ಕೆ ಸಾಕಷ್ಟು ಕಾರಣಗಳಿವೆ. ತಾನು ದಿನೇಶನ ತಾಯಿಯಲ್ಲ ಎಂಧು ದಿನೇಶನಿಗೆ ತಿಳಿಯಬಾರದು, ನೀವು ಇಬ್ಬರೂ, ಸ್ವಂತ ಅಣ್ಣ ತಮ್ಮಂದಿರಲ್ಲ ವೆಂದು ತಿಳಿಯಬಾರದು ಅನ್ನುವ ಉದ್ದೇಶ... ನಿಮ್ಮ ನಿಮ್ಮಲ್ಲಿ ಒಡಕು ಬರಬಾರದೆಂಬ ಉದ್ದೇಶ, ಅದು ನ್ಯಾಯವಾದದ್ದೇ ತಾನೇ.... ನಿಮಗೆ ಪುನರ್ಜನ್ಮದಲ್ಲಿ ನಂಬಿಕೆ ಇದೆಯಾ?"

"ಅದೇನು ಇದ್ದಕ್ಕಿದ್ದ ಹಾಗೆ ಈ ಪ್ರಶ್ನೆ ಕೇಳ್ತಿದ್ದೀರಿ... ಅದರ ಬಗ್ಗೆ ನನಗೆ ಏನೂ ಗೊತ್ತಿಲ್ಲ. ಈಗಾಗಲೇ ನನ್ನ ತಲೆ ಸಾಕಷ್ಟು ಗೊಂದಲದಿಂದ ತುಂಬಿ ಹೋಗಿದೆ... ನನ್ನ ಮನಸ್ಸು ಸ್ತಿಮಿತಕ್ಕೆ ಬರಲು, ನಾನು ಸಾಕಷ್ಟು ಕಷ್ಟ ಪಡಬೇಕು...."

"ನಿಮ್ಮ ಸುಜಯಳ ಮದುವೆ ನಡೆದು ಹೋಗಲಿ. ಎಲ್ಲಾ ತಾನಾಗಿಯೇ ಸ್ತಿಮಿತಕ್ಕೆ ಬರುತ್ತೆ.... ನಿಮ್ಮ ತಾಯಿ ನಿಮ್ಮಿಬ್ಬರ ಮದುವೆಗೆ ಒಪ್ಪಿಗೆ ಕೊಟ್ಟಿದಾರಂತೆ...."

"ಈ ವಿಷಯ ನಿಮಗೆ ಹೇಗೆ ಗೊತ್ತಾಯ್ತು?"

"ಸುಜಯ ಹೇಳಿದ್ಲು. ಆ ಮಗು ಎಷ್ಟು ಖುಷಿಯಾಗಿದೆ ಗೊತ್ತಾ? ಸಂಭ್ರಮ ದಿಂದ ಹೇಳಿಕೊಂಡಳು"

"ಸುಜಯ ಈ ಮೊದಲು ಹೀಗಿರಲಿಲ್ಲ. ತನ್ನ ಮನದಲ್ಲಿದ್ದುದನ್ನು ಯಾರೊಡ ನೆಯೂ ಹೇಳಿಕೊಳ್ಳುತ್ತಿರಲಿಲ್ಲ. ಇಲ್ಲಿ ಡಾಕ್ಟರ ಹತ್ತಿರ ಎಲ್ಲಾ ಹೇಳಿಕೊಂಡಿದಾಳಲ್ಲ" ಅಂತ ಅವಳ ಮೇಲೆ ರೇಗಿತ್ತು. ಮುಖ ದಪ್ಪಗಾಗಿತ್ತು.

"ಇದರಲ್ಲಿ ಸುಜಯಂದು ತಪ್ಪೇನಿಲ್ಲ. ಆಶ್ರಮದ ಸ್ಕೂಲಿಗೆ ಬಂದು ಸೇರಿ ಕೊಂಡಾಗ ಇದ್ದುದಕ್ಕೂ ನಂತರ ಈಗ ಇರುವುದಕ್ಕೂ ಬಹಳಷ್ಟು ವ್ಯತ್ಯಾಸಗಳಿವೆ.... ಈಗ ಇವಳು ಇಲ್ಲಿ ಎಲ್ಲರಿಗೂ ಅಚ್ಚುಮೆಚ್ಚು ಆಗಿಬಿಟ್ಟಿದ್ದಾಳೆ" ಮಹೇಶನ ಹೃದಯ ಅಭಿಮಾನ ಹೆಮ್ಮೆಗಳಿಂದ ಬೀಗ ತೊಡಗಿತು.

"ಸುಬ್ಬರಾಮಪ್ಪನವರಂತೂ ತಮ್ಮ ಮಗಳೇ ಈಗ ಮತ್ತೆ ಸುಜಯಳಾಗಿ ಹುಟ್ಟಿ ಬಂದಿದಾಳೆ ಎಂದೇ ಭಾವಿಸಿದ್ದಾರೆ...."

"ಅಂದ್ರೇ... ಏನು ಹೇಳ್ತಿದೀರಿ ನೀವು?"

"ಅದಕ್ಕೆ ನಾನು ಕೇಳಿದ್ದು. ಪುನರ್ಜನ್ಮದಲ್ಲಿ ನಂಬಿಕೆ ಇದೆಯಾ ಅಂತ?"

"ಸುಜಯಾ... ಮತ್ತೆ... ಇಂಪಾಸಿಬಲ್... ನೀವೂ ಇದನ್ನು ನಂಬ್ತೀರಾ ಡಾಕ್ಟರ್...."

"ವೈದ್ಯಶಾಸ್ತ್ರದಲ್ಲಿ ಪುನರ್ಜನ್ಮವನ್ನು ಒಪ್ಪಿಕೊಳ್ಳಲು ಪೂರ್ಣವಾಗಿ ಸಾಧ್ಯವಾಗುತ್ತಿಲ್ಲ. ಆ ಬಗ್ಗೆ ಸಂಶೋಧನೆಗಳು ಇನ್ನೂ ನಡೆಯುತ್ತಲೇ ಇದೆ. ಆದರೆ ಕೆಲವು ಸಂದರ್ಭಗಳಲ್ಲಿ ನಿಜವಿರಬಹುದೇನೋ ಅಂತ ಅನ್ನಿಸುವ ಸನ್ನಿವೇಶ ಗಳು ಹುಟ್ಟಿಕೊಳ್ಳುತ್ತವೆ. ಮೊದಮೊದಲಿಗೆ ಮಾನಸಿಕ ಸ್ಥಿತಿ ಸರಿಯಿಲ್ಲ ಅಂತ ಭಾಸವಾದರೂ, ಕ್ರಮೇಣ ಬೇರೇನೋ ಕಾರಣವಿರಬಹುದು ಎಂದು ಅನ್ನಿಸಬಹುದು. ಈಗ ಸುಜಯಳ ವಿಷಯವನ್ನೇ ಉದಾಹರಣೆಯಾಗಿ ತೆಗೆದುಕೊಳ್ಳೋಣ....

ಸುಬ್ಬರಾಮಪ್ಪನ ಮಾತುಗಳು ನನಗೆ ಅಸಂಬದ್ಧ, ಅರುಳು ಮರುಳು ಅಂತ ಅನ್ನಿಸಿದ್ದುಂಟು. ದುರಂತದಲ್ಲಿ ಮಗಳನ್ನು ಕಳೆದುಕೊಂಡ ದುರ್ದೈವಿ, ಸುಜಯಳಲ್ಲಿ ಮಗಳ ರೂಪವನ್ನು ಕಂಡಿದ್ದಾರೆ ಅಂತೆನ್ನಿಸಿತ್ತು. ಅವರು ಭಾವನಾತ್ಮಕವಾಗಿ ಯೋಚಿಸಿ ದ್ದರೂ, ತಮ್ಮ ಸಂಶಯವನ್ನು ಎಲ್ಲರೊಂದಿಗೆ ಹೇಳಿ ಕೋಲಾಹಲವನ್ನು ಎಬ್ಬಿಸಲಿಲ್ಲ. ಇದುವರೆಗೂ ಸುಜಯಳೊಡನೆ ಆ ಬಗ್ಗೆ ಮಾತನ್ನಾಡಿಲ್ಲ. ಅವಳ ಹೆತ್ತ ತಂದೆ ತಾಯಿಯರಿಗೆ ಈ ವಿಷಯ ತಿಳಿದರೆ, ಅವರಿಗೆ ನೋವಾಗಬಹುದು. ಸುಜಯಳ ಬಗ್ಗೆ ತಿರಸ್ಕಾರ ಹುಟ್ಟಬಹುದು. ಸುಜಯಳ ತಂದೆ-ತಾಯಿ ಇದನ್ನು ನಂಬದಿರ ಬಹುದು.... ಸುಜಯ ಮೊದಲೇ ಸೂಕ್ಷ್ಮ... ಈ ಪರಿಸ್ಥಿತಿಗಳ ಗೊಂದಲದಲ್ಲಿ ತನಗೆ ತಾನೇ ಅಪಾಯ ಮಾಡಿಕೊಳ್ಳಬಹುದು, ಎಂದೆಲ್ಲಾ ಯೋಚಿಸಿದ್ದಾರೆ. ಇದನ್ನೆಲ್ಲ ನನ್ನೊಡನೆ ಹೇಳಿದ್ದಾರೆ... ಸಾವಿತ್ರಮ್ಮ ವಿಲ್ ಬಗ್ಗೆ ವನಜಮ್ಮನಿಗೆ ತಿಳಿಸದೇ ಇದ್ದಿದ್ದರೇ, ಈ ಪ್ರಕರಣ ಅಲ್ಲಿಗೇ ನಿಂತಿರುತ್ತಿತ್ತು......"

"ವಿಲ್" ವಿಷಯ ಗುಟ್ಟಾಗಿ ಇರಬೇಕು ಅಲ್ಲವೇ ಡಾಕ್ಟರೇ...."

"ಗುಟ್ಟಾಗಿಡಲೇಬೇಕು ಅಂತ ಕಾನೂನು ಹೇಳುವುದಿಲ್ಲ. ಇವರು ಎರಡು ಬಾರಿ ವಿಲ್ ಬದಲಾಯಿಸಿದ್ದಾರೆ. ಲೀಲಾಳ ಸಲಹೆಯನ್ನೂ ಕೇಳಿದ್ದಾರೆ. ಲಾಯರ್ರು ತಮಗೆ ಗೊತ್ತಿರುವ ಲೀಗಲ್ ಪಾಯಿಂಟ್ಸ್‌ಗಳನ್ನೂ ಹೇಳಿದ್ದಾರೆ.... ಈಗ ಮೂರನೇ ಬಾರಿ ವಿಲ್‌ನ್ನು ಬದಲಾಯಿಸಿ ಬರೆಸಿದ್ದಾರೆ... ಈ ವಿಷಯ ನಿಮ್ಮ ತಾಯಿಯ ತನಕ ತಲುಪಿದೆ. ಆದುದರಿಂದಲೇ, ಅವರು ಸುಜಯನ್ನ ತಮ್ಮ ಸೊಸೆಯನ್ನಾಗಿ ಮಾಡಿಕೊಳ್ಳುತ್ತಿರುವುದು...."

"ನನ್ನ ತಾಯಿ ಇಷ್ಟು ಸ್ವಾರ್ಥಿ ಅಂತ ನನಗೆ ಗೊತ್ತಿರಲಿಲ್ಲ. ನನಗೆ ಈ ಮದುವೆ ಬೇಡ...." ಮಹೇಶ ನೀರಸವಾಗಿ ಹೇಳಿದ.

"ಮನಸಾರೆ ಮೆಚ್ಚಿರುವ ಸುಜಯಂಗೆ ಮೋಸ ಮಾಡ್ತೀರಾ? ಆ ಹುಡುಗಿಯ ಸಂತಸವನ್ನು ಹಾಳು ಮಾಡ್ತೀರಾ?"

"ನನ್ನ ಸ್ವಾಭಿಮಾನ ಇದನ್ನು ಒಪ್ಪುತ್ತಿಲ್ಲ ಡಾಕ್ಟ್ರೇ... ಸುಜಯ ಈ ಆಸ್ತಿ ತನಗೆ ಬೇಡ ಅಂತ ನಿರಾಕರಿಸಿದ ದಿನ ನಾನು ಅವಳನ್ನು ಮದುವೆಯಾಗ್ತೀನಿ"

"ಆ ಕೆಲಸವನ್ನು ನಾನು ಮಾಡಿಸ್ತೀನಿ. ಆದರೆ ಸದ್ಯಕ್ಕೆ ನೀವು ಯಾವ ವಿಷಯ ವನ್ನೂ ಕೆದಕಬೇಡಿ... ಸಂತೋಷದಿಂದ ಮದುವೆಯಾಗಿ, ಸುಬ್ಬರಾಮಪ್ಪನವರ ಆಶೀರ್ವಾದ ನಿಮ್ಮ ಮೇಲಿದೆಯಲ್ಲ...."

"ಈ ವಿಷಯಗಳೆಲ್ಲಾ ತಿಳಿದಿದ್ದೂ ನಾನು ಹೇಗೆ ಸಂತಸದಿಂದಿರಲಿ? ಸುಜಯಳನ್ನು ನೋಡಿದಾಗಲೆಲ್ಲಾ ನನ್ನನ್ನು ಈ ವಿಷಯಗಳು ಕಾಡುತ್ತವೆ... "

"ಹೇಗೂ ಈಗ ನಿಮಗೆ ಬೇರೆ ಊರಿಗೆ ವರ್ಗವಾಗಿದೆ... ಎಲ್ಲ ಕ್ಲೇಷಗಳನ್ನು ಮರೆತು ಹೊಸದಾಗಿ ಜೀವನವನ್ನು ಆರಂಭಿಸಿ. ನಮ್ಮೆಲ್ಲರ ಶುಭ ಹಾರೈಕೆ ನಿಮ್ಮ ಮೇಲಿದೆ" ಡಾಕ್ಟರು ಕೈ ಕುಲುಕಿ, ಶುಭ ಕೋರಿದರು.

"ಥ್ಯಾಂಕ್ ಯೂ ಡಾಕ್ಟರ್... ಆದರೂ ಈ ಗೊಂದಲಗಳಿಂದ ಹೊರಬರಲು ನನಗೆ ಸ್ವಲ್ಪ ಸಮಯ ಬೇಕು... ಈಗ ನಾನು ಹೊರಡ್ತೀನಿ"

"ಸುಜಯನ ಹತ್ರ ಮಾತನ್ನಾಡೋಲ್ವೇ....."

"ಇಲ್ಲ. ನನಗೆ ಈಗ ಮಾತನಾಡುವ ಮೂಡ್ ಇಲ್ಲ"

"ಹಾಗೆ ಮಾಡಬೇಡಿ. ಆ ಮಗುವಿನ ಮನ ಮುದುಡುತ್ತೆ.... ನಿಮ್ಮನ್ನು ಮನಸಾರೆ ಪ್ರೀತಿಸಿದ್ದಾಳೆ. ನಿಮ್ಮ ಒಲವಿನ ಆಸರೆ ಅವಳಿಗೆ ಬೇಕು...."

"ಈಗ ಅವಳನ್ನು ನನ್ನ ಪ್ರೇಯಸಿಯೆಂಬ ದೃಷ್ಟಿಯಿಂದ ನೋಡುವುದು ಸುಲಭ ಅಲ್ಲ ಅಂತನ್ನಿಸ್ತಿದೆ... ಬೇರೆ ಬೇರೆ ಸಂಗತಿಗಳು ಬೇರೆ ಬೇರೆ ಸಂಬಂಧವನ್ನು ಹೇಳು ತ್ತವೆ... ಸುಜಯ ದಿನೇಶನ್ನ ಒಪ್ಪಿ, ನನಗೆ ಅತ್ತಿಗೆಯಾಗಿ ಬಂದಿದ್ದರೆ, ಆ ಸಂಬಂಧವೇ ಒಳ್ಳೆಯದಾಗಿರುತ್ತಿತ್ತು... ಆಗ ಹಾಗಾಗಲಿಲ್ಲ. ಈಗ ಹೀಗಾಗಲು ಪರಿಸ್ಥಿತಿ ಬಿಡುತ್ತಿಲ್ಲ"

"ಇದಕ್ಕೆ ನೀವ್ಯಾಕೆ ತಲೆ ಕೆಡಿಸಿಕೊಳ್ತೀರಿ ಮಹೇಶ್.... ಈ ಜನ್ಮದಲ್ಲಿ ನಿಮ್ಮ ಸಂಬಂಧ ಕೇವಲ ಪತಿ, ಪತ್ನಿಯರದ್ದು. ಅವಳನ್ನು ಬ್ರಹ್ಮ ನಿಮಗಾಗಿಯೇ ಸೃಷ್ಟಿ ಮಾಡಿದ್ದಾನೆ ಅಂತ ತಿಳಿದುಕೊಳ್ಳಿ.... ಹಳೆಯದನ್ನೆಲ್ಲಾ ಮರೆತು ಬಿಡಿ"

"ನನಗೆ ಸ್ವಲ್ಪ ಸಮಯ ಬೇಕು ಡಾಕ್ಟ್ರೇ... ಎಲ್ಲಾ ನೀವು ಹೇಳುವಷ್ಟು ಈ ವಿಷಯಗಳು ಸುಲಭವಲ್ಲ...."

"ನನಗೆ ನಿಮ್ಮ ಮೇಲೆ ವಿಶ್ವಾಸವಿದೆ.... ಅದಕ್ಕೆ ನಿಮ್ಮೊಡನೆ ಇದನ್ನೆಲ್ಲ ಆಡಲು ಸುಲಭವಾಯಿತು"

"ನೀವು ಇದನ್ನೆಲ್ಲಾ ತಿಳಿಸದೇ ಇದ್ದಿದ್ದರೆ ಚೆನ್ನಾಗಿತ್ತು ಡಾಕ್ಟ್ರೇ...." ನೊಂದುಕೊಂಡು ಹೇಳಿದ.

"ಇಲ್ಲ. ಮುಂದೆಂದಾದರೂ ಸಾವಿತ್ರಮ್ಮನಂಥವರಿಂದ ನಿಮ್ಮ ದಾಂಪತ್ಯ ಜೀವನದಲ್ಲಿ ತೊಂದರೆ ಬರದಿರಲಿ ಅಂತ ಮೊದಲೇ ಈ ವಿಷಯ ತಿಳಿಸುವುದು ನನ್ನ ಕರ್ತವ್ಯ ಅಂತ ಅನ್ನಿಸ್ತು.... ನನ್ನ ಮಾತುಗಳಿಂದ ನಿಮ್ಮ ಮನಸ್ಸಿಗೆ ಘಾಸಿಯಾಗಿದೆ. ಅದಕ್ಕಾಗಿ ಕ್ಷಮಿಸಿ ಬಿಡಿ... ಹಾಗೇ ನಿಮಗೆ ಇನ್ನೊಂದು ಸಂತೋಷದ ಸುದ್ದಿಯನ್ನು

ತಿಳಿಸುವ ಮನಸ್ಸಾಗಿದೆ... ಸದ್ಯದಲ್ಲೇ ನಾನು, ಲೀಲಾ ಮದುವೆಯಾಗಲಿದ್ದೇವೆ......ನಮ್ಮ ಪ್ರೀತಿ ದಿಢೀರನೇ ಶುರುವಾದದ್ದು...." ಡಾ॥ ಶಂಕರ್ ಮುಗುಳ್ನಗುತ್ತಾ ನುಡಿದಾಗ, ಮಹೇಶ ಅಚ್ಚರಿಯಿಂದ ಅವರ ಕೈ ಕುಲುಕಿದ. "ಕಂಗ್ರಾಟ್ಸ್...." ಎಂದ.

"ಇಲ್ಲೇ ಆಶ್ರಮದ ಆವರಣದಲ್ಲಿ ಸರಳವಾಗಿ ಮದುವೆಯಾಗಲಿದ್ದೇವೆ. ನೀವು ಗಳೆಲ್ಲರೂ ಆಗ ಖಂಡಿತಾ ಬರಬೇಕು. ಆಹ್ವಾನ ಪತ್ರಿಕೆಯನ್ನು ಕಳಿಸುತ್ತೇವೆ. ಈ ವಿಷಯವನ್ನು ಈಗಲೇ ಸುಜಯಂಗೆ ತಿಳಿಸಬೇಡಿ...."

ಯಾಕೆ ಎಂದು ಅವನು ಕೇಳುವ ಮೊದಲೇ... ಡಾಕ್ಟರು ಏನೋ ಸಂಜ್ಞೆ ಮಾಡಿದರು. ಬಾಗಿಲ ಬಳಿ ಸುಜಯ ನಿಂತಿದ್ದಳು. ಡಾಕ್ಟರು ಅಲ್ಲಿಂದ ಹೊರಕ್ಕೆ ಹೋದರು. ಸುಜಯ ಎಂದಿನಂತೆ ಮಂದಹಾಸ ಬೀರಿದಳು. ಅವನು ಅವಳ ಸನಿಹಕ್ಕೆ ಬಂದು. "ಇವತ್ತೇ ಇಲ್ಲಿಂದ ಓಡಿ ಹೋಗಿ ಮದುವೆಯಾಗಿ ಬಿಡೋಣ...." ಎಂದು ಉಸುರಿದ.

"ಅಂಥ ಆತುರ ಯಾಕೆ? ನಾನು ನಿಮಗೋಸ್ಕರ ಎಷ್ಟು ತಿಂಗಳುಗಳಿಂದ ಕಾದಿದೀನಿ. ನೀವೂ ಸ್ವಲ್ಪ ಕಾಯಬೇಕಪ್ಪಾ...." ಕೀಟಲೆಯ ಧ್ವನಿ ಕೇಳಿಸಿತು.

"ಈಗಾಗ್ಲೇ ನನ್ನನ್ನು ಸಾಕಷ್ಟು ಸತಾಯಿಸಿದೀರ.... ಇನ್ನು ನಾನು ಕಾಯುಲ್ಲ.... ನನಗೆ ಅರ್ಜೆಂಟಾಗಿ ನಿಮ್ಮ ಅಗತ್ಯ ಉಂಟಾಗಿದೆ. ನಂಗೆ ಏನು ಮಾಡ್ಬೇಕು ಅಂತ ಗೊತ್ತಾಗ್ತಿಲ್ಲ"

"ಏನಾಯ್ತು ಮಹೇಶ್.... ಯಾಕೆ ಹೀಗೆ ಮಾತಾಡ್ತಿದೀರ? ನಿಮ್ಮ ತಾಯಿ.... ಏನಾದ್ರೂ ಮಾಡಿ." ಅವಳು ನಿರಾಸೆಯ ಧ್ವನಿಯಲ್ಲಿ ಕೇಳಿದಾಗ ಅವನು ಎಚ್ಚೆತ್ತುಕೊಂಡ.

"ಆಶ್ರಮದ ಊಟ ಚೆನ್ನಾಗಿರುತ್ತೆ ಅಂತ ಸದಾ ಹೇಳ್ತೀರಿ.... ಬೆಳಿಗ್ಗೆ ತಿಂಡಿಯನ್ನು ಸಹ ತಿಂದಿಲ್ಲ. ಹೊಟ್ಟೆ ಹಸೀತಿದೆ. ಊಟ ಹಾಕಿಸ್ತೀರಾ?"

"ಊಟ ತಾನೇ.... ಮಾಡೋರಂತೆ.... ಯಾಕೆ ನಿಮ್ಮ ತಾಯಿ ಇವತ್ತು ತಿಂಡಿ ಮಾಡಲಿಲ್ವಾ?"

"ದಿನೇಶನಿಗೆ ಇಷ್ಟವಾದ ತಿರಡಿಯನ್ನು ಮಾಡಿದ್ರು.... ಅವರ ಪಕ್ಕದಲ್ಲಿ ಕುಳಿತು ತಿನ್ನಿಸಲು, ಅತ್ಗೆ ಇದ್ದರು. ನಾನು ಒಂಟಿ ಅಂತ ಅನ್ನಿಸ್ತು.... ಅದಕ್ಕೆ ನಿಮ್ಮ ಬಳಿಗೆ ಬಂದುಬಿಟ್ಟೆ... ಇವತ್ತು ಇಲ್ಲೇ ನಿಮ್ಮ ಜೊತೆಯೇ ಕಾಲ ಕಳೆಯಬೇಕು ಅಂತ ಆಸೆ ಆಗ್ತಿದೆ.... ಇವತ್ತು ರಾತ್ರಿಯನ್ನು ಇಲ್ಲೇ ಆಶ್ರಮದಲ್ಲಿ ಕಳೆಯೋಣ ಅಂತ ಬಂದಿದೀನಿ..."

"ಇಲ್ಲಿ.... ಆಶ್ರಮದಲ್ಲಿ ಇರ್ತೀರಾ? ಬೇಡ....ಇವರೆಲ್ಲಾ ನಮ್ಮ ಬಗ್ಗೆ ಅಪಾರ್ಥ ಮಾಡಿಕೊಂಡರೇ...."

"ಸರಿ ಹಾಗಾದ್ರೆ, ನೀವೇ ಬನ್ನಿ, ಎಲ್ಲಿಗಾದ್ರೂ ಹೊರಟು ಹೋಗೋಣ....."

"ಯಾಕೋ ನೀವು ಅಪ್ಸೆಟ್ ಆಗಿರುವಂತೆ ಕಾಣ್ತಿದೆ. ಏನಾಯ್ತು? ಹುಶಾರಾಗಿ

ದೀರಿ ತಾನೇ... ನಂಗೆ ಭಯ ಆಗ್ತಿದೆ" ಅಂತ ಹೇಳಿ ಅವನ ಹಣೆಯ ಮೇಲೆ ಕೈಯನ್ನಿಟ್ಟಳು.

ಮಹೇಶ ಅವಳ ಕೈಯನ್ನು ಹಿಡಿದು ತನ್ನ ಎದೆಗೆ ಒತ್ತಿಕೊಂಡ. ಕಣ್ಣೀರ ಹನಿ ಅವಳ ಕೈಗಳ ಮೇಲೆ ಬಿತ್ತು... ಅವಳು ಅವನ ಮುಖವನ್ನೆತ್ತಿದಳು.

"ಮಹೇಶ್.... ಅಳ್ತಿದೀರಾ! ಯಾಕೆ ಏನಾಯ್ತು? ಅಳಬೇಡಿ... ಯಾರಾದ್ರೂ ನೋಡಿದ್ರೆ?"

"ಯಾಕೋ ತುಂಬಾ ಅಳಬೇಕು ಅಂತ ಅನ್ನಿಸ್ತಿದೆ ಸುಜಯಾ... ಪ್ಲೀಸ್ ನನ್ನನ್ನು ತಡೆಯಬೇಡ...." ಅವಳಿಗೆ ಒರಗಿ ಕೂತು ಅತ್ತು ಸಮಾಧಾನ ಮಾಡಿಕೊಳ್ಳಲು ಪ್ರಯತ್ನಿಸಿದ. ಸುಜಯ ದಿಕ್ಕು ತೋಚದವಳಂತೆ, ಅವನ ತಲೆಗೂದಲಲ್ಲಿ ಕೈಯಾಡಿಸಿದ್ದಳು. ಸ್ವಲ್ಪ ಸಮಾಧಾನಗೊಂಡ. ಮಹೇಶ ಅವಳಿಂದ ದೂರ ಸರಿದ.

"ಸಾರಿ ಸುಜಯಾ.... ನಾನು ಹೆದರಿಬಿಟ್ಟೆ....."

"ಏನಾಯ್ತು.... ಡಾಕ್ಟರಿಗೆ ಫೋನು ಮಾಡ್ಲಾ?"

"ಬೇಡ... ಐ ಫೀಲ್ ಬೆಟರ್ ನೌ.... ಬನ್ನಿ ಹೊಟ್ಟೆ ತುಂಬಿಸಿಕೊಳ್ಳೋಣ"

"ಅಳುವಷ್ಟು ಹೊಟ್ಟೆ ಹಸೀತಿತ್ತಾ?" ನಕ್ಕು ಕೇಳಿದಳು.

"ಹೂಂ. ಹಾಗೇ ಅಂದ್ಕೊಳ್ಳಿ....." ಇಬ್ಬರೂ ಎದ್ದು ಪಾಕಶಾಲೆಯ ಕಡೆಗೆ ಬಂದರು. ಅಲ್ಲಿ ಸುಜಯಳಿಗೆ ಒಂದು ಆಶ್ಚರ್ಯ ಕಾದಿತ್ತು. ಡಾ. ಶಂಕರ್ ಹಾಗೂ ಲೀಲಾ ಒಟ್ಟಿಗೇ ಕುಳಿತು ಊಟ ಮಾಡುತ್ತಿದ್ದರು. ಲೀಲಾ ನಾಚಿದ್ದಂತೆ ಅನ್ನಿಸಿತ್ತು.

* * *

"ಈ ಭಾನುವಾರ ನನ್ನ ಮದುವೆ ಆಶ್ರಮದಲ್ಲಿ. ನೀವುಗಳೆಲ್ಲ ಖಂಡಿತಾ ಬರಬೇಕು" ಡಾ. ಶಂಕರ್ ವನಜಮ್ಮನಿಗೆ ಆಹ್ವಾನ ಪತ್ರಿಕೆಯನ್ನು ಕೊಟ್ಟು ಆಮಂತ್ರಣ ನೀಡಿದರು. ಹಾಗೇ ದಿನೇಶ, ದೀಪಾ, ಮಹೇಶನಿಗೂ ಹೇಳಿದರು. ವನಜಮ್ಮ ಆಹ್ವಾನ ಪತ್ರಿಕೆಯನ್ನು ಓದಿದಳು.... ಅವಳ ಮುಖದಲ್ಲಿ ಗೆರೆಗಳು ಮೂಡಿದ್ದವು. ಲೀಲಾ ಯಾರೆಂದು ಹೊಸದಾಗಿ ಹೇಳಬೇಕಾಗಿರಲಿಲ್ಲ.

"ಸಾವಿತ್ರಮ್ಮ ನನಗೆ ಈ ವಿಷಯವನ್ನು ಹೇಳಲೇ ಇಲ್ಲ" ಸ್ವಲ್ಪ ಜೋರಾಗಿಯೇ ಗೊಣಗಿದ್ದಳು.

"ಇದ್ದಕ್ಕಿದ್ದಂತೆ, ನಾವುಗಳೇ ನಿರ್ಧರಿಸಿ, ಮದುವೆಯಾಗುತ್ತಿದ್ದೇವೆ. ಹದಿನೈದು ದಿನಗಳ ಹಿಂದೆ ಕೂಡಾ ನಾವು ಈ ಬಗ್ಗೆ ಅಂದುಕೊಂಡಿರಲಿಲ್ಲ...."

"ಒಳ್ಳೇದಾಯ್ತು ಬಿಡಿ... ಲೀಲಂಗೆ ಹೊಸ ಬಾಳನ್ನು ಕೊಡ್ತಿದೀರಿ.... ದೇವರು ನಿಮ್ಮನ್ನು ಚೆನ್ನಾಗಿಟ್ಟಿರಲಿ"

"ಹಿರಿಯರ ಹಾರೈಕೆ ಬಹು ಮುಖ್ಯ ವನಜಮ್ಮ... ಎಲ್ಲರೂ ಖಂಡಿತಾ ಬರಬೇಕು. ದಿನೇಶ್ ನೀವೂ ಕೂಡಾ ಬರಲೇಬೇಕು... ವನಜಮ್ಮಾ... ನಿಮ್ಮ ಮಗ ಸೊಸೆಯನ್ನು

ಕರಕೊಂಡು ಬನ್ನಿ..." ಮತ್ತೊಮ್ಮೆ ಹೇಳಿ ಡಾಕ್ಟರು ಹೊರಟು ಹೋದರು.

"ಕಿಲಾಡಿ ಮನುಷ್ಯ. ಆಶ್ರಮದಲ್ಲೇ ಗುಳ್ಳೇನರಿ ಥರ ಇದ್ಕೊಂಡು...ಈಗ ಲೀಲನ್ನ ಮದುವೆ ಆಗ್ತಿದಾನೆ.... ಇನ್ನೇನು ವೃದ್ಧಾಶ್ರಮವೇ ಇವನ ಪಾರುಪತ್ಯಕ್ಕೆ ಸೇರಿ ಬಿಡುತ್ತೆ...."

"ಇದರಿಂದ ನಿಂಗೇನಮ್ಮಾ ತೊಂದರೆ? ಡಾಕ್ಟ್ರು ಒಳ್ಳೆಯವರ ಥರ ಕಾಣ್ತಾರೆ" ದಿನೇಶನೆಂದ.

"ಒಳ್ಳೆಯವರ ಥರ ಕಾಣೋರೆಲ್ಲ ಒಳ್ಳೆಯವರಲ್ಲ ದಿನೂ... ಸ್ವಾರ್ಥಿಗಳು. ಬರೀ ಸ್ವಾರ್ಥ...." ಮಹೇಶ ತಾಯಿಯ ಕಡೆ ವಿಚಿತ್ರವಾಗಿ ನೋಡಿ ಅಲ್ಲಿಂದ ಎದ್ದು ಹೋಗಿದ್ದ.

"ಇವನಿಗೇನಾಯ್ತಮ್ಮ.... ಹಾಗ್ಯಾಕೆ ಎದ್ದು ಹೋದ?"

"ಏನಾಯ್ತೋ.... ಅವನು ಯಾವತ್ತೂ ಹಾಗೇ.... ನೀನು, ದೀಪಾ ಇವತ್ತು ಎಲ್ಲೂ ಹೊರಕ್ಕೆ ಹೋಗ್ಬೇಡಿ. ಸುಜಯಳ ತಂದೆ ತಾಯಿ ಬರ್ತಾರೆ.... ಮದುವೆಯ ಮಾತುಕತೆ ಆಡೋಕ್ಕೆ...." ದೀಪಾ ಅರ್ಥವಾಗದವಳಂತೆ ಅತ್ತೆಯ ಕಡೆ ನೋಡಿದಳು.

* * *

"ಇದೇನೇ ದೀಪಾ... ಏನೂ ಗೊತ್ತಿಲ್ಲದವಳ ಹಾಗೆ ನೋಡ್ತೀಯಲ್ಲ. ಮಹೇಶಂಗೆ ಮದುವೆ ಮಾಡೋಣ ದಿನೇಶ ಬಂದ್ಮೇಲೆ ಅಂತ ಅವತ್ತೇ ಹೇಳಿದ್ನಲ್ಲ. ಜವುಳಿ, ಒಡವೆ ಯಾವುದೂ ಆಗಿಲ್ಲ... ನೀನು ನಿಮ್ಮ ಮನೇಲೇ ಇದ್ಬಿಟ್ಟೆ"

"ಈ ಕಾಲದಲ್ಲಿ ರೆಡಿಮೇಡ್ ಒಡವೆಗಳ ಸೆಟ್ ಚೆನ್ನಾಗಿರುತ್ವೆ, ಆರ್ಡರ್ ಕೊಟ್ಟು ಮಾಡಿಸ್ಬೇಕು ಅಂತೇನಿಲ್ಲ.... ಆದರೆ ಹುಡುಗಿ ಯಾರು ಅಂತ ಗೊತ್ತಾಗ್ಲಿಲ್ಲ...." ಬೇಕಂತ ಕೇಳಿದಳು.

"ಇದೇನೇ ಹೀಗೆ ಕೇಳ್ತೀಯಾ.... ಸುಜಯಾ.... ಹೊಸ್ದಾಗಿ ಹೇಳ್ಬೇಕಾ!"

"ಹೌದು ಅತ್ತೆ, ನಂಗೆ ಗೊತ್ತಿಲ್ಲದ್ದನ್ನ ಕೇಳ್ತೀನಿ.... ನೀವು ನನಗೆ ಹೇಳಿರಲೇ ಇಲ್ಲ. ಲೀಲನ್ನ ಮಹೇಶಂಗೆ ತಂದುಕೊಳ್ಳುವ ಆಸೆ ಇತ್ತಲ್ವಾ ನಿಮಗೆ! ಈಗ ಲೀಲ ಅವರು ಡಾಕ್ಟ್ರನ್ನ ಮದ್ವೆ ಆಗ್ತಿದಾರೆ... ನಿಮಗೆ ಸುಜಯಳ ಮೇಲೆ ಕೋಪ ಇತ್ತಲ್ವಾ?"

"ನೀನು ಏನೇನೋ ಹೇಳ್ಬೇಡ... ಆಗ ಆ ರೀತಿ ಅನ್ನಿಸಿದ್ದುಂಟು... ಈಗ ನನಗೆ ಅವಳ ಮೇಲೆ ಯಾವ ಅಸಮಾಧಾನವೂ ಇಲ್ಲ..... ನನಗೆ ಮಹೇಶನ ಸುಖವೇ ಮುಖ್ಯ" ವನಜಮ್ಮ ತನ್ನನ್ನು ತಾನು ಸಮರ್ಥಿಸಿಕೊಂಡಳು.

"ಒಂದು ಸ್ವಲ್ಪ ಹೂವು ಹಣ್ಣು ತಂದುಬಿಡು ಸಾಕು. ತಿಂಡೀನ ಮನೇಲೇ ಮಾಡ್ತೀನಿ...."

"ನಂಗೆ ಅಂಗಡಿಗೆ ಹೋಗೋಕೆ ಬೇಜಾರು, ಮಹೇಶಂಗೆ ಹೇಳು...." ಎಂದ ದಿನೇಶ.

"ಚೆನ್ನಾಗಿದೆ. ಅವನು ಮದುಮಗನಾಗುವವನು. ಅವನೇ ತರಬೇಕಾ? ನಿನ್ನ ಕೈಲಿ ಆಗದಿದ್ರೆ ನಾನೇ ಹೋಗಿ ತರ್ತೀನಿ"

"ನಾನು ಹೋಗ್ತೀನಿ ಬಿಡಿ ಅತ್ತೆ"

"ಬೇಡ.... ನೀನು ಅಂಗಡಿಗೆ ಹೋಗಕೂಡದು. ನಾನೇ ಹೋಗ್ತೀನಿ" ದಿನೇಸ ಎದ್ದ. ಒಳಗೆ ಕುಳಿತು, ಇವರ ಮಾತುಗಳನ್ನು ಕೇಳಿಸಿಕೊಂಡಿದ್ದ ಮಹೇಶ ಎದ್ದು ಹೊರ ಬಂದ. ಎಲ್ಲರೂ ಮಾತನ್ನು ನಿಲ್ಲಿಸಿದರು.

"ಅಮ್ಮಾ.... ಬ್ಯಾಗ್ ಕೊಡು. ಏನೇನು ತರಬೇಕು ಅಂತ ಎಲ್ಲ ಹೇಳು. ನಾನೇ ಹೋಗ್ತೀನಿ..." ಮೂವರೂ ಮುಖ ಮುಖ ನೋಡಿಕೊಂಡರು.

"ದಿನೇಶಂಗೆ ಈ ಕೆಲಸವೆಲ್ಲಾ ಮೊದಲ್ನಿಂದ್ಲೂ ಅಭ್ಯಾಸವಿಲ್ಲ. ಅತ್ಗೆ ಪ್ರೆಗ್ನೆಂಟ್... ಇನ್ನು ನಿನಗೆ, ಒಳಗಿನ ಕೆಲಸವೇ ಬೇಕಾದಷ್ಟಿರುತ್ತೆ.... ಅದಕ್ಕೇ ನಾನು ಬಿಡುವಾಗಿ ದೀನಿ. ನಾನೇ ಹೋಗ್ತೀನಿ"

"ಏಯ್ ಕೋಪ ಬಂತೇನೋ ಮಹೀ...."

"ಕೋಪ ಯಾಕೆ? ಆಗೋ ಕೆಲಸ ಆಗಬೇಕು ಅಲ್ವಾ?"

"ಮಹೇಶ್‌ಗೆ ಸಂತೋಷ, ಉತ್ಸಾಹ ಎಲ್ಲಾ ಹೆಚ್ಚಾಗಿದೆ. ಅಂತೂ ಕಡೆಗೂ ನಿಮ್ಮ ಪ್ರೀತಿಯೇ ಗೆದ್ದಿತು ಮಹೇಶ್..... ಒಂದು ಪವಾಡವೇ ನಡೆದು ಹೋಯ್ತು.... ಕಂಗ್ರಾಜುಲೇಶನ್ಸ್.... ಇವತ್ತು ಸುಜೀನೂ ಬರ್ತಾಳಾ ಅತ್ತೆ....? ನಾನು ಫೋನು ಮಾಡ್ಲಾ?"

"ಹುಂ.... ಬರದೇ ಇರ್ತಾಳಾ? ಬೇಕಾದ್ರೆ ಫೋನು ಮಾಡಿ ಕೇಳು... ಈ ಕಾಲದ ಹುಡುಗಿಯರಿಗೆ ವಿಪರೀತ ಆಸೆ ಇರುತ್ತೆ....."

"ನಾನು ಈಗ್ಲೇ ಒಂದು ಮಾತು ಸ್ಪಷ್ಟವಾಗಿ ಹೇಳಿಬಿಡ್ತೀನಿ.... ನಾನು ಸರಳವಾಗಿ ಮದುವೆ ಆಗ್ತೀನಿ. ನಂಗೆ ಯಾವ ಆಡಂಬರವೂ ಇಷ್ಟವಿಲ್ಲ. ಸುಜಯಾನೂ ಇದಕ್ಕೆ ಒಪ್ಪಿದಾಳೆ"

"ತಂದೆ ತಾಯಿಗೆ ಆಸೆ ಇರುಲ್ವೇನೋ.... ಅವರ ಮನೇಲಿ ಇದೇ ಮೊದಲನೇ ಮದುವೆ"

"ತಂದೆ ತಾಯಿಗೆ ಏನೋ ಆಸೆ ಅಂತ, ನಮ್ಮ ಸ್ವಂತಿಕೆಯನ್ನು ಬಿಟ್ಟು ಬಿಡೋಕ್ಕೆ ಆಗುತ್ತೇನಮ್ಮ. ನೀವುಗಳು ಬಲವಂತ ಮಾಡಿದರೆ.....ನನಗೆ ಅದೆಲ್ಲ ಇಷ್ಟವಾಗೋಲ್ಲ. ನಾನು ದೇವರ ಮುಂದೆ ಸುಜಯಂಗೆ ತಾಳಿ ಕಟ್ಟಿ ಮದುವೆ ಆಗ್ತೀನಿ ಅಷ್ಟೇ"

"ಯಾಕೋ ಹೀಗೆಲ್ಲಾ ಮಾತಾಡ್ತೀಯಾ? ದಿನೇಶ ಎಂದೂ ಹೀಗೆಲ್ಲಾ ಒರಟಾಗಿ ಮಾತಾಡಿದವನೇ ಅಲ್ಲ. ಅವನಿಂದ ಕಲಿತ್ಕೋ"

"ನಾನು ಈಗ ಯಾರಿಂದ ಏನೂ ಕಲಿಯಬೇಕಾಗಿಲ್ಲ. ನಂಗೇ ಎಲ್ಲಾ ಅರ್ಥ ವಾಗುತ್ತೆ" ಎನ್ನುತ್ತಾ ಚಪ್ಪಲಿಗಳನ್ನು ಮೆಟ್ಟಿ ಬಾಗಿಲನ್ನು ದಾಟಿದ.

"ಮಹೇಶ ಹೀಗ್ಯಾಕೆ ಆದ? ಏನು ಟೆನ್ಷನ್ನು ಇವನಿಗೆ?"

"ಯಾವ ಟೆನ್ಷನ್ನೂ ಇಲ್ಲ. ಸುಜಯಳ ಸ್ನೇಹ ಆದಾಗ್ನಿಂದ ಹೀಗೇ ನೋಡು. ನಾನು ಒಂದೆರಡು ತಿಂಗಳು ಇವನನ್ನು ಇಲ್ಲಿ ಬಿಟ್ಟು ಡೆಲ್ಲಿಗೆ ಬಂದಿದ್ದೆ ನೋಡು ಅವರ ಮನೇಲಿ ಊಟ ಮಾಡೀ ಮಾಡೀ ಹೀಗೆ ಬದಲಾಗಿ ಹೋಗಿದಾನೆ. ಏನು ಮಾಟ ಮಾಡಿಸಿದ್ರೋ?"

"ಹೋಗಮ್ಮ ಊಟ ಮಾಡಿದ ಮಾತ್ರಕ್ಕೆ ಯಾರೂ ಬದಲಾಗೋಲ್ಲ. ಇವಳ ಎದುರಿಗೆ ತಮಾಷೆಗೂ ಮಾಟ ಮಂತ್ರ ಅಂತ ಮಾತಾಡ್ಬೇಡ. ಟ್ರಾನ್ಸ್‌ಫರ್ ಆಗಿದೆಯಲ್ಲ ಅದೇ ಟೆನ್ಷನ್ನು.... ನಾನು ಡೆಲ್ಲಿಗೆ ಹೋಗೋಕೆ ಮುಂಚೆ ನನಗೆ ಈ ಮೂಗುದಾರವನ್ನು ಹಾಕಿ ಸರಿ ಮಾಡಿ ಕಳಿಸಿದೆ. ಈಗ ಇವನಿಗೂ ಹಾಗೇ ಮಾಡು. ಸರಿ ಹೋಗ್ತಾನೆ" ದೀಪ ಗಂಡನಕಡೆ ನೋಡಿ ಮೋಹಕವಾಗಿ ನಕ್ಕಳು.

"ಮಹೇಶ್ ಬಂದ್ರು...." ಇಬ್ಬರೂ ನಗೆಯನ್ನು ನಿಲ್ಲಿಸಿ ಅವನ ಕಡೆ ನೋಡಿದರು. ಅವನ ಕೈಯಲ್ಲಿ ಏನೋ ಕವರ್ರು ಇತ್ತು. ಅದನ್ನು ತನ್ನ ರೂಮಿನೊಳಗೆ ಇಟ್ಟು ಮತ್ತೆ ಹಾಗೇ ಹೊರಬಂದು, ಮತ್ತೆ ಮನೆಯಿಂದಾಚೆ ನಡೆದ.

"ಮಹೇಶಾ ನಾನೂ ಬರ್ತೀನಿ ಕಣೋ...." ದಿನೇಶ ಅವನ ಹಿಂದೆ ಬಂದ.

"ಏನೂ ಬೇಡ..." ಎನ್ನುತ್ತಾ ಅವನು ಅಲ್ಲಿಯೇ ನಿಂತಿದ್ದ ಡಾಕ್ಟರ್‌ನ ಕಾರಿನೊಳಕ್ಕೆ ಹತ್ತಿದ. ಕಾರು ಹೊರಟಿತ್ತು.

"ಈ ಡಾಕ್ಟ್ರು ಮತ್ತ್ಯಾಕೆ ಬಂದಿದ್ರು! ಅವರ ಜೊತೆ ಎಲ್ಲಿಗೆ ಹೋದ?"

"ಏನೋಪ್ಪ. ಒಂದನ್ನೂ ಹೇಳೋಲ್ಲ. ಕೇಳಿದ್ರೆ ರೇಗಾಡ್ತಾನೆ" ವನಜಮ್ಮ ಅವನ ಹಿಂದೆ ನಿಂತು ನುಡಿದಳು.

"ಸುಜಯನ್ನ ಕರ್ಕೊಂಡು ಬರೋಕೆ ಹೋಗಿರಬಹುದು. ಮಾವ, ಅತ್ತೆ ಬರುವ ಹೊತ್ತಿಗೆ ಇಬ್ರೂ ಬರ್ತಾರೆ ನೋಡ್ತಿರಿ" ಎಂದಳು ದೀಪಾ.

"ಅಮ್ಮ, ಒಂದ್ಮಾತು ಹೇಳ್ತೀನಿ ನೋಡು. ಅವನು ಹೇಗೆ ಹೇಳ್ತಾನೋ ಹಾಗೇ ಕೇಳ್ಬಿಡು. ಸುಮ್ನೆ ಬಂದೋರ ಎದುರಿಗೆ ಪೇಚಿನ ಸ್ಥಿತಿ ನಿರ್ಮಾಣ ಆಗೋದು ಬೇಡ"

"ನೀನೂ ನಂಗೇ ಬುದ್ಧಿ ಹೇಳ್ತೀಯಾ! ನಿನ್ನ ತಮ್ಮನಿಗೆ ತಿಳುವಳಿಕೆ ಹೇಳು"

"ಈಗ ಅವನು ನನ್ನ ಅಣ್ಣನಾಗಿದಾನೆ... ನನ್ನ ಮಾತನ್ನೆಲ್ಲಿ ಕೇಳ್ತಾನೆ?" ವನಜಮ್ಮ ಓರೆಗಣ್ಣಿನಲ್ಲಿ ಮಗನನ್ನು ನೋಡಿದಳು. ಅವನಿಗೆ ಇತ್ತ ಗಮನವಿರಲಿಲ್ಲ.

* * *

"ಬನ್ನಿ ಬನ್ನಿ" ವನಜಮ್ಮ ಭಾವೀ ಬೀಗರನ್ನು ಬರ ಮಾಡಿಕೊಂಡಳು. ಇಬ್ಬರೇ ಬಂದ್ರಾ? ಸುಜಯ ಬರಲಿಲ್ವಾ?" ಉಪಚಾರಕ್ಕೆ ಎಂಬಂತೆ ಕೇಳಿದಳು.

"ಅವಳು ಸೀದಾ ಇಲ್ಲಿಗೇ ಬರ್ತೀನಿ ಅಂತ ಫೋನು ಮಾಡಿದ್ಲು. ಇನ್ನೇನು

ಬರಬಹುದು. ಏನಮ್ಮಾ ದೀಪಾ ಹೇಗಿದೀಯಾ! ಎಲ್ಲಿ ನಿಮ್ಮೆಜಮಾನ್ರು?"

ದಿನೇಶ ಹೊರಬಂದು ಅವರಿಬ್ಬರಿಗೆ ಕೈ ಮುಗಿದು, ಅವರ ಎದುರಿಗೆ ಇದ್ದ ಸೋಫಾದಲ್ಲಿ ಕುಳಿತ.

"ಅಂತೂ ನೀವುಗಳು ದೊಡ್ಡ ಮನಸ್ಸು ಮಾಡಿ, ನಮ್ಮ ಸುಜಯನ್ನ ನಿಮ್ಮ ಮನೆ ತುಂಬಿಸಿಕೊಳ್ತಿದೀರಿ.... ನಾವು ಎಷ್ಟು ಥ್ಯಾಂಕ್ಸ್ ಹೇಳಿದರೂ ಸಾಲದು"

"ಸುಜಯ ನನ್ನ ಸೊಸೆ ಅಂತ ದೇವರು ಎಂದೋ ತೀರ್ಮಾನ ಮಾಡಿಬಿಟ್ಟಿದ್ದ ಅಂತ ಕಾಣುತ್ತೆ. ದಿನೇಶನ ಹೆಂಡ್ತಿ ಆಗದಿದ್ರೇನು, ಈಗ ಮಹೇಶನ ಪತ್ನಿಯಾಗ್ತಿದಾಳೆ" ಈ ಮಾತನ್ನು ತಾಯಿ ಆಡಬಾರದೆಂದೆನಿಸಿತ್ತು ದಿನೇಶನಿಗೆ. ಕೆಟ್ಟಮುಖವನ್ನು ಮಾಡಿ ದೀಪಾಳ ಕಡೆ ನೋಡಿದ. ಅವಳೂ ಪೆಚ್ಚಾಗಿದ್ದಳು.

"ಏನೇ ಆಗಲಿ, ಅವಳ ಅವಿವೇಕವನ್ನು ಮರೆತು, ನಿಮ್ಮ ದೊಡ್ಡತನವನ್ನು ತೋರಿಸ್ತಿದೀರಿ. ಲಗ್ನ ಯಾವಾಗ ಇಟ್ಟುಕೊಳ್ಳೋಣ!"

"ಆದಷ್ಟು ಬೇಗ.... ಅವನಿಗೆ ಬೇರೆ ಊರಿಗೆ ವರ್ಗ ಆಗಿದೆ... ಎಷ್ಟು ಬೇಗ ಮದುವೆ ನಡೆದರೆ ಅಷ್ಟು ಒಳ್ಳೆಯದು"

"ನಮ್ಮ ಪುರೋಹಿತರು ಎರಡು ಮೂರು ತಾರೀಖನ್ನು ಗೊತ್ತು ಮಾಡಿಕೊಟ್ಟಿದ್ದಾರೆ. ಒಂದು ಇವತ್ತಿಗೆ ಇಪ್ಪತ್ತು ದಿನಕ್ಕೆ, ಇನ್ನೊಂದು ಇಪ್ಪತ್ತೆರಡು ದಿನಕ್ಕೆ.... ಆಮೇಲೆ."

"ಇಷ್ಟು ಬೇಗ? ತಯಾರಿಗೆ ಸಮಯವೇ ಇರೋಲ್ಲವಲ್ಲ"

"ಹಾಗಾದ್ರೆ ಇನ್ನೆರಡು ತಿಂಗಳ ತನಕ ಒಳ್ಳೆಯ ದಿನಗಳಿಲ್ಲ. ಅಲ್ಲದೇ ಛತ್ರವನ್ನು ಹುಡುಕಬೇಕಲ್ಲ.... ನಮಗೂ ಸಮಯ ಬೇಕು"

"ಮಹೇಶನ್ನ ಒಂದ್ಮಾತು ಕೇಳೋಣ. ಅವನೂ ಬರಲಿ" ದಿನೇಶನೆಂದ.

"ಅವರಿನ್ನೂ ಮನೆಗೆ ಬಂದಿಲ್ವಾ?"

"ಇಲ್ಲ. ಇನ್ನೇನು ಬರಬಹುದು. ಸುಜಯಾನೂ ಬರಲಿಲ್ಲ"

"ಇಬ್ರೂ ಒಟ್ಟಿಗೇ ಬರ್ತಾರೋ ಏನೋ?" ದೀಪ ರಾಗವಾಗಿ ನುಡಿದಳು.

"ನಾನು ತಿಂಡಿ ತರ್ತೀನಿ" ವನಜಮ್ಮ ಎದ್ದಳು.

"ಹಾಗೇ ಒಂದು ತಟ್ಟೆ ತಗೊಂಡು ಬನ್ನಿ... ಹೂವು ಹಣ್ಣುಗಳನ್ನು ಇಡ್ತೀನಿ"

"ಒಳಗೇ ಬನ್ನಿ. ದೇವರ ಮುಂದೆ ಇಡೋರಂತೆ. ದೀಪ ಬೆಳಗುತ್ತಿದೆ" ಪ್ರಭಾವತಿ ವನಜಮ್ಮನ ಹಿಂದೆ ನಡೆದಳು. ಅವರಿಬ್ಬರೂ ಹೊರಗೆ ಬರುವಷ್ಟರಲ್ಲಿ ಸುಜಯ ಬಂದಿದ್ದಳು. ದೀಪಾ ಅವಳೊಡನೆ ಮಾತನಾಡುತ್ತಿದ್ದಳು. ಮಹೇಶ ಹಣ್ಣು ಹೂವುಗಳ ಬ್ಯಾಗ್‌ಗಳನ್ನು ಹಿಡಿದು ಒಳಗೆ ಬಂದ.

"ಹೇಗೆ ಬಂದ್ಯೇ? ಇಬ್ರೂ ಒಟ್ಟಿಗೇ ಬಂದ್ರಾ?"

"ಹೂಂ. ಡಾಕ್ಟ್ರು ಕಾರ್ ಕಳ್ಸಿದ್ರು.... ಇಬ್ರೂ ಒಟ್ಟಿಗೇ ಬಂದೆವು"

"ನಾನು ಹೇಳಲಿಲ್ವಾ? ದಿನೇಶ್" ದೀಪಾ ಸಮರ್ಥಿಸಿಕೊಂಡಳು.

ಮಹೇಶ ಹೊರಬಂದು ಕೂತ. ದಿನೇಶ, ಅವರು ಹೇಳಿದ್ದನ್ನು ಹೇಳಿದ. ನಿನಗೆ ಯಾವ ತಾರೀಖು ಸೂಟಬಲ್ ಆಗುತ್ತೆ?"

"ಮೊದಲನೇ ಮುಹೂರ್ತವೇ ಇರಲಿ.... ಆಮೇಲೆ ಹದಿನೈದು ದಿನಗಳ ನಂತರ ನಾನು ಶಿಫ್ಟ್ ಮಾಡಬೇಕು"

"ಇನ್ನು ಇಪ್ಪತ್ತೇ ದಿನ.... ಬೇಕಾದಷ್ಟು ಕೆಲಸಗಳಿರುತ್ತವಲ್ಲ"

"ಮದುವೆ ಸಿಂಪಲ್ ಆಗಿರಲಿ. ನನಗೆ ಶಾಸ್ತ್ರಗಳಲ್ಲಿ ನಂಬಿಕೆ ಕಡಿಮೆ. ಮದುವೆಗಾಗಿ ಸಮಯ, ಹಣ ಯಾವುದನ್ನೂ ಜಾಸ್ತಿ ಖರ್ಚು ಮಾಡುವುದು ಬೇಡ... ಸುಜಯಂಗೂ ಈ ವಿಷಯದಲ್ಲಿ ಒಪ್ಪಿಗೆ ಇದೆ...."

"ಸಿಂಪಲ್ಲು ಅಂದ್ರೂ.... ನೆಂಟರಿಷ್ಟರನ್ನು ಕರೆಯಬೇಡ್ವಾ? ಜವುಳಿ, ಉಡುಗೊರೆಯ ವಸ್ತುಗಳು, ಒಡವೆಗಳನ್ನು ತರಬೇಡ್ವೇ...."

"ಅದೆಲ್ಲಾ ಮಿನಿಮಮ್ ಎಷ್ಟು ಬೇಕೋ ಅಷ್ಟೇ ಇರಲಿ.....ನನಗೆ ಯಾವ ವರೋಪಚಾರವೂ ಬೇಡ. ಇಷ್ಟೇ ನಾನು ಹೇಳೋದು" ಅವನು ಎದ್ದು ಒಳಕ್ಕೆ ಹೋಗಿದ್ದ.

"ಏನೇ ಸುಜೀ... ಮಹೇಶ ಹೀಗಂತಾರಲ್ಲ. ನಿನಗೂ ಯಾವ ಆಸೆ ಇಲ್ಲವೇನೇ?"

"ಮಹೇಶ್ ಹೇಗೆ ಹೇಳ್ತಾರೋ ಹಾಗೇ ನಡೀಲಿ. ಈ ವಿಷಯಕ್ಕೆ ಮನಸ್ಸು ಕೆಡಿಸಿಕೊಳ್ಳುವುದು ಬೇಡ" ವನಜಮ್ಮನ ಮುಖ ಚಿಕ್ಕದಾಗಿತ್ತು. ಇವರಿಬ್ಬರೂ ಮೊದಲೇ ಈ ಬಗ್ಗೆ ಮಾತನಾಡಿಕೊಂಡಿದ್ದಾರೆ. ಇಲ್ದಿದ್ರೆ ಇಬ್ರೂ ಒಂದೇ ಥರ ಮಾತನ್ನಾಡಲು ಹೇಗೆ ಸಾಧ್ಯ? ಮದುವೆಯೊಂದು ನೆರವೇರಲಿ.... ಆಮೇಲೆ ಎಲ್ಲಾ ವಸೂಲಿ ಮಾಡ್ತೀನಿ... ನಿನ್ನ ರೂಪಕ್ಕೆ ನನ್ನ ಮಗ ಮರಳಾಗಿರಬಹುದು. ಆದರೆ ನಾನು....?

"ಸರಿ ಬಿಡಿ ರಂಗನಾಥಯ್ಯ... ಮದುವೆಯಾಗೋರಿಗೇ ಯಾವ ಆಸೆಯೂ ಇಲ್ಲದಿದ್ರೆ ನಮ್ಮದೇನಿದೆ?"

"ಇಲ್ಲ ವನಜಮ್ಮ.... ನಾಳೆ ಒಂದು ಸಣ್ಣ ಆಕ್ಷೇಪಣೆಯೂ ಬರಬಾರದು... ನಮ್ಮ ಸಂಪ್ರದಾಯದ ಪ್ರಕಾರದಂತೆ ಏನೇನು ಮಾಡ್ಬೇಕೋ, ಕೊಡ್ಬೇಕೋ ಅದನೆಲ್ಲಾ ನಡೆಸಿಕೊಡ್ತೀವಿ. ಮುಂದೆ ಎಲ್ರೂ ಚೆನ್ನಾಗಿ ನಗು ನಗ್ತಾ ಇರ್ಬೇಕು. ಯಾರ ಮನಸ್ಸೂ ಬೇಸರವಾಗಬಾರದು" ಪ್ರಭಾವತಿ ನುಡಿದಾಗ ವನಜಮ್ಮನಿಗೆ ಸಮಾಧಾನವಾಯಿತು.

"ಹಾಗೇ ಮಾಡಿ. ಕೊಡೋದನ್ನೆಲ್ಲಾ ಮನೆಗೆ ಕಳಿಸಿಬಿಡಿ. ಮದುವೆ ಶಾಸ್ತ್ರ ಅವನು ಹೇಳಿದ ಹಾಗೆ ನಡೆಸಿದ್ರಾಯ್ತು... ಪಾಪ, ನಿಮಗೇಕೆ ಬೇಸರವಾಗಬೇಕು?" ಸುಜಯ, ದೀಪ ಪರಸ್ಪರ ಮುಖ ಮುಖ ನೋಡಿಕೊಂಡು ನಕ್ಕರು. ಆದರೆ ದಿನೇಶ ಯಾವ ಮಾತನ್ನೂ ಆಡಿರಲಿಲ್ಲ.

"ಸರಿ ನಾವಿನ್ನು ಬರ್ತೀವಿ. ಲಗ್ನಪತ್ರಿಕೆ ಪ್ರಿಂಟ್ ಮಾಡಿಸಿ ನಿಮಗೆ ತಿಳಿಸ್ತೀನಿ"

"ದೀಪಾ, ಇಬ್ರಿಗೂ ಅರಿಶಿನ ಕುಂಕುಮ ಎಲೆ ಅಡಿಕೆ, ಹಣ್ಣುಗಳನ್ನು

ಇಟ್ಟುಕೊಡು... ಹೂವು ತಂದಿದಾನಾ ನೋಡು....." ದೀಪಾ ಎದ್ದು ಹೋಗಿದ್ದಳು. ಅವಳ ಹಿಂದೆ ಸುಜಯಳೂ ಹೋಗಿದ್ದಳು.

"ನನ್ನ ಮಗನ ಮಾತಿಗೆ ಬೇಸರಮಾಡ್ಕೋಬೇಡಿ. ಅವನು ನಿಮಗೆ ಹೊಸಬನೇನಲ್ಲ. ಈಗಾಗ್ಲೇ ನಿಮಗೆ ಸಾಕಷ್ಟು ಪರಿಚಯವಾಗಿದೆ"

"ಹೌದು, ಆದ್ರೂ ನಿಮ್ಮ ಮಗಂಗೆ ಸಂಕೋಚ ಜಾಸ್ತಿ.. ದೀಪಾ ಹೇಳ್ದೆ ಇದ್ದಿದ್ರೆ ಅವರು ಊಟ ತಿಂಡಿಗೆ ಬರುತ್ತಲೇ ಇರಲಿಲ್ಲ.." ಆ ಮಾತು ಇವಳಿಗೆ ಹಿಡಿಸಲಿಲ್ಲ.

"ನಿಮ್ಮ ಮಗಳಿಗೆ ಅಡಿಗೆ ಕೆಲಸ ಬರುತ್ತೆ ತಾನೇ.... ಅಲ್ಲಿ ಅವಳ ಮನೆಯಲ್ಲಿ ಅವಳೇ ತಾನೇ ಮಾಡಬೇಕು?"

"ಬರದಿದ್ರೆ ಕಲಿತ್ಕೋತಾಳೆ ಬಿಡಮ್ಮ. ಅದ್ಯಾವ ದೊಡ್ಡ ವಿಷಯ"

"ನೀವು ಗಂಡಸ್ರೆಲ್ಲಾ ಹೇಳೋದು ಹೀಗೇ. ಒಂದಿನ ಮಾಡಿ ನೋಡಿ. ಅದು ಅಷ್ಟು ಸುಲಭವಲ್ಲ ಅಂತ ಗೊತ್ತಾಗುತ್ತೆ" ವನಜಮ್ಮನ ಮಾತಿಗೆ ಅವರಿಬ್ಬರೂ ನಕ್ಕರು.

ದೀಪಾ ಇಬ್ಬರಿಗೂ ಅರಿಶಿನಕುಂಕುಮಹೂವುಹಣ್ಣುಗಳನ್ನು ಎಲೆಅಡಿಕೆಯೊಂದಿಗೆ ಕೊಟ್ಟಳು. ಅವರಿಬ್ಬರೂ ಹೊರಡ್ತೀವಿ ಅಂತ ಎದ್ದಾಗ ಮಹೇಶನೂ ಹೊರಬಂದ.

"ಡಾಕ್ಟ್ರ ಕಾರಿದೆ. ನಿಮ್ಮಿಬ್ಬರನ್ನು ಮನೆಗೆ ಬಿಟ್ಟು, ನಾನು ಸುಜಯನ್ನ ಆಶ್ರಮಕ್ಕೆ ಬಿಟ್ಟು ಬರ್ತೀನಿ" ಅವರಿಬ್ಬರೂ ಬಾಗಿಲಿಂದಾಚೆ ಹೋಗಿದ್ದರು.

"ಮತ್ತೆ ನೀನು ಹೇಗೆ ವಾಪಸ್ಸು ಬರ್ತೀಯಾ?"

"ನಾನು ಇವತ್ತು ಅಲ್ಲೇ ಇರ್ತೀನಿ. ಡಾಕ್ಟ್ರ ಹತ್ರ ಮಾತ್ನಾಡೋದು ಇದೆ"

"ಏನಂತೆ ಆ ಮನುಷ್ಯನಿಗೆ!" ವನಜಮ್ಮ ಹುಬ್ಬುಗಂಟಿಕ್ಕಿದಳು.

"ನಂಗೊತ್ತಿಲ್ಲ. ಆಡಿದ್ಮೇಲೇ ಗೊತ್ತಾಗೋದು"

"ನಿಜ ಹೇಳ್ತಿದೀ ತಾನೇ?" ದಿನೇಶ ಚುಡಾಯಿಸಿದ್ದ. ಸುಜಯ ಕೆಂಪಾಗಿದ್ದಳು. ಮಹೇಶ ಕಸಿವಿಸಿಗೊಂಡಿದ್ದ. ವನಜಮ್ಮ ಪ್ರಭಾವತಿಯೊಡನೆ ಮಾತನ್ನಾಡುತ್ತಿದ್ದಳು.

"ನೀನೂ ಬಾ.... ಅತ್ಗೆ ನೀವೂ ಬನ್ನಿ..." ಎಂದು ಮಹೇಶ ಹೇಳಿದಾಗ ದಿನೇಶ ನಕ್ಕು ತಮ್ಮನ ಬೆನ್ನ ಮೇಲೆ ಗುದ್ದಿದ....

"ನಾಳೆ ನಿನ್ನನ್ನು ವಿಚಾರಿಸಿಕೊಳ್ತೀನಿ... ಸುಜಯಾ, ನಮ್ಮ ಹುಡುಗನ್ನ ಸ್ವಲ್ಪ ಚೆನ್ನಾಗಿ ವಿಚಾರಿಸಿಕೊಳ್ಳಿ.... ಪಾಪ ಅವನು ಇನ್ನೋಸೆಂಟ್......"

"ನೀನೆಷ್ಟು ಇನ್ನೋಸೆಂಟ್ ಅಂತ ನಂಗೆ ಗೊತ್ತು... ನಾಟಕ ಆಡಿ ಅತ್ಗೇನ ಕರೆಸ್ಕೊಂಡು.... ಈಗ ನನ್ನನ್ನು ರೇಗಿಸ್ಬೇಡ... " ಎಂದ ಮಹೇಶ.

"ಓಕೇ.... ಹ್ಯಾವ್ ಎ ನೈಸ್ ಟೈಂ... ಆಲ್ ದಿ ಬೆಸ್ಟ್" ದಿನೇಶನೊಂದಿಗೆ ದೀಪಾಳೂ ಹಾರೈಸಿದಳು. ಮಹೇಶ ಥ್ಯಾಂಕ್ಸ್ ಎಂದು ಹೇಳಿ, ಸುಜಯಳ ಕೈ ಹಿಡಿದು ಎಳೆದ.

"ಬನ್ನಿ ಹೊತ್ತಾಗುತ್ತೆ..." ಇಬ್ಬರೂ ಹೊರ ನಡೆದರು. ದಿನೇಶ ದೀಪಾಳ ಸೊಂಟವನ್ನು ಬಳಸಿದ.

"ನಿನ್ನ ಕಸಿನ್ ಬಹಳ ಸ್ಮಾರ್ಟ್... ಮದುವೆಗೆ ಮೊದಲು ನಾವು ಒಂದೂ ರಾತ್ರಿಯನ್ನು ಹೀಗೆ ಕಳೆದಿರಲಿಲ್ಲ....." ಎಂದಾಗ ಅವಳು ಅವನಿಗೆ ಆತುಕೊಂಡಳು.

"ಅದಕ್ಕೇ ಈಗ ನಿಮ್ಮ ರಸಿಕತನ ವಿಪರೀತ ಹೆಚ್ಚಾಗಿದೆ"

ರಾತ್ರಿಯ ಊಟದ ನಂತರ, ಮಹೇಶ ಡಾಕ್ಟರ ಮನೆಗೆ ಹೊರಟ. ಅದುವರೆಗೂ ಸುಮ್ಮನಿದ್ದ ಸುಜಯ ಪ್ರಶ್ನಿಸಿದಳು. "ಡಾಕ್ಟರ್ ಹತ್ರ ಏನು ಮಾತು!"

"ಅದೇ ನಂಗೂ ಗೊತ್ತಿಲ್ಲ.... ಅವರು ಕಾರನ್ನು ಕೊಟ್ಟರೆ ಮತ್ತೆ ಮನೆಗೆ ಹೋಗ್ತೀನಿ. ಇಲ್ದಿದ್ರೆ ಇಲ್ಲೆ ಗೆಸ್ಟ್ ಹೌಸಿನಲ್ಲಿ ಇರ್ತೀನಿ... ನೀವೂ ಬರ್ತೀರಾ?"

"ಇಲ್ಲ" ಎಂದು ಕಿಲಕಿಲನೆ ನಕ್ಕು ಬೆರಳಿನಿಂದ ಅವನ ಕೆನ್ನೆಗೆ ಹೊಡೆದಳು. ಅವನು ಕೈಯನ್ನು ಹಿಡಿದ. "ನಿಮಗೆ ಆಸೆ ಇದ್ದರೆ ಹೇಳಿ... ದಿನೇಶ. ಅತ್ಗೆ ಹೇಳಿದ ಮಾತನ್ನು ನಿಜ ಮಾಡೋಣ. ಎಂಜಾಯ್ ಮಾಡೋಣ...."

"ಮತ್ತೇನಿಲ್ಲ. ಇವತ್ತೆ ಇಲ್ಲಿಂದ ಗೇಟ್ ಪಾಸ್......"

"ಸುಮ್ಮನೇ ಹೇಳಿದೆ. ನನಗೆ ಯಾವ ಆತುರವೂ ಇಲ್ಲ. ಮದುವೆಯಾಗುವ ವರೆಗೂ ಕಾಯ್ತೀನಿ. ನನ್ನಲ್ಲೂ ಸಂಯಮ, ಸಂಸ್ಕಾರ ಎಲ್ಲಾ ಇದೆ....."

"ಥ್ಯಾಂಕ್ ಯೂ ಮಹೇಶ್, ಒಂದು ಗಳಿಗೆ ನೀವು ನನ್ನನ್ನು ಹೆದರಿಸಿಬಿಟ್ಟಿದ್ರಿ"

"ನಾನು ಅಷ್ಟು ಕೆಟ್ಟೋನು ಅಂತ ನಿಮಗೆ ಅನ್ನಿಸುತ್ತಾ ಸುಜೀ....."

"ಇಲ್ಲ. ನನ್ನ ಮಹೀ ತುಂಬಾ ಒಳ್ಳೆಯವರು... ಗುಡ್ ನೈಟ್ ಎಂದು ಹೇಳಿ, ಸರ್ರನೆ ಅವನ ಕೆನ್ನೆಗೆ ಒಂದು ಮುತ್ತನ್ನಿತ್ತು ಕಾಲುದಾರಿಯಲ್ಲಿ ಓಡಿ ಹೋಗಿ ತನ್ನ ಹಾಸ್ಟೆಲನ್ನು ಸೇರಿಕೊಂಡಳು. ಗಲಿಬಿಲಿಗೊಂಡ ಮಹೇಶ ಅತ್ತಿತ್ತ ನೋಡಿದ. ಅಲ್ಲಿ ಹತ್ತಿರ ಯಾರೂ ಕಾಣಲಿಲ್ಲ. ನಸುಕತ್ತಲೆ ಹಬ್ಬಿತ್ತು. ಕೆನ್ನೆಯಲ್ಲಿ ನೈದಿಲೆ ಹೂ ಅರಳಿತ್ತು.

ಅಬ್ಬಾ.... ಈ ಕಾಲದ ಹುಡುಗಿಯರಿಗೆ ಎಷ್ಟು ಧೈರ್ಯ ಅಂತಂದುಕೊಂಡ. ಬಳಿಕ ಡಾಕ್ಟರ್ ಮನೆಯನ್ನು ತಲುಪಿದ. ಅವರು ಗೇಲಿ ಮಾಡಿದರು.

"ಇಷ್ಟು ಬೇಗ ಬಂದುಬಿಟ್ರಾ? ಸುಜಯ ಕಳಿಸಿ ಬಿಟ್ರಾ?"

"ಹುಂ" ಸಂಕೋಚದ ನಗೆಯನ್ನು ನಕ್ಕ.

"ಸದ್ಯದಲ್ಲೇ ನೀವು ಮದುವೆ ಆಗ್ತಾ ಇರೋರು. ಮದ್ವೆ ದಿನ ಕೂಡಾ ಫಿಕ್ಸ್ ಆಗಿದೆ. ಏನೂ ಮಾತುಗಳೇ ಇರಲಿಲ್ವಾ? ಬರ್ತೀರೋ ಇಲ್ವೋ ಅಂತ ಅಂದ್ಕೊಂಡಿದ್ದೆ"

"ಅವೆಲ್ಲಾ ಮದ್ವೆ ಆದ್ಮೇಲೆ ಇದ್ದೇ ಇರುತ್ತಲ್ಲ......"

"ಆದ್ರೂ ಈ ರಸ ನಿಮಿಷಗಳೇ ಬೇರೆ... ಆ ದಿನಗಳೇ ಬೇರೆ.. ನನಗೀಗ ರಿಗ್ರೆಟ್ ಆಗ್ತಿದೆ. ಚಿಕ್ಕವಯಸ್ನಲ್ಲೇ ಮದುವೆ ಆಗಿದ್ದಿದ್ರೆ ಚೆನ್ನಾಗಿತ್ತು ಅಂತ ಅನ್ನಿಸ್ತಿದೆ. ಲೀಲಾ ಬಂದಿದ್ಲು. ನಮ್ಮಿಬ್ಬರಿಗೂ ಅಷ್ಟೇ.. ಏನೋ ಬಿಗುಮಾನ.. ಏನೋ ಹಿಂಜರಿಕೆ. ಈ ಆಶ್ರಮದ ಬಗ್ಗೆ ಮಾತನಾಡಿಕೊಂಡು ಕಾಲ ಕಳೆದ್ವು, ಏನಂದುಕೊಂಡಳೋ ಏನೋ...."

"ಅವರು ಹೊರಟು ಹೋದ್ರಾ?"

"ಇಲ್ಲ. ನಾನು ನೀವು ಬರಲಿ ಅಂತ ಕಾಯ್ತಿದ್ದೆ. ಅವಳದ್ದೆ ಕಾರು ಇದೆ. ಅವಳು ನಿಮಗೆ ಡ್ರಾಪ್ ಕೊಡ್ತಾಳೆ ಹೇಳಿದೀನಿ...."

"ಥ್ಯಾಂಕ್ ಯೂ ಡಾಕ್ಟರ್.... ಇಲ್ಲಿಂದ ಬಸ್ಸು ಎಷ್ಟು ಹೊತ್ತಿಗೆ ಇದೆಯೋ. ನನಗೆ ಸರಿಯಾಗಿ ಗೊತ್ತಿಲ್ಲ.... ಏನೋ ಮಾತನ್ನಾಡಬೇಕು ಅಂತ ಅಂದ್ರಿ....."

"ಹುಂ... ಹೌದು... ಆ ಡೈರಿ, ಆ ಫೋಟೋಗಳನ್ನೆಲ್ಲಾ ಏನು ಮಾಡ್ತೀರಿ... ಹಾಗೇ, ಆ ಕವರಿನಲ್ಲಿ ಇದ್ದ ಬಟ್ಟೆ, ಎರಡು ತಗಡಿನ ಮೇಲೆ ಬರೆಸಿದ ಯಂತ್ರ... ಅದಕ್ಕೆಲ್ಲ ಯಾವ ಗತಿ ಕಾಣಿಸ್ತೀರಿ?"

"ನೀವು ಹೇಗೆ ಹೇಳಿದ್ರೆ ಹಾಗೆ....."

"ಡೈರಿಯನ್ನು, ಫೋಟೋಗಳನ್ನು ಸುಟ್ಟು ಹಾಕಬಹುದು... ಆ ಯಂತ್ರ... ಅದೇನಿರಬಹುದು ಅಂತ ಕುತೂಹಲದಿಂದ ಒಬ್ಬ ಉಪಾಸಕರ ಬಳಿ ವಿಚಾರಿಸಿದೆ... ಅದು ಯಾರೋ ಬಹಳ ವರ್ಷಗಳ ಹಿಂದೆ ತಗಡಿನ ಮೇಲೆ ಬರೆಸಿರುವ ಯಂತ್ರ ಗಳಂತೆ. ಅದನ್ನು ಮನೆಯಲ್ಲಿಟ್ಟುಕೊಂಡು ಪೂಜಿಸಿರಬಹುದು. ಆದರೆ ಪೂಜೆ ಅಪೂರ್ಣವಾಗಿದೆ ಅಂತಂದ್ರು...."

"ಅಂದ್ರೇ.... ಹೇಗೆ ಗೊತ್ತಾಯ್ತಂತೆ."

"ಯಂತ್ರಕ್ಕೆ ಸುತ್ತಿದ್ದ ಕರೀಬಟ್ಟೆ ಇತ್ತಲ್ಲ. ಅದರ ಮೇಲೆ ಒಂದು ರಂಗೋಲಿಯ ಚಿತ್ರವನ್ನು ಬಿಡಿಸಿದೆ.... ಆ ರಂಗೋಲಿಯ ಕೋನಗಳನ್ನು ಮಣಿಗಳಿಂದ ಪೋಣಿಸಿ ಹೊಲೆದಿದಾರೆ.... ನೋಡಿದ್ರಾ?"

"ಇಲ್ಲ. ನಾನು ಯಾವುದನ್ನೂ ಸರಿಯಾಗಿ ನೋಡಿರಲಿಲ್ಲ"

"ನಾನೂ ನೋಡಿರಲಿಲ್ಲ. ನಂಗೆ ಅದೆಲ್ಲ ಗೊತ್ತಿರಲೂ ಇಲ್ಲ. ಅವು ಸ್ಪಟಿಕ ಮಣಿಗಳಂತೆ... ಒಂದೊಂದು ದಿನವೂ ಯಂತ್ರವನ್ನು ಪೂಜಿಸಿದ ನಂತರ, ಒಂದೊಂದು ಮಣಿಯನ್ನಿಟ್ಟು ಹೊಲೆದಿದ್ದಾರೆ. ಹೀಗೆ ಆ ಯಂತ್ರಕ್ಕೆ ನಲವತ್ತೆಂಟು ದಿನಗಳು ಪೂಜೆ ಮಾಡಿರಬೇಕಾಗಿತ್ತು. ಆದರೆ ಕೇವಲ ಇಪ್ಪತ್ತೊಂದು ದಿನಗಳು ಮಾತ್ರ ಪೂಜೆ ಮಾಡಿದಾರೆ.... ಆದ್ದರಿಂದ ಅದನ್ನು ಮನೆಯಲ್ಲಿಟ್ಟುಕೊಳ್ಳದೇ, ನದಿಯಲ್ಲಿ ವಿಸರ್ಜಿಸಬೇಕು ಅಂತಂದ್ರು...." ಉಳಿದ ಸ್ಫಟಿಕಮಣಿಗಳನ್ನೂ ಸಹ.

"ಎಲ್ಲಿ ಸಿಕ್ತು! ಏನು ವಿಷಯ ಅಂತ ಕೇಳಿದ್ರಾ?"

"ಇಲ್ಲ. ಅವರೂ ಕೇಳಲಿಲ್ಲ. ನಾನೂ ಹೇಳಲಿಲ್ಲ. ಬಹುಶಃ ವಿಷಯ ತಿಳಿಯದ ಯಾರೋ ಆ ವಸ್ತುಗಳನ್ನು ಹಿರಿಯರ ಫೋಟೋದ ಹಿಂಬಾಗದಲ್ಲಿ ಇಟ್ಟಿರಬಹುದು. ಅದರಿಂದ ಕೆಟ್ಟದ್ದಂತೂ ಆಗಿಲ್ಲ.... ಆದರೆ ಈಗ ವಿಷಯ ಹೀಗೆ ಅಂತ ತಿಳಿದ ಮೇಲೆ ಆದಷ್ಟು ಬೇಗ, ನದಿಯಲ್ಲಿ ಹಾಕುವುದೇ ಒಳ್ಳೆಯದು"

"ಸರಿ ಕೊಡಿ. ನಾನೇ ಎಂದಾದ್ರೂ ಕಾವೇರಿ ನದಿಯಲ್ಲಿ ಹಾಕಿ ಬರ್ತೀನಿ"

"ಹಾಗೇ ಸುಮ್ಮನೆ ಹಾಕುವಂತಿಲ್ಲ. ನದೀಪೂಜೆ ಮಾಡಿ, ಬಾಗಿನ ಕೊಟ್ಟು

ನದಿಯಲ್ಲಿ ವಿಸರ್ಜಿಸಬೇಕು ಅಂತಂದ್ರು...."

"ಅದನ್ನೆಲ್ಲಾ ಈಗ ಮಾಡೋರು ಯಾರು? ಈ ವಿಷಯ ಯಾರಿಗೂ ತಿಳಿಯದು"

"ಅದಕ್ಕೆ ಅವರೇ ಒಂದು ಪರಿಹಾರವನ್ನು ಸೂಚಿಸಿದ್ದಾರೆ. ಅವರಿಗೆ ಒಂದಷ್ಟು ದಾನ ದಕ್ಷಿಣೆ ಅಂತ ಕೊಟ್ಟರೆ, ಏನೇನು ಮಾಡಬೇಕೋ ಅದನ್ನೆಲ್ಲ ಅವರು ಮಾಡ್ತಾರೆ. ಆದರೆ ಆ ಸಮಯದಲ್ಲಿ ಆ ಮನೆಯವರು ಅಲ್ಲಿದ್ದರೆ ಒಳ್ಳೆಯದು ಅಂತ ಅಂದರು...."

"ದುರ್ಮರಣಕ್ಕೆ ಈಡಾಗಿ ಹೋದವಳ ಕತೆ ಇದು ಅಂತ ನನ್ನಿಂದ ಹೇಳುಕ್ಕೆ ಆಗಲಿಲ್ಲ. ಲೀಲಳಿಗೂ ಈ ವಿಷಯ ತಿಳಿಸುವುದು ಬೇಡ ಅಂತ ಅನ್ನಿಸ್ತು. ಸಾವಿತ್ರಮ್ಮ, ವನಜಮ್ಮ ಯಾರಿಗೂ ಈ ವಿಷಯ ತಿಳಿಯದಿರುವುದೇ ಒಳ್ಳೆಯದು. ಸುಬ್ಬರಾಮಪ್ಪ ನಿಗೆ ಈ ವಿಷಯ ಗೊತ್ತೇ ಇಲ್ಲ"

"ನಿಮಗೆ ಎಲ್ಲಾ ವಿಷಯ ಗೊತ್ತಲ್ಲ ಡಾಕ್ಟ್ರೇ....."

"ಹತ್ತು ವರ್ಷದ ಕೆಳಗೆ, ಈ ಆಶ್ರಮಕ್ಕೆ ಬಂದು ಸೇರಿಕೊಂಡಾಗ, ಸುಬ್ಬರಾಮಪ್ಪ ನನ್ನನ್ನು ಬಳಿಯಲ್ಲಿ ಕೂರಿಸಿಕೊಂಡು, ಆಗಾಗ್ಗೆ ತಮ್ಮ ಮನೆಯ ವಿಷಯಗಳನ್ನು ಹೇಳುತ್ತಿದ್ದರು. ಅವರ ಮಗಳು ಆ ಕಾಲದಲ್ಲೇ ರಾಮಚಂದ್ರ ಎಂಬ ಬಡಮೇಷ್ಟ್ರನ್ನು ಪ್ರೀತಿಸಿ, ಮದುವೆಯಾಗಿದ್ದಳು. ಹೇಗಾದರೂ ಮಾಡಿ ಮಗಳನ್ನು ವಾಪಸ್ಸು ತಮ್ಮ ಮನೆಗೆ ಕರೆಸಿಕೊಳ್ಳಬೇಕೆಂಬ ಚಪಲ ಈತನಿಗೆ. ಹೆಂಡತಿಯ ಆರೋಗ್ಯ ಕೆಟ್ಟಾಗ, ಮಗಳು ಅಳಿಯನೊಡನೆ ರಾಜಿ ಮಾಡಿಕೊಂಡು ಮಗಳನ್ನು ಮನೆಗೆ ಕರೆದುಕೊಂಡು ಬಂದಿದ್ದರು. ಅಷ್ಟು ಹೊತ್ತಿಗಾಗಲೇ ದಿನೇಶ ಹುಟ್ಟಿದ್ದ. ಆರೇಳು ತಿಂಗಳಮಗುವಿರಬಹುದು. ಎರಡೂ ಮನೆಗೂ ಒಳ್ಳೆಯದಾಗಲಿ ಎಂಬ ಆಸೆ ಮಹಾಲಕ್ಷ್ಮಿಗೆ.

ಮಹಾಲಕ್ಷ್ಮಿಯ ಚಿಕ್ಕಪ್ಪ, ಅಂದರೆ ಈ ಲೀಲನ ತಂದೆಗೆ ಮಹಾಲಕ್ಷ್ಮಿ ಬಂದುದು ಸಹಿಸಲಿಲ್ಲ. ಮಹಾಲಕ್ಷ್ಮಿಯ ಮನಸ್ಸಿನಲ್ಲಿ ಕಹಿಯನ್ನು ತುಂಬಿ ಅವಳ ಗಂಡನ ಮನೆಯಿಂದ ಬರದೇ ಇರುವಂತೆ ಮಾಡಬೇಕೆಂದು ಕುತಂತ್ರ ಮಾಡಿದ್ದ ಅಂತ ಅನ್ನಿಸುತ್ತೆ. ಅದು ಕಾರ್ಯಗತವಾಗದಿದ್ದಾಗ, ಅವಳನ್ನು ತೋಟಕ್ಕೆ ಕರೆದುಕೊಂಡು ಹೋಗಿ ತೋಟದ ಬಾವಿಗೆ ತಳ್ಳಿ ಬಂದಿದ್ದ. ರಾಮಚಂದ್ರ ತನ್ನ ಹೆಂಡತಿ ಆತ್ಮಹತ್ಯೆ ಮಾಡಿಕೊಂಡಳೆಂದುಕೊಂಡ. ತನ್ನ ಮಗಳ ಸಾವಿಗೆ ಅಳಿಯನೇ ಕಾರಣ ಎಂದು ಸುಬ್ಬರಾಮಪ್ಪ ಜಗಳವಾಡಿ, ದಿನೇಶನ್ನ ತನ್ನ ವಶಕ್ಕೆ ಕೊಡಬೇಕೆಂದು ಲಾಯರ್ರು ನೋಟೀಸು ಕೊಡಿಸಿದ್ದರು. ಆದರೆ ರಾಮಚಂದ್ರ, ತಮ್ಮ ದೂರದ ಸಂಬಂಧಿ ಒಬ್ಬರಿಗೆ ಈ ಮಗುವನ್ನು ವಹಿಸಿ ತಾನು ಅಲೆಮಾರಿ ತರಹ ತಿರುಗಾಡಿಕೊಂಡಿದ್ದ. ಆ ಸಮಯದಲ್ಲಿ ಅವನಿಗೆ ವನಜಮ್ಮನ ಪರಿಚಯವಾಯಿತು. ಅವಳನ್ನು ಮದುವೆಯಾಗಿ, ದಿನೇಶನ್ನ ಅವಳ ವಶಕ್ಕೆ ಒಪ್ಪಿಸಿ ತಾನು ದೇಶಾಂತರ ಹೊರಟು ಹೋದ.... ಇದು ಆ ಕತೆ...."

"ನನ್ನ ವಿಷಯವನ್ನೇ ಹೇಳಲಿಲ್ಲವಲ್ಲ ಡಾಕ್ಟ್ರೇ.... ಹಾಗಾದ್ರೆ ನಾನ್ಯಾರು?"

"ನಿನ್ನ ತಂದೆ ಯಾರು ಅಂತ ಗೊತ್ತಿಲ್ಲ. ಆದರೆ ವನಜಮ್ಮನಿಗೆ ಗಂಡ ಇರಲಿಲ್ಲ. ಎರಡು ವರ್ಷದ ಮಗುವಿನ ತಾಯಿ ಅವಳು ವಿಧವೆಯಾಗಿದ್ದಳು...."

* * *

ಮಹೇಶ ತಲೆಯ ಮೇಲೆ ಕೈ ಹೊತ್ತು ಕುಳಿತ. "ಸಾರಿ ಮಹೇಶ್.... ಈ ಕತೆಯ ಹಿಂದಿರುವ ವ್ಯಥೆಯನ್ನು ನಿಮ್ಮ ತಲೆಗೆ ತುಂಬಿ, ನಿಮ್ಮ ಮನಸ್ಸಿಗೆ ಘಾಸೀ ಮಾಡಿಬಿಟ್ಟಿದೀನಿ. ಆದರೆ ನಿಮ್ಮದು ಗಟ್ಟಿ ಹೃದಯ.... ಎಲ್ಲವನ್ನೂ ಸರಿ ಮಾಡಬಲ್ಲ ಧೈರ್ಯ, ವಿವೇಕ ನಿಮ್ಮಲ್ಲಿದೆ. ನಂಗೆ ಗೊತ್ತು.... ಎಲ್ಲಾ ಸಂಬಂಧಗಳನ್ನು ಉಳಿಸಿ ಕೊಳ್ಳುವ ಜಾಣ್ಮೆ ನಿಮ್ಮಲ್ಲಿದೆ ಅಂತ ನನಗೆ ತಿಳಿದಿದೆ" ಎಂದು ಡಾ. ಶಂಕರ್ ಹೇಳಿದರು.

"ನನ್ನ ಮೇಲೆ ವಿಪರೀತ ಹೊರೆಯನ್ನು ಹೊರಿಸಿದೀರಿ ಡಾಕ್ಟ್ರೇ.... ಅಳಬೇಕೋ ನಗಬೇಕೋ ನನಗೆ ತಿಳೀತಿಲ್ಲ.... ನಾನೂ ದೇಶಾಂತರ ಹೊರಟು ಹೋಗೋಣ ಅಂತ ಅನ್ನಿಸ್ತಿದೆ" ಎಂದ ಮಹೇಶ.

"ದೇಶಾಂತರ ಹೋಗಿ ಅಥವಾ ಆತ್ಮಹತ್ಯೆ ಮಾಡಿಕೊಂಡು, ಯಾರೂ ಏನನ್ನೂ ಸಾಧಿಸುವುದಕ್ಕಾಗುವುದಿಲ್ಲ. ಈಸಬೇಕು ಇದ್ದು ಜೈಸಬೇಕು ಎಂದು ದಾಸರು ಹೇಳಿ ದ್ದಾರೆ. ಈಗ ಸುಜಯನ್ನ ಸುಖವಾಗಿಟ್ಟುಕೊಳ್ಳುವುದು ನಿಮ್ಮ ಮುಖ್ಯ ಗುರಿ.... ಗೊಂದಲಗಳಿಂದ ಅವಳ ಮನಸ್ಸು ಮುದುಡಿ ಹೋಗಿತ್ತು. ಆಗ ನೀವು ಅವಳಿಗೆ ಎಲ್ಲಾ ರೀತಿಯಿಂದಲೂ ಸಪೋರ್ಟ್ ಕೊಟ್ಟಿದೀರಿ.... ಅವಳೀಗ ಗೊಂದಲಗಳಿಂದ ಹೊರಬಂದಿದ್ದಾಳೆ. ಅದು ಪವಾಡವೇ ಸರಿ.... ಈಗ ನೀವು ಅವಳನ್ನು ಕಾಪಾಡಿ ಕೊಳ್ಳಬೇಕು.... ಅದು ನಿಮ್ಮ ಕರ್ತವ್ಯವೂ ಹೌದು...."

"ಹಾಗೇ ನನಗೂ ಲೀಲಳಿಗೂ ಇದ್ದ ಸಂಬಂಧ ಕೇವಲ ನಾನು ಡಾಕ್ಟರು, ಅವಳು ಈ ಆಶ್ರಮದ ಟ್ರಸ್ಟಿ ಅಷ್ಟೇ.... ಪ್ರೀತಿ-ಪ್ರೇಮ ಆಕರ್ಷಣೆ ಯಾವುದೂ ಇರಲಿಲ್ಲ. ಆದರೆ ಇದ್ದಕ್ಕಿದ್ದ ಹಾಗೇ, ಲೀಲಾಳು ಮರು ಮದುವೆಯಾಗುವಳೆಂಬ ವಿಷಯ ತಿಳಿಯಿತು. ಇಲ್ಲಿ ನಿಮ್ಮ ಹೆಸರು ಇದ್ದುದೂ ತಿಳಿಯಿತು. ಅಗ ನನಗೆ ಇದ್ದಕ್ಕಿದ್ದ ಹಾಗೆ ಹುಟ್ಟಿದ್ದು ಈ ಆಸೆ. ನನ್ನ ಒಂಟಿತನವನ್ನು ನೀಗಲು ಒಬ್ಬಳು ಸಂಗಾತಿ ಬೇಕು ಅಂತ ನನಗೆ ಎಂದೂ ಅನ್ನಿಸಿರಲಿಲ್ಲ. ಲೀಲಾಳಿಗೆ ಬಾಳು ಕೊಡಬೇಕು ಅನ್ನೋ ಆದರ್ಶವೂ ಅಲ್ಲ. ಅಥವಾ ಎಲ್ಲಕ್ಕಿಂತ ಹೆಚ್ಚಾಗಿ, ಈ ಆಸ್ತಿಯ ಒಡೆತನ ಸಿಗಬಹುದು ಅನ್ನೋ ದುರಾಶೆಯಂತೂ ಖಂಡಿತಾ ಅಲ್ಲ.... ಲೀಲಾಳಿಂದ, ವಿವೇಕ ನಿಂದ ನಿಮ್ಮಿಬ್ಬರಿಗೆ ಏನಾದರೂ ಅಪಾಯ ಒದಗಬಹುದು ಅಂತ ಅನ್ನಿಸಿದ್ದು ನಿಜ... ಆಗ ನಾನು ಈ ನಿರ್ಧಾರ ತೆಗೆದುಕೊಂಡೆ. ಆದರೆ ನಾನು ಯಾವ ಮಹತ್ಕಾರ್ಯವನ್ನು ಮಾಡ್ತಿದೀನಿ ಅಂತ ಅನ್ನಿಸ್ತಿಲ್ಲ. ಬಹುಶಃ ಇದರಲ್ಲಿ ನನ್ನ ಸ್ವಾರ್ಥವೂ ಇರಬಹುದು.... ವಯಸ್ಸು ಮೀರುತ್ತಿದೆ. ಜೊತೆಗೆ ಒಬ್ಬರು ಸಂಗಾತಿ ಇರಲಿ ಅಂತ ಮನಸ್ಸು ಬಯಸುತ್ತಿರಬಹುದು ಏನಂತೀರಿ!"

"ನಿಮಗೆ ಏನು ಹೇಳ್ಬೇಕು ಅಂತ ಗೊತ್ತಾಗ್ತಿಲ್ಲ. ಫ್ರೆಂಡು, ಫಿಲಾಸಫರ್ ಅಂಡ್ ಗೈಡ್ ನೀವೇ.... ನಿಮ್ಮ ವಿಶ್ವಾಸ ಸದಾ ಹೀಗೇ ಇರಲಿ ಅಂತ ಬಯಸ್ತೀನಿ"

"ಖಂಡಿತಾ.... ಸುಬ್ಬರಾಮಪ್ಪನಿಗೆ ನಾನು ಹೇಗೋ, ನನಗೆ ನೀವೂ ಹಾಗೆ...."

"ಥ್ಯಾಂಕ್ ಯೂ ಡಾಕ್ಟರ್, ನಾನಿನ್ನು ಹೊರಡ್ತೀನಿ. ಲೀಲಾ ಎಲ್ಲಿ ಸಿಗ್ತಾರೆ?"

"ಗೆಸ್ಟ್ ಹೌಸಿನಲ್ಲಿರ್ತಾರೆ. ನಡೀರಿ ನಾನೂ ಅಲ್ಲಿಯ ತನಕ ಬರ್ತೀನಿ."

* * *

"ಅರೇ ಮಹೇಶ್.... ಬರೋಲ್ಲ ಅಲ್ಲೇ ಇರ್ತೀನಿ ಅಂತ ಅಂದಿದ್ಯಲ್ಲೋ?" ಎಂದು ಕೇಳಿದ ದಿನೇಶ.

"ಸುಮ್ನೆ ಹಾಗಂದಿದ್ದೆ.... ಅಲ್ಲಿದ್ದು ತಾನೆ ಏನ್ಮಾಡ್ಲೀ?"

"ಹೇಗ್ಬಂದೆ? ಬಸ್ನಲ್ಲಿ ಬಂದ್ಯಾ?"

"ಇಲ್ಲ. ಲೀಲಾ ಕಾರ್ನಲ್ಲಿ ಬಿಟ್ಟು ಹೋದ್ರು...."

"ಅಮ್ಮನ್ನ ಎಬ್ಬಿಸ್ಲಾ! ಊಟ ಆಯ್ತೋ ಅಥವಾ ಇಲ್ವೋ....?"

"ಅಲ್ಲೇ ಊಟ ಆಯ್ತು.... ಅತ್ಗೆ ಮಲಗಿ ಬಿಟ್ರಾ?"

"ಹೂಂ ಮಲಗಿದಾಳೆ. ಏನಾದ್ರೂ ಹೇಳ್ಬೇಕಾಗಿತ್ತಾ?"

"ಬೆಳಿಗ್ಗೆ ಮಾತಾಡ್ತೀನಿ.... ಗುಡ್ ನೈಟ್....." ಎಂದು ಹೇಳಿ ತನ್ನ ರೂಮಿಗೆ ಬಂದ. ಮಂಚದ ಮೇಲೆ ಇಟ್ಟಿದ್ದ ಕವರ್ರು, ಡೈರಿ ಎಲ್ಲಾ ಅಲ್ಲಿ ಹಾಗೇ ಇತ್ತು. ಸದ್ಯ ಯಾರೂ ನನ್ನ ರೂಮಿಗೆ ಬಂದಿಲ್ಲ ಎಂದುಕೊಂಡು, ಡೈರಿಯನ್ನು ಕೈಗೆತ್ತಿಕೊಂಡು ಪುಟಗಳನ್ನು ತಿರುಗಿಸಿದ. ಈಗ ಅವಳ ಕನಸುಗಳ ಅರ್ಥ ಸ್ವಲ್ಪ ಸ್ವಲ್ಪವಾಗಿ ಸಿಕ್ಕಿತ್ತು.... ಮತ್ತೊಮ್ಮೆ ನಿಧಾನವಾಗಿ ಓದಲೇ ಎಂದುಕೊಂಡ. ಆದರೆ ಈಗ ಓದಿ, ಅರ್ಥಮಾಡಿ ಕೊಂಡರೂ ಏನು ಪ್ರಯೋಜನ? ಡೈರಿಯನ್ನು ಮೇಲಿನ ಷೆಲ್ಫ್‌ಗೆ ಎಸೆದ. ಅಲ್ಲಿ ಕುಳಿತಿದ್ದ ಬೆಕ್ಕು ಮಿಯಾಂ ಎನ್ನುತ್ತಾ ಜಿಗಿಯಿತು. ಭಯದಿಂದ ಬೆಚ್ಚಿದ.... ತಥ್ ಹಾಳಾದ್ದೇ. ಅಲ್ಲೇನು ಮಾಡ್ತಿದೆ? ಬೆಕ್ಕು ಕಿಟಕಿಯ ಮೂಲಕ ಹೊರಕ್ಕೆ ಇಳಿದಿತ್ತು.

ತಥ್ ಈ ಮನೆಯಲ್ಲಿ ಇಲಿಗಳ ಹಾವಳಿ, ಬೆಕ್ಕುಗಳ ಕಾಟ.... ತಪ್ಪಿದ್ದೇ ಇಲ್ಲ... ಎಂದುಕೊಂಡು ಕವರಿನಲ್ಲಿದ್ದ ಫೋಟೋಗಳನ್ನು ಆಚೆಗೆ ತೆಗೆದು ನೋಡಿದ. ಮಗುವನ್ನು ಎತ್ತಿಕೊಂಡು ನಿಂತಿರುವ ಹೆಂಗಸು.... ಆ ಮಗುವಿನ ಮುಖ ದಿನೇಶನಂತೆ ಇದೆಯೇ.... ಈ ಹೆಂಗಸು ಸುಜಯಳಂತೆ ಇದ್ದಾಳೆಯೇ ಮತ್ತೆ ಮತ್ತೆ ನೋಡಿದ. ಆದರೆ ಹಾಗೆನ್ನಿಸಲಿಲ್ಲ. ಈಗ ದಿನೇಶಂಗೆ ಇಪ್ಪತ್ತೆಂಟು ವರ್ಷಗಳು, ಸುಜಯಂಗೆ ಇಪ್ಪತ್ತೈದು ಇರಬಹುದು.... ತನಗೂ ಇಪ್ಪತ್ತಾರು ವರ್ಷ. ಆದರೆ ನಿಜವಾದ ವಯಸ್ಸು, ಇಪ್ಪತ್ತೊಂಭತ್ತೋ ಮೂವತ್ತೋ.... ಹೇಳೋರ್‍ಯಾರು? ಅಮ್ಮ ತನ್ನ ಅನುಕೂಲಕ್ಕಾಗಿ ದಿನೇಶನ್ನ ಅಣ್ಣನನ್ನಾಗಿ ಮಾಡಿದಳು. ನನ್ನನ್ನ ತಮ್ಮನನ್ನಾಗಿ ಮಾಡಿ ದಳು. ನನ್ನನ್ನು ತಮ್ಮನ್ನ ಮಾಡುವ ಅವಶ್ಯಕತೆ ಏನಿತ್ತು? ನಾನು ಅಣ್ಣನಾಗಿದ್ದಿದ್ದರೆ

ಏನಾಗುತ್ತಿತ್ತು? ನನ್ನ ಸ್ವಂತ ತಂದೆ ಮೊದಲೇ ಬದುಕಿರಲಿಲ್ಲ. ದಿನೇಶನ ತಂದೆಯೂ ಇರಲಿಲ್ಲ. ಅಮ್ಮನಿಗೆ ಯಾರ ಭಯವೂ ಇರಲಿಲ್ಲ. ಆದರೂ ಯಾಕೆ ಹೀಗೆ ಮಾಡಿದಳು? ನನಗಾದರೂ ನಿಜವನ್ನು ಹೇಳಬಹುದಾಗಿತ್ತಲ್ಲ. ಈಗ, ಎಲ್ಲರಿಗಿಂತ ಹೆಚ್ಚಿನ ವಿಷಯ ನನಗೆ ತಿಳಿದಿದೆ ಅಂತ ಗೊತ್ತಾದರೆ ಏನನ್ನಿಸಬಹುದು! ನನ್ನ ಬಾಯನ್ನು ಮುಚ್ಚಿಸಬಹುದು. ಯಾರಿಗೂ ಹೇಳುವುದು ಬೇಡ ಅಂತನ್ನಬಹುದು. ಅದರ ಬದಲು, ಏನೂ ಗೊತ್ತಿಲ್ಲದವನ ಥರ ಇದ್ದು ಬಿಡ್ತೀನಿ. ಡಾಕ್ಟರು ಹೇಳುವುದು ಸರಿ.... ಸಂಬಂಧಗಳು ಉಳಿಯಬೇಕು. ಇಲ್ಲದಿದ್ದರೆ ಬದುಕು ದುಸ್ತರವಾಗುತ್ತದೆ.

ಜೀವನದಲ್ಲಿ ಏನೇ ಏರುಪೇರು ಬರಲಿ, ಸಂಬಂಧಗಳು ಕೆಡಬಾರದು. ಅಮ್ಮ, ಅಣ್ಣ, ಅತ್ತಿಗೆ, ಹೆಂಡತಿ ಎಲ್ಲಾ ಹಾಗೇ ಇರಬೇಕು. ನಾನು ನಾನಾಗಿಯೇ ಇರಬೇಕು. ಬದಲಾಗಬಾರದು....

"ಯಾವಾಗ ಬಂದ್ಯೋ ಮಹೀ.... ಏನ್ಮಾಡ್ತಾ ಇದೀಯ?" ವನಜಮ್ಮ ಕೇಳಿದಳು.

"ಏನಿಲ್ಲಮ್ಮ.... ಏನೋ ಓದ್ತಾ ಇದ್ದೆ...."

"ಸರಿ. ಮಲಕ್ಕೋ. ನಿನ್ನ ರೂಂನಲ್ಲಿ ಲೈಟ್ ಉರೀತಿತ್ತಲ್ಲ ಅದಕ್ಕೇ ನೋಡ್ದೆ.... ನಾಳೆ ದಿನ ದಿಲೀಪನ ಎಂಗೇಜ್‌ಮೆಂಟ್. ಎಲ್ರಿಗೂ ಬರೋಕ್ಕೆ ಹೇಳಿದಾರೆ"

"ನಾನು ಬರೋಲ್ಲ. ನೀವೆಲ್ಲಾ ಹೋಗಿ...." ತಾಯಿ ಆಕಳಿಸುತ್ತಾ ಒಳ ನಡೆದಿದ್ದಳು. ಸುಜಯ ಎಂಗೇಜ್‌ಮೆಂಟ್ ವಿಷಯವನ್ನು ಹೇಳಲಿಲ್ಲ. ಅವಳೂ ಬರೋದಾದ್ರೆ ತಾನೂ ಹೋಗಬಹುದಾಗಿತ್ತು ಎಂದುಕೊಂಡ.

ಸುಜಯಾ.... ಸುಜಯಾ.... ಅವಳೆಷ್ಟು ಆತ್ಮೀಯಳಾಗಿ ಬಿಟ್ಟಿದ್ದಾಳೆ.... ಗಂಡ ಹೆಂಡತಿಯರ ಸಂಬಂಧ ಜನ್ಮಜನ್ಮದ್ದು ಅಂತ ಹೇಳ್ತಾರೆ.... ಹಾಗಾದ್ರೆ ಹಿಂದಿನ ಜನ್ಮದಲ್ಲಿ ತಾನು ರಾಮಚಂದ್ರನಾಗಿದ್ದೆನೆ....? ಇದ್ದಕ್ಕಿದಂತೆ ಅವನಿಗೆ ಭಯವಾಗ ತೊಡಗಿತ್ತು, ಇಲ್ಲ ಅದ್ಹೇಗೆ ಸಾಧ್ಯ!? ತಾನು ಈ ಮನೆಗೆ ಬಂದು ಸೇರಿದಾಗ ಅವರು ಬದುಕಿದ್ದರು. ಹಾಗಾದರೆ ಜನ್ಮ ಜನ್ಮದ ಸಂಬಂಧವೆಲ್ಲ ಸುಳ್ಳು.... ಪೂರ್ವಜನ್ಮ, ಪುನರ್ಜನ್ಮ ಎಲ್ಲಾ ಬರೀ ಕಲ್ಪನೆ. ತಾನು ಅದನ್ನು ನಂಬಬಾರದು. ಸುಜಯಳ ಬಗ್ಗೆ ತಿಳಿಯದಿದ್ದರೇ ಚೆನ್ನಾಗಿತ್ತು.... ಈಗ ಬರೀ ಗೊಂದಲ.... ಡಾಕ್ಟರೇನೋ ನನಗ ಮಾರುದ್ದ ಉಪದೇಶ ಮಾಡಿದರು.... ಆದರೆ ಇದನ್ನೆಲ್ಲ ಮರೆಯುವುದು ಹೇಗೆ?"

"ಮಹೀ ಇನ್ನೂ ಮಲಗಲಿಲ್ವೇನೋ....?" ಒಳಗಿನಿಂದಲೇ ವನಜಮ್ಮ ಕೇಳಿದಳು.

"ಥೂ ಇವಳೊಬ್ಬಳು.... ಯೋಚನೆ ಮಾಡಕ್ಕೂ ಬಿಡೋಲ್ಲ...." ತನ್ನಲ್ಲೇ ರೇಗಿಕೊಂಡು, ದೀಪವನ್ನಾರಿಸಲು ಎದ್ದ. ಮಲಗುವ ಮೊದಲು ಸುಜಯಳಿಗೆ ಗುಡ್ ನೈಟ್ ಹೇಳಬೇಕು ಎಂದುಕೊಂಡು, ಅವಳ ಫೋಟೋವನ್ನು ಹೊರತೆಗೆದ. ಮಂದಹಾಸ ಬೀರುತ್ತಿದ್ದ ಮುಖವನ್ನು ಮತ್ತೆ ಮತ್ತೆ ನೋಡಿದ. ಇನ್ನು ಕೆಲವೇ

ದಿನಗಳು.... ಅವಳು ನನ್ನ ತೋಳುಗಳಲ್ಲಿ. ಈ ಮಂದಹಾಸವನ್ನು ಬೀರುವ ತುಟಿಗಳ ಮಧುವನ್ನು ಹೀರುತ್ತಾ, ಬೇರೆ ಎಲ್ಲಾ ವಿಷಯವನ್ನು ಮರೆತು.... ಆನಂದ ಸಾಗರದಲ್ಲಿ ಮುಳುಗಿ.... ಕಣ್ಣುಗಳನ್ನು ಮುಚ್ಚಿ ಹಿತವಾದ ಅನುಭವಗಳನ್ನು ಯೋಚಿಸುತ್ತಾ ಹಾಗೇ ಹಾಸಿಗೆಯ ಮೇಲೆ ಉರುಳಿಕೊಂಡ. ಸ್ವಲ್ಪ ಹೊತ್ತಿನಲ್ಲಿ ಗಾಢ ನಿದ್ದೆ ಹತ್ತಿತ್ತು.

ಬೆಳಗಿನ ಜಾವದಲ್ಲಿ ಪಕ್ಕದ ಮನೆಯ ಅಲಾರಾಂ ಗಡಿಯಾರ ಹೊಡೆಯ ಲಾರಂಭಿಸಿತ್ತು. ಎಚ್ಚರವಾಯಿತು. ತನ್ನ ಮುಖದ ಬಳಿ ಇದ್ದ ಫೋಟೋ ತೆಗೆದು ಮುತ್ತಿಟ್ಟ. "ಗುಡ್ ಮಾರ್ನಿಂಗ್ ಮೇಡಂ.... ರಾತ್ರಿ ನಿಮ್ಮಿಂದಾಗಿ, ದೀಪವನ್ನಾರಿಸದೇ ಹಾಗೇ ಮಲಗಿ ಬಿಟ್ಟಿದೀನಿ...." ಎದ್ದು ದೀಪವನ್ನಾರಿಸಿ ಮತ್ತೆ ಮಲಗಿದ.

* * *

ಡಾ. ಶಂಕರ್ ಹಾಗೂ ಲೀಲಾರ ವಿವಾಹ, ಸರಳ ವಿಧಿ ವಿಧಾನಗಳಿಂದ ಆಶ್ರಮದ ಆವರಣದಲ್ಲಿ ನೆರವೇರಿತು. ಸುಜಯಳ ಮನೆಯವರು, ದೀಪಳ ಮನೆ ಯವರು, ವನಜಮ್ಮನ ಮನೆಯವರೆಲ್ಲರೂ ಸಮಾರಂಭದಲ್ಲಿ ಭಾಗವಹಿಸಿದ್ದರು.

ಸಾವಿತ್ರಮ್ಮ ವನಜಮ್ಮನೊಂದಿಗೆ ಹೆಚ್ಚಿಗೆ ಮಾತನಾಡಲಿಲ್ಲ. ಅದೇನು ಅಸಮಾ ಧಾನವೋ ಅಥವಾ ಜಂಭವೋ ವನಜಮ್ಮನಿಗೆ ತಿಳಿಯಲಿಲ್ಲ. ಮಾತಾಡದಿದ್ರೆ ಬೇಡ. ನಂಗೂ ಸಮಯ ಉಳಿಯಿತು" ಎಂದುಕೊಂಡಳು.

ವನಜಮ್ಮ ತನ್ನ ಮಗ-ಸೊಸೆಯರೊಂದಿಗೆ ಸುಬ್ಬರಾಮಪ್ಪನ ರೂಮಿಗೆ ಹೋಗಿ, ದಿನೇಶನ ಪರಿಚಯವನ್ನು ಮಾಡಿಕೊಟ್ಟಳು. ಲೀಲಾ ಹಾಗೂ ಡಾಕ್ಟರ್ ಸಹ ಅಲ್ಲಿಯೇ ಇದ್ದರು. ಲೀಲಾ ದಿನೇಶನನ್ನೇ ಅನೇಕ ಬಾರಿ ನೋಡಿದಳು. ಅವಳಿಗೆ ತನ್ನ ಅಕ್ಕನನ್ನು ನೋಡಿದ ನೆನಪಿರಲಿಲ್ಲ. ಆದರೂ ಯಾವುದಾದರೂ ಛಾಯೆ ಗೋಚರಿಸ ಬಹುದೆಂದುಕೊಂಡವಳಿಗೆ ನಿರಾಸೆ ಆಗಿತ್ತು.

ಸುಜಯ ಸುಮತಿಯರೊಂದಿಗೆ, ದಿಲೀಪ ಹಾಗೂ ಮಹೇಶ ಕುಳಿತು ಹರಟೆ ಹೊಡೆಯುತ್ತಿದ್ದರು. ವಿವೇಕ ಅಲ್ಲೇ ಸುತ್ತಾಡುತ್ತಿದ್ದ.

"ಪಾಪ.... ಈಗ ವಿವೇಕ ಒಂಟಿಯಾಗಿಬಿಟ್ಟ. ಹೊಡೆಯೋಕು ಬೈಯೋಕು ಈಗ ಅಕ್ಕನೂ ಇಲ್ಲ" ಸುಜಯಳ ಮಾತಿಗೆ ದಿಲೀಪ ಲೊಚಗುಟ್ಟಿದ.

"ಗಂಡು ಹುಡುಗನ್ನ, ನಿನ್ನ ವುಡ್ಬೀ ಎದುರಿಗೆ ಚುಡಾಯಿಸ್ತೀಯಲ್ಲೇ...."

"ಏನೀಗ ವಿವೇಕ ಏನೂಂತ ನಂಗೆ ಚೆನ್ನಾಗಿ ಗೊತ್ತು"

"ಪಾಪ ಒಬ್ಬನೇ ಸುತ್ತಾಡ್ತಿದಾನೆ. ನಮ್ಮ ಹರಟೆಗೆ ಅವನನ್ನೂ ಸೇರಿಸಿಕೊಳ್ಳೋಣ" ಸುಮತಿ ನಕ್ಕು ನುಡಿದಳು. "ಅವನು ಅದಕ್ಕೇ ಕಾಯ್ತಾ ಇದಾನೆ. ನಿನ್ನನ್ನೇ ಹೇಗೆ ನೋಡ್ತಿದ್ದಾನೆ ನೋಡು." ದಿಲೀಪನೆಂದ.

"ನೋಡ್ಲಿ ಬಿಡು. ನೀನಂತೂ ಒಂದು ದಿನವೂ ನನ್ನನ್ನು ದಿಟ್ಟಿಸಿ ನೋಡ್ಲಿಲ್ಲ.

ಏ ಕಮಂಗೀ, ನಿನ್ನ ಹೆಂಡ್ತೀನಾದ್ರೂ ಸರಿಯಾಗಿ ನೋಡು.... ಇಲ್ಲದಿದ್ದರೆ, ಬೆಂಗಾಲಿ ಬಾಬು ಹಿಂದೆ ಓಡಿಹೋಗ್ತಾಳೆ ಅಷ್ಟೇ...."

"ಷ್ ಅತಿಯಾಯ್ತು ಚುಮ್ಮೀ.... ಇದು ನಿನ್ನ ಕಾಲೇಜಲ್ಲ. ನಾವುಗಳು ಕ್ಲಾಸ್‌ಮೇಟ್ಸ್ ಅಲ್ಲ." ವಿವೇಕ ನಿಧಾನವಾಗಿ ನಡೆದು ಬಂದು ಅವರುಗಳನ್ನು ಸೇರಿಕೊಂಡ. "ನೋಡು ಮತ್ತೆ ಹೇಗೆ ಮಾತಾಡ್ತಾನೆ?"

"ಚುಮ್ಮೀ ಪ್ಲೀಸ್. ವಾದ ಮಾಡ್ಬೇಡ. ನಂಗೆ ತಲೆ ನೋಯ್ತಿದೆ"

"ತಲೆ ನೋಯ್ತಿದ್ರೆ ಹೋಗಿ ಮಲಕ್ಕೋ.... ಬೇಕಾದರೆ ಅಮೃತಾಂಜನವನ್ನು ಹಚ್ಚಿಸ್ಕೋ.... ಹಚ್ತೀರಾ ಭಾವ?" ಮಹೇಶನನ್ನು ಪ್ರಶ್ನಿಸಿದಳು.

"ಇಲ್ಲ. ಇವತ್ತು ನೀನೇ ಹಚ್ಚು.... ಆಮೇಲೆ ನಿನಗೆಲ್ಲಿ ಸಿಕ್ತಾಳೆ ನಿಮ್ಮಕ್ಕ? ಆಮೇಲಿಂದ ಅದು ನನ್ನ ಕೆಲಸ...."

"ಸರಿಯಾಗಿ ಹೇಳಿದ್ರಿ ಮಹೇಶ್...." ದಿಲೀಪ ಚಪ್ಪಾಳೆ ತಟ್ಟಿ ನಕ್ಕ. ಸುಮತಿ ಅವನನ್ನು ಅಣಕಿಸಿದಳು. ವಿವೇಕ ತಾನೂ ನಗುತ್ತಾ ಅವರೊಂದಿಗೆ ಕುಳಿತ.

"ಏನು ಜೋಕು? ನಂಗೂ ಹೇಳಿ...."

"ದಿಲೀಪ ನೀನು ಹೇಳೋ...."

"ಅಕ್ಕಂಗೆ ತಲೆ ನೋಯ್ತಿದೆ...."

"ಅದು ಜೋಕಾ? ಅದಕ್ಕೆ ನಗ್ತಿದ್ರಾ?" ಎಲ್ಲರೂ ಗೊಳ್ ಅಂತ ನಕ್ಕಾಗ ವಿವೇಕ ಪೆಚ್ಚಾದ. ಮಹೇಶನಿಗೆ ಪಿಚ್ಚೆನ್ನಿಸಿತ್ತು. ಎದ್ದು ನಿಂತ.

"ಬನ್ನಿ ವಿವೇಕ್ ಸುತ್ತಾಡಿ ಬರೋಣ. ಊಟಕ್ಕೆ ಇನ್ನೂ ಸಮಯವಿದೆ. ಅದಕ್ಕೇ ಸುಜಯಂಗೆ ತಲೆನೋವು ಅಷ್ಟೇ.... ಅಕ್ಕ, ಭಾವಂಗೆ ಏನು ಗಿಫ್ಟ್ ಕೊಟ್ರಿ ನೀವು?" ಹೆಜ್ಜೆ ಹಾಕುತ್ತಾ ಕೇಳಿದ.

"ನಾನು ಏನೂ ಕೊಡಲಿಲ್ಲ. ಬೇಡ ಅಂತಂದ್ರು.... ನಿಮಗೆ, ಸುಜಯಂಗೆ ಏನು ಕೊಡ್ಲಿ? ಯಾವಾಗ ಮದುವೆ?"

"ಇನ್ನು ಹತ್ತು ದಿನಕ್ಕೆ ನಮ್ಮ ಮದುವೆ.... ನೀವು ಬರಬೇಕು"

"ಖಂಡಿತಾ ಬರ್ತೀನಿ. ಎಲ್ಲಿ ಮದುವೆ? "ಇಲ್ಲೇ ಆಶ್ರಮದಲ್ಲಿ ಮಾಡ್ಕೊಳ್ಳಿ. ಇವತ್ತಿನ ಹಾಗೇ ನಾವು ಎಲ್ಲಾ ಸಿದ್ಧ ಮಾಡ್ತೀವಿ. ನಾನು ಅಪ್ಪನ ಹತ್ರ ಮಾತಾಡ್ತೀನಿ"

"ನೋಡೋಣ...." ಮಹೇಶ ಹಾಗೆ ಬಾಯಿ ಮಾತಿಗೆ ಹೇಳಿದ್ದ. ಆದರೆ ಅದೇ ವಿಷಯದ ಬಗ್ಗೆ ಚರ್ಚೆ ನಡೆದು ಕಡೆಗೆ ಆಶ್ರಮದ ಆವರಣದಲ್ಲೇ ಸುಜಯ-ಮಹೇಶರ ಮದುವೆ ಎಂದು ನಿರ್ಧರಿಸಿದ್ದರು. ಸುಬ್ಬರಾಮಪ್ಪನ ಮಾತಿಗೆ ಇಲ್ಲ ಎನ್ನಲಾಗದೇ ವನಜಮ್ಮ ಒಪ್ಪಿಕೊಂಡಿದ್ದಳು. ಆದರೆ ಯಾವುದೋ ಆತಂಕ ಬಾಧಿಸಿತ್ತು.

ಯಾವ ಛತ್ರವನ್ನೂ ಗೊತ್ತು ಮಾಡಲು ಸಮಯವಿರಲಿಲ್ಲ. ಯಾವುದೋ ದೇವಸ್ಥಾನಕ್ಕಿಂತ ಈ ಆಶ್ರಮದ ವಾತಾವರಣ ನಿಜಕ್ಕೂ ಚೆನ್ನಾಗಿರುತ್ತೆ ಅಂತ

ಸುಜಯಳ ತಂದೆ-ತಾಯಿ ಒಪ್ಪಿಕೊಂಡಿದ್ದರು.

ಎಲ್ಲರನ್ನೂ ಊಟಕ್ಕೆ ಎಬ್ಬಿಸಿದರು. ಆಹ್ವಾನಿತರು ಕಡಿಮೆ ಇದ್ದುದರಿಂದ ಎಲ್ಲರೂ ಒಟ್ಟಿಗೆ ಊಟಕ್ಕೆ ಕುಳಿತಿದ್ದರು.

"ಹೊಸ ಬೀಗರು ಸಿಕ್ಕ ಸಂಭ್ರಮದಲ್ಲಿ ಹಳೆ ಸ್ನೇಹಿತೆಯನ್ನೇ ಮರೆತೇ ಬಿಟ್ಟಿದ್ದೀರಿ" ಸಾವಿತ್ರಮ್ಮ ವ್ಯಂಗ್ಯವಾಗಿ ನುಡಿದಳು.

"ಹಾಗೇನಿಲ್ಲ. ನಿಮ್ಮ ಮಗಳ ಮದುವೆ. ನೀವು ಬಿಸಿಯಾಗಿದ್ರಿ.... ಅದಕ್ಕೇ ಬಂದು ತೊಂದರೆ ಕೊಡಲಿಲ್ಲ"

"ಏನು ಬಿಸಿ? ಎಲ್ಲಾ ತಯಾರಿಯೂ ಈ ಆಶ್ರಮದವರದ್ದೇ.... ಸುಮ್ಮನೇ ಸಿಂಗರಿಸಿಕೊಂಡು ಕೂತಿದ್ದಷ್ಟೇ... ಯಾವ ಓಡಾಟವೂ ಇಲ್ಲ"

"ಇವರು ನನ್ನ ಹಿರೀ ಬೀಗರು, ಇವರು ಭಾವೀ ಬೀಗರು" ವನಜಮ್ಮ ಹೆಮ್ಮೆಯಿಂದ ಹೇಳಿಕೊಂಡು ಪರಿಚಯಿಸಿದಳು.

"ನಮ್ಮ ವಿವೇಕಂಗೂ ಯಾವ್ದಾದ್ರೂ ಒಳ್ಳೇ ಹುಡುಗೀನ್ನ ಗೊತ್ಮಾಡ್ಕೊಡಿ."

"ಆಗಲಿ.... ಮಾಡಿಕೊಡೋಣ."

"ಅವನೇ ವಿವೇಕ" ಅಲ್ಲಿ ಓಡಾಡುತ್ತಿದ್ದವನನ್ನು ತೋರಿಸಿದಳು ಸಾವಿತ್ರಮ್ಮ.

ಡಾ. ಶಂಕರ್ ಹಾಗೂ ಲೀಲಾ ಬಂದು, ಊಟಕ್ಕೆ ಕುಳಿತವರನ್ನು ಮಾತನಾಡಿಸಿ, ಸಾವಕಾಶವಾಗಿ ಊಟ ಮಾಡಬೇಕೆಂದು ಹೇಳಿ, ತಾವಿಬ್ಬರೂ ಊಟಕ್ಕೆ ಕುಳಿತರು.

ಊಟದ ನಂತರ, ಎಲ್ಲರಿಗೂ ಫಲ ತಾಂಬೂಲಗಳನ್ನು ಕೊಡಲಾಯಿತು. ಆಹ್ವಾನಿತ ರೆಲ್ಲ ಒಬ್ಬೊಬ್ಬರಾಗಿ ಹೊರಟರು.

"ನೀವುಗಳು ರಾತ್ರಿಯ ಊಟವನ್ನು ಇಲ್ಲಿಯೇ ಮಾಡಿಕೊಂಡು ಹೋಗ್ಬೇಕು" ಎಂದು ಸುಬ್ಬರಾಮಪ್ಪ ಬಲವಂತ ಮಾಡಿದುದರಿಂದ, ಇವರುಗಳು ಅಲ್ಲೇ ಉಳಿದು ಕೊಂಡರು. ಸುಜಯಳ ತಂದೆ-ತಾಯಿ, ದೀಪಾಳ ತಂದೆ-ತಾಯಿಯರು ಹೊರಟು ಬಿಟ್ಟರು. ಸುಜಯ ತಂಗಿಯನ್ನು ತನ್ನ ಜೊತೆಗೆ ಉಳಿಸಿಕೊಂಡಳು. ವನಜಮ್ಮ ಆತಂಕಗೊಂಡಿದ್ದಳು. ಸುಬ್ಬರಾಮಪ್ಪನವರು ಎಲ್ಲರಿಗೂ ಉಡುಗೊರೆಗಳನ್ನು ಕೊಟ್ಟರು. ದಿನೇಶನನ್ನು ತಮ್ಮ ಬಳಿ ಕೂರಿಸಿಕೊಂಡು, ಕೆನ್ನೆಗಳನ್ನು ಸವರಿದರು.

"ಒಳ್ಳೆ ರಾಜಕುಮಾರ ಇದ್ದ ಹಾಗಿದೀಯ.... ಸದಾಕಾಲ ಸುಖವಾಗಿರಪ್ಪ.... ಆಗಾಗ್ಗೆ ಬರ್ತಾ ಇರು. ಈ ಮುದುಕನ್ನ ನಿನ್ನ ತಾತಾ ಅಂತ ತಿಳ್ಕೋ" ಲೀಲಾ, ಮಹೇಶ ಮುಖ ಮುಖ ನೋಡಿಕೊಂಡರು.

"ಆಗ್ಲಿ ಬರ್ತಾ ಇರ್ತೀನಿ...." ದಿನೇಶ ಮುಗುಳ್ನಗುತ್ತಾ ನುಡಿದ. ಆತನ ಕಣ್ಣಂಚಿನಲ್ಲಿ ನೀರು ಜಿನುಗಿತ್ತು. ಸಾವಿತ್ರಮ್ಮ ವನಜಮ್ಮನ ಕಿವಿಯಲ್ಲಿ ಉಸುರಿದಳು.

"ಮೊಮ್ಮೊಗನದೇ ಚಿಂತೆ ಇವರಿಗೆ.... ಏನೇನೋ ಮಾತಾಡಿ ಬಿಡ್ತಾರೆ.... ಸುಮ್ಮನೇ ಈ ಶುಭ ದಿವಸದಲ್ಲಿ ಹಳೆಯ ಮಾತೇಕೆ? ನಿಮ್ಮ ಮಗನನ್ನು ಇತ್ಲಾಗೆ

ಕರೀರಿ" ಮಹೇಶನಿಗೆ ಆಕೆಯಾಡಿದ ಮಾತುಗಳು ಕೇಳಿಸಿದವು.

"ವಿವೇಕ್ ಎಲ್ಲಿ? ಕರೀರಿ. ಒಂದೆರಡು ಚಿತ್ರಗೀತೆಗಳನ್ನೋ, ಭಾವಗೀತೆಗಳನ್ನೋ ಹಾಡ್ಲಿ.... ನಾವೆಲ್ಲಾ ಒಟ್ಟಿಗೇ ಸೇರಿರುವುದೇ ಒಂದು ಸುಯೋಗ...." ಎಂದು ಮಾತಿನ ಧಾಟಿಯನ್ನು ಬದಲಾಯಿಸಿದ.

ಹೊರಗೆಲ್ಲೋ ನಿಂತಿದ್ದವನನ್ನು ಸಾವಿತ್ರಮ್ಮನೇ ಒಳಕ್ಕೆ ಕರೆತಂದಳು. ವಿವೇಕ ಮೊದಲಿಗೆ ಸಂಕೋಚಗೊಂಡರೂ ಒಂದು ಭಾವಗೀತೆಯನ್ನು ಹಾಡಿದ. "ಎಷ್ಟು ಚೆನ್ನಾಗಿ ಹಾಡ್ತೀರಿ. ಇನ್ನೊಂದು ಹೇಳಿ...." ಮಹೇಶನೇ ಒತ್ತಾಯ ಮಾಡಿದ. ವಿವೇಕ ಲವಲವಿಕೆಯಿಂದ ಹಾಡಿದ. ಎಲ್ಲರೂ ಚಪ್ಪಾಳೆ ತಟ್ಟಿ ಪ್ರೋತ್ಸಾಹಿಸಿದರು.

"ಚುಮ್ಮೀ ನೀನೊಂದು ಹಾಡನ್ನು ಹೇಳೇ...." ದೀಪಾ ಒತ್ತಾಯ ಮಾಡಿದಳು.

"ನಂಗೆ ಬರೋಲ್ಲ...." ಸುಮತಿ ಕೊಸರಿಕೊಂಡಳು.

"ಹಾಗಾದರೆ, ನಾನೇ ಇವರ ಬದಲಾಗಿ ಇನ್ನೊಂದು ಭಾವಗೀತೆ ಹಾಡ್ತೀನಿ" ವಿವೇಕ ಹಾಡಲು ಶುರುಮಾಡಿದ. ಅದೊಂದು ಪ್ರೇಮಗೀತೆಯಾಗಿತ್ತು. ಅವನು ಆಗಾಗ್ಗೆ ಸುಮತಿಯ ಕಡೆ ನೋಡುತ್ತಾ ಹಾಡುತ್ತಿದ್ದ. ಮಹೇಶ ಸುಜಯಳನ್ನೇ ನೋಡುತ್ತಿದ್ದ. ದಿನೇಶ ದೀಪಾಳ ಕಡೆ ನೋಡಿ ನಗೆ ಸೂಸಿದ. ಹಾಡು ಮುಗಿಯಿತು.

"ಈ ಹಾಡನ್ನು ನಾನು ನನ್ನ ಅಕ್ಕ ಭಾವನಿಗೋಸ್ಕರ ಹಾಡಿದೆ. ಈ ದಿನ ಅವರಿಬ್ಬರ ವಿವಾಹ ಆಗಿದೆ. ಅಕ್ಕನ ಒಂಟಿತನ ನೀಗಿತು. ಅವಳಿಗೆ ಸಂಗಾತಿ ಸಿಕ್ಕಿದಾರೆ. ಹಾಗೇ ನನಗೂ ಒಬ್ಬ ಸಂಗಾತಿ ಬೇಗ ಸಿಗಲಿ ಅಂತ ಹಾರೈಸಿ" ಎಲ್ಲರೂ ನಗುತ್ತಾ ಚಪ್ಪಾಳೆ ತಟ್ಟಿದರು.... ಅಡುಗೆ ಭಟ್ಟರು ಕಾಫಿಯನ್ನು ತಂದುಕೊಟ್ಟರು.

ಎಲ್ಲರೂ ಗೆಸ್ಟ್ ಹೌಸ್‌ಗೆ ವಾಪಸ್ಸು ಬಂದರು. ಸಾಯಂಕಾಲವಾಗುತ್ತಾ ಬಂದಿತ್ತು. ಆದರೆ ಬೆಳಕು ಇನ್ನೂ ಸಾಕಷ್ಟಿತ್ತು. ದೀಪಾ, ದಿನೇಶನನ್ನು ಎಬ್ಬಿಸಿದಳು. "ಆಶ್ರಮದೊಳಗೆ ಸುತ್ತಾಡಿ ಬರೋಣ ದಿನೇಶ್. ನಾವು ಪದೇ ಪದೇ ಬರೋಕೆ ಎಲ್ಲಿ ಆಗುತ್ತೆ?"

"ಹುಶಾರು ಕಣೇ ದೀಪಾ.... ಕತ್ತಲಾಗೋದ್ರೊಳಗೆ ಬಂದುಬಿಡಿ. ಸುಮ್ಮನೇ ಸುತ್ತಾಡಿ ಆಯಾಸ ಮಾಡ್ಕೋಬೇಡ" ವನಜಮ್ಮನೆಂದಳು.

"ನಾವೂ ಬರೋಣ್ವಾ ಬಾಡೀಗಾರ್ಡ್ ಆಗಿ...." ಸುಮತಿ ಕೇಳಿದಳು.... ಸುಜಯ ಮಹೇಶರೂ ಅವಳೊಂದಿಗೆ ಹೊರಟರು. ಎಲ್ಲೆಲ್ಲೋ ಸುತ್ತಾಡಿ ಮಾವಿನ ತೋಪಿನ ಬಳಿಗೆ ಬಂದರು. ಮಾವಿನ ಮರಗಳ ಚಿಗುರು, ಹೂವುಗಳೊಂದಿಗೆ ಸಣ್ಣ ಸಣ್ಣ ಕಾಯಿಗಳನ್ನು ದೀಪಾ ಕಂಡಳು. "ಹ್ಞಾಂ.... ಮಾವಿನಕಾಯೀ.... ದಿನೇಶ್, ಕೈಗೆ ಸಿಗುತ್ತಾ ನೋಡಿ...." "ಹುಳಿ ಕಣೇ ಬೇಡ...."

"ಪರವಾಗಿಲ್ಲ ನಂಗೆ ಇಷ್ಟ...." ದಿನೇಶ ಕೈ ಎತ್ತಿದ. ಸಿಕ್ಕಲಿಲ್ಲ. ಎಗರಿ ಎಗರಿ ಕೊಂಬೆಯನ್ನು ಮುಟ್ಟಲು ಯತ್ನಿಸಿದ ಸಾಧ್ಯವಾಗಲಿಲ್ಲ.

"ನಾನು ಟ್ರೈ ಮಾಡ್ಲಾ?" ಮಹೇಶ ದಿನೇಶನ್ನ ಕೆಣಕಿದ.

"ಆಮೇಲೇನಿಲ್ಲ. ಜೀವಮಾನವೆಲ್ಲಾ.... ಹಂಗಿಸ್ತಾನೇ ಇರ್ತಾಳೆ.... ತಡೀ ಈ ಕಲ್ಲಿನ ಮೇಲೆ ನಿಂತು ಕಿತ್ಕೊಡ್ತೀನಿ...." ಎನ್ನುತ್ತಾ ಅಲ್ಲಿದ್ದ ಹಾಸುಗಲ್ಲಿನ ಮೇಲೆ ಕಾಲನ್ನಿಟ್ಟ, ಕಲ್ಲು ಜರುಗಿದಂತಾಯ್ತು. ದಿನೇಶ ಹೆದರಿ ಇಳಿದುಬಿಟ್ಟ.

ಅಷ್ಟರಲ್ಲಿ ಅಲ್ಲಿದ್ದ ಮಾಲಿ ಬಂದ.... "ಆ ಕಲ್ಲಿನ ಮೇಲೆ ಹತ್ತಬೇಡ್ರಪ್ಪೋ.... ಅದು ಬರೀ ಕಲ್ಲಲ್ಲ. ಸಮಾಧಿ ಕಲ್ಲು. ಹಂಗೆಲ್ಲ ಕಾಲಿಡ್ಬಾರ್ದು.... ಕಣ್ಣಿಗೊತ್ತಿಕೊಳ್ಳಿ" ಎಂದ ಮಾಲಿ. ದೀಪಾ ಬೆದರಿ ದೂರ ನಿಂತಳು. ದಿನೇಶ ಬಾಗಿ ಕಲ್ಲುಗಳನ್ನು ಕಣ್ಣಿಗೊತ್ತಿಕೊಂಡ.... ಮನಸ್ಸು ಕಸಿವಿಸಿ ಗೊಂಡಿತ್ತು.... ಆ ಕಡೆ ಈ ಕಡೆ ನೋಡಿದ. ಅಲ್ಲಿ ಅಕ್ಕ-ಪಕ್ಕದಲ್ಲಿ ಹಾಸುಗಲ್ಲುಗಳಿದ್ದವು.

"ಯಾರದ್ದು ಸಮಾಧಿ?" ಮಹೇಶ ಕೇಳಿದ.

"ಸುಬ್ಬಪ್ನೋರ ಹೆಂಡ್ರದ್ದು, ಮಗಳ್ದು...." ಮಹೇಶ ಸುಜಯಳ ಕಡೆ ನೋಡಿದ. ಅವಳು ಭಾವುಕಳಂತೆ ಸುಮ್ಮನೇ ನಿಂತಿದ್ದು.

"ಸರಿ. ನಡೀರಿ ಅತ್ಗೆ.... ಇನ್ನು ಹೆಚ್ಚು ಹೊತ್ತು ಇಲ್ಲಿರಬಾರ್ದು."

"ಚೆನ್ನಪ್ಪ, ಒಂದು ಹಿಡಿ ಮಾವಿನ ಕಾಯನ್ನು ಕಿತ್ಕೊಡು" ಸುಜಯ ಆ ಮಾಲಿಗೆ ಹೇಳಿದಳು. ಅವನು ಮರ ಹತ್ತಿ ಕಾಯನ್ನು ಕಿತ್ತುಕೊಂಡು ಕೆಳಗಿಳಿದ.

"ಸಾಕೇನಮ್ಮಾ ದೀಪಾ?" ಸುಜಯ ಕೇಳಿದಾಗ, ಯಾರೋ ಬೇರೆಯವರು ಮಾತಾಡಿದಂತೆ ಅನ್ನಿಸಿತ್ತು ಮಹೇಶನಿಗೆ. ಅಲ್ಲಿಯ ವಾತಾವರಣ ವಿಲಕ್ಷಣವಾಗಿದೆ ಅಂತ ಅನ್ನಿಸಲಾರಂಭಿಸಿತು. ಸುಜಯಳ ತೋಳನ್ನು ಹಿಡಿದು ಎಳೆದ.

"ಕತ್ತಲಾಗ್ತಾ ಇದೆ. ಅಮ್ಮ ಗಾಬರಿ ಆಗ್ತಾಳೆ. ಎಲ್ಲಾ ನಡೀರಿ...." ಎಲ್ಲರನ್ನೂ ಮುಂದಕ್ಕೆ ಕಳಿಸಿ, ತಾನು ಹಿಂಗಾವಲಾಗಿ ನಡೆದ. ದಿನೇಶ ಒಂದೆರಡು ಬಾರಿ ಆ ಸಮಾಧಿಯನ್ನೇ ನೋಡಿದ. ಸುಜಯ ಮಾತಿಲ್ಲದೇ ಮುಂದೆ ಮುಂದೆ ನಡೆದಳು. ದೀಪಾ ಮಾತ್ರ ಮಾವಿನ ಕಾಯಿಯನ್ನು ಕಚ್ಚಿ ತಿನ್ನುವುದರಲ್ಲಿ ಮಗ್ನ ಳಾಗಿದ್ದಳು....

"ಇಲ್ಲೆಲ್ಲೋ ಪಾದರಿ ಹೂವಿನ ವಾಸ್ನೆ ಬರ್ತಾ ಇದೆ. ಇಲ್ಲೇ ಒಂದು ಗಳಿಗೆ ಕೂತ್ಕೋಳ್ಳೋಣ." ಸುಜಯ ಸಮೀಪದಲ್ಲಿದ್ದ ಬೆಂಚಿನ ಮೇಲೆ ಕೂತಳು.

"ಪಾದರಿ ಹೂವು! ಹಾಗಂದ್ರೇನೇ, ನಾವು ನೋಡಿಯೇ ಇಲ್ಲ"

"ನಾನೂ ನೋಡಿರ್ಲಿಲ್ಲ. ಒಂದು ದಿನ ಭಜನೆಯ ಸಮಯದಲ್ಲಿ ಇದೇ ಮಾಲಿ, ಒಂದು ಬೊಗಸೆ ಹೂವನ್ನು ತಂದುಕೊಟ್ಟ. ಎಂಥಾ ಸುವಾಸನೆ ಇತ್ತು ಗೊತ್ತಾ.... ಈಗ ಅದೇ ವಾಸನೆ ಬರ್ತಿದೆ"

"ಅದು ದೊಡ್ಡ ಮರ.... ಮರ ಹತ್ತಿ ಹೂವನ್ನು ಕೀಳೋಕ್ಕೆ ಆಗೋಲ್ಲ.... ಏನಪ್ಪಾ ಮಹೇಶ ಏನಂತೀಯಾ?" ದಿನೇಶ ಚುಡಾಯಿಸಿದ.

"ಕೆಳಗೆ ಹೂಗಳು ಬಿದ್ದಿರುತ್ತವೆ. ಬೇಕಾದ್ರೆ ಆರಿಸಿ ಕೊಡಬಹುದು...."

"ಅದರಲ್ಲೇನು ಮಜಾ. ಫ್ಯಾಂಟಮ್ ಥರ ಮರ ಹತ್ತಿದರೇ ಮಜಾ...."

"ಈಗ ಯಾವ ಮಜವೂ ಬೇಡ.... ಹೊತ್ತಾಗಿದೆ" ಅಷ್ಟರಲ್ಲೇ ಅದೇ ಮಾಲಿ ಒಂದು ಬುಟ್ಟಿ ತುಂಬಾ ಪಾದರಿ ಹೂವನ್ನು ತಂದು ಸುಜಯಳ ಕೈಯಲ್ಲಿಟ್ಟ.

"ಮೇಡಮ್ಮಾರೇ ತಕ್ಕಳಿ. ನಿಮ್ಗೆ ಪಾದ್ರಿ ಹೂ ಅಂದ್ರೆ ಭೋ ಆಸೆ ಅಲ್ಲವ್ರಾ?"

"ಹೂಂ. ಕೊಡು ಚೆನ್ನಪ್ಪ.... ಬೆಳಿಗ್ಗೆ ಬಂದು ಬುಟ್ಟಿಯನ್ನು ತಗೊಂಡು ಹೋಗು" ಸುಜಯ ಬುಟ್ಟಿಯನ್ನೆತ್ತಿಕೊಂಡಳು. ಚೆನ್ನಪ್ಪ ಗಿಡಗಳ ಸಂದಿಯಲ್ಲಿ ನಡೆದು ಹೋದ. ಮಹೇಶ ದಿನೇಶನ ಬಗ್ಗೆಯೇ ಯೋಚಿಸುತ್ತಾ ಹೆಜ್ಜೆ ಹಾಕಿದ.

ಸುಜಯನ್ನ ಆದಷ್ಟು ಬೇಗ ಈ ಆಶ್ರಮದಿಂದ ಕರೆದೊಯ್ಯಬೇಕು.... ದಿನೇಶ ಆಶ್ರಮಕ್ಕೆ ಬಾರದಂತೆ ಎಚ್ಚರ ವಹಿಸಬೇಕು.... ಅಥವಾ ಈ ಮಾವಿನ ತೋಪಿಗೆ ಬರದಿರುವಂತೆ ತಡೆಯಬೇಕು.... ಈ ಸಮಾಧಿ ಕಲ್ಲಿನಡಿಯಲ್ಲಿ ಏನು ಶಕ್ತಿ ಅಡಗಿದೆಯೋ .... ದಿನೇಶಂಗಾಗಲೀ, ಸುಜಯಂಗಾಗಲೀ ಏನೂ ಅಪಾಯವಾಗದಿದ್ದರೆ ಸಾಕು ಎಂದು ಯೋಚಿಸುತ್ತಾ ನಡೆಯುತ್ತಿದ್ದವನು, ದಾರಿಯಲ್ಲಿದ್ದ ಒಂದು ಕಲ್ಲನ್ನು ಎಡವಿ ಮುಗ್ಗರಿಸಿದ. ಬೀಳಲಿದ್ದವನನ್ನು ಸುಜಯ ಹಿಡಿದಳು.

"ಥ್ಯಾಂಕ್ ಯೂ.... ಕಲ್ಲು ಕಾಣಲಿಲ್ಲ, ಎಡವಿದೆ."

"ಆಕಾಶಾನಾ ನೋಡ್ಕೊಂಡು ನಡೆದ್ರೆ ಇನ್ನೇನಾಗುತ್ತೆ. ಈಗ್ಲೇ ಹೀಗೆ.... ಇನ್ನು ಮದುವೆ ಆದ್ಮೇಲೆ ಏನು ಗತಿ?" ದೀಪಾ ರೇಗಿಸಿದಳು.

"ಹಿಡ್ಕೊಳ್ಳೋಕೆ ಸುಜಯಾ ಇರುವಾಗ ನಂಗೇನು ಭಯ? ಅಲ್ವಾ?" ಸುಜಯಳ ಭುಜವನ್ನು ಬಳಸಿದ. ಅವಳು ನಾಚಿ ದೂರ ಸರಿದಳು. ಅದರೂ ಅವನ ಕೈ ಬಿಟ್ಟಿರಲಿಲ್ಲ. ಎಲ್ಲರೂ ನಿಧಾನವಾಗಿ ಮಾತನಾಡುತ್ತಾ, ನಗೆಯಾಡುತ್ತಾ, ಗೆಸ್ಟ್ ಹೌಸನ್ನು ತಲುಪಿದರು.

"ಅತ್ತೇ.... ನೋಡಿ.... ಎಷ್ಟೊಂದು ಮಾವಿನಕಾಯಿ!" ದೀಪಾ ತನ್ನ ಸೆರಗಿನಲ್ಲಿದ್ದ ಮಾವಿನಕಾಯಿಗಳನ್ನು ಟೇಬಲ್ಲಿನ ಮೇಲೆ ಸುರಿದಳು.

"ನಿನ್ನ ಬಯಕೆ ತೀರಿತಾ! ಯಾರು ಕುಯ್ಕೊಟ್ರು?" ದಿನೇಶ ನಕ್ಕ.

"ಯಾವುದೋ ಹೂವಿನ ವಾಸನೆ ಘಂ ಅಂತಿದೆ...." ವನಜಮ್ಮ ಮೂಗಿನ ಹೊಳ್ಳೆಗಳನ್ನು ಅರಳಿಸಿದಳು. "ಬುಟ್ಟಿ ತುಂಬಾ ಪಾದರಿ ಹೂವಿದೆ. ಅದರದ್ದೇ ವಾಸನೆ"

"ತಂದ್ಕೊಡು, ಕಟ್ಕೊಡ್ತೀನಿ. ಅದು ದೇವಲೋಕದ ಹೂವು.... ಅಪರೂಪ... ನಿಮಗೆಲ್ಲಿ ಸಿಕ್ತು?"

"ಇಲ್ಲಿ ಆಶ್ರಮದಲ್ಲಿ ಒಂದು ಮರ ಇದೆ. ಮಾಲಿ ತಂದ್ಕೊಟ್ಟ.... ಕಟ್ಟೋದು ಹೇಗೆ? ದಾರ ಇಲ್ವಲ್ಲಾ....?" ಎನ್ನುತ್ತಾ ಸುಜಯ ಬುಟ್ಟಿಯನ್ನು ಹಾಗೇ ಇಟ್ಟಳು.

"ನನ್ನ ರೂಮಿನಲ್ಲಿ ದಾರದ ರೀಲು ಇದೆ. ಹೋಗಿ ತರ್ತೀಯೇನೇ?" ಸುಮತಿ ಒಪ್ಪಿದಳು. ಅವಳು ಹತ್ತು ಹೆಜ್ಜೆಯನ್ನಿಡುವಷ್ಟರಲ್ಲಿ ಅವಳ ಹಿಂದೆ ಹಿಂದೆ ವಿವೇಕ ಬಂದು ಅವಳನ್ನು ಕರೆದ.

"ಅದೇನು ಒಬ್ರೇ ಹೋಗ್ತಿದೀರಿ.... ನಿಮ್ಮಕ್ಕ ಎಲ್ಲಿ?"

"ಅವಳ ರೂಮಿಗೆ ಹೋಗ್ತಿದೀನಿ...." ಅವಳ ಜೊತೆಯಲ್ಲಿ ಅವನೂ ನಡೆದ.

ರೂಮಿನ ಹೊರಗೇ ನಿಂತ. ಅವಳು ಹುಡುಕಿ ದಾರವನ್ನು ತಂದಳು. ತನಗಾಗಿ ಕಾಯುತ್ತಾ ನಿಂತವನನ್ನು ಕಂಡು ತಮಾಷೆ ಎನಿಸಿತ್ತು. "ಇಲ್ಲೇ ನಿಂತಿದೀರಾ?" ನಕ್ಕಳು. "ಹೂಂ. ನಿಮಗಾಗಿಯೇ ಕಾಯ್ತಿದ್ದೆ." ಮತ್ತೆ ಅವಳೊಂದಿಗೆ ಹೆಜ್ಜೆ ಹಾಕಿದ.

"ಒಂದು ಮಾತು ಕೇಳ್ತೀನಿ.... ನೀವು ತಪ್ಪು ತಿಳ್ಕೋಬಾರ್ದು."

"ಇಲ್ಲ ಕೇಳಿ"

"ನನ್ನ ಹಾಡು ನಿಮಗೆ ಇಷ್ಟ ಆಗಲಿಲ್ವಾ? ನೀವು ಆ ಬಗ್ಗೆ ಹೇಳಲೇ ಇಲ್ಲ."

"ನನಗೆ ಹಾಡೋಕ್ಕೆ ಬರೋಲ್ಲ. ನೀವು ತುಂಬಾ ಚೆನ್ನಾಗಿ ಹಾಡ್ತೀರಿ."

"ಥ್ಯಾಂಕ್ಸ್.... ನೀವೇಕೆ ಸಂಗೀತ ಕಲಿಯಲಿಲ್ಲ"

"ಏನೋ ನನಗೆ ಆಸಕ್ತಿ ಬರಲಿಲ್ಲ. ಅಲ್ಲದೇ ಸಮಯವೂ ಸಹ ಇರಲಿಲ್ಲ.... ನೀವು ಎಲ್ಲಿ ಕಲಿತ್ರಿ?"

"ತುಂಬಾ ಹಿಂದೆ ಕಲಿತಿದ್ದು. ನಾನು ಇಂಜಿನಿಯರಿಂಗ್ ಸೇರಿದ ಮೇಲೆ ಅಭ್ಯಾಸ ಮಾಡೋದನ್ನೇ ಬಿಟ್ಟು ಬಿಟ್ಟೆ"

"ಹಾಗೆ ಮಾಡಬೇಡಿ.... ಅಭ್ಯಾಸದಲ್ಲಿಟ್ಟುಕೊಳ್ಳಿ... ನಾನಿನ್ನು ಬರ್ಲಾ?"

"ಓ.ಕೇ. ನೀವು ತುಂಬಾ ಒಳ್ಳೆಯವರು. ನಾನು ಮಾತನಾಡಿಸಿದ್ದನ್ನು ನಿಮ್ಮ ಅಕ್ಕಂಗೆ ಹೇಳ್ಬೇಡಿ.... ಅವರು ನಿಮ್ಮನ್ನು ಹೊಡೆಯುತ್ತಾರೆ." ಅವನು ಯಾಕೆ ಹಾಗೆ ಹೇಳ್ದ ಎಂದುಕೊಂಡು ಅವನನ್ನು ಒಂದು ಗಳಿಗೆ ನೋಡಿದ ಸುಮತಿ ಒಳಗೆ ಹೊರಟು ಹೋದಳು.

* * *

ಆಶ್ರಮ ಮತ್ತೊಮ್ಮೆ ವಿವಾಹದ ಕಾರ್ಯಕ್ರಮಕ್ಕೆಂದು ಅಲಂಕಾರಗೊಂಡಿತ್ತು. ಖರ್ಚು ವೆಚ್ಚವೆಲ್ಲಾ ರಂಗನಾಥರಾಯರದ್ದು. ಆಶ್ರಮದವರು ಎಲ್ಲಾ ತಯಾರಿಯನ್ನೂ ಮಾಡಿ ಮುಗಿಸಿದ್ದರು. ಮದುವೆ ತಂಡದವರು ಬಂದು, ಕಾರ್ಯಕ್ರಮ ನಡೆಯುವುದಷ್ಟೇ ಉಳಿದಿದ್ದುದು. ಪ್ರಭಾವತಿ ಬೀಗರಿಗೆ, ವರನಿಗೆ ಕೊಡಬೇಕಾದುದನೆಲ್ಲಾ ಮಹೇಶನಿಗೆ ತಿಳಿಯದಂತೆ ಅವರ ಮನೆಗೆ ತಲುಪಿಸುವ ವ್ಯವಸ್ಥೆಯನ್ನು ಮಾಡಿದ್ದರು.

ವನಜಮ್ಮ ಸಂತುಷ್ಟಳಾಗಿದ್ದಳು. ಹಸೆಮಣೆಯ ಮೇಲೆ, ಮದುಮಗನ ಜೊತೆ ಕುಳಿತುಕೊಳ್ಳುವವರ್‍ಯಾರು ಎನ್ನುವ ಮಾತು ಬಂದಾಗ, ವನಜಮ್ಮ ಚಿಂತಿತಳಾಗಿದ್ದಳು. ದಿನೇಶ ಮಹೇಶನಿಗೆ ತಮ್ಮನಂತೆ. ಅದು ಸರಿಯಲ್ಲ ಎಂದೆನಿಸಿತ್ತು. ಮಹೇಶ ಯೋಚಿಸಿದ್ದೇ ಬೇರೆ. ಆದರೆ ಅದನ್ನು ಯಾರಿಗೂ ಹೇಳುವಂತಿಲ್ಲ. ದೀಪಾ ಬಸುರಿ ಹುಡುಗಿ, ಅವಳಿಗೆ ಆಯಾಸವಾಗುತ್ತದೆ ಬೇಡ ಎಂದು ಶಕುಂತಲಳ ಅನಿಸಿಕೆ.

ಮಹೇಶ ನೇರವಾಗಿ ತಮ್ಮ ಪುರೋಹಿತರ ಮನೆಗೆ ಬಂದ. ಅವರ ಕೈಗೆ

ಸಾಕಷ್ಟು ಹಣವನ್ನು ಕೊಟ್ಟ. ಆದಷ್ಟೂ ಸಂಕ್ಷಿಪ್ತವಾಗಿ ವಿಧಿ ವಿಧಾನಗಳನ್ನು ನಡೆಸಿಕೊಡಬೇಕೆಂದು ಕೇಳಿಕೊಂಡ. ಅವರು ಒಪ್ಪಿಕೊಂಡರು.

ಬೆಳಕು ಹರಿಯುತ್ತಿದ್ದಂತೇ ಎಲ್ಲರೂ ಒಟ್ಟಾಗಿ ಆಶ್ರಮಕ್ಕೆ ಬಂದರು. ಓಲಗದವರು ಓಲಗ ಊದಿ ಆಶ್ರಮದವರನ್ನೆಲ್ಲಾ ಎಬ್ಬಿಸಿ, ಮದುವೆಯ ತಂಡದವರನ್ನು ಹಾರ್ದಿಕವಾಗಿ ಎದುರುಗೊಂಡರು. ಇದೆಲ್ಲಾ ಡಾ. ಶಂಕರ್ ಅವರು ಮಾಡಿದ ವ್ಯವಸ್ಥೆ.

ಮೊದಲಿಗೆ ಎಲ್ಲರಿಗೂ ತಿಂಡಿ ಕಾಫಿಯ ಉಪಚಾರವಾಯಿತು. ಮಹೇಶ ಮದುಮಗನ ವೇಷ ಭೂಷಣಗಳನ್ನು ಉಟ್ಟು ಸಿದ್ಧನಾದ.

ಲೀಲಾ ಸುಜಯಳನ್ನು ಅಲಂಕರಿಸಿ, ಸಿದ್ಧಗೊಳಿಸಿದಳು.

"ನೀವು ಮೊದಲೇ ಸುಂದರಿ.... ಈಗ ಅತಿಲೋಕ ಸುಂದರಿಯಾಗಿ ಕಾಣ್ತಾ ಇದೀರಿ." ಮನಃಪೂರ್ವಕವಾಗಿ ಹೊಗಳಿದಳು. ಸುಜಯ ರಂಗೇರಿದಳು.

"ನೀವು ಹೀಗೆಲ್ಲಾ ಹೇಳಿದರೆ ನನಗೆ ನಾಚಿಕೆ ಆಗುತ್ತೆ."

"ಮಹೇಶನೇ ಹೊಗಳಿದರೆ ನಿಮಗೆ ಏನನ್ನಿಸುತ್ತೆ? ನಿಜ ಹೇಳಿ ಸುಜಯಾ... ನಿಮ್ಮ ಮಹೇಶನ ಸ್ನೇಹ ಎಷ್ಟು ವರ್ಷದ್ದು?"

"ಯಾಕೆ ಈಗ ಹೀಗೆ ಕೇಳ್ತಿದೀರಿ?"

"ನಿಮ್ಮ ತಾಯಿ ಹೇಳಿದ್ರು, ನೀವು ದಿನೇಶನ್ನ ಒಪ್ಪದೇ, ನಿರಾಕರಿಸಿದಿರಿ ಅಂತ. ಯಾಕೆ? ದಿನೇಶ ನಮ್ಮ ತಂದೆ ಹೇಳೋ ಹಾಗೇ ರಾಜಕುಮಾರನ ಥರ ಇದಾರೆ.... ಮಹೇಶ ಅಷ್ಟು ಸುರದ್ರೂಪಿ ಅಲ್ಲ."

"ಮಹೇಶನ್ನ ನೀವೇನಾದ್ರೂ ಪ್ರೀತಿಸ್ತಿದ್ರಾ?" ಸುಜಯ ಪ್ರಶ್ನಿಸಿದಳು.

"ಛೆ.... ಇಲ್ಲಪ್ಪಾ.... ಚಿಕ್ಕಮ್ಮ ಮದುವೆ ಪ್ರಸ್ತಾಪ ಮಾಡಿದಾಗ, ಆಸಕ್ತಿಯಿಂದ ಸಹಜವಾಗಿ ಒಂದೆರಡು ಸಾರಿ ನೋಡಿದ್ದುಂಟು. ಆದರೆ ಅದು ಖಂಡಿತಾ ಪ್ರೀತಿಯಲ್ಲ.... ನಾನು ಡಾಕ್ಟರನ್ನು ಕೂಡಾ ಆ ದೃಷ್ಟಿಯಿಂದ ನೋಡಲಿಲ್ಲ"

"ಹಾಗೇ, ದಿನೇಶನ್ನ ನಾನು ನನ್ನ ಗಂಡ ಅಂತ ಅಂದುಕೊಳ್ಳಲು ಸಾಧ್ಯವಿರಲೇ ಇಲ್ಲ. ಏಕೋ ಏನೋ ನನ್ನ ಒಳಮನಸ್ಸು ಅವನು ಬೇಡವೇ ಬೇಡ ಎಂದು ಹೇಳುತ್ತಿತ್ತು. ನಿಜ ಹೇಳಬೇಕೆಂದರೆ ಮಹೇಶನ ಬಗ್ಗೆಯೂ ನನಗೆ ಯಾವ ಭಾವನೆಯೂ ಇರಲಿಲ್ಲ. ಅದು ಕ್ರಮೇಣ ಮೂಡಿ ಬಂದಿತು.... ನನ್ನ ಸ್ನೇಹಿತ, ನನ್ನನ್ನು ಪ್ರೀತಿಸುವವನು ಅಂತ ಅಷ್ಟು ಮಾತ್ರ ಗೊತ್ತಿದ್ದರೂ, ಮದುವೆಯ ವಿಷಯ ಬಂದಾಗ, ನಡುವೆ ಏನೇನೋ ಅಡ್ಡಿಗಳು ಬಂತು...."

"ನಿಮ್ಮ ಅತ್ತೆ ನಿಮ್ಮ ಮದುವೆಗೆ ಮೊದಲು ಒಪ್ಪಿರಲಿಲ್ಲ ಅಲ್ಲವೇ?"

"ನಿಮಗೆ ಆ ವಿಷಯ ಹೇಗೆ ಗೊತ್ತು!?"

"ಅವರಿಗೆ ನನ್ನನ್ನು ಸೊಸೆಯಾಗಿಸಿಕೊಳ್ಳುವ ಆಸೆ ಇತ್ತು. ಆದರೆ ನಾನು ಡೈವೋರ್ಸಿ, ಅಲ್ಲದೇ ನನ್ನನ್ನು ಮದುವೆಯಾದರೆ ಯಾವ ಆಸ್ತಿಯೂ ಸಿಗುವುದಿಲ್ಲ

ಅಂತ ತಿಳಿದ ಮೇಲೆ.... ನಿಮ್ಮ ಕಡೆ ಕಣ್ಣು ತಿರುಗಿತು."

"ನನ್ನನ್ನು ಮದುವೆ ಮಾಡಿಕೊಂಡರೆ ಯಾವ ಆಸ್ತಿ ಸಿಗುತ್ತೆ?"

"ಮಗ ಮೆಚ್ಚಿರುವ ಈ ಹುಡುಗಿಯ ರೂಪಕ್ಕಿಂತ ಬೇರೆ ಯಾವ ಆಸ್ತಿಯೂ ಹೆಚ್ಚಲ್ಲ ಅಂತ ಮನವರಿಕೆ ಆಗಿರಬೇಕು.... ಹೂಂ ಏಳಿ.... ಮದುಮಗ ಕಾಯ್ತಾ ಇದಾರೆ. ತಡವಾದರೆ ಕೋಪ ಬರಬಹುದು...." ಲೀಲಾ ಹೇಳಿದಾಗ, ಸುಜಯ ಮಂದಹಾಸ ಬೀರಿ ಎದ್ದಳು.

"ನೀವು ದೀಪಳಿಗಿಂತ ಇನ್ನೂ ಚೆಲುವಾಗಿದೀರಿ ಅಂತ ದಿನೇಶಂಗೆ ಅನ್ನಿಸ ಬಹುದು. ಒಂದೇ ಮನೆಯಲ್ಲಿ ಇರಲು ನಿಮಗೆ ಕಷ್ಟವಾಗಬಹುದು...."

"ಛೆ. ದಿನೇಶ್ ಅಂಥೋರಲ್ಲ. ನನ್ನ ಮೇಲೆ ಅವರಿಗೆ ಯಾವ ಬೇಸರವೂ ಇಲ್ಲ. ಹಾಗೇನಾದ್ರೂ ಇದ್ದಿದ್ರೆ ದೀಪ ಹೇಳ್ತಿರ್ತಿದ್ಲು. ನಿಮಗ್ಯಾಕೆ ಹಾಗೆನ್ನಿಸ್ತು?"

"ಏನೋ ಹಾಗೆನ್ನಿಸ್ತು. ಒಬ್ಬೊಬ್ಬರ ಸ್ವಭಾವ ಒಂದೊಂದು ಥರ ಇರುತ್ತಲ್ವಾ? ಹೊರಡೋಣ. ಹೊತ್ತಾಯ್ತು" ಮದುಮಗಳನ್ನು ಲೀಲಾ ಹೊರಕ್ಕೆ ಕರೆ ತಂದಳು. ಹಸೆಮಣೆಯ ಮೇಲೆ ಇವಳಿಗಾಗಿಯೇ ಕಾಯುತ್ತಾ ಕುಳಿತಿದ್ದ ಮಹೇಶ ಸಂತಸದ ಮುಗುಳ್ನಗೆ ಬೀರಿದ. ಸುಜಯ ನಾಚಿಕೆಯಿಂದ ಮತ್ತಷ್ಟು ಅಂದವಾಗಿ ಕಂಡಳು.

ಮೊದಲಿಗೆ ಪರಸ್ಪರ ಹೂ ಹಾರಗಳನ್ನು ಬದಲಾಯಿಸಿಕೊಂಡರು. ನಂತರ ಅಕ್ಕಿಧಾರೆ, ಅನಂತರ ಮಾಂಗಲ್ಯ ಧಾರಣೆ..... ಬಳಿಕ 'ಸಪ್ತಪದಿ'. ಕೇವಲ ಒಂದು ಗಂಟೆ ಅವಧಿಯೊಳಗೆ ವಿವಾಹದ ಕಲಾಪಗಳು ಸಂಪನ್ನವಾದವು. ಆಹ್ವಾನಿತರೆಲ್ಲರೂ ನೂತನ ವಧೂವರರಿಗೆ ಶುಭ ಹಾರೈಸಿದರು.

ಸುಬ್ಬರಾಮಪ್ಪನವರು ಸುಜಯಳ ಕೈಗೆ ಒಂದು ಕವರನ್ನು ಉಡುಗೊರೆಯನ್ನಾಗಿ ನೀಡಿದರು. ಉಡುಗೊರೆಗಳ ಸಂಭ್ರಮ, ಸಡಗರ ಮುಗಿದಿತ್ತು. ನಂತರ ಎಲ್ಲರೂ ಭೋಜನ ಶಾಲೆಗೆ ಬಂದರು. ಎರಡೂ ಕಡೆಯವರೆಲ್ಲರೂ ಒಟ್ಟಿಗೇ ಊಟಕ್ಕೆ ಕುಳಿತರು. ದೂರದಲ್ಲೆಲ್ಲೋ ಓಡಾಡಿ ಕೊಂಡಿದ್ದ ವಿವೇಕನನ್ನು ಮಹೇಶ ಬಳಿಗೆ ಕರೆದು, "ನಮಗೆ ನೀವು ವಿಶ್ ಮಾಡೋಲ್ವಾ ವಿವೇಕ್?" ನಗುತ್ತಾ ಕೇಳಿದ್ದ.

"ಎಸ್, ಆಫ್ ಕೋರ್ಸ್.... ವಿಶ್ ಯೂ ಬೋತ್ ಎ ಹ್ಯಾಪಿ ಮ್ಯಾರೀಡ್ ಲೈಫ್" ಎಂದು ಮಹೇಶನ ಕೈ ಕುಲುಕಿ, ಸುಜಯಳ ಕಡೆ ಸುಮ್ಮನೇ ನೋಡಿದ.

"ನನ್ಮೇಲೆ ಕೋಪಾನ?" ಸುಜಯ ಮೆಲ್ಲಗೆ ಕೇಳಿದಳು.

"ಕೋಪ ಏನಿಲ್ಲ. ಸ್ವಲ್ಪ ಭಯ." "ಭಯ ಯಾಕೆ? ನಾನೂ ನಿಮ್ಮ ಲೀಲನ ಹಾಗೇ...." ಮಹೇಶ ಓರೆಗಣ್ಣಿನಲ್ಲಿ ಅವಳನ್ನು ನೋಡಿದ.

ಊಟದ ನಂತರ ಎಲ್ಲರೂ ಅಲ್ಲಿಂದ ಹೊರಟರು. "ಮನೆ ತುಂಬಿಸಿಕೊಳ್ಳುವ ಶಾಸ್ತ್ರ ಇದೆ. ನಾವು ನಮ್ಮ ಮನೆಗೆ ಹೋಗ್ತೀವಿ." ವನಜಮ್ಮ ಹೇಳಿದಾಗ ಸುಬ್ಬರಾಮಪ್ಪ ತಲೆಯಾಡಿಸಿದ್ದರು.

"ಹಾಗೇ ಮಾಡಿ. ದೇವರು ಎಲ್ಲರಿಗೂ ಒಳ್ಳೇದನ್ನ ಮಾಡಲಿ." ಎಲ್ಲರಿಗೂ ಶುಭವನ್ನು ಕೋರಿದ್ದರು.

ಮನೆ ಮುಂದಿದ್ದ ಚಪ್ಪರದ ಕೆಳಗೆ ವಧೂವರರನ್ನು ನಿಲ್ಲಿಸಿ, ಆರತಿ ಎತ್ತಿದರು.

ಹೊಸ್ತಿಲ ಮೇಲಿಟ್ಟಿದ್ದ 'ಅಕ್ಕಿ ಬೆಲ್ಲ'ದ ಸೇರನ್ನು ಸುಜಯ ಬಲಗಾಲಲ್ಲಿ ನೂಕಿ, ಬಲಗಾಲನ್ನಿಟ್ಟು ಗೃಹಪ್ರವೇಶ ಮಾಡಿದಳು.

"ಯಾರಾದ್ರೂ ಹಾಡು ಹೇಳಿ.... ಭಾಗ್ಯದ ಲಕ್ಷ್ಮಿ ಬಾರಮ್ಮಾ ಹೇಳಿ." ತಾನೇ ಹೇಳಲು ಪ್ರಾರಂಭಿಸಿದಳು. ಮತ್ತೊಂದೆರಡು ದನಿಗಳು ಸೇರಿಕೊಂಡವು.

ಮಹೇಶ ಸುಜಯಳ ಕೈಯನ್ನು ಅದುಮಿದ. "ಬನ್ನಿ, ಇಬ್ಬರೂ ದೇವರಿಗೆ ನಮಸ್ಕಾರ ಮಾಡೋರಂತೆ" ಇಬ್ಬರನ್ನು ಒಳಕ್ಕೆ ಕರೆದೊಯ್ದಳು.

"ಮಹಾಲಕ್ಷ್ಮಿಯಂತೆ ಮನೆ ತುಂಬಿದೀಯ.... ಸದಾಕಾಲ ನೀವಿಬ್ಬರೂ ಸುಖವಾಗಿರಿ." ಇಬ್ಬರೂ ನಮಸ್ಕರಿಸಿದಾಗ ಹಾರೈಸಿದಳು.

"ಅತ್ತೇ ನೀವು ನನಗೆ ಇದನ್ನೆಲ್ಲಾ ಹೇಳೇ ಇರ್ಲಿಲ್ಲ...." ದೀಪ ಮುದ್ದು ಮುದ್ದಾಗಿ ಹೇಳಿದಳು. ಎಲ್ಲರೂ ನಕ್ಕರು.

"ನಿಂಗೂ ಹೇಳಿದ್ದೆ. ಆದರೆ ನೀನು ಮರೆತು ಬಿಟ್ಟಿದ್ದೀಯ. ನಿನಗೆ ಡೆಲ್ಲಿಗೆ ಹೋಗಬೇಕೆಂಬ ಆತುರ.... ಅಲ್ಲೇ ನಿನ್ನ ಗಮನವಿತ್ತು"

"ಏನೂ ಇಲ್ಲ...." ನಾಚಿದಳು. ಮತ್ತೊಮ್ಮೆ ಎಲ್ಲರಿಗೂ ಕಾಫಿ ಸಮಾರಾಧನೆಯಾಯಿತು. ಪ್ರಭಾವತಿ ಮಗಳನ್ನು ವನಜಮ್ಮನಿಗೆ ಒಪ್ಪಿಸಿದಳು.

"ಇನ್ನು ಇವಳು ನಿಮ್ಮ ಮಗಳು. ಇವಳ ಸುಖ-ದುಃಖ ನಿಮಗೆ ಸೇರಿದ್ದು"

"ಮಹೇಶ ಚೆನ್ನಾಗಿ ನೋಡ್ಕೋತಾನೆ. ಆ ಬಗ್ಗೆ ನಿಮಗೆ ಯಾವ ಚಿಂತೆಯೂ ಬೇಡ...." ಸುಮತಿ ಅಕ್ಕನನ್ನು ತಬ್ಬಿಕೊಂಡು ಅಳುವಿನ ಮುಖ ಮಾಡಿದಳು.

ದಿಲೀಪ ತಮಾಷೆ ಮಾಡಿದ. "ಈ ಎಮೋಷನಲ್ ಸೀನ್ ಎಲ್ಲಾ ಸಾಕು.. ಹೊರ ಡೋಣ.. ಏ ಸುಜೀ. ನನ್ನ ಮದುವೆಗೆ ನಿನ್ನ ಗಂಡನ್ನ ಕರ್‍ಕೊಂಡು ಬರಬೇಕು ಕಣೇ. ಮರೆತು ಬಿಡಬೇಡ. ಅಂದ್ಹಾಗೇ ನಿಮ್ಮ ಹನಿಮೂನ್ ಪ್ರೋಗ್ರಾಂ ಎಲ್ಲಿಗೆ?"

"ಏನೋ ನಂಗೊತ್ತಿಲ್ಲ."

"ಎಷ್ಟೊಂದು ಟೈಂ ಇತ್ತಲ್ಲೇ.... ಈ ಮೊದಲೇ ಪ್ಲ್ಯಾನ್ ಮಾಡ್ಲಿಲ್ವಾ? ಈ ಸುಜೀ ಮೊದಲ್ನಿಂದ್ಲೂ ಹಾಗೇ ಸ್ವಲ್ಪ ವಿಚಿತ್ರ.... ನೀವು ನಿಮ್ಮ ದಾರಿಗೆ ಎಳಕೊಳ್ಳಿ."

"ನೋಡೋಣ.... ನಿಮ್ಮ ಮದುವೆಗೆ ಸಮಯ ಇದೆಯಲ್ಲ.... ಯಾವ್ಯಾವ ಥರ ಎಲ್ಲಾ ಪ್ಲ್ಯಾನ್ ಮಾಡ್ತೀರಿ ಅಂತ...."

"ಒಂದಂತೂ ನಿಜ.... ನಾನು ಆಶ್ರಮದಲ್ಲಿ ಮದುವೆಯಾಗೋಲ್ಲ. ನನ್ನ ಮಾವನವರು ಭಾರೀ ಛತ್ರ ಗೊತ್ತು ಮಾಡಿದಾರೆ. ವರಪೂಜೆ, ಧಾರೆ, ರಿಸೆಪ್ಷನ್, ಡಿನ್ನರ್ ಎಲ್ಲಾ ಗ್ರ್ಯಾಂಡ್. ಜೀವನದಲ್ಲಿ ಒಂದೇ ಸಾರಿ ಸಾರ್ ಮದುವೆ ಯಾಗೋದು...."

"ನಾವೆಲ್ಲಾ ಎರಡ್ನೇ ಸಾರಿ ಮದುವೆ ಮಾಡಿಕೊಂಡ್ವಾ?" ದೀಪಾ ದಿಲೀಪನ ಬೆನ್ನ ಮೇಲೆ ಗುದ್ದಿದಳು. "ಜೋಕ್ ಅಂತ ಏನೇನೋ ಮಾತಾಡ್ತೀಯ.... ನಿಂಗೆ ಸಮಯ ಸಂದರ್ಭ ಒಂದೂ ಗೊತ್ತಾಗೋದೇ ಇಲ್ಲ" "ಏನ್ಮಾಡ್ಲೀ ಹೇಳು. ನಾನು ನಿನ್ನ ಅಣ್ಣನಾಗಿ ಹುಟ್ಟಿಬಿಟ್ಟೆ...." ದೀಪಾ ಮತ್ತೊಮ್ಮೆ ಸಣ್ಣಗೆ ಗುದ್ದಿದಳು.

"ಎಲ್ರೂ ಈ ದಿನ ರಾತ್ರಿ ನಮ್ಮ ಮನೆಗೇ ಊಟಕ್ಕೆ ಬರಬೇಕು. ಒಂದು ಸ್ವಲ್ಪ ಹೊತ್ತು ಸುಧಾರಿಸಿಕೊಂಡು, ಬೇಗನೇ ಬನ್ನಿ" ರಂಗನಾಥ ದಂಪತಿಗಳು ಎಲ್ಲರನ್ನೂ ಆಹ್ವಾನಿಸಿದರು. ಅವರುಗಳು ಅತ್ತ ಹೋದ ಮೇಲೆ ದೀಪಾ, ದಿನೇಶ ತಮ್ಮ ರೂಮಿಗೆ, ವನಜಮ್ಮ ಅಡುಗೆ ಮನೆಗೆ ಹೋದಳು. ಮಹೇಶ ಸುಜಯಳನ್ನು ಕಣ್ಣು ಸಂಜ್ಞೆಯಲ್ಲಿಯೇ ಕರೆದು ತನ್ನ ರೂಮಿಗೆ ಕರೆದುಕೊಂಡು ಹೋದ....

"ಇದೇ ನನ್ನ ಸಾಮ್ರಾಜ್ಯ.... ಇಲ್ಲಿ ನನ್ನ ಜೊತೆ ದಿನಾ ಒಬ್ರು ಕಂಪ್ನಿ ಕೊಡ್ತಿದ್ರು.... ಯಾರು ಗೊತ್ತಾ?"

"ನಾಯಿ ಮರಿ! ಬೆಕ್ಕಿನ ಮರಿ!"

"ಥೂ ಥೂ.... ಒಬ್ಬಳು ಸುಂದರವಾದ ಹುಡುಗಿ...." ಎನ್ನುತ್ತಾ ತನ್ನ ದಿಂಬಿನ ಕೆಳಗಿದ್ದ ಅವಳ ಫೋಟೋ ತೆಗೆದು ತೋರಿಸಿದ. ಎಲ್ಲಿ ಹೀಗೇ ಒಂದು ಪೋಸ್ ಕೊಡು ನೋಡೋಣ."

"ಯಾರೀ ಹುಡುಗಿ?" ಅವನಿಗೆ ಬೆನ್ನು ಮಾಡಿ ನಿಂತು ಕಿಲಕಿಲನೆ ನಕ್ಕಳು.

"ನನ್ನ ಪುಟ್ಟ ಹೃದಯವನ್ನೇ ಕದ್ದುಬಿಟ್ಟಿದ್ದಾಳೆ. ಬಹಳ ದಿನ ಹಗಲೂ, ರಾತ್ರಿ ಸತಾಯಿಸಿದ್ದಾಳೆ. ಇನ್ನು ಸುಮ್ಮನೇ ಬಿಡಬಾರದು" ಎನ್ನುತ್ತಾ ಸುಜಯಳನ್ನು ತನ್ನೆಡೆಗೆ ಎಳೆದುಕೊಂಡು ಅವಳ ಭುಜದ ಮೇಲೆ ಮುಖವನ್ನಿಟ್ಟ. ಗೋಡೆಯ ಮೇಲಿದ್ದ ಕನ್ನಡಿಯೊಳಗೆ ಜೋಡಿ ಮುಖ ಕಂಡಿತು.

"ಯಾರೋ ಇಬ್ರು ನಮ್ಮನ್ನೇ ನೋಡ್ತಿದಾರೆ"

"ನೋಡ್ಲಿ ಬಿಡು.... ಹೊಸದಾಗಿ ಮದುವೆಯಾದವರು ಏನು ಮಾಡ್ತಿದಾರೆ ಅಂತ ನೋಡ್ತಿದಾರೆ. ನಾವು ಏನು ಮಾಡ್ತೀವೋ ಅದನ್ನೇ ಅವರು ಮಾಡ್ತಾರೆ." ಎನ್ನುತ್ತಾ ಕೆಂಗುಲಾಬಿಯಾಗಿದ್ದ ಅವಳ ನುಣುಪು ಕೆನ್ನೆಗಳನ್ನು ಮತ್ತೆ ಮತ್ತೆ ಚುಂಬಿಸಿದ.

"ಥೂ ಹೀಗೆಲ್ಲಾ ಮಾಡ್ಬೇಡಿ. ನಂಗೆ ನಾಚ್ಕೆ ಆಗುತ್ತೆ."

"ಸರಿ, ಹಾಗಾದ್ರೆ ನೀನೇ ಮಾಡು.... ನಂಗೇನೂ ನಾಚ್ಕೆ ಆಗೊಲ್ಲ." ಅವಳನ್ನು ತನ್ನ ಕಡೆಗೆ ತಿರುಗಿಸಿಕೊಂಡ. ತನ್ನ ಮುಖವನ್ನು ಅವಳೆಡೆಗೆ ಒಡ್ಡಿದ.

"ಥೂ ಪೋಲಿ ಹುಡುಗ." ಎನ್ನುತ್ತಾ ಅವಳು ತಳ್ಳಿದಳು.

"ಈ ಪೋಲಿ ಹುಡುಗನ ಕೈಗೆ ನೀನಾಗೇ ಸಿಕ್ಕಿ ಬಿದ್ದಿದೀಯ.... ನಾನು ನಿನಗೆ ಇಷ್ಟವಾಗಿದೀನಿ ಅಲ್ವಾ?"

"ನನ್ನ ಹಿಂದೆಮುಂದೆ ಸುತ್ತುತ್ತಿದ್ದ ನಿಮ್ಮನ್ನು ಕಂಡು ಅಯ್ಯೋ ಅಂತ ಅನ್ನಿಸ್ತು.

ಪಾಪ ಹುಡುಗ ಕೆಟ್ಟು ಹಾಳಾಗಿ ಹೋಗ್ತಾನೆ ಅಂತ, ನಿಮ್ಮನ್ನು ಮದುವೆ ಆದೆ. ಇನ್ನು ನಿಮ್ಮನ್ನು ಸರಿ ದಾರಿಗೆ ತರುವ ಕೆಲಸ ನನ್ನದು.. ನಾನೇನೂ ನಿಮ್ಮನ್ನು ಮೆಚ್ಚಿಲ್ಲ."

"ಆಂ.... ಏನಂದೆ? ಏನಂದೆ? ನನ್ನ ಕಣ್ಣಲ್ಲಿ ಕಣ್ಣಿಟ್ಟು ಹೇಳು." ಅವಳ ಮುಖವನ್ನು ಬೊಗಸೆಯಲ್ಲಿ ಹಿಡಿದ. ಅವಳು ಅವನ ಕೈಗಳನ್ನು ಕಿತ್ತೊಗೆದು, ಮುಖವನ್ನು ತನ್ನ ಕೈಗಳಿಂದ ಮುಚ್ಚಿಕೊಂಡಳು. ಅವನು ನಿಧಾನವಾಗಿ ಅವಳ ಕೈಗಳನ್ನು ಸರಿಸಿ, "ನೀನು ಏನೇ ಹೇಳಿದ್ರು ನೀನು ನನ್ನವಳು. ಐ ಲವ್ ಯೂ ವೆರಿ ಮಚ್" ಅಂತಂದ. ಅವಳು ತನ್ನ ಮುಖವನ್ನು ಅವನ ಎದೆಯೊಳಗೆ ಹುದುಗಿಸಿದಳು. ಅವನ ಎದೆಯ ಬಡಿತವನ್ನು ಆಲಿಸುತ್ತಾ ಕಣ್ಣುಗಳನ್ನು ಮುಚ್ಚಿದಳು.

"ಕನಸು ಕಾಣ್ತಾ ಇದೀಯ?"

"ಇಲ್ಲ. ನಿಮ್ಮ ಎದೆಯ ಬಡಿತವನ್ನು ಆಲಿಸ್ತಾ ಇದೀನಿ.... ಅದು ಬಡಿಯುತ್ತಿರುವುದು ನನಗೋಸ್ಕರ ತಾನೇ...." ಅವಳು ತಲೆ ಎತ್ತಿ ಅವನ ಕಡೆ ನೋಡಿ ಮುಗುಳ್ನಕ್ಕಳು.

"ಆಫ್‌ಕೋರ್ಸ್.... ಅದು ನಿನಗಾಗಿಯೇ.... ಸುಜೀ.... ಸುಜೀ.... ಅಂತಾನೇ ಇದೆ ಅಲ್ವಾ? ಹಾಗೇ ನಿನ್ನ ಎದೆಯೂ 'ಮಹೀ ಮಹೀ' ಅಂತ ಹಾಡ್ತಾ ಇರಬಹುದು ಕೇಳ್ಲಾ!" ಅವಳ ಎದೆಗೆ ತನ್ನ ಕಿವಿಯನ್ನಿಟ್ಟ. ಅವಳು ಅವನನ್ನು ಸರಿಸಿದಳು.

"ಯಾಕೆ ಯಾಕೆ ಏನಾಯ್ತು?"

"ನನಗೆ ನಿಮ್ಮ ಮೇಲೆ ಕೋಪ ಬಂದಿದೆ"

"ಕೋಪಾನಾ? ಯಾಕೇ ಚಿನ್ನ?"

"ನೀವ್ಯಾಕೆ ನನ್ನನ್ನು ಒಂದ್ಮಾತೂ ಕೇಳ್ದೆ ಬೇರೆ ಊರಿಗೆ ವರ್ಗ ಮಾಡಿಸ್ಕೊಂಡ್ರಿ?"

"ನಿನಗೋಸ್ಕರವೇ.... ನಾವಿಬ್ರೇ ಆರಾಮವಾಗಿರಬಹುದು ಅಂತ...."

"ಮೊದಲು ಅದನ್ನು ಕ್ಯಾನ್ಸಲ್ ಮಾಡಿಸ್ಕೊಳ್ಳಿ.... ನೀವು ಆಫೀಸ್ಗೆ ಹೊರಟು ಹೋದ್ರೆ ಅಲ್ಲಿ ಒಬ್ಬಳೇ ಹೇಗಿರಲಿ! ಇಲ್ಲಿ ದೀಪು ಇದಾಳೆ, ಅತ್ತೆ ಇದಾರೆ...."

"ಓ.ಕೇ. ಯೋಚಿಸ್ತೀನಿ.... ಎಲ್ಲಕ್ಕಿಂತ ಮುಂಚೆ ಮುಖ್ಯವಾದ್ದೊಂದು ಕೆಲಸ ಇದೆ. ನಾವು ಒಮ್ಮೆ ಮೈಸೂರಿಗೆ ಹೋಗಿ ಬರಬೇಕು...." ಏನನ್ನೋ ನೆನಪಿಸಿಕೊಂಡವನಂತೆ ನುಡಿದ.

"ಮೈಸೂರಿಗಾ? ಅಲ್ಲಿ ಹೊಸದು ಏನಿದೆ? ಎಲ್ಲಾ ನೋಡಿದ್ದೇ...."

"ಅಲ್ಲಿ ಕಾವೇರಿ ಸಂಗಮ ಇದೆ. ಚಾಮುಂಡಿ ಬೆಟ್ಟ ಇದೆ.... ನಾವು ಹೋಗಿ ಬರಲೇ ಬೇಕು"

"ಏನು ಹರಕೆ ಹೊತ್ತಿದ್ರಾ? ನಮ್ಮಿಬ್ಬರ ಮದುವೆ ನೆರವೇರಿದರೆ, ಬರ್ತೀವಿ ಅಂತ" ಅವಳು ಕಿಲಕಿಲನೆ ನಕ್ಕಳು.

"ಎಸ್.... ಹರಕೆ ಹೊತ್ತಿದ್ದೆ. ಅದನ್ನು ತೀರಿಸಲು ಹೋಗಬೇಕು."

"ನೀವು ಇದನ್ನೆಲ್ಲಾ ನಂಬ್ತೀರಾ? ಮಹೇಶ್...."

"ನಂಬಿಕೆ ಇರಲಿಲ್ಲ. ಆದರೆ ಕೆಲವೊಮ್ಮೆ ನಂಬಬೇಕಾದ ಪರಿಸ್ಥಿತಿ ಬರುತ್ತೆ."

"ಅಂದರೇ...."

"ನೀನು ಆಶ್ರಮಕ್ಕೆ ಹೋಗಿಬಿಟ್ಟ ಮೇಲೆ, ನಿನ್ನನ್ನೆಲ್ಲಿ ಕಳೆದುಕೊಂಡು ಬಿಡ್ತೀನೋ ಅನ್ನೋ ಭಯ ಕಾಡುತ್ತಿತ್ತು...."

"ಅದಕ್ಕೇನಾ.... ಅಲ್ಲಿಗೂ ಬೆನ್ನು ಬಿಡದೇ ಪದೇ ಪದೇ ಬರ್ತಿದ್ದದ್ದು...."

"ಹೌದು ಸುಜೀ.... ನೀನಿಲ್ಲದೇ ನನ್ನ ಬದುಕಿಗೆ ಅರ್ಥ ಏನೂ ಇಲ್ಲ.... ಹಾಗೇ ನಾದ್ರೂ ನೀನು ಸಿಗದೇ ಇದ್ದಿದ್ರೆ, ನಾನು ದೇಶಾಂತರ ಹೊರಟು ಹೋಗ್ಬೇಕು ಅಂತ ಡಿಸೈಡ್ ಮಾಡಿದ್ದೆ.... ಈಗ ಅದು ಕ್ಯಾನ್ಸಲ್...."

"ಈ ಹರಕೆ ವಿಷಯ ನಿಮ್ಮ ತಾಯಿಗೆ ಗೊತ್ತಾ?"

"ಇಲ್ಲ. ಯಾರಿಗೂ ಗೊತ್ತಿಲ್ಲ. ಯಾರಿಗೂ ಗೊತ್ತಾಗುವುದೂ ಬೇಡ. ಈ ವಿಷಯ ನಮ್ಮಲ್ಲೇ ಇರಲಿ."

"ಇನ್ನೆಂದೂ ಹರಕೆ ಗಿರಕೆ ಹೊರಬೇಡಿ.... ಹರಕೆ ತೀರದಿದ್ದರೆ, ಮತ್ತೆ ಜನ್ಮ ಎತ್ತಿ ಬರಬೇಕಾಗುತ್ತದೆ."

"ನಿನಗೆ ಪುನರ್ಜನ್ಮದಲ್ಲಿ ನಂಬಿಕೆ ಇದೆಯಾ ಸುಜೀ.....?"

"ಇಲ್ಲ ಅಂತಲೂ ಇಲ್ಲ; ಇದೆ ಅಂತಲೂ ಇಲ್ಲ....."

"ಸರಿ. ಹಾಗಾದರೆ ಆ ಮಾತು ಬೇಡ.... ಈ ಜನ್ಮ ನಮ್ಮದು, ಅಷ್ಟು ಸಾಕು" ಎನ್ನುತ್ತಾ ಅವಳು ಮತ್ತೆ ಮಾತನ್ನು ಮುಂದುವರೆಸದಂತೆ ಅವಳ ಬಾಯನ್ನು ಮುಚ್ಚಿದ. ಅವಳನ್ನು ತನ್ನ ಬಾಹುಗಳೊಳಗೆ ಎಳೆದುಕೊಂಡ.... ಕನ್ನಡಿಯೊಳಗೆ ಈ ಜೋಡಿಗಳ ಪ್ರತಿಬಿಂಬಗಳು ನಿಚ್ಚಳವಾಗಿ ಕಂಡಿತ್ತು.... ಹೊಸ ಭಾವಗಳು ಮೂಡಿದ್ದವು.... ನಿಧಾನವಾಗಿ ಆ ಪ್ರತಿಬಿಂಬಗಳು ಮಂಚದತ್ತ ಸರಿದಿದ್ದವು.







## 'ಬಿಂಬಗಳು ಸರಿದಾಗ'

ಮಗಳು ಮತ್ತೆ ಹುಟ್ಟಿ ಬರುವಳೆಂದು ನಂಬಿಕೆ ಸುಬ್ಬರಾಮಪ್ಪನವರದು. ಆ ಅನಿಸಿಕೆಗೆ ಪೂರಕವಾಗಿ ಸುಜಯಳ ನಡೆವಳಿಕೆ ಇರುತ್ತದೆ. ಹಾಗೆಯೇ ಈ ಅನಿಸಿಕೆಯನ್ನು ದೃಢಪಡಿಸುವ ಘಟನೆಗಳು ಜರುಗುತ್ತವೆ. ತನ್ನ ಅಣ್ಣನನ್ನು ಮದುವೆಯಾಗಲು ನಿರಾಕರಿಸಿದ ಸುಜಯಳ ಮೇಲೆ ಮಹೇಶನ ಆಸಕ್ತಿ ಬೆಳೆಯುತ್ತದೆ. ಅವಳ ವರ್ತನೆಗಳಿಗೆ ಕಾರಣವನ್ನು ಹುಡುಕುವ ಪ್ರಯತ್ನವನ್ನು ಮಾಡುತ್ತಾನೆ. ಅವಳನ್ನು ಪ್ರೀತಿಸತೊಡಗುತ್ತಾನೆ. ಅವಳ ಪ್ರೀತಿಗೆ ಪ್ರೋತ್ಸಾಹ ಸಿಕ್ಕಿತೇ?.... ಅದು ಈ ಕಾದಂಬರಿಯ ಪ್ರೇಮ ಕಥೆ.....